

ಅವನಜ್ಜಿ ಅವನಿಗೆ ಆಗಾಗ ಹೇಳಿದ್ದುಂಟು; ಮಗೂ, ನೀನೇನಾದರೂ ದಾನ ಮಾಡೋದಿದ್ದರೆ, ಉಡುಗೊರೆ ಕೊಡೋದಿದ್ದರೆ ಅವುಗಳನ್ನು ನಾಯಿ, ಬೆಕ್ಕು, ಜಾನುವಾರು ಮುಂತಾದ ಪ್ರಾಣಿಗಳಿಗೆ ಕೊಡು. ಇಲ್ಲವಾದರೆ ಕಾಗೆ, ಗುಬ್ಬಚ್ಚಿಯಂಥ ಪಕ್ಷಿಗಳಿಗೆ ಕೊಡು. ಅವುಗಳು ನಿನ್ನನ್ನು ಸದಾ ಸ್ಮರಿಸುತ್ತವೆ. ನಿನ್ನ ಗುರುತು ಅವುಗಳಿಗೆ ಮರೆಯೋದಿಲ್ಲ. ಆದರೆ ಮನುಷ್ಯ ಹಾಗಲ್ಲ. ಕೊಟ್ಟು ಆಚೆ ತಿರುಗುವಾಗ ಮರೆಯುತ್ತಾನೆ. ಮನುಷ್ಯನಿಗೆ ಕರುಣೆ ಸಲ್ಲದು.

ಈ ಮಾತಿನ ನೆನಪು ಆಗ ಶಂಕರನಿಗೆ ಆಗದಿರಲಿಲ್ಲ. ಆ ಮಕ್ಕಳಿಗೆ ಅವನೇನಾದರೂ ಅದ್ಭುತವಾದ ಅಥವಾ ಅಮೂಲ್ಯವಾದ ಕಾಣಿಕೆಯನ್ನು ನೀಡಿಲ್ಲ. ನಿಜ. ಆದರೂ ಆ ದಿನ ಗೋಲಿಯೊಂದನ್ನು ತರಲು ಅಂಗಡಿಗೆ ಹೋಗಿ ಬಂದಿದ್ದ. ಗೋಲಿಗೇನೋ ಎರಡೋ ಮೂರೋ ಪೈಸೆ ತೆತ್ತಿದ್ದ. ಅದನ್ನು ಆ ಮಕ್ಕಳಿಗೆ ಇತ್ತಾಗ ಅವು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದ್ದುವು. ಆದರೆ ಅದು ಕ್ಷಣಿಕವಾಗಿತ್ತೆಂಬುದು ಈಗ ಅವನಿಗೆ ಅರಿವಾಯಿತು.

ಮುಂದೆ ನಡೆದು ಹೋಗುತ್ತಿದ್ದಾಗ ಇದೇ ಯೋಚನೆ ಅವನಿಗೆ ಮರುಕಳಿಸಿತು. ಮನುಷ್ಯನ ಜೀವನದಲ್ಲಿ ಎಷ್ಟೋ ಮಂದಿ ತಲೆ ಹಾಕುತ್ತಾರೆ. ಶಾಸ್ತ್ರಗಳೇನೋ ಏಳು ಹೆಜ್ಜೆಗಳನ್ನು ಒಟ್ಟಾಗಿ ಇಟ್ಟವನು ಸಖನಾಗುತ್ತಾನೆಂದು ಹೇಳಿವೆ. ಆದರೆ ಏಳು ಹೆಜ್ಜೆಗಳಲ್ಲ ಏಳು ಸಾವಿರ ಮೈಲುಗಳನ್ನು ಒಟ್ಟಾಗಿ ಸಂಚರಿಸಿದವರೂ ಸಖರಾಗುವುದಿರಲಿ ಪರಿಚಯಸ್ಥರು ಕೂಡಾ ಆಗುವುದಿಲ್ಲವೆಂಬುದನ್ನು ನೆನೆಸಿದ. ಪ್ರತಿಯೊ[illegible]ಗೂ ಮತ್ತೊಬ್ಬನಿಂದ ಒಂದಲ್ಲ ಒಂದು ರೀತಿಯ ಸೇವೆ ಅಥವಾ ಸಹಾಯ ಆಗದೆ ಜೀವನ ನಡೆಯದು. ನಾಯಿಂದ, ದರ್ಜಿ, ವೈದ್ಯ, ಅ[illegible]ಕಾರ ಇತ್ಯಾದಿ ಅನೇಕ ಮಂದಿ ವೃತ್ತಿನಿರತರು ಇತರರ ಜೀವನದಲ್ಲಿ ತಲೆ ಹಾಕಲಿಕ್ಕೆಂದೇ ಇರುವವರು. ಆದರೆ ಕೇವಲ ಅವರವರ ವೃತ್ತಿ ಸೇವಾದೃಷ್ಟಿಯಿಂದ ಅವರೊಡನೆ ಸಖ್ಯ ಬೆಳೆಸುವವರು ಇಲ್ಲವೇ ಇಲ್ಲವೆನ್ನಬಹುದು. ಹೀಗೆ ಸಖ್ಯ ಬೆಳೆಸಿದರೆ ಅವರನ್ನೆಲ್ಲ ತನ್ನ ಜೀವನ ಕ್ರಮದೊಳಗೆ ಅಳವಡಿಸಿಕೊಳ್ಳುವದೂ ಸಾಧ್ಯವಿಲ್ಲ ಎಂಬ ಸತ್ಯವೂ ಅವನಿಗೆ ಹೊಳೆಯಿತು. ಅದಕ್ಕಾಗಿಯೇ ಸಖ್ಯತನವನ್ನು ಹೊಗಳಿದ ಋಷಿಗಳೇ ಮನುಷ್ಯ–ಮನುಷ್ಯರೊಳಗಿನ ಬಾಂಧವ್ಯವೂ ಮಿತವಾಗಿರಬೇಕು, ವಿರಕ್ತ ಮತ್ತು ನಿರಾಪೇಕ್ಷ ದೃಷ್ಟಿಯನ್ನು ಜೀವನದಲ್ಲಿ ಹೆಚ್ಚಿಸಿಕೊಳ್ಳಬೇಕು ಎಂದು ಹೇಳಿರಬೇಕು ಎಂದುಕೊಂಡ.

ಮತ್ತೂ ತನ್ನ ಮನಸ್ಸನ್ನು ಕೆದಕಿ ನೋಡಿದಾಗ ಇನ್ನೊಂದು ಸತ್ಯವೂ ಅವನಿಗೆ ಮನನವಾಯಿತು; ಅದೇನೆಂದರೆ ಕೇವಲ ಮಕ್ಕಳ ಕೃತಘ್ನತೆಗಾಗಿ ತನ್ನ ಮನಸ್ಸು ನೊಂದಿಲ್ಲವೆಂಬುದು. ಅವನಿಗೆ ಅವ್ಯಕ್ತವಾಗಿ ಆಗ ಇದ್ದ ಉದ್ದೇಶವೆಂದರೆ ಅವುಗಳ ತಾಯಿಯನ್ನು ನೋಡುವುದಾಗಿತ್ತು.

ಮರುದಿನ ತಿರುಗಾಡುವಾಗ ಎರಡು ಮಿಠಾಯಿಗಳನ್ನು ಜೇಬಿನಲ್ಲಿರಿಸಿಕೊಂಡಿದ್ದ. ಆ ಮಕ್ಕಳ ಮನೆ ಬಂತು. ಅವಳಲ್ಲಿ ಒಬ್ಬಳು ಪಾಗಾರವನ್ನೇರಿ ನಿಂತು ತನ್ನ ಸೋದರಿಯೊಡನೆ ಆಡುತ್ತಿದ್ದಳು. ಶಂಕರ ಅವಳ ಮುಖವನ್ನು ನೋಡಿ ನಕ್ಕ. ಆಗ ಅವಳ ಮುಖದಲ್ಲೂ ನಸುನಗೆ ಮಿಂಚಿತು. ಜೇಬಿಗೆ ಕೈ ಹಾಕಿ ಮಿಠಾಯಿಯನ್ನು ತೆಗೆದು ಕೈಯಲ್ಲಿ ಅವಳಿಗೆ ತೋರಿಸಿದ.

ಅವಳು ಆಗ ಆಡಿನ ಮರಿಯಂತೆ ಗಬಕ್ಕನೆ ನೆಲಕ್ಕೆ ನೆಗೆದು ಅವನ ಬಳಿಗೆ ಓಡಿದಳು. ಅವಳ ಹಿಂದೆಯೇ ಅವಳ ಸೋದರಿಯೂ ಬಂದಳು.

"ನನ್ನ ಕೈಯಲ್ಲೇನಿದೆ ಹೇಳಿ" ಎಂದ.

"ಚಾಕಲೇಟು" ಎಂದಳೊಬ್ಬಳು.

"ಪೆಪ್ಪರ್ ಮಿಠಾಯಿ" ಎಂದಳು ಇನ್ನೊಬ್ಬಳು.

"ಇಬ್ಬರೂ ಸರಿ, ಇಬ್ಬರೂ ತಪ್ಪು" ಎಂದು ನಗುತ್ತ ಅವರಿಗೆ ತೀರ್ಮಾನವನ್ನಿತ್ತು ಇಬ್ಬರ ಅಂಗೈಯಲ್ಲೂ ಒಂದೊಂದು ಮಿಠಾಯಿಯನ್ನಿಟ್ಟ.

ಅವರಿಬ್ಬರೂ ನಗುತ್ತ ಅವುಗಳನ್ನು ತಮ್ಮ ಬಾಯಿಗೆ ಹಾಕಿಕೊಂಡರು. ಆಗ ಇಬ್ಬರ ದವಡೆಯೂ ಉಬ್ಬಿತು.

"ನಿಮ್ಮಿಬ್ಬರ ಹೆಸರೇನು?" ಎಂದು ಮತ್ತೆ ಪ್ರಶ್ನಿಸಿದ.

"ಅವಳ ಹೆಸರು ಲೀನಾ"

"ಅವಳ ಹೆಸರು ಬಿಜಲೀ"

"ಹ್ಹ! ಹ್ಹ! ಹ್ಹ!" ಎಂದು ಅವನು ನಕ್ಕ. "ಎಷ್ಟು ಚಂದದ ಹೆಸರುಗಳು! ನಿಮ್ಮಿಬ್ಬರಲ್ಲಿ ಒಬ್ಬರ ಹೆಸರನ್ನು ನನಗೆ ಕೊಡಬೇಕು. ಇನ್ನೂ ಮಿಠಾಯಿ ಕೊಡುತ್ತೇನೆ. ಯಾರು ಲೀನಾ ಕೊಡುತ್ತೀಯಾ? ಬಿಜಲಿ ಕೊಡುತ್ತೀಯಾ?"

ಮಕ್ಕಳಿಗೆ ಅವನೆಂದುದರ ತಥ್ಯ ಅರ್ಥವಾಯಿತೋ ಇಲ್ಲವೊ, ಅಂತೂ ಅವುಗಳಿಗೆ ಇದು ಬಹಳ ವಿನೋದದ ಸೂಚನೆಯಾಯಿತು. ಆದರೆ ಕೆಲ ಕ್ಷಣಗಳಲ್ಲೇ ಅವನ ಪ್ರಶ್ನೆಯಲ್ಲಡಕವಾಗಿದ್ದ ಅರ್ಥರಾಹಿತ್ಯವು ಹೊಳೆಯಿತು.

"ಸರಿಯಪ್ಪ! ನಿಮಗೆ ಬೇಕಾದರೆ ಬಿಜಲೀ ಎಂಬ ಹೆಸರೇ ಇರಲಿ", ಎಂದಳು ಲೀನಾ.

"ನನಗೆ ಲೀನಾ ಎಂಬ ಹೆಸರು ಚೆನ್ನಾಗಿ ತೋರುತ್ತದಲ್ಲ?" ಎಂದು ಶಂಕರ ಕೇಳಿದ.

"ಹೌದೇ? ನನ್ನ ಹೆಸರು ಕೊಡಲಾರೆ. ಲೀನಾಳ ಹೆಸರೇ ನಿಮಗಿರಲಿ" ಎಂದಳು ಬಿಜಲಿ.

"ನನ್ನ ಹೆಸರನ್ನು ಹೇಗೆ ಕೊಡಲಿ? ನಿಮಗೆ ನನ್ನ ಹೆಸರು ಕೊಟ್ಟಮೇಲೆ ನನಗೆ ಉಳಿಯು ವ ಹೆಸರೇನು?"

"ನಿನ್ನ ಅಮ್ಮನಿಂದ ಇನ್ನೊಂದು ಹೆಸರು ಪಡೆ. ನನ್ನ ಹೆಸರು ಇನ್ನು ಮುಂದೆ ಲೀನಾ ಎಂದು. ಹಾಗೆಯೇ ನಾನು ಎಲ್ಲರಿಗೂ ಹೇಳಿ ಬಿಡುತ್ತೇನೆ."

ಮಕ್ಕಳಿಬ್ಬರೂ ನಕ್ಕರು.

"ಆದರೆ ನನ್ನಮ್ಮ ನನ್ನ ಹೆಸರನ್ನು ಬದಲಿಸಬೇಕಿಲ್ಲ? ಅವರು ನನ್ನನ್ನು ಯಾವಾಗಲೂ ಲೀನಾ ಎಂದೇ ರೆಯುತ್ತಾರೆ."

"ಅಮ್ಮನಿಗೆ ನೀನು ಹೇಳಬಾರದೆ? ಅಮ್ಮನೊಡನೆ ಎಷ್ಟು ಹೆಸರುಗಳಿವೆಯೋ ಏನೋ! ಅವರೊಡನೆ ಹಾಗೆಯೇ ಹೇಳು. 'ಅಮ್ಮ ನನ್ನ ಹೆಸರನ್ನು ಒಬ್ಬ ದೋಸ್ತಿಗೆ ಕೊಟ್ಟು ಬಿಟ್ಟೆ. ನನಗೊಂದು ಹೊಸ ಹೆಸರನ್ನು ಕೊಡಿ' ಎಂದು."

"ನಿಮಗೆ ಹೇಗೆ ಗೊತ್ತು, ಅಮ್ಮನೊಡನೆ ಬೇರೆ ಹೆಸರುಗಳಿವೆಯೆಂದು? ನಿಮಗೆ ಅಮ್ಮನ ಗೊತ್ತಿದೆಯೆ?"

"ನೋಡಿ, ಮಕ್ಕಳನ್ನು ಹೆಸರಿಸುವ ತಾಯಂದಿರೊಡನೆ ಎಷ್ಟೋ ಹೆಸರುಗಳಿರುತ್ತವೆ. ಅವುಗಳಲ್ಲಿ ಒಂದನ್ನೇ ಆರಿಸಿ ತಮ್ಮ ಮಕ್ಕಳಿಗೆ ಇಡುತ್ತಾರೆ. ಆದರೆ ಒಬ್ಬ ತಾಯಿಗೆ ಹತ್ತೋ ಹನ್ನೆರಡೋ ಮಕ್ಕಳು

ದೀಪಾವಳಿಯು — ನಮ್ಮ ರಾಷ್ಟ್ರದ ಇತಿಹಾಸದಲ್ಲಿ ಮಹೋನ್ನತವಾದ ಸಂದರ್ಭ. ದುಷ್ಟ ಶಕ್ತಿಗಳ ಮೇಲಿನ ಒಳ್ಳೆಯ ಮತ್ತು ಉದಾತ್ತ ಗುಣಗಳ ವಿಜಯೋತ್ಸವ. ಸಂತೋಷದ ಘಟನೆ. ಸುಖ - ಸಂತುಷ್ಟಿಯ ಪ್ರದರ್ಶನ.



ನಿಜವಾದ ಸುಖ ದೊರೆಯಬೇಕಾದರೆ. ಜನರಿಗೆ ಉಣಲು ಸಾಕಷ್ಟು ಆಹಾರ, ಉಡಲು ಸಾಕಷ್ಟು ಬಟ್ಟೆ, ಮತ್ತು ವಾಸಿಸಲು ಒಂದು ಮನೆ ಇವಿಷ್ಟು ಮೂಲ ಅವಶ್ಯಕತೆಗಳು. ಅವುಗಳು ಸಿಕ್ಕಬೇಕಾದರೆ ಔದ್ಯೋಗಿಕ ಉಪಕ್ರಮಬೇಕು. ನಿರುದ್ಯೋಗಿಗಳಿಗೆ ತಮ್ಮದೇ ಸ್ವಂತ ಉದ್ಯಮ ಸ್ಥಾಪಿಸಲು ನಾವು ನೆರವು ಕೊಡುತ್ತೇವೆ. ಯಾಕಂದರೆ ಸ್ವಂತ ಉದ್ಯೋಗ ಪ್ರವೃತ್ತಿಯೇ ಸುಖ-ಸಮೃದ್ಧಿಗಳಿಗೆ ಸೋಪಾನವೆಂದು ನಾವು ಮನಗಂಡಿದ್ದೇವೆ. ಇದಕ್ಕಾಗಿಯೇ 1972 ನ್ನು "ಸ್ವಾವಲಂಬನೆ ಮತ್ತು ಸ್ವಂತ ಉದ್ಯೋಗ" ದ ವರ್ಷವೆಂದು ಕರೆದಿದ್ದೇವೆ.

# ಕೆನರಾ ಬ್ಯಾಂಕ

**ಪ್ರಧಾನ ಕಚೇರಿ :: ಬೆಂಗಳೂರು - ೨**






ಹೆಚ್ಚೆಂದರೆ ಇರಬಹುದು. ಆದರೆ ಅವರೊಡನೆ ನೂರಾರು ಹೆಸರುಗಳಿರುತ್ತವೆ. ಹೀಗೆ ಮಕ್ಕಳು ಒಂದು ವೇಳೆ ತಮ್ಮ ಹೆಸರನ್ನು ಬೇರೆಯವರಿಗೆ ಕೊಟ್ಟರೆ ಇಲ್ಲವೇ ಅದನ್ನು ಎಲ್ಲಾದರೂ ಕಳೆದುಕೊಂಡರೆ ಕೂಡಲೇ ಬೇರೊಂದು ಹೆಸರನು ಕೊಟ್ಟು ಬಿಡುತ್ತಾರೆ."

"ಹ್ಹ! ಹೆಸರನ್ನು ಕಳೆದುಕೊಳ್ಳುವುದಂತೆ!" ಎಂದು ನಕ್ಕಳು ಬಿಜಲಿ.

"ಈ ಸಂಗತಿ ನಿಮಗೆ ಹೇಗಪ್ಪ ಗೊತ್ತು? ನಮ್ಮ ಅಮ್ಮನ ಗುರುತು ನಿಮಗಿಲ್ಲ."

"ಇದಕ್ಕೆ ನಿಮ್ಮ ಅಮ್ಮನ ಗುರುತೇ ಬೇಕೆ? ನನಗೆ ಅಮ್ಮ ಇಲ್ಲವೆ? ಎಷ್ಟೋ ಸಲ ನನ್ನ ಹೆಸರುಗಳು ಕಳೆದು ಹೋಗಿದ್ದವು. ಕೆಲವು ಸಲ ಶಾಲೆಯಲ್ಲಿ ನನ್ನ ಸಹಪಾಠಿಗಳು ನನ್ನ ಹೆಸರನ್ನು ಕದ್ದಿದ್ದರು. ಕೂಡಲೇ ನನ್ನ ಅಮ್ಮ ನನಗೆ ಹೊಸ ಹೆಸರನ್ನು ಕೊಡುತಿದ್ದಳು."

ಮಕ್ಕಳಿಬ್ಬರಿಗೂ ಇದನು ನಂಬಬೇಕೋ ಬೇಡವೋ ಎಂಬುದನ್ನು ತಿಳಿಯಲಾಗಲಿಲ್ಲ.

"ಹಾಗಾದರೆ ನಿಮ್ಮ ಕಳೆದು ಹೋದ ಹೆಸರುಗಳು ಎಲ್ಲಪ್ಪ?"

"ಅವು ಕಳೆದು ಹೋದ ಮೇಲೆ ಅವುಗಳನ್ನು ಈಗ ಹೇಳಬಲ್ಲೆ? ಕಳೆದು ಹೋಗುವುದೆಂದರೆ ಮರೆತು ಹೋಗುವುದು. ಸದ್ಯ ಹೆಸರುಗಳು ಕಾಳು ಎಂದು ಅಮ್ಮ ನನಗೆ ಹೆಸರನ್ನಿತ್ತಿದ್ದಾಳೆ. ಆದ್ದರಿಂದಲೇ ನಿಮ್ಮೊಡನೆ ನಾನು ಒಂದು ಹೆಸರು ಕೇಳುತ್ತಿದ್ದೇನೆ " ಎಂದ ಶಂಕರ.

"ಹೆಸರು ಕಾಳು! ಎಂಥ ಹೆಸರಪ್ಪ!" ಎಂದು ಮಕ್ಕಳಿಬ್ಬರೂ ಹಾರುತ್ತ ಚಪ್ಪಾಳೆ ಹೊಡೆದು ನಕ್ಕರು.

"ನಾವಂತೂ ಕಪ್ಪು ನಾಯಿಯನ್ನು ಕಳುನಾಯಿ ಎಂದು ಕರೆಯುತ್ತೇವೆ".

ಪಾಗಾರದ ಬದಿಯಿಂದ ತಾಯಿಯ ಸ್ವರ ಕೇಳಿತಾಗ: "ಏ! ಇಲ್ಲಿ ಬನ್ನಿರೋ ಬಾಯಿಗೆ ಬಂದ ಹಾಗೆ ಮಾತಾಡುತ್ತೀರಲ್ಲ "

"ಇಲ್ಲಮ್ಮ ಇಲ್ಲಿ ಕಾಳು ಎಂಬವರಿಗೆ ಲೀನಾ ಎಂಬ ಹೆಸರು ಬೇಕಂತೆ. ನಾನು ಕೊಡಲೇ?"

ಘೊಳನೆ ತಾಯಿಯೂ ನಗುವುದನ್ನು ಶಂಕರ ಕಂಡ. ಅವನಿಗೂ ನಗುವನು ತಡೆಯಲಿಕ್ಕಾಗಲಿಲ್ಲ.

"ಈ ತುಂಟ ಮಕ್ಕಳ ಹಾಗೆಯೇ", ಎಂದಳು ತಾಯಿ. "ಕಾಸೂನು ಜೋರು. ನೀವೇನಾದರೂ ಬೇಸರಿಸಬೇಡಿ."

"ನನಗೆ?" ಎಂದ ಶಂಕರ ಎರಡು ಹೆಜ್ಜೆಯನ್ನಿಡುತ್ತ, "ನನಗೇನಪ್ಪ ಬೇಸರ? ನಾನೇ ಅವರೊಡನೆ ಮಾತಾಡಿದವ. ಅವರನ್ನು ಮಾತಾಡಿಸಿದವ."

"ಅವರಿಬ್ಬರೂ ಹಾಗೇನೇ. ಒಂದಿಷ್ಟೂ ಹೆದರಿಕೆಯಿಲ್ಲದವರು. ತುಂಟಿಯರು. ತಂಟೆ ಮಾಡುವುದೆಂದರೆ ಎತ್ತಿದ ಕೈ. ಮೊನ್ನೆ ತಾನೇ ಅವಳ ಕಾಲಿನಿಂದ ಪ್ಲಾಸ್ಟರ್ ತೆಗೆಯಿತಷ್ಟೇ. ನೋಡಿ ಆ ಹಲಸಿನ ಮರದಿಂದ ಬಿದ್ದವಳು!"

"ಇಲ್ಲಮ್ಮ" ಎಂದು ಲೀನಾ ತಾಯಿಯ ಬಳಿಗೆ ಓಡಿದಳು. "ನಾನು ಮಾವಿನ ಮರದಿಂದ ಹಾರಿದುದಲ್ಲವೆ? ನೀನಿನ್ನೂ ಹಲಸಿನ ಮರದಿಂದ ಬಿದ್ದೆನೆಂದು ಹಳೆಯ ಕತೆಯನೆ ಹೇಳುತಿದ್ದೀಯಲ್ಲ?

ಶಂಕರನೂ ತಾಯಿಯೂ ಒಟ್ಟಾಗಿ ಮನಃ ನಕ್ಕರು.

"ನೋಡಿ ಮಕ್ಕಳಿಗೆ ಸ್ವಲ್ಪವಾದರೂ ಅಂಜಿಕೆಯಿರಬೇಕು. ಅಪರಿಚಿತರೊಡನೆ ಕೂಡಾ ಸಲುಗೆ ಬೆಳೆಸುವುದರಲ್ಲಿ ಇವರು ಮುಂದೆ. ಶಾಲೆಯಲ್ಲೂ ಹೀಗೆಯೇ ಅಂತೆ. ಮೊನ್ನೆ ತಾನೇ ಟೀಚರ್ ಸಿಕ್ಕಿದವರು ಇವರಿಬ್ಬರಿಗೂ ಮನೆಯಲ್ಲಿ ಚಡಿ ಕೊಡಬೇಕೆಂದು ಹೇಳಿದ್ದಾರೆ."

"ಚಡಿ ಕೊಡೋದು ಓದದಿದ್ದರೆ, ಬರೆಯದಿದ್ದರೆ, ಲೆಕ್ಕ ಮಾಡದಿದ್ದರೆ, ಚಿತ್ರ ಬಿಡಿಸದಿದ್ದರೆ, ಮಗ್ಗಿ ಬಾರದಿದ್ದರೆ..."

"ಸಾಕೋ ನಿಮ್ಮ ಗಲಾಟೆ" ಎಂದು ತಾಯಿ ವಯ್ಯಾರದಿಂದ ತನ್ನ ಕಿವಿಗಳನ್ನು ಕೈಗಳೆರಡರಿಂದಲೂ ಮುಚ್ಚುವಂತೆ ಮುಟ್ಟಿಕೊಳ್ಳುತ್ತ ಕಣ್ಣರಳಿಸಿ ಹುಸಿ ಮುನಿಸಿನಲ್ಲಿ ಗದರಿಸಿದಳು.

"ಮಕ್ಕಳೆಲ್ಲ! ಚುರುಕಾಗಿದ್ದಾರೆ" ಎಂದು ನಗುತ್ತ ಶಂಕರ ಮುಂದಕ್ಕೆ ಕಾಲು ಹಾಕಿದ.

ಅಂದಿನಿಂದ ಆಗಾಗ್ಗೆ ಆ ಮಕ್ಕಳು ಅವನನ್ನು ಸಂಧಿಸುವರು. ಅವನು ಅವರೊಡನೆ ಏನೇನೋ, ಮಾತಾಡಿ ನಗಿಸುವ. ಅವರಿಗೆ ಚಾಕಲೇಟುಗಳನ್ನೋ ಪೆಪ್ಪರ್ ಮಿಠಾಯಿಗಳನ್ನೋ ಕೊಡುವ. ಮಕ್ಕಳಿಗೆ ಹೀಗೆ ಸಲುಗೆ ಬೆಳೆದಂತೆ ಅವುಗಳು ಅವನನ್ನು ತಮ್ಮ ಮನೆಯ ಆವರಣದೊಳಗೆ ಕರೆದುಕೊಂಡು ಹೋದುವು. ಅವುಗಳ ತಾಯಿಯ ಪರಿಚಯು ಹೆಚ್ಚೆಚ್ಚಾಗಿ ಆಗುತ್ತ ಬಂತು. ಆಕೆಯ ಗಂಡ ಹಗಲಿಡೀ ಎಲ್ಲೋ ಕೆಲಸ ಮಾಡುತ್ತಿರುವನೆಂದೂ ತಿಳಿಯಿತು.

ಬರಬರುತ್ತ ಅವನಿಗೆ ಮಕ್ಕಳ ಮೇಲಿದ್ದ ಸಲುಗೆಯಷ್ಟೇ ಸಲುಗೆ ಅವುಗಳ ತಾಯಿಯೊಡನೆಯೂ ಬೆಳೆಯಿತು. ಆಕೆಯ ಪ್ರವೃತ್ತಿಯೂ ಆಕೆಯ ಮಕ್ಕಳಂತೆ ನಿಸ್ಸಂಕೋಚದ್ದಾಗಿತ್ತು. ಅವನೊಡನೆ ಮಾತಾಡುವುದಕ್ಕೆ ಆಕೆಯೂ ಹಿಂಜರಿಯುತಿದ್ದಿಲ್ಲ. ಆಕೆಗೂ ಅವನಿಂದ ಪೆಪ್ಪರ್ ಮಿಠಾಯಿ, ಚಾಕಲೇಟು, ಬಿಸ್ಕತ್ತುಗಳು ಸಲ್ಲುತಿದ್ದುವು. ಮಕ್ಕಳೊಡನೆ ಆಕೆಯೂ ನಗುತ್ತ ಅವುಗಳನ್ನು ತಿನ್ನುತ್ತಿದ್ದಳು. ಪ್ರತಿಯಾಗಿ ಅವನಿಗೂ ಏನೊಮ್ಮೆ ತಿಂಡಿ ತೀರ್ಥಗಳನು ಕೊಡುತ್ತಿದ್ದಳು.

ಸಕ್ಕರೆ ಸಿಗೋದಿಲ್ಲ, ಅಕ್ಕಿ ಸಿಗೋದಿಲ್ಲ ಇತ್ಯಾದಿಯಾಗಿ ಅವಳು ಗೊಣಗಿದೊಡನೆ ತಾನು ಅವುಗಳನ್ನು ತಂದುಕೊಡುವೆನೆಂದು ಅವಳಿಗೆ ಹೇಳುತ್ತಿದ್ದನಲ್ಲದೆ ತಂದೂ ಕೊಡುತ್ತಿದ್ದ. ಕೆಲವು ವೇಳೆ ಇವುಗಳಿಗೆ ತಾನು ದುಬಾರಿ ಬೆಲೆ ತೆತ್ತರೂ, ಅವಳಿಂದ ಕೇವಲ ನ್ಯಾಯವಾದ ಬೆಲೆ ಮಾತ್ರ ಪಡೆಯುತ್ತಿದ್ದ. ತನ್ನ ಮನೆಯ

ಯಾವಾಗಲೂ ಅತ್ಯಾಧುನಿಕ

# ಅಶೋಕ ಹೋಟೆಲ್

ಲೆಮಿಂಗ್‌ಟನ್ ರಸ್ತೆ, ಹುಬ್ಬಳ್ಳಿ




ನಿಮ್ಮ ವಸತಿಗೆ ಅತ್ಯನುಕೂಲವಾದ ಐದಂತಸ್ತಿನ

ಬೋರ್ಡಿಂಗ್-ಲಾಜಿಂಗ್

★ ಲಿಫ್ಟ್ ಸೌಕರ್ಯ

★ ಏರ್ ಕಂಡೀಶನ್ಡ್ ಕೋಣೆಗಳು

★ ಪಾರ್ಕಿಂಗ್ ವ್ಯವಸ್ಥೆ

ಸಾರ್ವಜನಿಕರಿಗೆ ಸೇವೆಯು ಗಳನೇ

## ದೀಪಾವಳಿಗೆ ಹಬ್ಬದ ಶುಭಾಶಯಗಳು

ಫೋನ್ :

**2271 & 2272**

SAMRAT

ತೋಟದಲ್ಲಿ ಬೆಳೆಯುತ್ತಿದ್ದ ಬಾಳೆ ಹಣ್ಣು, ಎಳೆ ನೀರು ಮುಂತಾದುವನ್ನು ಬುಟ್ಟಿಯಲ್ಲಿ ಹಾಕಿ ತಂದು ಕೊಡುತ್ತಿದ್ದನಲ್ಲದೆ, ಪೇಟೆಯಲ್ಲಿ ವಿಪುಲವಾಗಿ ದೊರೆಯುತ್ತಿದ್ದ ಕಾಲದಲ್ಲಿ ಸೇಬು ಹಣ್ಣು, ಕಿತ್ತಳೆ ಹಣ್ಣು ಮೂಸಂಬಿ ಮೊದಲಾದವನ್ನೂ ತಂದು ಕೊಡುತ್ತಿದ್ದ. ಆಕೆ ಅವುಗಳಿಗೆ ಹಣ ಕೊಡ ಹೋದರೆ ಅವನು ಬೇಡವೆಂದು ತಪ್ಪಿಸಿಕೊಳ್ಳುತ್ತಿದ್ದ.

ಬಿಜಲಿಗೂ, ಲೀನಾಳಿಗೂ ಶಂಕರ ಹೀಗೆ ಒಬ್ಬ ಪ್ರಮುಖ "ಮಾಮ" ನಾದ. ತಾಸು, ಎರಡು ತಾಸುಗಳಷ್ಟು ಕಾಲವೂ ಅವನು ಅವರೊಡನೆ ಆಡಲು ಮುಂದಾಗುತ್ತಿದ್ದ. ಅವರಿಬ್ಬರಂತೂ ಯಾವ ಆಟದಲ್ಲೂ ಮುಂದು. ಕೆಲವೊಮ್ಮೆ ಅವನನ್ನು ಜಗಲಿಯಲ್ಲಿ ಕುಳ್ಳಿರಿಸಿ ತಮಗೆ ಗೊತ್ತಿದ್ದ ಸಿನಿಮಾ ಪದ್ಯಗಳನ್ನು ಆ ಮಕ್ಕಳು ಹಾಡುವುವು. ತಾಯಿ ಕಲಿಸಿದ್ದ ಭಜನೆಯ ಹಾಡುಗಳನ್ನು ಹಾಡುತ್ತ ಕುಣಿಯುವುವು. ಮಗ್ಗಿ ಬಾಯಿಪಾಠ ಹೇಳುವುವು. ತಮ್ಮ ಪಾಠಗಳನ್ನು ಓದುವುವು. ಪತ್ರಿಕೆಗಳ ತಲೆಬರಹದ ಸುದ್ದಿಗಳನ್ನು ಅವನೊಡನೆ ಹೇಳುವುವು. ಅವನು ಅವರನ್ನು ಎತ್ತಿಕೊಳ್ಳುವನು, ಹೆಗಲ ಮೇಲೆ ಏರಿಸುವನು. ಅವರನ್ನು ಹಿಡಿದು ತಿರುಗಿಸುವನು. ಅವರ ಮುಖಕ್ಕೆ ಬಣ್ಣವನ್ನು ಬಳಿಯುವನು. ತುಟಿಯ ಮೇಲೆ ಮೀಸೆ ಬಿಡಿಸುವನು. ಅವರಿಗೆ ಅಜ್ಜಿ ಕತೆಗಳನ್ನು ಹೇಳುವನು. ಪ್ರಾಣಿ-ಪಕ್ಷಿಗಳ ಕತೆಗಳನ್ನು ಸ್ವಾರಸ್ಯವಾಗಿ ಹೇಳಿ ಅವರನ್ನು ನಗಿಸುವನು.

ಮಕ್ಕಳು ಅವನು ಆ ದಾರಿಯಿಂದ ಹೋಗುವಾಗ ಅವನನ್ನು ನಿರೀಕ್ಷಿಸಿ ರಸ್ತೆಯ ಬದಿಯಲ್ಲಿ ನಿಲ್ಲದ ದಿನವಿರಲಿಲ್ಲ. ಯಾವಾಗಲೂ ಅವುಗಳಿಗೇನಾದರೂ ತಿಂಡಿಯನ್ನು ಕೊಂಡು ಹೋಗುವುದು ಅವನಿಗೆ ಅಭ್ಯಾಸವಾಯಿತು. ಅವರಿಗೆ ಕೆಲವೊಮ್ಮೆ ಆಟಿಕೆಗಳನ್ನು ತಂದುಕೊಡುತ್ತಿದ್ದ. ಕೆಲವೊಮ್ಮೆ ಚಿಕ್ಕ-ಕತೆ. ಪದ್ಯಗಳ ಪುಸ್ತಕಗಳನ್ನೂ ಕೊಡುತ್ತಿದ್ದ.

ಇದರೊಡನೆ ಅವನ ವೇಷ ಭೂಷಣಗಳೂ ಬದಲಾಗುತ್ತಿದ್ದುವು. ಬೇರೆ ಬೇರೆ ಉಡುಪುಗಳನ್ನು ಖರೀದಿ ಮಾಡುತ್ತಿದ್ದನಲ್ಲದೆ, ಅವುಗಳನ್ನು ಧರಿಸಿ ಪ್ರದರ್ಶನವನ್ನೂ ಮಾಡುತ್ತಿದ್ದ. ಕೂದಲಿಗೆ ಸುವಾಸನೆಯ ಎಣ್ಣೆ ಹಾಕಿ ಅದನ್ನು ಬಹಳ ತೀಡಿ ಬಾಚುತ್ತಿದ್ದ. ಮುಖಕ್ಕೂ ಪೌಡರ್ ಬಳಿದುಕೊಳ್ಳುತ್ತಿದ್ದ. ಮಕ್ಕಳ ಮನೆಯ ದಾರಿಯಲ್ಲಿ ಹೋಗಲು ಹೊರಡುವ ಮುಂಚೆ ಅರ್ಧತಾಸು ಸಮಯವನ್ನಾದರೂ ಕನ್ನಡಿಯ ಮುಂದೆ ಕುಳಿತು ಕಳೆಯುತ್ತಿದ್ದ. ಅವನ ಮುಖ ರಕ್ತ ಮಿಶ್ರಿತವಾದ ಬಿಳಿ ಬಣ್ಣದ್ದು. ಅದರ ಮೇಲೆ ಪೌಡರ್ ಬಳಿದರೆ ಅದರ ಪರಿಮಳ ಮಾತ್ರ ಅವನಿಗೆ ಆಹ್ಲಾದವನ್ನುಂಟು ಮಾಡುತಿತ್ತು ವಿನಾ ಅವನ ಚೆಲುವು ಹೆಚ್ಚುತ್ತಿರಲಿಲ್ಲ. ತೆಳು ಮೀಸೆ ಮತ್ತು ಸೈಡ್ ಬರ್ನ್‌ಗಳನ್ನು ಆದಷ್ಟು ತೀಡುತ್ತಿದ್ದ. ವ್ಯಾರಲೀನ್, ಕ್ರೀಂ ಮುಂತಾದವುಗಳನ್ನು ಅಲ್ಲಲ್ಲಿ ಹಚ್ಚಿಕೊಳ್ಳುತ್ತಿದ್ದ. ತಾನು ಆಕರ್ಷಕವಾಗಿ ಕಾಣುತಿದ್ದೇನೆಂದ ಅವನಿಗೆ ಕನ್ನಡಿಯನ್ನು ನೋಡಿದಷ್ಟು ಬಾರಿಯೂ ವಿಶ್ವಾಸ ಬೆಳೆಯುತ್ತಿತ್ತು.

ನಿಜವಾಗಿಯೂ ಅವನ ರೂಪ ಆಕರ್ಷಕ ರೂಪವಾಗಿತ್ತು. ಅವನಲ್ಲಿದ್ದ ಒಂದೇ ಒಂದು ಚಿಕ್ಕ ದೋಷವೆಂದರೆ ಅವನ ನಸು ಬೂದಿ ಬಣ್ಣದ ಕಣ್ಣಾಲಿಗಳು. ಅವುಗಳ ಬಣ್ಣವನ್ನು ಏನು ಮಾಡಿದರೂ ಪರಿವರ್ತಿಸಲು ಸಾಧ್ಯವಿರಲಿಲ್ಲ. ಅವನ [illegible]ತರು ಅವನಿಗೆ 'ಬೆಕ್ಕಿನ ಕಣ್ಣು' ಎಂದು ಅದಕ್ಕಾಗಿ ಅಡ್ಡ ಹೆಸರನ್ನೂ ಇಟ್ಟಿದ್ದರು. ತನ್ನ ಆಕರ್ಷಕ ವ್ಯಕ್ತಿತ್ವಕ್ಕೆ ಅದೊಂದು ದೊಡ್ಡ ಕುಂದು... ಅವನಿಗೆ ಒಮ್ಮೊಮ್ಮೆ ಅನಿಸದಿರುತ್ತಿದ್ದಿಲ್ಲ. ಬೆಕ್ಕಿನ ಕಣ್ಣಿನ ಜನರನ್ನು ಎಂದೆಂದೂ ನಂಬಬಾರದೆಂದು ಹೇಳುವವರು ಹಲವರಿದ್ದರು. ಇಂಥ ಅಂಗ ಸಾಮುದ್ರಿಕ ಶಾಸ್ತ್ರದಲ್ಲಿ ಅವನಿಗೆ ಹೆಚ್ಚಿನ ನಂಬಿಕೆಯಿಲ್ಲದಿದ್ದರೂ, ತನ್ನಂತೆಯೇ ಬೆಕ್ಕಿನ ಕಣ್ಣುಗಳಿದ್ದ ತನ್ನ ಅಣ್ಣ ಯಾವುದೋ ವಿಷಯದಲ್ಲಿ ತಲೆ ಕೆಡಿಸಿಕೊಂಡು ಹುಚ್ಚನಾಗಿ ಮನೆಯಲ್ಲಿ ಕೊಳೆಯುತ್ತಿದ್ದ ಉದಾಹರಣೆ ಅವನನ್ನು ನಿರ್ವಿಣ್ಣನನ್ನಾಗಿ ಮಾಡಿತ್ತು.

ಆದರೆ ಅದಕ್ಕೆ ಯಾರನ್ನು ಹಳಿದೂ ಪ್ರಯೋಜನವಿರಲಿಲ್ಲ. ಅವನ ತಂದೆಯ ಕಣ್ಣಾಲಿಗಳು ಕಪ್ಪಗಿದ್ದುವು. ಆದರೆ ಅವರ ದೇಹದ ಬಣ್ಣವೂ ಕಪ್ಪಗೆ. ಶಂಕರನ ಮೈ ಬಣ್ಣ ತಾಯಿಯದ್ದು. ಅವನ ಕಣ್ಣಾಲಿಗಳ ಬಣ್ಣವೂ ಆಕೆಯದೇ ಬಳುವಳಿ. ಆಕೆಯನ್ನು ಅದಕ್ಕಾಗಿ ಅವನು ದೂರುತ್ತಿರಲಿಲ್ಲ. ಆಕೆಗೆ ಆ ಕಣ್ಣುಗಳ ಬಣ್ಣದಿಂದ ಏನಾದರೂ ದೋಷವಾಗಿದ್ದಂತೆಯೂ ಕಂಡು ಬರುತ್ತಿರಲಿಲ್ಲ. ಏನೋ ಆಗೊಮ್ಮೆ ಈಗೊಮ್ಮೆ ಆಕೆಗೂ, ಅವನ ತಂದೆಗೂ ಜಗಳಗಳಾಗುತಿದ್ದುವು. ತಂದೆಯನ್ನೊಮ್ಮೆ ಆಕೆ ಅವಾಚ್ಯ ಶಬ್ದಗಳಿಂದ ಬಯ್ಯುಬಿಡುತ್ತಿದ್ದಳು. ಆಗ ಆಕೆಯ ಮುಖವೆಲ್ಲ ಕೆಂಪಾಗಿ ತುಟಿಗಳು ನಡುಗುತ್ತಿದ್ದುವು. ಕೆಲವೊಮ್ಮೆ ಅವನ ತಂದೆ ಕೋಪಗೊಂಡು ಅವಳಿಗೆ ಹೊಡೆಯುತ್ತಿದ್ದರು. ಅವಳು ಜೋರಾಗಿ ಅಳುತ್ತ ಎಲ್ಲಾದರೂ ಬಿದ್ದುಕೊಳ್ಳುತ್ತಿದ್ದಳು. ಆ ಮೇಲೆ ಕೋಪ ತಣ್ಣಗಾದ ಬಳಿಕ ಗಂಡನ ಪಾದಮುಟ್ಟಿ ಕ್ಷಮಾಯಾಚನೆ ಮಾಡುತ್ತಿದ್ದಳು.

ಶಂಕರನ ತಂಗಿ ಶ್ಯಾಮಲಾ ಶಂಕರನಂತೆಯೇ ರೂಪದವಳು. ಆದರೆ ಆಕೆಯ ಕಣ್ಣಾಲಿಗಳು ಮಾತ್ರ ತಂದೆಯಂತೆ ಕಪ್ಪು. ತಲೆಗೂದಲೂ ಕಪ್ಪು. ಹೀಗಾಗಿ ಅವಳು ಶಂಕರನಿಗಿಂತಲೂ ಹೆಚ್ಚು ಆಕರ್ಷಕವಾಗಿ ಹೆಚ್ಚು ಸ್ವಾಭಾವಿಕ ಸೌಂದರ್ಯಯುಕ್ತಳಾಗಿ ತೋರುತ್ತಿದ್ದಳು. ಶಂಕರನು ಅವಳನ್ನು ಕಂಡು ಅಸೂಯೆ ಪಡುತ್ತಿದ್ದ. ಅವಳ ಸ್ವಭಾವವೂ ತಂದೆಯದೇ. ತಾಯಿಯಂತೆ ಕ್ಷಣಕ್ಷಣಕ್ಕೂ ಮೂಗು ಮುರಿಯುವವಳಲ್ಲ.

ಶಂಕರನಿಗೆ ತನ್ನ ಕಣ್ಣಾಲಿಯ ಬಣ್ಣ ತನ್ನ ಸ್ವಭಾವವನ್ನು ಎತ್ತಿ ಹೇಳುವುದೆಂಬುದರ ಅರಿವು ಬಿಜಲಿ ಮತ್ತು ಲೀನಾರ ಸಹವಾಸದಲ್ಲೂ ಆಗಿತ್ತು. ಆ ಮಕ್ಕಳೇನೋ 'ನಿಮ್ಮ ಕಣ್ಣು ಬೆಕ್ಕಿನ ಕಣ್ಣಿನಂತಿದೆ' ಎಂದಿದ್ದುವೊಮ್ಮೆ. ಅವುಗಳ ಮಾತನ್ನು ಅವನು ನಗುವಿನಲ್ಲಿ ತೇಲಿಸಿದ. ಆದರೆ ಗತಾನುಗತಿಕವಾಗಿ ಒಮ್ಮೆ ಅವುಗಳ ತಾಯಿಯೂ ಬೆಕ್ಕಿನ ಕಣ್ಣಿನ ಕುರಿತು ಜಾನಪದ ಸಾಮುದ್ರಿಕ ಲಕ್ಷಣವನ್ನು ವಿನೋದಕ್ಕಾಗಿ ವಿವರಿಸಿದ್ದಳು. ಬೆಕ್ಕಿನ ಕಣ್ಣಿನವರನ್ನು ನಂಬಬಾರದೆಂದು ಆಕೆ ನಗುತ್ತ ನುಡಿದ ಮಾತು ಅವನ ಪಾಲಿಗೆ ಅಚ್ಚಳಿಯದ ಶಿಲಾಶಾಸನವಾಗಿಯೇ ಪರಿಣಮಿಸಿತ್ತು.

ಆದರೂ ಅವನ ಆ ಮಕ್ಕಳಿಗಿಂತಲೂ ಅವರ ತಾಯಿಯ ವಿಶ್ವಾಸವನ್ನು ಗಳಿಸಲು ಆದಷ್ಟು ಯತ್ನಿಸುತ್ತಿದ್ದ. ಕೆಲವು ಬಾರಿ ಮಕ್ಕಳನ್ನು ಸೈಕಲಿನಲ್ಲಿ ಕುಳ್ಳಿರಿಸಿ ತನ್ನ ಮನೆಗೆ ಕರೆದುಕೊಂಡು ಹೋಗಿ ಹಿಂದಕ್ಕೆ ತರುತ್ತಿದ್ದ. ಅವುಗಳನ್ನು ಸಿನಿಮಾಕ್ಕೆ ಕರೆದುಕೊಂಡು ಹೋಗುತ್ತೇನೆಂದೂ ಒಂದೆರಡು ಬಾರಿ ಒತ್ತಾಯಿಸಿದ. ಆದರೆ ಅವರ ತಾಯಿ ಅದನ್ನು ವಿರೋಧಿಸಿದಳು. ಸಿಕ್ಕಸಿಕ್ಕವರೊಡನೆ ಮಕ್ಕಳು ಆಗಾಗ ಸಿನಿಮಾಕ್ಕೆ ಹೋದರೆ ಅವರಿಗೆ ಮುಂದೆ ಅದೇ ಒಂದು ಚಟವಾಗಿ ಪರಿಣಮಿಸುವುದೆಂದು ಆಕೆ ವಾದಿಸಿದ್ದನ್ನು ಕೇಳಿ ಅವನು ಸುಮ್ಮನಾಗಿದ್ದ.

ಹೀಗಿದ್ದರೂ ಅವಳ ಮೇಲಿನ ಆಕರ್ಷಣೆ ಮಾತ್ರ ಅವನಲ್ಲಿ ಹೆಚ್ಚುತ್ತಲೇ ಇತ್ತು. ಅವಳ ಬೊಗಸೆ ಕಣ್ಣುಗಳು, ಮಾಟವಾದ ಮುಖ, ಹೃಷ್ಟಪುಷ್ಟವಾದ ಅಂಗಸೌಷ್ಟವ, ಅವಳು ಉಡುತ್ತಿದ್ದ ಆಧುನಿಕ ರೀತಿಯ ಉಡುಪುಗಳು ಇವೆಲ್ಲ ಅವನ ಕಣ್ಣಿನಲ್ಲಿ ಆಕೆಗೆ ಮದುವೆಯಾಗದ ಕನ್ಯೆಯ ಸ್ಥಾನವನ್ನೇ ಕೊಟ್ಟಿದ್ದುವು. ಆಕೆಯ ವಾಚಾಳಿತನವೂ ಅವನನ್ನು ಸೆರೆಹಿಡಿದಿತ್ತು. ಇಷ್ಟಲ್ಲದೆ, ಆಗಾಗ ಅವನಿಗೆ ಏನಾದರೂ ಉಪಹಾರವನ್ನು ಆಕೆ ಕೊಡುತ್ತಿದ್ದಳು. ಅವಳು ಅವನ ವಿಚಾರದಲ್ಲಿ ಏನೆಣಿಸಿಕೊಂಡಿದ್ದರೂ ಅವನ ಭಾವನೆಯಲ್ಲಿ ತಾನು ಅವಳ ಮನೆಗೆ ಸೇರಿದವನೆಂಬ ಭಾವನೆ ಪ್ರಬಲವಾಗುತ್ತ ಬರುತ್ತಿತ್ತು. ಅವಳ ಅಭಿರುಚಿಗೆ ತಕ್ಕುದಾದ ವಿಷಯವನ್ನು ಮಾತಾಡಿದರೆ ಅವಳು ತಾಸುಗಟ್ಟಲೆ ಸ್ವಾರಸ್ಯವಾಗಿ ಸಂಭಾಷಿಸಲು ಸಿದ್ಧಳಿರುತ್ತಿದ್ದಳು.

ಮಕ್ಕಳ ಹುಟ್ಟು ಹಬ್ಬ ಬಂತು. ಹಿಂದಿನ ದಿನವೇ ಅವನಿಗೆ ಈ ವಿಷಯ ತಿಳಿದಿತ್ತು. ಮರುದಿನ ಮಕ್ಕಳಿಗೆ ಬಿಸ್ಕತ್ತು, ಚಾಕಲೇಟು ಮುಂತಾದ ತಿಂಡಿಗಳನ್ನಲ್ಲದೆ ಎರಡು ಬೆಳ್ಳಿಯ ಲೋಟಗಳನ್ನು, ಅವುಗಳ ಹೆಸರನ್ನು ಕೆತ್ತಿಸಿ ತಂದಿದ್ದ. ಮಕ್ಕಳಿಬ್ಬರೂ ಈ ಉಡುಗೊರೆಗಳನ್ನು ಅವನ ಕೈಯಿಂದ ಬಾಚಿ ಕಸಿದುಕೊಂಡು ಕುಣಿದಾಡಿದರು.

ಶಂಕರನೊಡನೆ ಇನ್ನೂ ಕಟ್ಟು ಇತ್ತು; ಮಲ್ಲಿಗೆ ಹೂವಿನ ಚೆಂಡನ್ನು ಬಾಳೆಯ ಎಲೆಯಲ್ಲಿ ಕಟ್ಟಿದ್ದನ್ನು ಮಕ್ಕಳ ತಾಯಿಯ ಕೈಯಲ್ಲಿ ಕೊಟ್ಟ.

"ಏನಿದು?" ಎಂದಳಾಕೆ.

"ಈಚೆ ಕೊಡಿ, ನಾನು ಬಿಚ್ಚಿಸಿ ತೋರಿಸುತ್ತೇನೆ" ಎಂದ.

"ನಾನೇ ಬಿಚ್ಚುತ್ತೇನೆ. ಏನು ನನಗೆ ತಿಳಿಯೋದಿಲ್ವೆ?" ಎಂದು ಆಕೆ ಅದರ ಹಗ್ಗದ ಗಂಟನ್ನು ಬಿಚ್ಚತೊಡಗಿದಳು.

"ಬಿಚ್ಚಿದರೆ ಸಾಕೆ?" ಎಂದ ಶಂಕರ ತುಂಟ ನಗುವಿನೊಡನೆ.

"ಮತ್ತೇನಾಗಬೇಕು?" ಎಂದು ಆಕೆ ನಗುತ್ತಲೇ ಪ್ರಶ್ನಿಸಿದಳು.

"ಅಲ್ಲ, ನಾನು ನಿಮ್ಮ ತಲೆಗೆ ಮುಡಿಸುತ್ತೇನೆ"

ಅವಳ ಮುಖದ ನಗುವಿನ ಮಿಂಚು ತಕ್ಷಣದಲ್ಲೇ ಮಾಯವಾಯಿತು. ದುರದುರನೆ ಅವನನ್ನು ನೋಡುತ್ತ ಹಿಂದೆ ಸರಿದಳು. ಅವಳ ಮುಖ ವಿವರ್ಣವಾಯಿತು. ಕೈಯ್ಯಲ್ಲಿದ್ದ ಹೂವಿನ ಚೆಂಡನ್ನು ಹೊರಗೆ ಬಿಸಾಡುತ್ತ "ಹೊರಗೆ ನಡಿ!" ಎಂದು ಆಜ್ಞಾಪಿಸಿದಳು.

ಶಂಕರ ತಲೆ ಕೆಳಗೆ ಹಾಕಿಕೊಂಡು ಬೇಗನೆ ಹೊರಗೆ ನಡೆದ. ಮನೆಯ ಆವರಣದ ಪ್ರವೇಶದ್ವಾರದ ಬಳಿಗೆ ಹೋಗುವಾಗ ಮೋಟಾರು ಸೈಕಲೊಂದು ಅವನನ್ನು ಹಾದು ಮನೆ ಬಾಗಿಲಿನ ಮುಂದೆ ನಿಂತಿತು.

"ಅಮ್ಮ, ಅಪ್ಪ ಬಂದರು!"

–ಎಂದು ಮಕ್ಕಳಿಬ್ಬರೂ ಕರೆದು ಹೇಳುವ ಹರ್ಷದ ಧ್ವನಿ ಶಂಕರನ ಕಿವಿಯಲ್ಲಿ ರಿಂಗಣಗೊಂಡಿತು.

ಅದೇ ಅವನು ಕೇಳಿದ ಆ ಮಕ್ಕಳ ಕೊನೆಯ ಮಾತಾಯಿತು.

ದ್ಯs ದ್ಯss ದ್ಯsss......

ಆಕಾಶ ದದ್ದರಿಸಿತು-ದಿವ್ಯ ಮೇಘದ ಈ ಗರ್ಜನೆಯಿಂದ. ಒಮ್ಮೆ ಮಾನವರು, ದಾನವರು ದೇವತೆಗಳು ಏಕಕಾಲಕ್ಕೆ ತಪಸ್ಸಿಗೆ ತೊಡಗಿದ್ದರು. ಎಲ್ಲ ದೊರಕೊಂಡಿದ್ದರೂ ಏನೋ ಅರೆ, ಅವರಿಗೆ. ಈ ಅರೆಯ ಪೂರ್ತಿಕೆಗೆ ಆತುರ, ಆಶೆ. ಅದಕ್ಕಾಗಿ ಈ ತಪಸ್ಸು. ಇವರ ತಪಸ್ಸಿಗೆ ಮೆಚ್ಚಿದ ಪರಬ್ರಹ್ಮ ದಿವ್ಯಮೇಘ ರೂಪ ತಾಳಿ ಗರ್ಜಿಸಿದ್ದ.

ದs ದss ದsss...

ಮೊದಮೊದಲು ಈ ಗರ್ಜನೆ ಅರ್ಥವಾಗಲಿಲ್ಲ. ಭಯ, ಆಶ್ಚರ್ಯಗಳಿಂದ ದಿಗ್ಮೂಢರಾಗಿರಲು, ಗರ್ಜಿಸುತ್ತಿರುವ ಮೇಘದೊಡಲಿಂದ ಬೆಳಕಿನ ಶ್ರೀಕಾರವೊಂದು ಮೂಡಿ ಮಾಯವಾಯಿತು. ಮತ್ತೆ ಸಿಡಿಲಾರ್ಭಟದ ಮೊಳಗು.

ದs ದss ದsss...

ಈ ಸಲದ ಗುಡುಗಿನಲ್ಲಿ ಇವರಿಗೆ ಅರ್ಥಪೂರ್ಣ ಧ್ವನಿ ಕೇಳಿಸಿದ ಅನುಭವ. ಆದರೆ ಇಂಥದೇ ಅರ್ಥವುಳ್ಳದ್ದು ಎಂದು ತಿಳಿಯಲೊಲ್ಲದು. ಇದನ್ನೇ ಕುರಿತು ಅವರು ಚಿಂತನೆ ನಡೆಸಿದರು. ಆಗ ಅವರಿಗೆ ತಮ್ಮ ತಮ್ಮ ಅಂತರ್‌ವಾಣಿಯಿಂದ ಅರ್ಥ ಸ್ಫುರಿಸಿತು.

ಮಾನವರಿಗೆ ದ್ಯ—ದತ್ತಾ

ದಾನವರಿಗೆ —ದ್ಯ—ದಯಾ

ದೇವತೆಗಳಿಗೆ—ದ್ಯ—ದವ ತಾ ಎಂದು.

ಹೀಗೊಂದು ಕಥೆಯುಂಟು.

—೨—

ನರನಲ್ಲಿ ಮಾನವಾಂಶ + ದಾನವಾಂಶ + ದೇವತಾಂಶ ಇವು ಮೂರು ಇವೆ. ಮಾನವಾಂಶ ನಿಚ್ಚಳವಾಗುವುದು, ಈ 'ದತ್ತಾ'-ಎಂದರೆ ದಾನದಿಂದ. ಮತ್ತು ಇದರಲ್ಲಿಯೇ ಉಳಿದೆರಡೂ ಅರ್ಥ ಸಮಾವೇಶಗೊಂಡಿವೆಯೆಂಬುದು ಸಾರಸ್ಯದ ಸಂಗತಿಯಾಗಿದೆ. ಆದ್ದರಿಂದ ದಾನ ಎಂಬುದು ಪುಣ್ಯ ಪದ, ಪುಣ್ಯಪ್ರದ. ದಾನಗಳಲ್ಲಿ ಅನೇಕ ಬಗೆ ಇವೆ ಎಂದು ವಿವರಿಸಿ ಹೇಳಬೇಕಾಗಿಲ್ಲ. ಅನ್ನದಾನದಿಂದ ಭೂದಾನದ ವರೆಗೆ ಲೆಕ್ಕ ಹೇಳಬಹುದು. ಎಲ್ಲ ದಾನಗಳಲ್ಲಿ ಅನ್ನದಾನವೇ ಶ್ರೇಷ್ಠ ಎಂದು ನಮ್ಮವರ ಗ್ರಹಿಕೆ. 'ಅನ್ನ-ದಾನಿ' ಎನ್ನಿಸಿಕೊಂಡರೆ ಜೀವನ ಸಾರ್ಥಕ ಎಂಬ ನಂಬುಗೆ. 'ಅನ್ನದಾನವ ಪೋಲ್ವ ದಾನಗಳು-ಇನ್ನು ಜಗದಲಿ ಹಿಂದು ಮುಂದಿಲ್ಲ' ಎಂದು ಅಗಾಧ ಜ್ಞಾನಿ ವಿದುರ ಸಾರಿದ್ದಾನೆ. ನೀಡುವವರಿಗಿಂತ ಮೊದಲು ಪಡೆಯುವವರು ಸಾಕು ಎಂದು ಕೈ ಚಾಚಿ ತಡೆಯುವುದು ಈ ದಾನವೊಂದರಲ್ಲಿ ಮಾತ್ರ. ಉಂಡು ತೃಪ್ತರಾದವರು ಅನ್ನದಾತಾ ಸುಖೀಭವ ಎಂದು ಹರಸುವುದು ಇದಕ್ಕೇ.



ಅದರೆ ಅನ್ನದಾನಕಿಂತ ಇನ್ನೊಂದು ದಾನ ಇದೆ ಅದು ಅಪೂರ್ವ ದಾನ. ಅದೇ ಆಯುಷ್ಯದಾನ. ದೀರ್ಘಾಯುಷ್ಯ-ಮನುಷ್ಯನ ಈಪ್ಸಿತಗಳಲ್ಲಿ ಒಂದು. ಆಯುಷ್ಯ ಗಟ್ಟಿ ಇದ್ದರೆ ಸಾಕಪ್ಪ ಎಂಬುದು ಆತನ ಪಲ್ಲವಿ. ನೂರು ವರ್ಷ ಚೆನ್ನಾಗಿ ಬದುಕನ್ನು ಉಪಭೋಗಿಸಬೇಕು ಎಂಬುದು ಅವನ ಸಹಜ ಅಭಿಲಾಷೆ. ನನಗೆ ಅನ್ನಿಸುವುದೇನೆಂದರೆ ಸೃಷ್ಟಿ ನಿರ್ಮಾಣದಲ್ಲಿ ತೊಡಗಿರುವ ಬ್ರಹ್ಮ ಪ್ರತಿಯೊಂದು ಜೀವಿಗೂ ಜೀವದೊಂದಿಗೆ ಆಯುಷ್ಯ ದಯಪಾಲಿಸುತ್ತಾನಷ್ಟೆ. ಅವ ದಯಪಾಲಿಸುವ ಆಯುಸ್ಸು ತನ್ನ ಆಯುಷ್ಯ ರಾಶಿಯಲ್ಲಿಯ ಒಂದಂಶ. ಹೇರಳವಾದ ಅವನ ಆಯುಷ್ಯರಾಶಿ ತೀರುವ ವರೆಗೆ ಬ್ರಹ್ಮನ ಈ ಲೀಲೆ. ಆ ಮೇಲೆ, ಆತನೂ ಇಲ್ಲ, ಸೃಷ್ಟಿಯೂ ಇಲ್ಲ. ಎಲ್ಲವೂ ಬರಿದೋ ಬರಿದು. ಅಂದರೆ ಆಯುಷ್ಯದಾನ ಬ್ರಹ್ಮನ ಒಂದು ಲೀಲೆ; ವಿನೋದದ ಜೂಜು, ರೇಸು. ಬ್ರಹ್ಮನ ಆಯುಷ್ಯವಾದರೋ ಲೆಕ್ಕಕ್ಕೆ ಸಿಗದ ಲೆಕ್ಕಾಚಾರ. ಪ್ರಾರಬ್ಧ ಭೋಗದ ಮಾತು ಹೇಳುವಾಗ ಒಂದು ನೂರು ಬ್ರಹ್ಮ ಕಲ್ಪಗಳಿಂದ ಅದು ಆರಂಭವಾಗುತ್ತದೆ ಎಂದು ಹೇಳುತ್ತಾರೆ. ಎಂದರೆ ಬ್ರಹ್ಮನ ೧೦೦ × ೧೦೦ ವರುಷಗಳೆಂದು ಲೆಕ್ಕ. ೪೩೨೦೦೦೦ × ೨ × ೩೬೦ × ೧೦೦-ಇದು ಬ್ರಹ್ಮನ ಶತಾಯುಷ್ಯ, ಆದರೆ ಈ ಆಯುಷ್ಯ ಹಂಚಿದಂತೆಲ್ಲ ಅದು ಹಿಗ್ಗುತ್ತ ಹೋಗುತ್ತದೆ. ಕಡಲು ಉಕ್ಕಿ, ಮೋಡ ಆಗಿ, ಮೋಡ ಮಳೆ ಆಗಿ, ಮಳೆ ಹೊಳೆಯಾಗಿ, ಒಂದಕ್ಕೆ ನಾಲ್ಕಾಗಿ, ಇಮ್ಮಡಿ, ನೂರ್ಮಡಿ ಆಗುತ್ತದೆ. ಮತ್ತೆ ಕಡಲಿಗೇ ಕೂಡುವುದಿಲ್ಲವೇ. ಹಾಗೆ. ಅಂದ ಮೇಲೆ ಬ್ರಹ್ಮನ ಆಯುಷ್ಯಕರ್ಮಗಳಲ್ಲಿ ಒಂದಾದ ಆಯುಷ್ಯ ದಾನ ಅನ್ನದಾನಕ್ಕಿಂತ ಮಿಗಿಲೆಂದು ಹೇಳಿದರೆ ತಪ್ಪೇನು?

—೩—

ಆಯುಷ್ಯದಾನದ ಮಾತು ಬಂದಾಗಲೆಲ್ಲ ನನಗೆ ಮಾರ್ಕಂಡೇಯನ ಕಥೆ, ಯಯಾತಿ ಪುರೂರವರ ಕಥೆ ನೆನಪಾಗುತ್ತದೆ. ಆದರೆ ಶಂಕರ ಭಗವತ್ಪಾದರ ನೆನಪಾದಾಗ ಆಯುಷ್ಯದಾನದ ಕಥೆ ಉಜ್ವಲವಾಗುತ್ತದೆ. ಕೇರಳ ಕಮಲಕೋಶದಿಂದೊಗೆದ ಈ ದಿವ್ಯ ವಿಶ್ವವ್ಯಾಪಿ ಫುಲ್ಲಾರವಿಂದವಾಗಿ ಪರಿಮಳಿಸಿದುದು ಜಗತ್ತಿನ ಅದ್ಭುತಗಳಲ್ಲಿ ಒಂದು. ಭಾರತ ದರ್ಶನದ ಭಾಂಡಾಗಾರವನ್ನು ತೆರೆದು ಪವಾಡ ಮೆರೆದ ಮೇಧಾವಿ ಶಂಕರರು; ಎರಡು ಸಲ ಆಯುಷ್ಯದಾನ ಪಡೆದರೂ ಬದುಕಿದ್ದುದು ಕೇವಲ ಮೂವತ್ತೆರಡು ವರುಷ ಮಾತ್ರ. ಇಷ್ಟರಲ್ಲಿಯೇ ಅವರು ಸಾಧಿಸಿದ್ದು ನಮಗಾಗಿ ಶೋಧಿಸಿದ್ದು, ಬೋಧಿಸಿದ್ದು ಮಹತೋಮಹೀಯಾನ್! ಇಷ್ಟು ಅಲ್ಪ ವಯಸ್ಸಿನಲ್ಲಿ ಇಷ್ಟೊಂದು ಅಗಾಧವನ್ನು ಸಾಧಿಸಿದವರು ಇವರನ್ನುಳಿದು ಈ ತನಕ ಇತಿಹಾಸ ಕಂಡಿಲ್ಲ. ಇದೇ ಶಂಕರರ ಹಿರಿಮೆ, ಗರಿಮೆ ಹಾಗೂ ಮಹಿಮೆ....

ಕೇರಳ ದೇಶ. ಕಾಲಡಿ ಗ್ರಾಮ. ಚೂರ್ಣಾ ನದೀ ದಂಡೆ. ಇದಕ್ಕೆ ಪೂರ್ಣಾ, ಆಳ್ವೆ ಹಾಗೂ ಪೆರಿಯಾರ್ ಎಂಬ ಹೆಸರುಗಳೂ ಉಂಟು. ಇಲ್ಲಿ ಸುಮಾರು ೧೩೦೦ ವರುಷಗಳ ಹಿಂದೆ ಶಿವಗುರು ಆರ್ಯಾಂಬ ಎಂಬ ಸಾತ್ವಿಕ ದಂಪತಿಗಳು ಇದ್ದರು. ಇವರಿಗೆ ಬಹು ಕಾಲ ಮಕ್ಕಳಾಗಲಿಲ್ಲ. ಆಗ ಅವರು ತಿರುಶಿವಪೆರೂರಿಗೆ ಬಂದು ಶಿವನಿಗೆ ನಡೆದುಕೊಳ್ಳತೊಡಗಿದರು. ಇವರ

# ಆಯುಷ್ಯದಾನ

ಇಟಗಿ ರಾಘವೇಂದ್ರ

ನಂಬಲಾಗದ ಸಂಗತಿಯಾಗಿರುವ ಆಯುಷ್ಯದಾನದ ಬಗ್ಗೆ ಅನೇಕ ಘಟನೆಗಳು ಸಂಭವಿಸಿವೆ. ಆದಿಗುರು ಶ್ರೀ ಶಂಕರಾಚಾರ್ಯರಿಗೆ ಎರಡು ಸಲ ಆಯುಸ್ಯದಾನವಾಯಿತು. ಲೀಲಾ ಶುಕಾವತಾರಿಗಳಾದ ಶ್ರೀ ನಾರಾಯಣ ತೀರ್ಥರಿಗೂ ಆಯುರ್ದಾನವಾಯಿತು. ಹಾಗಾದರೆ ಈ ಆಯುರ್ದಾನದ ಮಹತಿ ಏನು?

ಶ್ರದ್ಧೆ, ನಿಷ್ಠೆ, ಭಕ್ತಿಗೆ ಮೆಚ್ಚಿದ ಪರಶಿವ ಸ್ವಪ್ನದಲ್ಲಿ ಕಾಣಿಸಿಕೊಂಡು 'ನಿಮಗೆ ಬಹು ಕಾಲ ಬಾಳುವ ಆದರೆ ಮಂದಮತಿಗಳಾದ ಹಲವು ಪುತ್ರರು ಬೇಕೋ, ಅಥವಾ ಮಹಿಮಾನ್ವಿತನಾದ ಆದರೆ ಅಲ್ಪಾಯುಷ್ಯವುಳ್ಳ ಒಬ್ಬನೇ ಒಬ್ಬ ಮಗ ಬೇಕೋ' ಎಂದು ಕೇಳಿದ. ಭರತ ವರ್ಷದ ಪುಣ್ಯ. ಈ ದಂಪತಿಗಳು ಅಲ್ಪಾಯುಷ್ಯವಾದರೂ ಮಹದ್ವಂತನಾಗುವ ಮಗನನ್ನೇ ಬೇಡಿದರು. ಪರಶಿವ ತಾನೇ ಇವರಲ್ಲಿ ಮಗುವಾಗಿ ಬಂದ. ಕೇವಲ ಎಂಟು ವರುಷಗಳ ಆಯಸ್ಸು ಪಡೆದ ಅಲ್ಪಾಯುಷ್ಯವಾಗಿ!...

ಮಗುವಿಗೆ ಮೂರು ವರುಷ ತುಂಬಿರಲಿಲ್ಲ. ತಂದೆ ಕಾಲವಾದ. ದಿಕ್ಕು ತೋಚದ ತಾಯಿ ಮಗು ಶಂಕರನನ್ನು ಹೂವಿನಂತೆ ಪೋಷಿಸತೊಡಗಿದಳು-ಯಶೋದೆ ನಂದಕಿಶೋರನನ್ನು ಲಾಲಿಸಿದಂತೆ. ಐದನೆಯ ವಯಸ್ಸಿಗೆ ಮಗುವಿನ ಉಪನಯನ. ಎಂಟು ವರುಷ ತುಂಬುವ ಮೊದಲೇ ಶಂಕರ ತನ್ನ ಪ್ರತಿಭೆ, ಪಾಂಡಿತ್ಯ, ಪವಾಡಗಳನ್ನು ಮೆರೆದಿದ್ದ. ಎಂಟನೆಯ ವರುಷ ತುಂಬುವ ಕಾಲ ಸಮೀಪಿಸಿದಂತೆಲ್ಲ ತಾಯಿಗೆ ಆವಳ. ಮಗುವಾಗಿ ಬಂದ ಶಿವ ಇನ್ನು ಮಾಯವಾಗುವನೇ ಎಂದು. ಸೌಭಾಗ್ಯವೆಂಬಂತೆ ಅವರಲ್ಲಿಗೆ ಯತಿಗಳು ಆಗಮಿಸಿದರು. ಬಾಲ ಶಂಕರನ ಮಹಿಮೆಯಿಂದ ಪ್ರೀತರಾಗಿ, ಶಂಕರಾವತಾರದ ಉದ್ದೇಶ ಈಡೇರಲು ಮತ್ತೆ ಎಂಟು ವರುಷಗಳ ಆಯುಷ್ಯ ದಾನ ಕರುಣಿಸಿದರು. ಬೀಸುವ ದೊಣೆ ತಪ್ಪಿತು ಸದ್ಯ-ಎಂದಳು ತಾಯಿ. ಆದರೆ ಶಂಕರನ ಅಲ್ಪಾಯುಷ್ಯ ಆಗಾಗ ಆಕೆಯ ಕರುಳನ್ನು ಹಿಂಡುತ್ತಿತ್ತು. ಒಳಗೊಳಗೇ ಕೊರಗುತ್ತಿದ್ದಳು. ತಾಯ ಕೊರಗನ್ನು ಬಲ್ಲ ಮಗ ಆಕೆಗೆ ಸಂಸಾರದ ಕ್ಷಣಭಂಗುರತೆಯನ್ನು ತಿಳಿಸಿ ಹೇಳುತ್ತಿದ್ದ. ಮುಂದೆ ಹೊಳೆಯಲ್ಲಿ ಮೊಸಳೆ ಕಾಲೆಳೆದಾಗ ತಾಯ ಅನುಮತಿ ಪಡೆದು ಸನ್ಯಾಸ ಸ್ವೀಕರಿಸಿದ್ದು, ನರ್ಮದಾತೀರದಲ್ಲಿ ಗೌಡಪಾದ ಶಿಷ್ಯರಾದ ಗೋವಿಂದ ಭಗವತ್ಪಾದರಲ್ಲಿ ಶಿಷ್ಯತ್ವ ವಹಿಸಿದ್ದು, ಪವಾಡ ಮೆರೆದದ್ದು, ವಿದ್ಯೆಗಳಿಸಿದ್ದು, ವಾಕ್ಯಾರ್ಥ ನಡೆಸಿದ್ದು, ಸುರೇಶ್ವರ ಪದ್ಮಪಾದರನ್ನು ಶಿಷ್ಯರನ್ನಾಗಿಸಿಕೊಂಡದ್ದು, ಬ್ರಹ್ಮಸೂತ್ರ ಭಾಷ್ಯ ಬರೆದದ್ದು—ಈ ಎಲ್ಲವೂ ಒಂದೊಂದು ರಮ್ಯ ಕತೆಯಂತಿವೆ.

ಬ್ರಹ್ಮಸೂತ್ರಕ್ಕೆ ಭಾಷ್ಯ ಬರೆದಾಗ ಶಂಕರರಿಗೆ ಹದಿನಾರು ವರುಷ ವಯಸ್ಸು. ಇದು ದಾಟಿದ ಮೇಲೆ ಆಯುಷ್ಯ ತೀರಿ ಹೋಗುವುದು. ಆದರೆ ಅವತಾರದ ಉದ್ದೇಶ ಇನ್ನೂ ಪೂರ್ತಿ ಆಗಿಲ್ಲ. ಸಂಕಲ್ಪ ಮುಗಿದಿಲ್ಲ. ಇಡಿಯ ಭರತ ವರ್ಷ ವೈದಿಕ ಧರ್ಮಸೂತ್ರಕ್ಕೆ ಬದ್ಧವಾಗಬೇಕು. ದೇಶದ ನಾಲ್ಕೂ ದಿಕ್ಕುಗಳಲ್ಲಿ ಕಳಸಗಳಂತೆ ಪೀಠ ಪ್ರತಿಷ್ಠಾಪನ ನಡೆಯಬೇಕು. ಅದಕ್ಕೇ ಇರಬೇಕು ಶ್ರೀ ವೇದವ್ಯಾಸರು ವೃದ್ಧ ಬ್ರಾಹ್ಮಣನ ವೇಷ ಧರಿಸಿ ಇವರ ಭಾಷ್ಯದ ಮೇಲೆ ಇವರ ಕೂಡ ವಾಕ್ಯಾರ್ಥ ನಡೆಸಿದ್ದು. ಕೊನೆಗೆ ನಿಜ ರೂಪ ತೋರಿ ಇವರ ಮೈದಡವಿ 'ಶಂಕರ, ಹದಿನಾರಕ್ಕೆ ಮುಗಿಯುವ ನಿನ್ನ ಆಯುಷ್ಯ ಇಮ್ಮಡಿಸಲಿ. ಇದು ನೀ ಕೇಳದೆ ನಾ ವರವಾಗಿ ನಿನಗೆ ನೀಡುವ ಕಾಣಿಕೆ' ಎಂದು ಸಾರಿದರು. ಮುಗ್ಧ ಶಿಶುವಿನಂತೆ ಶಂಕರರು ಮುಗುಳು ನಗುತ್ತ ವ್ಯಾಸರ ಅಡಿದಾವರೆಗೆ ಎರಗಿದರು. ಶಂಕರ ದಿಗ್ವಿಜಯದ ಮುಂದಿನ ಕಥೆ ಯಾರಿಗೆ ಗೊತ್ತಿಲ್ಲ! ಅದನ್ನು ವಿಸ್ತರಿಸಿ ಹೇಳಬೇಕೆ?

—೪—

ಇದು ಇನ್ನೊಂದು ಕಥೆ-

ಅದ್ವಯಮಖಂಡಿತಮಶೇಷ ಜಗದಾದಿಂ
ಯತ್ರ ಚ-ಜಗತ್ರಿತಯ ಮಾಸ್ಥಿತಮನಂತೇ
ಯತ್ರವಿಲಯಂಪುನರ ಪಯಿತಿ ಮೃದಃಕುಂಭೋ
ತ್ಪದ್ಭವಧಾರಯುತ ತತ್ವಮಿತಿಮಾಮೋಂ॥

–ಹೀಗೆಂದು ಹಾಡಿದ ಕವಿ, ಲೀಲಾಶುಕಾವತಾರಿ ಎಂದು ಖ್ಯಾತಿ ಉಳ್ಳ ನಾರಾಯಣ ತೀರ್ಥರು! ಶ್ರೀಕೃಷ್ಣ ಮಹಿಮೆಯನ್ನು ಹಾಡಲು ಒಬ್ಬ ಭಕ್ತಕವಿ ನಾಲ್ಕು ಸಲ ಜನ್ಮವೆತ್ತುತ್ತಾನೆ. ಮಾಧವಾನಲನಾಗಿ ಹುಟ್ಟಿ 'ಶ್ರೀಕೃಷ್ಣಗಾನ' ಪಾಡಿದ. ಲೀಲಾಶುಕನಾಗಿ ಕೃಷ್ಣಕರ್ಣಾಮೃತ ಬರೆದ, ಜಯದೇವನಾಗಿ ಗೀತ ಗೋವಿಂದ ರಚಿಸಿದ. ಕೊನೆಗೆ ನಾರಾಯಣತೀರ್ಥನಾಗಿ ಕೃಷ್ಣಲೀಲಾ ತರಂಗಿಣಿಯನ್ನು ಪ್ರವೇಶಿಸಿದ.

ಭರಯೌವ್ವನಯುಕ್ತ ನಾರಾಯಣತೀರ್ಥ ಒಳ್ಳೆಯ ರಸಿಕ ತರುಣ ಕವಿಯೆಂದು ಪ್ರಖ್ಯಾತಿ ಪಡೆದಿದ್ದ. ಮದುವೆಯಾದ ಹೊಸತು. ಹೆಂಡತಿ ತವರು ಮನೆಯಲ್ಲಿ. ಇವರು ತಮ್ಮ ಊರಿನಲ್ಲಿ ಇದ್ದಾಗ ಒಮ್ಮೆ ಇವರು ಪ್ರಿಯ ಮಿಲನಕ್ಕಾಗಿ ಹೊರಟರು. ಆಗ ಮಳೆಗಾಲ. ನಡುವೆ ನದಿ ಬೇರೆ. ತುಂಬು ಹೊಳೆಯನ್ನು ದಾಟಲು ಸಾಧ್ಯವಿರಲಿಲ್ಲ. ಆದರೂ ಪ್ರಿಯತಮೆಯ ನೆನಪು ಬಲವತ್ತರ. ಕಟ್ಟಾಳು, ನವಯೌವನ ಮದ ಬೇರೆ. ತುಂಬು ಹುಮ್ಮಸ್ಸಿನ ಈ ತರುಣ ಹೊಳೆಗೆ ಇಳಿದೇಬಿಟ್ಟ, ಆಚೆ ದಡ ಸೇರಿ ಪತ್ನಿಯನ್ನು ಕೂಡಲು! ಉತ್ಸಾಹದಿಂದ ಈಜುತ್ತ ಪ್ರವಾಹವನ್ನು ಎದುರಿಸುತ್ತ ಭರದಿಂದ ಸಾಗಿರುವಾಗ ಸೆಳವಿನ ಸುಳಿಯಲ್ಲಿ ಸಿಕ್ಕಿ ಬಿದ್ದ. ಈಜುವ ಸಾಮರ್ಥ್ಯ ಕುಂದತೊಡಗಿತು. ಕಣ್ಣ ಮುಂದೆ ಹೆಂಡತಿ, ಪ್ರಪಂಚ ಜೀವನ ಗಿರ್ರನೇ ತಿರುಗತೊಡಗಿದವು. ಇದೆಷ್ಟು ಕ್ಷಣಿಕ ಆದರೆ ಎಷ್ಟು ಉನ್ಮಾದಕ ಎಂದುಕೊಂಡ. ಸಾವು ಸೆಳೆಯುತ್ತಿದೆ. ಬದುಕು ಕುಸಿಯುತ್ತಿದೆ ಎಂದುಕೊಂಡ. ವಸ್ತ್ರಾಪಹರಣ ಕಾಲಕ್ಕೆ ದ್ರೌಪದಿ ಎರಡೂ ಕೈ ಎತ್ತಿ 'ಕೃಷ್ಣಾ' ಎಂದು ಒರಲಿದಂತೆ ಸರ್ವಾರ್ಪಣ ಬುದ್ಧಿಯಿಂದ ಭಗವಂತನನ್ನು ಆರ್ತಸ್ವರದಿಂದ ಕರೆದು ವೈರಾಗ್ಯದ ಸಂಕಲ್ಪ ಮಾಡಿಕೊಂಡ. ಸನ್ಯಾಸ ಮರಣ ಬರಲೆಂದು ಪ್ರೇಷ ಮಂತ್ರ ಪಠಿಸಿ ಆಪದ್ ಸನ್ಯಾಸ ಸ್ವೀಕರಿಸಿದ. ಭಾರಿ ಸೆಳವಿಗೆ ಸಿಕ್ಕ ನಾರಾಯಣತೀರ್ಥ ನಿರ್ವಿಣ್ಣನಾಗಿ ಮೂರ್ಛೆ ಹೋದ. ಭಗವಂತನ ಲೀಲೆ—ಎಚ್ಚರವಾದಾಗ ಹೊಳೆಯ ಆಚೆ ದಡದಲ್ಲಿ ನೊರೆಯ ತೆರೆ ಹೊದ್ದು ಮರಳಿನಲ್ಲಿ ಹೊರಳಾಡುತ್ತಿದ್ದಾನೆ! ಕಣ್ಣು ತಿಕ್ಕಿಕೊಂಡು 'ಬದುಕಿದ್ದೇನೆ' ಎಂಬುದನ್ನು ನಿಶ್ಚಯಿಸಿಕೊಂಡ. ಎದ್ದು ಹೆಂಡತಿಯ ಮನೆಗೆ ಹೋದ. ಧೀರ ಪತಿ ಸಾಹಸ ಬಟ್ಟು ಬಂದದ್ದಕ್ಕೆ ಹೆಂಡತಿಗೆ ತುಂಬ ಹೆಮ್ಮೆಯೆನಿಸಿತು. ಇವನಿಗೂ ತೃಪ್ತಿ-ಬರಬೇಕೆಂಬ ತಾಣಕ್ಕೆ ಬಂದೆನಲ್ಲ ಎಂದು.

**I come to thee...though Hell bar the way ...**

ಮನೆಯ ಅಳಿಯ ಬಂದನೆಂದರೆ ಸಂಭ್ರಮ ಹೇಳಬೇಕೆ? ರಾಜೋಪಚಾರ ನಡೆಯಿತು. ನಾರಾಯಣತೀರ್ಥ ಬರುವಾಗಿನ ಸಾಹಸ ಎಲ್ಲ ಹೇಳಿದ್ದರೂ ಸನ್ಯಾಸ ಸ್ವೀಕರಿಸಿದ. ಸಂಕಲ್ಪ ಹೇಳದೆ ಹೋದ. ಆ ರಾತ್ರಿ ಶಯ್ಯಾಗೃಹದಲ್ಲಿ ಕುಳಿತಿದ್ದಾನೆ. ರತಿಯಂತೆ ಸಿಂಗರಿಸಿಕೊಂಡು ಕೇಳಿಗೆ ಮಡದಿ ಒಳ ಬರುತ್ತಾಳೆ. ಬಂದವಳು ಕಂಡದ್ದೇನು? ಸಮಾಧಿಸ್ಥ ಯೋಗಿಯೊಬ್ಬನನ್ನು! ಭಯ ಆಶ್ಚರ್ಯಗಳಿಂದ ಬೆದರಿದ ಹರಿಣಿಯಂತೆ ಹೊರಗೆ ಓಡಿ ಹೋಗುತ್ತಾಳೆ. ಮನೆಯ ಹಿರಿಯರು ತಿಳಿ ಹೇಳಿ 'ಏನೋ ಭ್ರಮೆ ನಿನಗೆ, ಹೋಗು' ಎಂದು ಮತ್ತೆ ಒಳಗೆ ಅಟ್ಟುತ್ತಾರೆ. ಅದೇ ಯೋಗಿ ದರ್ಶನ ಆಕೆಗೆ ಮತ್ತೆ! ಹೊರಗೆ ಓಡಿ ಬರುತ್ತಾಳೆ. ಇದೇನು ಆಟ ಎಂದು ಹಿರಿಯರು

# ಬಟ್ಟೆಯೊಲವಿನ ಗಾಳಿ ನಮ್ಮ ಬಾಳಿನ ಉಸಿರು

ಬಟ್ಟೆ ಶಿಲ್ಪದ ವಿಷಯದಲ್ಲಿ ಈಗಿನ ಕಾಲದವರ ಅಭಿರುಚಿಯೇನು ಎಂಬುದು ನಮಗೆ ಗೊತ್ತು. ಮಾತ್ರವಲ್ಲ, ಹೊಸಹೊಸ ಅಭಿರುಚಿಯ ಮೇಲ್ಪಂಕ್ತಿಯನ್ನು ಹಾಕುತ್ತೇವೆ. ಇದಕ್ಕಾಗಿ ನಾವು ಅತ್ಯುತ್ತಮವಾದ ಲಾಂಗ್‌ಕ್ಲಾತ್, ಪಾಪ್ಲಿನ್, ಮಲ್, ಕೋಟಿನಬಟ್ಟೆ, ಸೀರೆ ಮುಂತಾದುವನ್ನು ತಯಾರು ಮಾಡುತ್ತಿದ್ದೇವೆ. ಇನ್ನೂ ವಿಧ ವಿಧವಾದ ಬಟ್ಟೆಗಳನ್ನು ನಯನಮನೋಹರವಾದ ಬಣ್ಣಗಳಲ್ಲಿಯೂ ವಿನ್ಯಾಸಗಳಲ್ಲಿಯೂ ಅಗ್ಗದರದಲ್ಲಿಯೇ ತಯಾರು ಮಾಡುತ್ತೇವೆ




## ಮಹದೇವ್ ಟೆಕ್ಸ್‌ಟೈಲ್ ಮಿಲ್ಸ್

ಹುಬ್ಬಳ್ಳಿ

ಒಳ ಬಂದು ನೋಡುತ್ತಾರೆ. ಅಳಿಯ ನಾರಾಯಣ ತೀರ್ಥ ಮತ್ತೆ ಮಡದಿ ಒಳಗೆ ಬಂದರೆ ಅದೇ ಯೋಗಿ ಕಾಣುತ್ತಾನೆ. ಕೊನೆಗೆ ಅಳಿಯನೇ ಬಾಯಿ ಬಿಡುತ್ತಾನೆ. ಸನ್ಯಾಸ ಸಂಕಲ್ಪ ತಿಳಿಸುತ್ತಾನೆ. ಯತಿ ನಾರಾಯಣತೀರ್ಥನಾಗುತ್ತಾನೆ. ಒಂದು ತರಂಗಿಣಿಯಲ್ಲಿ ಮುಳುಗಿ ಮತ್ತೊಂದು ತರಂಗಿಣಿಯಲ್ಲಿ ಏಳುತ್ತಾನೆ. ಎದ್ದು ತೇಲುತ್ತಾನೆ. ಅದೇ ಕೃಷ್ಣಲೀಲಾ ತರಂಗಿಣಿ! ಭಗವಂತ ನೀಡಿದ ಆಯುಷ್ಯದಾನದ ಕತೆ ಇದು.

—೫—

ಇವು ಆಯುಷ್ಯದಾನದ ಒಂದು ಬಗೆಯ ಕಥೆಗಳಾದರೆ ಈ ದಾನದ ಇನ್ನೊಂದು ಬಗೆಯ ಕಥೆ ಇದೆ. ಇವುಗಳಲ್ಲಿ ಪ್ರಾಣಕ್ಕಿಂತ ಪ್ರಿಯರಾದವರಿಗೆ ತಮ್ಮ ಆಯುಷ್ಯವನ್ನೇ ದಾನ ಮಾಡುವುದನ್ನು ಕಾಣುತ್ತೇವೆ. ಅಲ್ಲಿ ವರವಾಗಿ ಬರುವ ದಾನ ಇಲ್ಲಿ ತ್ಯಾಗವಾಗಿ ದೊರೆಯುತ್ತದೆ.

ನಮ್ಮ ರಾಜಕೀಯ ಚರಿತ್ರೆಯ ಮೇಲೆ ಕಣ್ಣಾಡಿಸಿದರೆ ಇಂಥ ಒಂದು ದಾನ ಪ್ರಸಂಗ ಥಳ ಥಳ ಹೊಳೆಯುತ್ತದೆ. ಮೊಗಲ ಸಾಮ್ರಾಜ್ಯದ ಮೂಲ ಪುರುಷ ಬಾಬರನೇ ಆ ಮಿನುಗು ತಾರೆ! ಯುದ್ಧದಲ್ಲಿ ಸಿಂಹದಂತೆ ಗರ್ಜಿಸುತ್ತಿದ್ದ. ಈ ಯೋಧವರನ ದೈವಭಕ್ತಿ ಅಸೀಮವಾಗಿತ್ತು. ದೃಢ ನಿರ್ಧಾರಕ್ಕೆ ಇನ್ನೊಂದು ಹೆಸರು ಬಾಬರ ಎಂದು ಈತನ ಖ್ಯಾತಿ. ರಜಪೂತ ಅರಸರನ್ನೂ, ಇಬ್ರಾಹಿಮ್ ಲೋಧಿಯನ್ನೂ ಸೋಲಿಸಿ, ೧೫೨೬ರಲ್ಲಿ ಈತ ಹಿಂದೂಸ್ಥಾನದ ಮೇಲೆ ತನ್ನ ಪ್ರಭುತ್ವ ಸ್ಥಾಪಿಸಿದ. ಮೊಗಲ ಸಾಮ್ರಾಜ್ಯದ ಅಡಿಗಲ್ಲು ಹಾಕಿದ! ಹುಮಾಯೂನ್ ಬಾಬರನ ಪ್ರೀತಿಯ ಕುವರ. ಮುಂದೆ ಪಟ್ಟಕ್ಕೆ ಬರುವ ಯುವರಾಜ. ೧೫೩೦ ರಲ್ಲಿ ಈ ಯುವರಾಜ ಕಾಯಿಲೆ ಬಿದ್ದ. ದೇಶ ವಿದೇಶದ ವೈದ್ಯರೆಲ್ಲ ಉಪಚಾರ ನಡೆಸಿದರು. ಕಾಯಿಲೆ ಹೆಚ್ಚುತ್ತ ನಡೆಯಿತೇ ಹೊರತು, ಗುಣಮುಖದ ಲಕ್ಷಣವೇ ಇಲ್ಲ. ಬಾಬರ ತುಂಬ ಕಳವಳಕ್ಕೆ ಈಡಾದ. ರಾಜ್ಯದ ಎಲ್ಲ ಜನ ರಾಜಾಶಯದಂತೆ ಪ್ರಾರ್ಥನೆ ಸಲ್ಲಿಸತೊಡಗಿದರು. ಏನಾದರೂ ರಾಜಕುಮಾರನಿಗೆ ಗುಣವಾಗಲಿಲ್ಲ. ಎಲ್ಲ ಬಗೆಯ ಮೂಲಿಕೆಗಳ ಔಷಧ ಕೊಡಲಾಯಿತು. ಕಾಯಿಲೆ ಇಳಿಯಲಿಲ್ಲ. ದಿನ ದಿನ ಅದು ಉಲ್ಬಣಗೊಳ್ಳತೊಡಗಿತು. ರಾಜಕುಮಾರ ಒಣಗುತ್ತಿರುವುದನ್ನು ಬಾಬರನು ನೋಡಲಾರದೇ ಹೋದ. ಆದರೆ ಮಾಡುವುದೇನು? ಬೋನಿನಲ್ಲಿ ಬಿದ್ದ ಸಿಂಹದಂತೆ ಆತ ಅಸಹಾಯಕತೆಯನ್ನು ಅನುಭವಿಸತೊಡಗಿದ. ತಾನು ಕಟ್ಟಿದ ಸಾಮ್ರಾಜ್ಯದ ಸಿಂಹಾಸನದಮೇಲೆ ಯುವರಾಜ ಹುಮಾಯೂನ ಕೂಡಬೇಕೆಂದು ಕಂಡ ಕನಸು ಕುಸಿಯುತ್ತಿದೆ. ತನ್ನ ಕಣ್ಣ ಮುಂದೆ ತನ್ನ ಕುವರ ನವೆದು ನವೆದು ಸಾಯಬೇಕೆ? ಇದಾಗದು. ಆ ದೇವನಿಗೆ ಕರುಣೆ ಇದ್ದರೆ, ನನ್ನ ಭಕ್ತಿಗೆ ಶಕ್ತಿ ಇದ್ದರೆ. ನನ್ನ ಪ್ರಾರ್ಥನೆಗೆ ಬೆಲೆ ಇದರೆ ಹುಮಾಯೂನ ಬದುಕಬೇಕು. ಕಾಯಿಲೆಯಿಂದ ಮುಕ್ತನಾಗಬೇಕು. 'ಆದರೆ !...ಮುಕ್ತನಾದರೆ ನಾನು ನನ್ನ ಪ್ರಾಣ ಕೊಡುವೆ-ಎಂದರೆ. ಬಾಬರ್ ತಬ್ಬಿಬ್ಬಾದ. ಎಂದರೆ ಏನು? ಅವನಿಗೆ ಕೂಡಲೇ ಅರ್ಥ ಹೊಳೆಯಲಿಲ್ಲ. 'ಯಾ ಅಲ್ಲಾ'—ಎಂದು ಉಸಿರೆಳೆದು ಕಣ್ಣು ಮುಚ್ಚಿ ಧ್ಯಾನಿಸಿದ. ಕೂಡಲೇ ಬೆಳಕು ಮೂಡಿತು. ಕೂಗಿದ. ಎಂದರೆ ನನ್ನ ಉಳಿದ ಆಯುಷ್ಯವನ್ನು ಮಗನಿಗೆ ಧಾರೆಯೆರೆದು ಕೊಡುವೆ. ಎಂದರೆ ಆತನಿಗೆ ಪ್ರತಿಯಾಗಿ ನಾನು ಸಾಯುವೆ. ನಾನು ಸತ್ತು, ಮಗ ಬದುಕಬೇಕು. ಸಾಮ್ರಾಜ್ಯ ಮುಂದುವರೆಯಬೇಕು. ದೃಢ ನಿರ್ಧಾರದ ಬಾಬರ ಪ್ರಾರ್ಥನಾ ಮಂದಿರದಿಂದ ಹುಮಾಯೂನನ ಕೋಣೆಗೆ ಬಂದ. ನಿಸ್ತೇಜ ಮುಖದ ಮಗನನ್ನು ಒಮ್ಮೆ ನೋಡಿದ. ಸುತ್ತುಮುತ್ತು ನೆರೆದಿದ್ದ ವೈದ್ಯರು, ಪರಿವಾರದವರು ಸೋತು ಬೆಕ್ಕಸಗೊಂಡು ನಿಂತಿದರು. ಮೈಯಲ್ಲಿ ಏನೋ ಬಂದವರಂತೆ ಹುಮಾಯೂನನ ರುಗ್ಣ ಶಯ್ಯೆಯ ಸುತ್ತ ಪ್ರಾರ್ಥಿಸುತ್ತ ಮೂರು ಸುತ್ತು ಹಾಕಿದ. ಸಾಮ್ರಾಟನ ಗಂಭೀರ ವದನ ಕಳಾಹೀನವಾಗತೊಡಗಿತ್ತು. ರಾಜಕುಮಾರನ ಮೊಗ ಗೆಲುವುಗೊಳ್ಳತೊಡಗಿತು. ಈ ಅದ್ಭುತ ಚಮತ್ಕಾರಕ್ಕೆ ಪರಿವಾರ ಬೆರಗುಗೊಂಡಿತು. ಬಾಬರ ಕುಸಿದು, ಹುಮಾಯೂನ್ ಎದ್ದು ಕುಳಿತ. ಬಾಬರನ ಶಕ್ತಿ ಉಡುಗತೊಡಗಿತು. ಹುಮಾಯೂನನ ಶಕ್ತಿ ಬೆಳೆಯತೊಡಗಿತು. ಬಾಬರ ಒರಗಿದ, ಹುಮಾಯೂನ ಎದ್ದು ನಿಂತ. ಬಾಬರ ಮರಣೋನ್ಮುಖನಾದ. ಹುಮಾಯೂನ್ ಗುಣಮುಖಗೊಂಡ. ತನ್ನ ಆಯುಷ್ಯವನ್ನೆಲ್ಲ ಮಗನಿಗೆ ಧಾರೆಯೆರೆದ ಧೀರ ಪಿತ ಬಾಬರ. ಯಾ ಅಲ್ಲಾ ... ಕೊನೆಗೂ ನಾನು ಗೆದ್ದೆ —ಅಲ್ಲಾ-ಹೋ ಅಕ್ಬರ್—ಎಂದು ತೃಪ್ತಿಯ ಕೊನೆಯುಸಿರನೆಳೆದ. ಹುಮಾಯೂನ್ ನೂರೆಯಾಗಿ ಬಾಳಿದ.

—೬—

ಇನ್ನು ಕನ್ನಡ ಕುವರನೊಬ್ಬ ಪಡೆದ ಅನನ್ಯ



ಆಯುಷ್ಯದಾನದ ಕಥೆ.

ಶರಣ ವಾಣಿಗೆ ಗೇಯತೆಯ ಮಾಧುರ್ಯ ಒದಗಿಸಿತು ದಾಸವಾಣಿ. ದಾಸಕೂಟದ ಅಗ್ರೇಸರ ಪಂಕ್ತಿಯಲ್ಲಿ ಜಗನ್ನಾಥದಾಸರೂ ಒಬ್ಬರಾಗಿದ್ದಾರೆ. ಇವರ ಹೆಸರನ್ನು ಯಾರು ಕೇಳಿಲ್ಲ.? ಗುರುಗಳ ಕರುಣದಿಂದ ಹರಿಕಥಾಮೃತಸಾರ ಹೇಳಿದ ದಾಸವರೇಣ್ಯರು ಇವರು. ಪ್ರತಿಭೆ—ಪಾಂಡಿತ್ಯ ಸಂಸ್ಕೃತ—ಕನ್ನಡ ಇವರ ದಾಸ ಬೋಧೆಯಲ್ಲಿಯ 'ಮಣಿಪ್ರವಾಳ' "ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ ಕುಳಿತು ಪಾಡಲು ನಿಲುವ, ನಿಂತರೆ ನಲಿವ, ನಲಿದರೆ ಒಲಿವ ಹರಿ ಸುಲಭ" ಎಂದು ಸಾರುವಲ್ಲಿ ಕನ್ನಡದ ಸವಿ ಸೊಗಸನ್ನು ಮೆರೆದಿದ್ದಾರೆ...

ಇವರು ಇನ್ನೂ ದಾಸರಾಗಿರಲಿಲ್ಲ. ಬರಿ ಸಂಸ್ಕೃತ ಪಂಡಿತರು. ಪಾಂಡಿತ್ಯ—ಕಾವ್ಯಶಕ್ತಿ ಕರಗತ ಮಾಡಿಕೊಂಡ ಹಮ್ಮು ಬೇರೆ. ಪಾಂಡಿತ್ಯದ ಅಟ್ಟಹಾಸವುಳ್ಳ ಶ್ರೀನಿವಾಸಾಚಾರ್ಯರು ಮಾತ್ರ—ಮಾನ್ವಿ ಇವರ ವಾಸಸ್ಥಳ. ಒಮ್ಮೆ ದಾಸರ ಆಡೊಂಬೊಲವಾದ ಮಾನ್ವಿಗೆ ಶ್ರೀ ವಿಜಯದಾಸರು ಆಗಮಿಸಿದರು. ಆಚಾರ್ಯರ ಪಾಂಡಿತ್ಯ—ಕಾವ್ಯಶಕ್ತಿಯ ಖ್ಯಾತಿಯನ್ನು ಕೇಳಿದ ದಾಸರ ಇವರಿಗೆ ಪ್ರಸಾದಕ್ಕೆ ಬರಬೇಕೆಂದು ಭೋಜನಕ್ಕೆ ಆಮಂತ್ರಣ ಕಳಿಸಿದರು. ಎದುರಿನಲ್ಲಿ ನೇರವಾಗಿ ಒಲ್ಲೆನ್ನದೇ ಭೋಜನಕ್ಕೂ ಬಾರದೆ ಹಿಂದೆ, ದಾಸರನು ನಿಂದಿಸಿ, ಉದರ ಶೂಲೆಯೆಂದು ನೆವ ಹೇಳಿ ಕಳಿಸಿದರು. 'ಆಯಿತು'

ಎಂದರು ದಾಸರು. ಆದರೆ ಅವರಿಗೆ ಗೊತ್ತಿತ್ತು ಒಂದು ದಿನ ಆಚಾರ್ಯರು ...ಂಥಕ್ಕೆ ಸೇರುವರು ಎಂದು. ಅಂತೆಯೇ ಆಚಾರ್ಯರು ಮಾಡಿದ ನಿಂದೆಯನ್ನು ಕೇಳಿದವರು ಬಂದು ಹೇಳಿದಾಗ 'ಈ ಕೂಸು ನಮ್ಮದು. ದಾಸಕೂಟದ ತೊಟ್ಟಿಲಲ್ಲಿ ಆಡುವುದು' ಎಂದು ಭವಿಷ ನುಡಿದು ಸಮಾಧಾನ ಹೇಳಿದ್ದರು.

ಆಯಿತು, ಆಚಾರ್ಯರಿಗೆ ಉದರ ನಿಮಿತ್ತದ ಶೂಲಿ ನಿಜವಾಗಿಯೂ ಆರಂಭವಾಯಿತು. ಪಂಡಿತರು ಗಾಬರಿ ಆಗಿ ಗುರುಗಳಲ್ಲಿಗೇ ಓಡಿದರು. ದಾಸರ ಮುಂದೆ ಸಾಷ್ಟಾಂಗ ಹಾಕಿ ಸ್ವಾಮಿ, ಉದ್ಧರಿಸಬೇಕು ಎಂದು ಪ್ರಾರ್ಥಿಸಿಕೊಂಡರು. 'ಅನ್ನಂ ನ ನಿಂದ್ಯಾತ್' ಎಷ್ಟು ಸಲ ಗಿಳಿಪಾಠ ಮಾಡಿದ್ದೆ. ಆದೂ ಗುರು ಪ್ರಸಾದಾನ್ನ ತಿರಸ್ಕರಿಸಿದ ಶಾಪದಿಂದ ಮುಕ್ತ ಮಾಡಬೇಕು ಎಂದು ಬೇಡಿಕೊಂಡರು. ಭಕ್ತಾಪರಾಧ ಸಹಿಷ್ಣುಗಳಾಗಿದ್ದ ವಿಜಯದಾಸರು ಆಚಾರ್ಯರನ್ನು ಕರುಣೆಯಿಂದ ...ಮ ಗೋಪಾಲದಾಸರ ಬಳಿ ಕಳಿಸಿಕೊಟ್ಟರು. ಇವರೆ ದಾಸರ ಪ್ರೀತಿಯ ಭಾಗಣ್ಣ ಶಿಷ್ಯ. ಇವರು ಆಚಾರ್ಯರ ಉದರ ಶೂಲಿ ಕಳೆದರು. ಅವರ ದೈವದ ಭಾಗಣ್ಣ ಆದರು. ಕನ್ನಡದ ಪುಣ್ಯದ ಭಾಗಣ್ಣರೂ ಆದರು. ಇಷ್ಟು ಹೊತ್ತಿಗೆ ಆಚಾರ್ಯರ ಅಹಂ ಇಳಿದಿತ್ತು. ಎದೆ ಹದಕ್ಕೆ ಬಂದಿತ್ತು. ಕಾಯಿ ಪಾಡಿಗೆ ಬಂದಿತ್ತು. ಅಡಿ ಹಾಕಲು ಅಡ್ಡಿ ಇಲ್ಲ ಎಂದುಕೊಂಡು ಭಾಗಣ್ಣ ಆಚಾರ್ಯರನ್ನು ಕರೆದುಕೊಂಡು ತಿರುಪತಿಗೆ ಹೋದರು. ಆಗ ಆಚಾರ್ಯರಿಗೆ ೪೦–೪೧ ವರುಷ ವಯಸ್ಸು. ಅಲ್ಲಿ ಅವರಿಗೆ ಅಕಸ್ಮಾತ್ ಮರಣ ಸಂಭವಿಸಬೇಕೆ? ಗುರು ವಿಜಯದಾಸರು 'ಇದು ದಾಸಕೂಟದ ಕೂಸು' ಎಂದಿದ್ದರು. ದಾಸರಾಗದ ಮುನ್ನ ಇವರಿಗೆ ಮರಣವೇ ಎಂದು ಗೋಪಾಲದಾಸರು ಕಳವಳಿಸಿದರು. ಗುರುಪ್ರೇರಣೆ ಆಗಿ ಕೂಡಲೇ ಗೋಪಾಲದಾಸರು ತಮ್ಮ ಶೇಷಾಯುಷ್ಯದಲ್ಲಿ ೪೦ ವರುಷಗಳನ್ನು ಪಂಡಿತ ಶ್ರೀನಿವಾಸಾಚಾರ್ಯರಿಗೆ ದಾನವಾಗಿ ಸಂಕಲ್ಪಿಸಿದರು. ತಿರುಪತಿ ತಿಮ್ಮಪ್ಪನ ಸಾಕ್ಷ್ಯದಲ್ಲಿ ಧಾರೆಯೆರೆದು ಕೊಟ್ಟುಬಿಟ್ಟರು. ಪವಾಡವೋ ಎಂಬಂತೆ ಮೃತರಾಗಿದ್ದ ಆಚಾರ್ಯರು ಎದ್ದು ಕುಳಿತರು. ಕಳಿತ ಹಣ್ಣಿನಂತೆ ಸಂಸಾರಮೋಹದಿಂದ ಕಳಚಿಕೊಂಡರು. ದಾಸದೀಕ್ಷೆ ಪಡೆದು, ಜಗನ್ನಾಥ ವಿಠಲನೆಂಬ ಅಂಕಿತ ಪಡೆದು ಜಗನ್ನಾಥದಾಸರೆಂದು ಪ್ರಸಿದ್ಧರಾದರು. ●

---

# ನಮ್ಮ ಮುಖಪುಟ ಕುರಿತು

## ವಿಜಯನಗರ ಸಹೋದರಿಯರು



ನಮ್ಮ ಈ ವಿಶೇಷ ಸಂಚಿಕೆಯ ಮುಖಪುಟದ ಮೇಲೆ ರಾರಾಜಿಸಿ, ಅದರ ಸೊಬಗನ್ನು ಹೆಚ್ಚಿಸಿರುವವರು ವಿಜಯನಗರ ಸಹೋದರಿಯಲ್ಲೊಬ್ಬರಾದ ಕುಮಾರಿ ಜಯಶ್ರೀ. ಇವರು ತಮ್ಮ ಸಹೋದರಿ ಕುಮಾರಿ ಪದ್ಮಾ ಜೊತೆಗೆ ಮುಂಬಯಿಯಲ್ಲೂ, ದೇಶ ವಿದೇಶಗಳಲ್ಲೂ, ತಮ್ಮ ಅನ್ಯಾದೃಶ ನೃತ್ಯ ಪ್ರದರ್ಶನದಿಂದ ಕನ್ನಡದ ಕೀರ್ತಿಪತಾಕೆಯನ್ನು ಬಹು ಎತ್ತರದಲ್ಲಿ ಹಾರಿಸಿದ್ದಾರೆ.

ಮುಂಬಯಿ ವಿಶ್ವವಿದ್ಯಾಲಯದ ಪದವೀಧರೆಯಾದ ಇವರಿಗೆ ಬಾಲ್ಯದಿಂದಲೇ ನೃತ್ಯದಲ್ಲಿ ಅಭಿರುಚಿ. ಈ ಸಹೋದರಿಯರ ಅಭಿರುಚಿಯನ್ನು ನೀರೆರೆದು ಪೋಷಿಸಿದವರು ಇವರ ತಂದೆ-ತಾಯಿಯರು. ಇವರ ನೃತ್ಯಾಭ್ಯಾಸ ಪ್ರಾರಂಭದಲ್ಲಿ ಶ್ರೀಮತಿ ಸುಧಾ ದೊರೆಸ್ವಾಮಿಯವರಲ್ಲೂ, ಮುಂದೆ "ಶ್ರೀ ರಾಜರಾಜೇಶ್ವರಿ ಭರತನಾಟ್ಯ ಕಲಾಮಂದಿರ"ದ ಶ್ರೀಮಹಾಲಿಂಗಮ್ ಪಿಳ್ಳೆಯವರಲ್ಲೂ ವಿಕಾಸಗೊಂಡು ಪರಿಪಕ್ವವಾಯಿತು.

ಭರತನಾಟ್ಯ, ಕುಚ್ಚಿಪುಡಿ, ಮೋಹಿನಿ ಅಟ್ಟಮ್ ಹಾಗೂ ಕಥಕ್ಕಳಿ ನೃತ್ಯಗಳಲ್ಲಿ ವಿಶೇಷವಾದ ಪರಿಶ್ರಮವಿದೆ. ಮುಂಬಯಿಯ ಸಂಗೀತ-ನೃತ್ಯ ಅಕಾಡೆಮಿಯಾದ "ಸುರ ಸಿಂಗಾರ ಸಮ್‌ಸದ್" ಈ ಸಹೋದರಿಯರಿಗೆ "ಶೃಂಗಾರ ಮಣಿ" ಎಂಬ ಪ್ರಶಸ್ತಿಯನ್ನು ಪ್ರದಾನಿಸಿ ಗೌರವಿಸಿದೆ. ಇವರ ನೃತ್ಯ ಕಾರ್ಯಕ್ರಮಗಳಿಂದ ಅನೇಕ ಸಂಘ-ಸಂಸ್ಥೆಗಳಿಗೆ ಹಣಕಾಸಿನ ನೆರವು ದೊರೆತು ಅಭಿವೃದ್ಧಿಗೊಂಡಿವೆ.

ಈಗಾಗಲೇ ಮೂರು ಬಾರಿ ವಿಶ್ವ ಪ್ರವಾಸವನ್ನು ಕೈಕೊಂಡಿದ್ದಾರೆ. ಈಗ ಜರ್ಮನಿಯಿಂದ ಆಮಂತ್ರಣ ಬಂದಿದೆ. ಕನ್ನಡ ನಾಡಿನ ಹಾಗೂ ಭಾರತೀಯ ಸಂಸ್ಕೃತಿಯ ರಾಯಭಾರಿಗಳಾಗಿ ವಿದೇಶಗಳಲ್ಲಿ ಅದರ ಪರಿಮಳವನ್ನು ಪಸರಿಸಿದ್ದಾರೆ. ಕೀರ್ತಿಯ ಶಿಖರವನ್ನೇರಿದರೂ, ಈ ಸಹೋದರಿಯರು ತಮ್ಮ ಕನ್ನಡತನವನ್ನು ಅಚ್ಚಳಿಯದೇ ಉಳಿಸಿಕೊಂಡಿದ್ದಾರೆಂಬುದು ಅಭಿಮಾನದ ಸಂಗತಿ.

ವಿಜಯನಗರ ಸಹೋದರಿತ್ರಯರಲ್ಲಿ ಚಿಕ್ಕವರಾದ ಕುಮಾರಿ ನಂದಿನಿ ಚಿಕ್ಕ ಅಸ್ವಸ್ಥತೆಯಿಂದ ಕಾಲವಶಳಾದ ನೋವು ಮರೆಯಲು ಈ ಸಹೋದರಿದ್ವಯರು "ನೃತ್ಯ ನಂದಿನಿ" ಎಂಬ ನೃತ್ಯಕಲಾ ಶಾಲೆಯನ್ನು ಚೆಂಬೂರಿನಲ್ಲಿ ನಡೆಸುತ್ತಿದ್ದಾರೆ. ತಮ್ಮಿಂದ ಕಲಾಸೇವೆ ನಿರಂತರವಾಗಿ ಸಾಗಬೇಕು. ಅದರ ಪ್ರಯೋಜನ ಉದಯೋನ್ಮುಖ ಕಲಾವಿದರಿಗೂ ದೊರೆಯಬೇಕೆಂಬ ಉತ್ಕಟೇಚ್ಛೆಯ ಹಿನ್ನೆಲೆಯಲ್ಲಿ ಈ ಶಾಲೆ ಸ್ಥಾಪಿತವಾಗಿದೆ.

—ಎನ್. ಸಿ. ದೇಸಾಯಿ

 *HAPPY DEEPAVALI* 




# Standing ovation for West Coast Paper.

For perfecting the paper-making process.
For fulfilling the needs of the packaging and printing industries.
For making education a birth right of every Indian.
For creating a better standard of living.

**WEST COAST PAPER** Shreeniwas House, Waudby Road, Bombay 1.

ನಳಪಾಕವನ್ನೇ ಇಳಿಸಿ
ನಮ್ಮೆಲ್ಲರ ಹೊಟ್ಟೆ ತುಂಬಿಸುವ—

# ನಮ್ಮೂರ ಸೋಮಕ್ಕ

★ ಪದ್ಮಾಬಾಯಿ ನರಗುಂದ

ಕುಟ್ಟಿ ಕುಟ್ಟಿ ಮಾಡಿದಂತಹ ಗಿಡ್ಡನ್ನ ಶರೀರ ಯಷ್ಟಿ. ದುಂಡಾದ ಮುಖ. ಓರಣವಾಗಿ ಕೂದಲು ಬಾಚಿ ಜಡೆ ಹೆಣೆದು ಕಟ್ಟಿದ ಚಕ್ಕರ ತುರುಬು. ಉದ್ದ ಕುಂಕುಮ. ತಿದ್ದಿ ತೀಡಿ ಉಟ್ಟ ಹದಿನೆಂಟು ಮೊಳದ ಸೀರೆ. ತುರುಬಿನ ಮೇಲೆ ಮಲ್ಲಿಗೆಯ ಚಿಕ್ಕ ಮಾಲೆ ಇಲ್ಲವೇ ಕೇದಿಗೆ. ಇಂತಹ ಸೊಬಗಿನ ವೇಷದಿಂದ ಸೋಮಕ್ಕ ಹೊರಗೆ ಹೊರಟಳೆಂದರೆ ಆಬಾಲ ವೃದ್ಧರೆಲ್ಲರೂ ಒಂದು ನಿಮಿಷ ಆ ತಾಯಿಯನು ಎವೆ ಇಕ್ಕದೆ ನೋಡದೆ ಇರುತ್ತಿರಲಿಲ್ಲ.

ವಯಸ್ಸಿಗೆ ತಕ್ಕಂತೆ ಎಲ್ಲರೂ ಸೋಮಕ್ಕನಿಗೆ ತಮ್ಮ ತಮ್ಮ ಕೃತಜ್ಞತೆಯನ್ನು ವ್ಯಕ್ತ ಮಾಡುವವರೇ. ಓರಿಗೆಯ ಹೆಂಗಳೆಯರು ನಸು ನಕ್ಕು ಆದರಿಸುವರು, ಚಿಕ್ಕವರು ಕೈ ಮುಗಿದು ಆದರಿಸಿದರೆ ಹಿರಿಯರು ಯಾಕವ್ವಾ ಹೊಂಟೇನ್ರೂ ಎಂದು ಕೇಳುವರು. ಊರಲ್ಲಿ ಎಲ್ಲರಿಗೂ ಬೇಕಾದವಳು, ಎಲ್ಲರಿಗೂ ಅನ್ನದಾತೆ ಆಕೆ.

ನಾನು ನೋಡಿದ ಸಂಗತಿ, ಎರಡು ಮೂರು ಮನೆಗಳಲ್ಲಿ ನಾಲ್ಕಾರು ಜನರ ಅಡಿಗೆ ಮಾಡಿಟ್ಟು, ಲಗ್ನದ್ದೋ ಮುಂಜಿವೆಯದೋ ಒಂದು ದೊಡ್ಡ ಅಡಿಗೆಯನ್ನು ಸಹಜವಾಗಿ ಮಾಡುತ್ತಾಳೆ ನಮ್ಮ ಸೋಮು೦್ಕ. ಹೇಗೆಂದಿರಿ ಮತ್ತೆ? ಒಳ್ಳೇ ರುಚಿಕಟ್ಟಾದ ನಳಪಾಕ. ಉಳಿದ ಎಲ್ಲ (ಕಿರುಕುಳ) ವಸ್ತು ಮಾಡಿ ಇಟ್ಟು, ಸೋಮಕ್ಕಾ ಒಲೆಗೆ ಕಟ್ಟಿಗೆ ಹಚ್ಚಿ ಅನ್ನಕ್ಕೆ ಇಟ್ಟು ಎರಡನೆಯ ಮನೆಗೆ ಹೊರಡುವಳು, ಅನ್ನ ಆಗುವದಕ್ಕೂ ಕಟ್ಟಿಗೆ ತೀರುವದಕ್ಕೂ ಗಂಟಾಗುವಂತೆ, ಅಗ್ನಿ ಸೋಮಕ್ಕನಿಗೆ ಪ್ರತ್ಯಕ್ಷನಾಗಿ ಆಕೆಯ ಕಿವಿಯಲ್ಲಿ ಇಷ್ಟು ಅಡಿಗೆಗೆ ಇಷ್ಟೇ ಉರುವಲ ಎಂದು ಹೇಳಿ ಕಲಿಸಿ ಆಕೆಯನ್ನು ತರಬೇತು ಮಾಡಿರುವನೇನೋ ಎಂದು ಎಷ್ಟೋ ಸಲ ನನಗೆ ಅನಿಸದೆ ಹೋಗಿಲ.

ಸಾಕಶಾಸ್ತ್ರದಲ್ಲಿ ಸೋಮಕ್ಕನ ಕೈ ಪಳಗಿದಷ್ಟು ಇನ್ನಾರದೂ ನುರಿತಿರಲಿಕ್ಕಿಲ್ಲವೆಂದು ಎದೆ ತಟ್ಟಿ ಹೇಳಬಲ್ಲೆ. ಯಾರ ಮನೆಯಲ್ಲಿ ಅಡಚಣಿ ಇದ್ದರೂ ಅದರ ಪರಿಹಾರಕ್ಕೆ ಸೋಮಕ್ಕನ ಕೈ ಹತ್ತದೆ ಇರುವದಿಲ್ಲ.

ಇದೊಂದೇ ರೀತಿಯಿಂದ ಜನರಿಗೆ ಉಪಯೋಗವಾಗಿ ಹಿಂದಕ್ಕೆ ಸರಿಯುವದಿಲ್ಲ. ಮಕ್ಕಳ ತಾಯಂದಿರು ತಮ್ಮ ದಂಡಿನ ಜತೆಗೆ ನಾಟಕಕ್ಕೋ ಚಿತ್ರಪಟಕ್ಕೋ ಹೊರಟು ಸಹಾಯ ಬೇಡಿದರೆ ಒಲ್ಲೆನೆನ್ನುವದಿಲ್ಲ ನಮ್ಮ ಸೋಮಕ್ಕ. ಅದೇ ಚಿತ್ರಪಟ ಬಹಳ ಚನ್ನಾಗಿದೆ. ನೋಡಿ ಬನ್ನಿ ನಮ್ಮ ವತಿಯಿಂದ ಎಂದು ಯಾರಾದರೂ ರೊಕ್ಕಕೊಟ್ಟರೆ, "ಒಲ್ರೆವ್ವಾ ನನಗ ನಿದ್ದಿ ಕಟ್ಟೋದು ಆಗುವದಿಲ್ಲಾ" ಎಂದು ಅವರ ಹಣವನ್ನು ಅವರಿಗೆ ವಾಪಸ ಮಾಡಿ ಬಿಡುವಳು.



ಆಪಜಣೆ ಇದ್ದರೆ ಹೆರಿಗೆಯುವರಿಗೆ, ಕೊಸಿಗೆ ಎಣೆ ಹೊಸಿ ಎರೆಯ ಬೇಕಾದರೆ ಅದಕ್ಕೂ ಸಿದ್ಧಳ.

ಮೇಲೆ ಹೇಳಿದಂತಹ ಕೆಲಸಗಳನ್ನಷ್ಟೆ ಬಲ್ಲಳೆಂದು ತಿಳಿಯಬೇಡಿ. ಸಾಹಿತಿಯಂತೆ, ಕವಿಯಂತೆ ಬೇಕಾದ ವಿಷಯವನ್ನು ವರ್ಣಿಸುವ ಶಕ್ತಿಶಾಲಿ ಆಕೆ.

ಸೋಮಕ್ಕನ ವರ್ಣನೆಯ ಭಾಷಾ ಶೈಲಿ ಯಾವ ವಿದ್ವಾಂತರ ಶೈಲಿಗೂ ಕಡಿಮೆ ಇಲ್ಲ. ಆಕೆಯ ಬಾಯಿಯಿಂದ ಕೇಳಿದಂತೆ ನಿಮಗೂ ಹೇಳುವೆ.

ದೇವರ ಕೃಪೆಯಿಂದ ಸೋಮಕ್ಕನಿಗೆ ಮನೆತುಂಬಾ ಮಕ್ಕಳಿರುವವರು. ಗಂಡು–ಹೆಣ್ಣು ಎಂಬ ಭೇದವಿಲ್ಲದೆ ಎಲ್ಲರಿಗೂ ಪಾಕಕಲೆ ಕಲಿಸಿದ್ದಾಳೆ. ಯಜಮಾನರಂತೂ ಹುಟ್ಟಾ (ಜನ್ಮಜಾತ) ಬಲ್ಲವಾಚಾರ್ಯರೆಂದು ಹೇಳುತ್ತಾರೆ. ಮತ್ತೆ ತಮ್ಮ ಯಜಮಾನರ (ಪತಿರಾಜರ) ಪಾಕಕಲೆಯನ್ನು ಮೈಮರೆದು ಬಾಯಿ ತುಂಬಾ ಹೊಗಳುತ್ತಾರೆ.

ಉತ್ತರ ಭಾದ್ರಪದ ಮಾಸದಲ್ಲಿ ಭಾಗವತ ಪುರಾಣ ಹೇಳುತ್ತಾರೆ ಆಚಾರ್ಯರು. ಜನ ದಟ್ಟಣೆ ಆಗಬಾರದೆಂದು ಎರಡು ತಾಣದಲ್ಲಿ ಪುರಾಣವಾಗುತ್ತದೆ. ಮುಕ್ತಾಯ ಅಥವಾ ಮಂಗಳವು ಭರ್ಜರಿಯಾಗಿಯೇ ಆಗುತ್ತದೆ ಎರಡೂ ಕಡೆಗೆ. ಒಂದೆಡೆಗೆ ಯಾರೋ ಒಬ್ಬರು ಅಡಿಗೆ ಮಾಡಿದರೆ ಇನ್ನೊಂದೆಡೆಗೆ ನಮ್ಮ ಸೋಮಕ್ಕನ ಯಜಮಾನರು ಮಾಡುವರು. ಎರಡೂ ಕಡೆಗೂ ಭಕ್ತ ಜನರು ತಂಡೋಪತಂಡವಾಗಿ ಪ್ರಸಾದ ಭುಂಜಿಸಿ ಬರುತ್ತಾರೆ. ಉಂಡವರು ಸೋಮಕ್ಕನ ಪತಿದೇವರ ಕೈಯ್ಯ ಪ್ರಸಾದವೇ ಶ್ರೇಷ್ಠವೆಂದು ಅನ್ನುವರೆಂದು ಸೋಮಕ್ಕ ಹೇಳುತ್ತಾರೆ. ಅವರ ವರ್ಣನಾ ಶೈಲಿಯನ್ನು ಅವರ ಬಾಯಿಯಿಂದ ಹೊರಟಂತೆಯೇ ಹೇಳುವೆ, ಲಕ್ಷ್ಯಗೊಡಿ.

"ಏನ್ರೀss ನಿನ್ನೆ ನೀವು ಮಂಗಳದ ಊಟಕ ಹೋಗಿದ್ರೇನು?, ಸೋಮಕ್ಕ."

"ಇಲ ವಲ್ಲರಿ, ನಾನು."

"ಜನರು ಏನ ಮಾತಾಡತಿದ್ರು ಅಂಬೂದರೆ ಕೇಳಿದ್ರೇನು? ಸೋಮಕ್ಕ."

"ನನ ಕಿವಿಗೆ ಜನರ ಮಾತೂ ಬೀಳಲಿಲ್ಲವಲ್ಲಾ, ನಾನು,"

"ಅಯ್ಯ ದೇವರ, ಅದನ್ನೂ ಕೇಳಲಿಲ್ರಿ? ಹೇಳ್ರಿ, ನಿನ್ನೆ ಮುಂದಿ ಆ ಗುಡಿ ಮಂಗಳದ ಅಡಿಗಿ ಈ ಗುಡಿಕಿಂತಾ ಉತ್ತಮ ಆಗಿತ್ತು ಅಂತ ಮಾತಾಡತಿದ್ರು. ಇದರ ಅರ್ಥಾ ತಿಳಿದಿರಬೇಕು ನಿಮಗ. ನೋಡ್ರಿ ಆ ಗುಡಿ ಒಳಗ ನಮ್ಮನಿಯವರು ಅಡಿಗಿ ಮಾಡಿದ್ರು."

"ನಮ್ಮಮನಿ ಅವರು ಅಡಿಗೆ ಮಾಡಿದರ ನಾಕೂ ದಿಕ್ಕಿಗೆ ಎರಡ ಮೈಲಿನ ತನಕಾ ಅವರ ಮಾಡಿದ 'ಹುಳಿ' ವಾಸನಿ ಘಮಾ, ಘಮಾ, ಘಮಾ ಘಮಾ ಇಡಗತದ. ಇಷ್ಟೇ ಅಲ್ಲಾ ಅವರ ಮಾಡಿದ ಹುಳಿ ಉಂಡು ಕೈ ತೊಳಕೊಂಡಿಂದ ಸುದ್ದಾ ಎಂಟ ದಿನಾ ಕೈಗೆ ಹತ್ತಿದ ಮಸಾಲಿ ವಾಸನಿ ಕಡಿಮೆ ಆಗೂದುಲ್ಲಾ, ಎಲ್ಲಾರ್ಹಾಂಗ ಅಲ್ಲ ಅವರದು ಹುಳಿ ಮಾಡು ರೀತಿ, ಅದೊಂದು ಬ್ಯಾರೇನೆ ಅದ, ಏನ ಆಗಿಲಿ ಕೇಳಿ ಇಟಗೋಡ್ರಿ, ಅವರು ಹ್ಯಾಂಗ ಮಾಡತಾರನ್ನೂದು."

"ಮುಣ್ಣಿsಗ ಬ್ಯಾಳಿ ಬೇಯಿಸಿ ಘಟ್ಟಿಸಿ ಕೆಂಡಕ್ಕಿಡತಾರ. ಇತ್ಲಾಗ ತಾಜಾ ಮಸಾಲಿ,– ಹವೀಜಾ, ಜೀರಿಗೆ, ಇಂಗು, ಮೆಂತೆ, ಲವಂಗಾ ಮತ್ತೆ ಬೇಕಾದದ್ದೆಲ್ಲಾ ಬ್ಯಾರೆ ಬ್ಯಾರೆ ಹುರಿತಾರ. ಅಲ್ಲಿಂದ ಎಲ್ಲಾ ಸಾಮಾನಾ ಒತ್ತಟ್ಟಿಗೆ ಮಾಡಿ, ಧಬಾ ಧಬಾ ಧಬಾ ಧಬಾ ಒರಳಿಗೆ ಹಾಕಿ ಕುಟ್ಟುತಾರ, ಬ್ಯಾರೆ ಬ್ಯಾರೆ ಕುಟ್ಟಿದರ ಮಸಾಲಿ ವಾಸನಿ ಕಡಿಮೆ ಆಗತದ. ಅದಕನ ಎಲ್ಲಾ ಕೂಡಿಸಿ ಕುಟ್ಟತಾರ, ಮಸಾಲಿ ಪುಡಿ ಕಡಿಕೆ ಮಾಡುದುಲ್ಲಾ ಒರಳೆಗೇ ಬಿಟ್ಟು ಮ್ಯಾಲೆ ಮುಚ್ಚಳಾ ಹಾಕತಾರ, ಅಲ್ಲಿಂದ ವಗ್ಗರಣೆಗಿಡತಾರ. ಸಾಸಿವಿ ಚಟಾ ಚಟಾ ಅನ್ನೂಣ ಹುಳಿ ಬೆಲ್ಲಾ ಹಾಕಿ ಘಟಿಸಿದ ಬ್ಯಾಳಿ ಸುರವತಾರ, ಅದರಾಗ ಅದರ ಅಳತಿ ನೋಡಿ ಟುಮುಕ್ ಅಂತ ಒಂದ ಇಂಗಿನ ಕರಣಿ ಒಗಿತಾರ, ಮರಳಲಿಕ್ಕ ಹತ್ತೂಣ ಉಪ್ಪು, ಖಾರಾ, ಮಸಾಲಿ ಹಾಕತಾರ, ಏನಾರೆ ಹೋಳ ಇದ್ದರ ಮೊದಲೆ ವಗ್ಗರಣ್ಯಾಗ ಹಾಕಿ ಬೇಯಿಸಿರತಾರ, ತೊಗಳ್ರಪ್ಪಾss ಸರ್ವೋತ್ಕೃಷ್ಟ ಹುಳಿ ತೈಯಾರ ಆಗಿ ನಾಕೂ ದಿಕ್ಕಿಗೆ ವಾಸನಿ ಹರಡತದ, ಒಮ್ಮೆರೆ ಉಂಡ ನೋಡ್ರಿ ಅವರ ಕೈ ಹುಳಿ, ಆರ ತಿಂಗಳದ್ದು ನಾಲಿಗೆ ಮ್ಯಾಲಿನ ಕಿಟ್ಟಾ ಕಿತ್ತಿಹೋಗದಿದ್ದರ ನನ್ನ ಹೆಸರ ಬದಲಸಿರಿ ಮತ್ತ."
ಎಂದು ಅತ್ಯಂತ ಆತ್ಮವಿಶ್ವಾಸದಿಂದ ಬಣ್ಣಿಸುತ್ತಾರೆ. ತಮ್ಮ ಮನೆಯವರ ಕೈಯ್ಯ 'ಹುಳಿ'ಯನ್ನು ನಮ್ಮ ಸೋಮಕ್ಕ.

ಒಮ್ಮೆಯಾದರೂ ನಮ್ಮೂರಿಗೆ ಬಂದು, ನಮ್ಮ ಸೋಮಕ್ಕನನ್ನು ಕಂಡು ಆಕೆಯ ಮತ್ತೂ ಆಕೆಯ ಪತಿದೇವರ ಕರದ ಅಡಿಗೆಯನ್ನು ಅದರಲ್ಲಿಯೂ ರುಚಿಕಟ್ಟಾದ ಹುಳಿಯನ್ನು ಉಂಡು ಹೋಗಬೇಕೆಂದು ವಿನಂತಿಸದೆ ಇರಲಾರೆ. ●

# ಉದಯೋನ್ಮುಖ ನೃತ್ಯಗಾತಿ ಕು. ದೀಪ್ತಿ

ದಿನಾಂಕ ೯–೯–೧೯೭೦.

ಕರ್ನಾಟಕದ ಖ್ಯಾತ ನೃತ್ಯ ಕಲಾವಿದ ದಂಪತಿಗಳಾದ ಶ್ರೀಮತಿ ಚಂದ್ರಭಾಗಾದೇವಿ ಮತ್ತು ಶ್ರೀಯು. ಎಸ್. ಕೃಷ್ಣರಾಯರ ಮನೆಯಲ್ಲಿ ಬಾಲೆಯೊಬ್ಬಳು ಕಣ್ಣಿಗೆ ಬಿದ್ದಳು. ಹದಿನಾಲ್ಕು ವರ್ಷಗಳ ಈ ಹುಡುಗಿ ಅದೇ ತಾನೆ ರಂಗ ಪ್ರವೇಶ ಮಾಡಿದ್ದು ಆ ದಿನದ ಸವಿ ನೆನಪು ಅವಳ ಮುಖದಲ್ಲಿ ಇನ್ನೂ ಹಸಿರಾಗಿದ್ದುದು ಕಂಡು ಬಂದಿತು.

ಏನು ಹೆಸರು?

ದೀಪ್ತಿ.

ಯಾರ ಮಗಳು?



ಕು. ದೀಪ್ತಿಯ ಗುರುದ್ವಯರು.

ಕರ್ನಾಟಕದ ಪ್ರಖ್ಯಾತ ಧುರೀಣರೂ ಶ್ರೇಷ್ಠ ರಾಜಕಾರಣಿಗಳೂ ಪತ್ರಿಕೋದ್ಯಮಿಗಳೂ ಆದ ಶ್ರೀ ರಂಗನಾಥ ದಿವಾಕರರಾಯರ ಮೊಮ್ಮಗಳು, ಶ್ರೀ ಪಿ.ಆರ್. ದಿವಾಕರ ಮತ್ತು ಶಾಂತಾ ದಿವಾಕರ ಇವರ ಮಗಳು. ಕೌಟುಂಬಿಕ ಹಿನ್ನೆಲೆ ಬಹಳ ಉತ್ಕೃಷ್ಟ. ಹೈಸ್ಕೂಲು ಎರಡನೆಯ (೯ನೆ ಸ್ಟ್ಯಾಂಡರ್ಡ್) ವರ್ಗದಲ್ಲಿ ಕಲಿಯುತ್ತಿರುವ ದೀಪ್ತಿಗೆ ಜಗತ್ತಿನ ಆಗುಹೋಗುಗಳ ಬಗೆಗೆ ಹೆಚ್ಚಿನ ಅನುಭವವಿಲ್ಲ; ಆದರೆ ಅದನ್ನು ಪಡೆಯುವ ತವಕ ತುಂಬಿದೆ.

ದೀಪ್ತಿಯನ್ನು ನಾಟ್ಯ ಕಲೆಯತ್ತ ಎಳೆದದ್ದು ಅವಳ ಆಂತರಿಕ ಬಯಕೆ. ಇದು ಅವಳು ಒಂಬತ್ತು ವರ್ಷದವಳಾಗಿದ್ದಾಗ ಅವಳಲ್ಲಿ ಚಿಗುರೊಡೆಯಿತು.

ಬಯಕೆ ಬಯಲಾದದ್ದು ತಾಯಿ ಶಾಂತಾ ದಿವಾಕರರ ಮುಂದೆ. ಅದು ಈಡೇರಲು ಕುಟುಂಬದವರಿಂದ, ಆತ್ಮೀಯರಿಂದ, ಹಿರಿಯರಿಂದ ಪ್ರೋತ್ಸಾಹ, ಆಶೀರ್ವಾದ ಮತ್ತು ಅನುಗ್ರಹ. ಆದರೂ ಹುಡುಗಿಯು ನೃತ್ಯಕಲೆಯನ್ನು ಅಭ್ಯಾಸಮಾಡಿ ಯಶಸ್ಸುಗಳಿಸಬಲ್ಲಳೆ, ಎಂಬ ಬಗ್ಗೆ ಕಳವಳ. ಮುಂದೊಂದು ದಿನ ಉದಯೋನ್ಮುಖ ನೃತ್ಯ ಕಲಾವಿದೆ ಶ್ರೀಮತಿ ಸೋನಾಲ್ ಮಾನ್‌ಸಿಂಗ್ (ದಿ॥ ಮಂಗಳದಾಸ್ ಪಕ್ವಾಸರ ಮೊಮ್ಮಗಳು) ದೀಪ್ತಿಗೆ ನಾಟ್ಯವೇದದ ಪ್ರಾಪ್ತಿ ಇದೆ ಎಂದು ಖಚಿತ ಪಡಿಸಿದ ನಂತರ ಆಸೆ ಗರಿಯೊಡೆದು ಹಾರಿತು.

ಈ ಮಧ್ಯೆ ದೀಪ್ತಿಗೆ ನಾಟ್ಯವೇದದ ವ್ಯಾಪ್ತಿಯ ಪರಿಚಯ ಪ್ರಾರಂಭವಾಯಿತು. ದಿಲ್ಲಿಯಲ್ಲಿ ನಡೆಯು

ಲೇಖಕ:
**ಶ್ರೀ ಕುಣಿಗಲ್ ಶ್ರೀನಿವಾಸಶಾಸ್ತ್ರಿ**

ಚಿತ್ರಗಳು:
**ವಿ. ಎಸ್. ಕಮಲಾಕರ**
ಬೆಂಗಳೂರು



“ ಆಡಿದನು ರಂಗ ಅದ್ಭುತದಿಂದಲಿ ”

ತ್ತಿದ್ದ ಶುದ್ಧ ಸಾಂಪ್ರದಾಯಿಕ ಶ್ರೇಷ್ಠ ನೃತ್ಯ ಪ್ರದರ್ಶನಗಳನ್ನು ವೀಕ್ಷಿಸತೊಡಗಿದಳು. ಅವಳ ಮನದಲ್ಲಿ ದಿನದಿನಕ್ಕೆ ನೃತ್ಯಕಲೆಯನ್ನು ಕರಗತ ಮಾಡಿಕೊಳ್ಳುವ ಆಕಾಂಕ್ಷೆ ಬಲಿಯುತ್ತ ಬಂದಿತು. ಯಾಮಿನಿ ಕೃಷ್ಣಮೂರ್ತಿ, ದಮಯಂತಿ ಜೋಷಿ, ಸೋನಾಲ್ ಮಾನ್‌ಸಿಂಗ್ ಮೊದಲಾದವರಿತ್ತ ಪ್ರದರ್ಶನಗಳಿಂದ ಪ್ರಚೋದನೆಯೂ ದೊರೆಯಿತು. ಮಗಳ ಮನಸ್ಸನ್ನು ತಂದೆತಾಯಿಗಳು ಬೇಗ ತಿಳಿದುಕೊಂಡರು. ಪೂರ್ವ ಪೀಠಿಕೆಯೆಂಬಂತೆ ಸ್ಥಳೀಯ ಕಲಾವಿದರೊಬ್ಬರಲ್ಲಿಗೆ ಕಳುಹಿಸಿದರು. ಒಂದು ವರ್ಷದ ನಂತರ ಶ್ರೀಯುತ ಕೃಷ್ಣರಾವ್ ದಂಪತಿಗಳಲ್ಲಿ ನೃತ್ಯಾಭ್ಯಾಸ ಆರಂಭವಾಯಿತು ನಾಲ್ಕು ವರ್ಷಗಳಿಂದ ಈ ಶಿಕ್ಷಣ–ತರಬೇತಿ ಅವ್ಯಾಹತವಾಗಿ ನಡೆಯುತ್ತಿದೆ.

ನೃತ್ಯ ಕಲೆಯನು ಕರತಲಾಮಲಕ ಮಾಡಿಕೊಂಡು ದೇಶವಿದೇಶಗಳಲ್ಲಿ ಶ್ರೇಷ್ಠಪ್ರದರ್ಶನ ನೀಡಿ ಮೆಚ್ಚುಗೆಗೆ ಪಾತ್ರರಾಗಿರುವ ಕೃಷ್ಣರಾವ್ ದಂಪತಿಗಳಲ್ಲಿಗೇದೀಪ್ತಿ ಬರಲು ಕಾರಣ?

ದೀಪ್ತಿಗೆ ಬೇಕಾಗಿದ್ದುದು ಕೇವಲ ಕೀರ್ತಿಯಷ್ಟೇ ಅಲ್ಲ; ತೃಪ್ತಿ ಕೂಡ. ಅದು ಇದು ಮಾತು ನಡೆದಿತ್ತು. ದೀಪ್ತಿಯ ತಾಯಿ ಶ್ರೀಮತೀ ಶಾಂತಾ ಅವರು ನಡುವೆ ದನಿಗೂಡಿಸಿದರು. "ನಮ್ಮ ಹುಡುಗಿಯನ್ನು ಕೃಷ್ಣರಾಯರಲ್ಲಿಗೇ ಕಳುಹಿಸಬೇಕೆಂಬ ವಿಚಾರವಿರಲಿಲ್ಲ. ಏಕೆಂದರೆ ನಾವು ದೀಪ್ತಿಯ ನೃತ್ಯಾಭ್ಯಾಸದ ವಿಷಯವನ್ನು ಕುರಿತು ವಿಚಾರಮಾಡಿದಾಗ ಕೃಷ್ಣರಾವ್ ದಂಪತಿಗಳು ವಿದೇಶಗಳಲ್ಲಿದ್ದರು. ಆಗ ಅವರ ಶಿಷ್ಯವೃಂದಕ್ಕೆ ಸೇರಿದ ಗಾಯತ್ರಿ ಅವರಲ್ಲಿಗೆ ಹೋದೆವು. ಸ್ವಲ್ಪದಿನಗಳ ಕಾಲ ಅಲ್ಲಿ ದೀಪ್ತಿಗೆ ತರಬೇತಿ ದೊರೆಯಿತು. ಮುಂದೆ ಕೃಷ್ಣರಾಯರು ಬೆಂಗಳೂರಿಗೆ ಬಂದರು. ಆಗ ದೀಪ್ತಿಯನ್ನು ಅವರಲ್ಲಿಗೆ ಕಳುಹಿ



" ಮುದ್ದಾಡೆ ಶ್ರೀಕೃಷ್ಣನ "



" ರಕ್ಕಸರೆಲ್ಲರೂ ಬೆಕ್ಕಸವನೆ ಕಂಡು "



" ಬೆಣ್ಣೆ ಬೇಡುತಲಿ "



" ಕಾಳಿಂಗನ ಫಣೆಯಲಿ "



" ಫಣೆಯ ಮೆಟ್ಟಿ ಬಾಲವ ಕೈಯಲಿ ಪಿಡಿದು "



" ಸುದತಿಯರೆಲ್ಲರು ಚಂದದಿ ಪಾಡಲು "

ಸಲು ಗಾಯತ್ರಿ ಅವರೇ ಸಲಹೆಮಾಡಿದರು. ಏನೋ "ಧರ್ಮ ಕರ್ಮ ಸಂಯೋಗ."

ರಾಯರಲ್ಲಿ ಪ್ರಾರಂಭವಾಯಿತು ತಾ–ಥೈ–ಕಿಟಥೈ. ದಿನದಿನಕ್ಕೆ ದೀಪ್ತಿಯ ಪ್ರಗತಿ ಹಂತದಿಂದ ಹಂತಕ್ಕೆ ತೃಪ್ತಿಕರವಾಗಿ ಸಾಗುತ್ತ ನಡೆಯಿತು. ಆದರೆ ಸಂದರ್ಭವಶಾತ್ ತಿಳಿದುಕೊಂಡ ಶಾಸ್ತ್ರ ಸಂಬಂಧ ವಿವರಣೆ ಹೊರತಾಗಿ ನಾಟ್ಯಶಾಸ್ತ್ರವನ್ನು ಸಿದ್ಧಾಂತ ರೂಪದಲ್ಲಿ ದೀಪ್ತಿ ಅಭ್ಯಾಸಮಾಡಲಾಗಿಲ್ಲ. ಈ ಕೊರತೆಯನ್ನು ಆಕೆಯೇ ಎತ್ತಿ ತೋರಿಸಿದಳು. "ನನಗೆ ಕಲಿಸುವವರ ಪಾಂಡಿತ್ಯದ ಬಗ್ಗೆ ತುಂಬ ಅಭಿಮಾನ ಏಕೆಂದರೆ ಅವರು ಶಾಸ್ತ್ರಬಲ್ಲವರು ಮತ್ತು ಉತ್ತಮ ಶಿಕ್ಷಕರೂ ಆಗಿದ್ದಾರೆ. ಸಂಯಮ ಕಳೆದುಕೊಳ್ಳದೆ, ನಮ್ಮಲ್ಲಿ ಉತ್ಸಾಹ ತುಂಬುತ್ತ, ಕಠಿಣ ವಿಷಯಗಳನ್ನು ಸರಳಮಾಡಿ ಅಭ್ಯಾಸಮಾಡಿಸುತ್ತಾರೆ."ಎಂದಳು ದೀಪ್ತಿ. ಅಂದರೆ ಗುರುಗಳ ವಾತ್ಸಲ್ಯ ಮತ್ತು ಶಿಷ್ಯೆಯ ಗುರು ಭಕ್ತಿಗಳು ಸಮನಾಗಿ ಮೇಳೈಸಿವೆ.

ದೀಪ್ತಿಗೆ ಭರತ ನಾಟ್ಯವೆಂದರೆ ಅಪಾರ ಪ್ರೇಮ. ಇತರ ಬಗೆಯ ನೃತ್ಯಗಳೆಂದರೆ, ಮಣಿಪುರಿ, ಕಥಕ್ ಕೂಚುಪುಡಿ, ಕಥಕ್ಕಳಿ ಇತ್ಯಾದಿ. ಅನಾದರವಿಲ್ಲ. ಅವುಗಳಲ್ಲೂ ಪರಿಶ್ರಮಹೊಂದುವ ಬಯಕೆಇದೆ.

ಈ ವರೆಗೆ ಮೃಣಾಲಿನಿ, ಸೋನಾಲ್‌ಮಾನ್‌ಸಿಂಗ್, ಸುಧಾರಾಣಿ, ಮೊದಲಾದವರ ಅಭಿನಯ ನೋಡಿ ಆಕೆಗೆ ಸ್ಫೂರ್ತಿ ಬಂದಿದೆ. ಚಿತ್ರತಾರೆ ಆಶಾಪರೇಖಳ



" ಕಾಳಿಂಗನ ಫಣೆಯಲಿ "

ಚಾವಳ ದೇವಿ ಮತ್ತು ಅನಾರ್ಕಲಿ ನೃತ್ಯರೂಪಕಗಳನ್ನು ತುಂಬ ಮೆಚ್ಚಿಕೊಂಡಿದ್ದಾಳೆ. ಹಾಗೆಯೇ ಮದರಾಸಿನ ರುಕ್ಮಿಣಿ ಅರುಂಡೇಲ್ ಕಲಾಕ್ಷೇತ್ರದ ಕೆಲಸ ಕಾರ್ಯಗಳ ಬಗೆಗೂ ತುಂಬ ಆನಂದದಿಂದ ಮಾತನಾಡಿದಳು ದೀಪ್ತಿ.

ಪುರಂದರದಾಸರ ಕೃತಿ (ಆರಭಿರಾಗ) "ಆಡಿದನೋ ರಂಗ"ದ ನೃತ್ಯವನ್ನು ನೋಡಿದೆ. ದೀಪ್ತಿಯು ...ಲ ಭಾವಗಳನ್ನೂ. ಮುದ್ರಾವಿನ್ಯಾಸಗಳನ್ನೂ.



" ಚಿಕ್ಕವನಿವನಲ್ಲ ಪುರಂದರ ವಿಠಲ "



" ದುಷ್ಟ ಕಾಳಿಂಗನ "



" ಕಾಲಲಂದುಗೆ ಗೆಜ್ಜೆ ಘುಲುಘುಲಿಸುತಲಿ "



" ವಿಠಲನ "



" ನಾರದ ತುಂಬುರು ಗಾನವ ಮಾಡಲು "



" ರಂಗ "

ಸುಲಲಿತವಾಗಿ, ಮೋಹಕವಾಗಿ ಪ್ರದರ್ಶಿಸಿದಳು. ತಾಳ ಲಯ ಶೃತಿಬದ್ಧ. ಆ ಗೀತೆಗೆ ಭಾವ, ಅಂಗವಿನ್ಯಾಸ, ಜಾಣ್ಮೆಗಳನ್ನು ಬೆರಸಿ ಪ್ರದರ್ಶನ ನೀಡಿದಳು. ಬಾಲ ಕೃಷ್ಣ, ರಕ್ಕಸ, ನಾಗಕನ್ನಿಕೆ, ಯಶೋದೆ, ಕಾಳೀಯ, ಮೊದಲಾದ ವ್ಯಕ್ತಿಗಳ ಪ್ರತಿರೂಪವನ್ನು ರಸಭಾವ ಪೂರ್ಣವಾಗಿ ಅಭಿವ್ಯಕ್ತಮಾಡಿದಳು. ಪಾದ ಸಂಚಾರ ಸ್ವಲ್ಪ ಮಂದ ಎನ್ನಿಸುತ್ತಿತ್ತು.

ನೃತ್ಯಕಲೆ ದೀಪ್ತಿಯ ದೃಷ್ಟಿಯಲ್ಲಿ ಒಂದು 'ಹಾಬಿ' ಆಗಿ ಉಳಿದಿಲ್ಲ. ಅದನ್ನು ಚೆನ್ನಾಗಿ ರೂಢಿಸಿ ಕೊಂಡು, ಮೈಗೂಡಿಸಿಕೊಂಡು ತನ್ನ ಮುಂದಿನ ಬದುಕಿನಲ್ಲಿ ಸಾರ್ಥಕ ಮಾಡಿಕೊಳ್ಳಲು ಅವಳು ತವಕಿಸುತ್ತಿದ್ದಾಳೆ. ಅವಳ ತಾಯಿಯದೂ ಅದೇ ಅಭಿಪ್ರಾಯ. ಆದಷ್ಟು ಪ್ರದರ್ಶನಗಳನ್ನು ನೀಡಬೇಕೆಂಬುದೂ ಆಕೆಯ ಆಶೆಯಾಗಿದೆ.

ವಿದೇಶೀ ನೃತ್ಯಗಳ ಬಗೆಗೆ ದೀಪ್ತಿಯನ್ನು ಕೇಳಿ ನೋಡಿದೆ. ಅಲ್ಲ ಕೆಣಕಿ ನೋಡಿದೆ. "ಅದನ್ನು ನಾನು ಒಂದು ಕಲೆ ಎಂಬ ದೃಷ್ಟಿಯಿಂದ ನೋಡುತ್ತೇನೆ. ಅಭಿಮಾನವನ್ನು ಹೊಂದಿದ್ದೇನೆ. ಬ್ಯಾಲೆ ನೃತ್ಯ ನನಗೆ ತುಂಬ ಹಿಡಿಸುತ್ತದೆ" ಎಂದಳು. "ಸಾಕಷ್ಟು ಹೆಸರು ಗಳಿಸಿದ ನಂತರ ಚಲನ ಚಿತ್ರರಂಗ ಪ್ರವೇಶಿಸುವ ಬಯಕೆಯುಂಟೋ" ಎಂದೂ ತಿವಿದು ಕೇಳಿದೆ. ಅದಕ್ಕೆ ಸ್ಪಷ್ಟ ಪ್ರತಿಕ್ರಿಯೆ ಬರಲಿಲ್ಲ. ವಿಶಿಷ್ಟರೀತಿಯಲ್ಲಿ ಕೇವಲ ನೃತ್ಯಗಳನ್ನೇ ಚಿತ್ರೀಕರಿಸುವ ಹಾಗಿದ್ದರೆ ಚಿತ್ರಗಳಲ್ಲಿ ನೃತ್ಯ ಪ್ರದರ್ಶನ ನೀಡಲು ಅಡಿಯಿಲ್ಲ ಎನ್ನುವ ಭಾವನೆಯು ವ್ಯಕ್ತಪಟ್ಟಿತು.



" ದುಷ್ಟ ಕಾಳಿಂಗನ ಮೆಟ್ಟ ಭರದಿಂದ ಪುಟ್ಟ ಪಾದವ ಇಟ್ಟು "



" ಯಶೋದೆ ಬಿಂಕದೊಳೆತ್ತಿ "



" ರಕ್ಕಸರೆಲ್ಲರೂ ಬೆಕ್ಕಸವನೆ ಕಂಡು "



" ವೆಂಕಟರಮಣನ ಬೇಗ ಯಶೋದೆ "



" ಆಡಿದನು ರಂಗ "



" ಚಿಕ್ಕವನಿವನಲ್ಲ ಪುರುಂದರ ವಿಠಲ "



" ರಂಭೆ ಊರ್ವಶಿ ರಮಣಿಯರೆಲ್ಲರೂ "

ಜಾನಪದ ನೃತ್ಯಗಳು ಕಲಿಯಲು ಸುಲಭ. ಅವನ್ನೂ ಕಲಿಯುವ ಆಸೆಯಿದೆ ದೀಪ್ತಿಗೆ. ನಮ್ಮ ದೇಶದ ನೃತ್ಯಕಲೆಯನ್ನು ಕಲಿಯಲು ಬರುವ ವಿದೇಶಿಯರಿಗೆಲ್ಲ ಸರಿಯಾದ ರೀತಿಯಲ್ಲಿ ಕಲೆಯನ್ನು ಕಲಿಸಬೇಕೆಂದೂ, ವಿದೇಶಿ ಅತಿಥಿಗಳ ಸಮ್ಮುಖದಲ್ಲಿ ಭಾರತೀಯ ಸಂಪ್ರದಾಯದ ನೃತ್ಯಗಳ ಪ್ರದರ್ಶನ ನೀಡಬೇಕೆಂದೂ ದೀಪ್ತಿಗೆ ತುಂಬ ಮನಸ್ಸಿದೆ. ತೆಳು ದೇಹದ ಬೊಗಸೆ ಕಂಗಳ ಈ ಬಾಲೆ ನೃತ್ಯ ಕಲಾಕೋವಿದೆಯಾಗುವ ದಿನಗಳು ದೂರವಿಲ್ಲ ಎಂದೆನಿಸಿತು. ಅವಳೊಡನೆ ಸಂದರ್ಶನ ಮತ್ತು ಅವಳು ನೀಡಿದ ಪ್ರದರ್ಶನಗಳಿಂದ.

ಈಗ ಶಿಷ್ಯೆಯ ಬಗೆಗೆ ಆಕೆಯ ಗುರುದ್ವಯರನ್ನು ಪ್ರಶ್ನಿಸಬೇಕೆಂದೆನಿಸಿತು; ಅದಕ್ಕೆ ಬಹಳ ಸಂತೋಷದಿಂದ ಒಪ್ಪಿದರು. ದೀಪ್ತಿ ಅವರಲ್ಲಿಗೆ ಬಂದಾಗಿನ ಪ್ರಥಮ ಪ್ರತಿಕ್ರಿಯೆ ಬಗೆ ಕೇಳಿದೆ. ದೀಪ್ತಿಗೆ ಇದ್ದ ಶ್ರೇಷ್ಠ ಕೌಟುಂಬಿಕ ಹಿನ್ನೆಲೆ ಅವಳ ಅಂಗಸೌಷ್ಟವ, ಅವಳಲ್ಲಿ ಸುಪ್ತವಾಗಿದ್ದ ರಸಚೇತನ ಇವುಗಳನ್ನೂ ಪ್ರಪ್ರಥಮದಲ್ಲೇ ಗುರುತಿಸಿದರಂತೆ. ನಂತರದಲ್ಲಿ ವಿವಿಧ ಭಂಗಿಗಳನ್ನು ಸುಲಭವಾಗಿ ಗ್ರಹಿಸಿ ಪ್ರತಿಯಾಗಿ ವ್ಯಕ್ತಪಡಿಸುತ್ತಿದ್ದ ಕ್ರಮ, ತನ್ಮಯತೆ ಇವುಗಳಿಂದ ಬಾಲೆಗಿರುವ ಭವ್ಯ ಭವಿಷ್ಯವನ್ನು ಕಂಡುಕೊಂಡರಂತೆ. ನೃತ ಕಲಾವಿದೆಗೆ ಇರಬೇಕಾದ ಗುಣಗಳೆಲ್ಲ–ರಮ್ಯತೆ, ಚಿತ್ತಾಕರ್ಷಣೆ, ಬೆಡಗು, ಚಲನ ಸೌಲಭ್ಯಲಾಲಿತ್ಯಗಳು, ಹೊಂದಿಕೆ, ಗಾಂಭೀರ್ಯ, ಒನಪು ಒಯ್ಯಾರ, ಸೌಂದರ್ಯ ದೀಪ್ತಿಯಲ್ಲಿವೆ ಎಂದು ಅವರು ಒತ್ತಿ ಹೇಳಿದರು.

ಇಂತಹ ಹುಡುಗಿಗೆ ಕೊಟ್ಟ ತರಬೇತಿ ಶ್ರಮರಹಿತವಾಗಿತ್ತಂತೆ. ದಿನಗಳೆದಂತೆ ದೀಪ್ತಿಗೆ ಕಲಾಭ್ಯಾಸದ ಬಗೆಗೆ ಇದ್ದ ಅಪೇಕ್ಷೆಯ ಆಳವನ್ನು ಅವರು ಅರಿತರು. "ಗ್ರಹಣಶಕ್ತಿ ಅದ್ಭುತವಾಗಿದೆ ಆಕೆಗೆ. ಹೇಳಿದುದನ್ನು ಗ್ರಹಿಸಿ ಮತ್ತೆ ತೃಪ್ತಿಕರವಾಗಿ ರೂಪಿಸುವ ಕಲೆ ಅವಳಿಗೆ ಒಲಿದಿದೆ. ಆದರೆ ಸ್ವಲ್ಪ ಮೊಂಡು ಸ್ವಭಾವ ಅದು ಅಷ್ಟೇನೂ ಅಪಾಯಕಾರೀ ಅಂಶವಲ್ಲ. ನೃತ್ಯಾಭ್ಯಾಸದಿಂದ ದೈಹಿಕ ಅಥವಾ ಮಾನಸಿಕ ತೊಂದರೆಗಳಾದುದರ ಬಗೆಗೆ ಯಾವ ದೂರೂ ಇಲ್ಲ. ದೀಪ್ತಿ ನಮ್ಮ ಶಿಷ್ಯೆ ಎಂಬುದು ಅಭಿಮಾನದ ಸಂಗತಿ. ಭರತ ನಾಟ್ಯಕ್ಕೆ ಅವಳ ಶರೀರ ಹೇಳಿ ಮಾಡಿಸಿದಂತಿದೆ." ಎಂದರು ಶ್ರೀಮತಿ ಕೃಷ್ಣರಾವ್ ರಾಯರೂ ಒಪ್ಪಿಗೆ ಸೂಚಿಸಿದರು.

## ನೃತ್ಯ ಪ್ರದರ್ಶನ

ಆನೂರು-ಸೂರ್ಯ ನಾರಾಯಣ ಅವರ ಹಿನ್ನೆಲೆ ಗಾಯನ. ಕೃಷ್ಣರಾವ್ ದಂಪತಿಗಳ ದಕ್ಷ ನಿರ್ದೇಶನ ದೀಪ್ತಿಯ ಪ್ರದರ್ಶನ. ನೃತ್ಯಕ್ಕೆ ಅವಳಳವಡಿಸಿಕೊಂಡಿದ್ದು ಪುರಂದರ ದಾಸರ ಹಾಡು, ಆರಭಿರಾಗದ "ಆಡಿದನೋ ರಂಗ."

ಶ್ರೀ ಕೃಷ್ಣ ಇನ್ನೂ ಸಣ್ಣವ. ಯಮುನೆಯಲ್ಲಿ ಅಡಗಿಕೊಂಡು ನೀರಿಗಾಗಿ ಬರುತ್ತಿದ್ದ ಜನ ಮತ್ತು ಪಶುಪಕ್ಷಿಗಳಿಗೆ ಹಿಂಸೆ ಕೊಡುತ್ತಿದ್ದ ಮಹಾ ಕಾಳಿಂಗ ಸರ್ಪವನ್ನು ತುಳಿದು ನಿಂತ. ಎಲ್ಲರಿಗೂ ಗಾಬರಿ, ಅಚ್ಚರಿ. ಸಣ್ಣವ ಸರ್ಪಮರ್ದನ ಮಾಡಿದ್ದನ್ನು ನೋಡಿದ ದೇವತೆಗಳು ಹೂಮಳೆಗರೆದರು. ರಂಭೆ ಊರ್ವಶಿಯರೆಲ್ಲರು ಆನಂದದಿಂದ ನಾಟ್ಯಮಾಡಿದರು. ನಂದಿ, ತುಂಬುರರು. ನಾರದರು ಮೊದಲಾದವರು ತಾಳಮದ್ದಲೆಹಾಕಿ ಹಾಡನ್ನು ಹೇಳಿದರು. "ಇವನು ಸಣ್ಣವನಲ್ಲ, ದೇವದೇವನಾದ ಶ್ರೀ ಹರಿ, ಪುರಂದರ ವಿಠಲ' ಎಂಬುದನ್ನು ಎಲ್ಲರೂ ಕಂಡುಕೊಂಡರು. ನಾಗಕನ್ನಿಕೆಯರು ಪತಿಭಿಕ್ಷೆ ಬೇಡಿದರು. ಪರಾಕ್ರಮಿಗಳೆನ್ನಿಸಿಕೊಂಡಿದ್ದವರು ಬೆಕ್ಕಸ ಬೆರಗಾದರು. ಯಶೋದೆ ಆನಂದದಿಂದ ಕಂದನನ್ನೆತ್ತಿ ಮುದ್ದಾಡಿದಳು.

ನವರಸಭರಿತವಾದ ಈ ಕೃತಿ ನಾಟ್ಯಕ್ಕೆ ತುಂಬ ಹೊಂದಿಕೊಳ್ಳುವಂತಿದೆ. ಎಲ್ಲ ತರಹದ ಭಾವಗಳನ್ನೂ ಪಾತ್ರಗಳನ್ನೂ ಒಂದರ ನಂತರ ಒಂದರಂತೆ ಪ್ರದರ್ಶಿಸಲು ಸಾಕಷ್ಟು ತರಬೇತಿ, ಅನುಭವ, ಅನುಭಾವ ಬೇಕು. ಅದನ್ನೆಲ್ಲ ದೀಪ್ತಿ ಮೈಗೂಡಿಸಿಕೊಂಡಿದ್ದಾಳೆ. ಈಕೆ ಉದಯೋನ್ಮುಖ ಕಲಾವಿದರ ಪೈಕಿ ಒಬ್ಬಳೆಂಬುದರಲ್ಲಿ ಸಂಶಯವಿಲ್ಲ. ●



" ನಾಗಕನ್ಯೆಯರು ನಾಥನ ಬೇಡಲು "



" ನಾನಾ ವಿಧದ್ವಿಸ್ತುತಿಯನು ಮಾಡಲು "

VOLTAS

# A cool summer for sale!




**Voltas Crystal Deluxe**
New 1 ton room air conditioner



**Carrier Cosmopolitan**
1.5 ton room air conditioner



**Voltas Tushar R-10**
Water Cooler

## From Voltas: No.1 in keeping cool

Available from Authorised Voltas Dealer :

CMV-20-152RD

VOLTAS

# VOLTAS OPAL

## Refrigerator

**the roomiest 100-litre**
**No.1 in every feature**




Available from Authorised Voltas Dealer :

CMVO-18-152

# M. G. AUTOMOBILES

AIR CONDITIONING & REFRIGERATION DIVISION,

Bangalore Road, BELLARY—1 Phone : 56 • Grams : AUTOMOBILE

[ ಸರಳರಗಳೆಯ ಕಾವ್ಯನಾಟಕ ]

# ಜಯಭೇರಿ

—ಕೃಷ್ಣಮೂರ್ತಿ ಪುರಾಣಿಕ

## ದೃಶ್ಯ ಒಂದು

[ಗಂಗಾ ಸಾಗರದಲ್ಲಿ ವಿಹಾರ ದೋಣಿಯೊಂದು ತೇಲಿಬರುತ್ತದೆ. ಭಾರತದಲ್ಲಿ ಬೆಳಗಿ ಹೋದ ಪ್ರಮುಖ ಐತಿಹಾಸಿಕ ವ್ಯಕ್ತಿಗಳು ಈ ದೋಣಿಯಲ್ಲಿ ಗಂಭೀರರಾಗಿ ಕುಳಿತಿದ್ದಾರೆ. ದುರಂತವೀಣೆಯೊಂದು ಸಮಯಾಂತರದಲ್ಲಿ ಮಿಡಿಯುತ್ತಿರುತ್ತದೆ. ಗಂಗಾ ಸಾಗರ ತರಂಗ ಮಾಲೆಗಳು ದೋಣಿಯ ಅಂಚಿಗೆ ಅಪ್ಪಳಿಸುತ್ತವೆ. ಒಮ್ಮೆಲೆ ಕನಸಿನ ತೆರೆಯಂತೆ ಮಂಜು ಮುಸುಕುತ್ತದೆ. ಈ ದಟ್ಟವಾದ ಮಂಜನ್ನು ಭೇದಿಸಿ ಬಹು ದೂರದಲ್ಲಿ ಕೇಳಿಬರುವ ನಿಷ್ಪ್ರಾಣ ದನಿಯ ಗೀತವು ಎಲ್ಲರ ಗಮನ ಸೆಳೆಯುತ್ತದೆ. ಗಂಡುದನಿ, ಹೆಣ್ಣುದನಿ ಸರದಿಯಂತೆ. ಆಕ್ರಂದನವು ಶೋಕರಸವನ್ನು ಹೊಮ್ಮಿಸುತ್ತದೆ.]

ರಕ್ಷಿಸು ಭಾರತ ಮಾತಾ!
ರಕ್ಷಿಸು ಭಾರತ ಮಾತಾ!!
ಓ! ತಾಯೆ! ಓ! ತಾಯೆ!
ನೀನೆಮ್ಮನು ಕಾಯೆ
ಬೆಂದು ಬರುತಿಹೆವು
ನೊಂದು ಬಳಲಿಹೆವು
ಕಾಯಮ್ಮ ಕಾಯೆ! ತಾಯೆ
ಓ! ಶರಣಾಗತ ವತ್ಸಲೆ!
ನೀನೆತ್ತಿಕೊಳ್ಳು
ಎದೆಗಪ್ಪಿಕೊಳ್ಳು
ನೊಂದು ಬಂದೆವಮ್ಮಾ
ಕರುಣೆಯ ತೋರಮ್ಮಾ!
ರಕ್ಷಿಸು ಭಾರತಮಾತಾ!
ರಕ್ಷಿಸು ಭಾರತಮಾತಾ!!

[ದೋಣಿಯು ಒಮ್ಮೆಲೆ ಹೊಯ್ದಾಡ ತೊಡಗುತ್ತದೆ. ಈ ಹೊಯ್ದಾಡುವ ದೋಣಿಯಲ್ಲಿ ಕೋಲೂರಿ ನಿಂತ ರಾಷ್ಟ್ರಪಿತನು ಅತ್ಯಂತ ವ್ಯಾಕುಲದಿಂದ ಈ ದನಿಯನ್ನು ಆಲಿಸುತ್ತ ಕದಡಿದ ಮನಸ್ಸಿನಿಂದ...]

**ರಾಷ್ಟ್ರಪಿತ:** ನೊಂದ ಗೋಳೇ ಹೊರಗೆ ಹಾಡಾಗಿ ಹರಿವಂತೆ
ಸಾಗರಾಚೆಯ ದನಿಗೆ ಕಡಲು ಬಿಕ್ಕುವ ತೆರದಿ
ದಿಕ್ಕೆಟ್ಟು ಮೊರೆಯುತಿದೆ. ಯಾವ ಗೋಳಿನ ಪರಿಯೋ?
ದಲರಾಣಿಯು ಕೂಡ ಕಣ್ಣೀರನಿಡುತಿಹಳು.

[ಗದ್ದದ ಮೇಲೆ ಕೈ ಇಟ್ಟುಕೊಂಡು ವ್ಯಗ್ರಚಿತ್ತರಾಗಿ ಗಾಂಧೀಜಿ ಮತ್ತೆ ಮತ್ತೆ ಆಲಿಸುತ್ತ...]

ರಕ್ಷಿಸು– ಭಾರತ– ಮಾತಾ–
ಯಾರ ದನಿಯಿದು ಬಂಧು! ಕೇಳುವಿಯ? ನಾಡಿಗಾ–
ಗಿಯೆ ಮಡಿದು ದಣಿದು ಬಂದವ ನಿನಗೆ ಪರಿಚಯವೆ
ಈ ದನಿಯು.

**ತರುಣಬಂಧು:** [ಏಕಾಗ್ರ ಚಿತ್ತದಿಂದ ಆಲಿಸಿ]
ಗೋಳಿನ ದನಿಯಿದು ರಾಷ್ಟ್ರಪಿತಾ!

**ರಾಷ್ಟ್ರಪಿತ:** [ವಿಹ್ವಲರಾಗಿ]
ಯಾರ ದನಿ? ಎಲ್ಲಿಂದ? ಯಾವೆಡೆಗೆ?

**ತರುಣಬಂಧು:** [ವ್ಯಗ್ರನಾಗಿ] ಬಂಗಾಲ
ಕೊಳ್ಳಿಯಿಂ ಧುಮುಕುತಿದೆ. ಕಂಗೆಟ್ಟ ಬಂಗಾಲ
ಬೆತ್ತಲೋ ಸಾಗುತಿದೆ. ಶೋಕ ತಪ್ತ ಜನ
ಹಾಡುವ ಗೀತವೇ 'ರಕ್ಷಿಸು ಭಾರತ ಮಾತಾ'

**ರಾಷ್ಟ್ರಪಿತ:** [ಭಾರವಾದ ಎದೆಯಿಂದ]
ಮತ್ತೊಮ್ಮೆ ಮರುಕೊಳಿಸ
ದಿರಲೆನ್ನ ಸ್ಮೃತಿಚಿತ್ರ, ಭಾರತ ಸ್ವಾತಂತ್ರ್ಯದ
ಸುಖಾಂತ ದುರಂತದ ರಕ್ತ ತರ್ಪಣದ
ಭವ್ಯ ಭಯಾನಕ ದಾರುಣ ಚಿತ್ರ...

[ರಕ್ಷಿಸು ಭಾರತಮಾತಾऽऽऽ...... ಗೀತವು ಇನ್ನಷ್ಟು ಸಮೀಪ ಕೇಳುವುದು.]

**ನೇತಾಜಿ:** [ದನಿಗಳ ಪರಿಚಯ ಹತ್ತಿದಂತೆ ನೊಂದವನಾಗಿ]
ಇದು ಬಾಂಗ್ಲಾ ಆಕ್ರಂದನ ಗೀತಾ! ಓ!
ರಾಷ್ಟ್ರಪಿತಾ! ನೊಂದವರು ಬೆಂದವರು ಪ್ರಾಣಭಯ
ದಿಂದೆದ್ದು ಚೀರಿ ಬರುತಿಹ ದೃಶ್ಯವಿದು ಘೋರ!

**ರಾಷ್ಟ್ರಪಿತ:** [ನೊಂದವರಾಗಿ] ಏಕಂತೆ?
ಸ್ವಾತಂತ್ರ್ಯ ದೇಶದಲಿ ಬಂಧು ಬಾಂಧವರೆಲ್ಲ
ಗುಟ್ಟಾಗಿ ಬಾಳಿದರು. ಮತ್ತೇಕೆ ಈ ದೋಳು?

**ನೇತಾಜಿ:** [ವಿಚಾರಪೂರ್ಣ ದೃಷ್ಟಿಯಿಂದ]
ಬಿಡುಗಡೆಯ ಬೇಡಿಯಿದು ನೆತ್ತರಿನ
ಕಂಧೂಳಿ. ನೆತ್ತರೋಕುಳಿಯಲ್ಲಿ ಸ್ವಾತಂತ್ರ್ಯ,

---

ಬಾಂಗ್ಲಾದೇಶದಲ್ಲಿ ಪಾಕ್ ನಡೆಸಿದ ನರಮೇಧದಲ್ಲಿ ರಕ್ತ ನೀರಾಗಿ ಹರಿಯಿತು. ಅಸಂಖ್ಯಾತ ನಿಷ್ಪಾಪಿ ಜನರು ಪ್ರಾಣಾರ್ಪಣೆ ಮಾಡಿದರು. ಅವರ ಆಕ್ರಂದನದಿಂದ ಗಾಂಧೀಜಿಯ ಹೃದಯ ಮಮ್ಮಲ ಮರಗುತ್ತದಾದರೆ, ನೇತಾಜಿಯ ರಕ್ತ ಕುದಿಯುತ್ತದೆ. ಕೊನೆಗೆ ಬಾಂಗ್ಲಾ ವಿಮೋಚನೆಯೊಂದಿಗೆ ಜಯಭೇರಿ ಮೊಳಗುತ್ತದೆ.

---

ವೇದುಃಖಿದೆ. ಪಡುವಣ ಪಾಕಿಸ್ತಾನ
ದೊಳಿಃ ವಿಷ...

**ರಾಷ್ಟ್ರಪಿತ :** [ದುಗುಡದಿಂದ]
ಬಂಧು ಬಂಧುಗಳಲ್ಲಿ ಬಂದಿತೇ ಈ ಗೋಳು?

**ನೇತಾಜಿ :** [ಕಠಿಣವಾಗಿ]
ಸ್ವಾತಂತ್ರ್ಯವೆಂದರದು ಕಾಡು ಬಳ್ಳಿಯು ಬಿಟ್ಟ
ದುರ್ಗಂಧ ಹೂವೇನು? ಪಾಷಾಣ ರಸವೀಂಟಿ
ಜೇನು ಸುಧೆ ಬಯಸುವದೆ? ಗೋಳಿನಲ್ಲಿಯು ಕೂಡ
ಪಾಲು ಬೇಡುವ ಜನತೆ ಘನವಾಗಿ ಬಾಳುವದು
ಸಾಧ್ಯವೇ ತಂದೆ! ಬಾಂಗ್ಲಾ...ಆಕ್ರಂದನ...ಗೀತಾ...

**ಕ್ರಾಂತಿಕಾರಿ :** [ದೊಡ್ಡ ಧನಿಯಲ್ಲಿ]
ಇದು ಪಾಕಿಸ್ತಾನದ ಗೋಳಿನ ಗೀತಾ
'ರಕ್ಷಿಸು ಭಾರತಮಾತಾ'

**ನೇತಾಜಿ :** [ಮುಷ್ಟಿಯನ್ನು ಬಿಗಿಮಾಡಿ, ಗದ್ಗದ ಸ್ವರದಲ್ಲಿ]
ಶೋಕ ತಪ್ತ ಸಂಚಾರ ವೀಣೆಯಾ ತಂತಿ
ಹರಿದಂತೆ, ಕರಳು ಕಿತ್ತಂತೆ, ಹೊರಹೊಮ್ಮುತ
ಲಿದೆ ಗೀತಾ. ದುಃಖ ರಸದ ತೂಂಬುಚ್ಚಿ ಬಿಟ್ಟಂತೆ
ನುಗ್ಗುತಲಿದೆ ಬಾಂಗ್ಲಾದೇಶದ ಶೋಕಾ. ಕೇಳಲೊ—
ಲ್ಲದೆ ನಿಮಗೆ ಜಿನ್ನಾಜಿ!

**ಜಿನ್ನಾಜಿ :** [ಅಂಗೈಗಳನ್ನು ಗುದ್ದಿಕೊಳ್ಳುತ್ತ]
ದ್ರೋಹವಿದು!

**ಕ್ರಾಂತಿಕಾರಿ :** [ಗಟ್ಟಿಯಾಗಿ] ಯಾವುದು?

**ಜಿನ್ನಾಜಿ :** [ಸಿಡುಕಿನಿಂದ] ಬಂಡೆದ್ದಿದೆ ಬಾಂಗ್ಲಾ!
ಬೆನ್ನೊಳಗಿರಿದಿದೆ,...

**ಕ್ರಾಂತಿಕಾರಿ :** ಕುತ್ತುಸಿರ ಸಂಕಟ
ಕೆದೆ ನೆತ್ತರ ಕೆನೆಯಾಗಿದೆ ಬಿಡುಗಡೆ
ಬಯಸಿದೆ...

**ಜಿನ್ನಾಜಿ :** [ಅಕ್ರೋಶದಿಂದ] ಬಿಡುಗಡೆಗಿದೆ ಬೆಲೆ...

**ಕ್ರಾಂತಿಕಾರಿ :** [ಅಟ್ಟಹಾಸದಿಂದ]
ಹೊರಹೊಮ್ಮಲಿ ನೆತ್ತರ ಸೆಲೆ
ನೆತ್ತರ ಮಜ್ಜನ ರಂಜಿತವಾಗಲಿ ನಮ್ಮ ನೆಲ

**ಜಿನ್ನಾಜಿ :** [ಕೂಡಲೆ]
ಬಂಗಾಲವೆಂದರದು ನಮ್ಮ ನೆಲ!

**ಕ್ರಾಂತಿಕಾರಿ :** [ದುರುಗುಟ್ಟಿ ನೋಡುತ್ತ]
ದುರಂತವಾಗಿದೆ ನಿಮ್ಮ ಛಲ.

**ರಾಷ್ಟ್ರಪಿತ :** [ನಿಟ್ಟುಸಿರು ಬಿಡುತ್ತ] ಒಂದೆ ನೆತ್ತರದವರು
ಬಂಧುಗಳು ಇವರೆಲ್ಲ...

(ಏಕತಾರಿಯ ಮೇಳದಲ್ಲಿ ಕರ್ಕಶವಾಗಿ ಹುಚ್ಚೆನಿಂತು ಹಾಡು ಕೀರಲು ದನಿಯುದಲ್ಲಿ ಕೇಳಬರುವದು...)

ಬಂದು ಬಂಧುವನೆ ಕೊಂದ
ನೆತ್ತರ ಚಿಮ್ಮಿಸಿದ
ಕೋಟಿ ಕೋಟಿ ಜನ ಕಣ್ಣೀರು ನೆತ್ತರ
ಅಯ್ಯೊ! ಅತ್ಯಾಚಾರಾ!
ಹೌಹಾರಿದ ಬಾಂಗ್ಲಾ,
ಹೊರಟಿದೆ ಸಂಚಾರಾ,
ರಕ್ಷಿಸು ಭಾರತ ಮಾತಾ!

[ದಡದಡ ಚಪ್ಪಾಳೆ ಸಪ್ಪಳ, ರಂಗಭೂಮಿಯ ಮೇಲೆ ಧೂಳ ಹುಟ್ಟಿಕೊಳ್ಳುವದು. ಒಮ್ಮೆಲೆ ಗಾಳಿ, ಧೂಳ ಹಾರಿ ಹೋಗುವದು]

ತರುಣಬಂಧು : [ಕೋಪೋದ್ರಿಕ್ತನಾಗಿ]
ದೂರವಿರಿ! ದೂರವಿರಿ! ಭಾರತದೊಳೇತಕ್ಕೆ
ನುಗ್ಗುವಿರಿ ನೀವೆಲ್ಲ? ಧರ್ಮಸಾಲೆಯೆ ನಿಮಗೆ
ನಮ್ಮ ಭಾರತ ದೇಶ! ಕ್ಷಮಿಸೆನ್ನ ರಾಷ್ಟ್ರಪಿತ!
ನಾನಿವರ ತಡೆಯುವೆನು

[ದೋಣಿಯಲ್ಲಿ ಕೋಲಾಹಲ, ಎಲ್ಲರೂ ಒಮ್ಮೆ ತರುಣ ಬಂಧುವಿನ ಕಡೆಗೆ ಇನ್ನೊಮ್ಮೆ ಗಾಂಧೀಜಿಯ ಕಡೆಗೆ ಕಣ್ಣು ಹೊರಳಿಸುವರು.

ರಾಷ್ಟ್ರಪಿತನ ಕಣ್ಣು ಥಳ ಥಳ ಹೊಳೆಯುವವು. ಅವರೊಮ್ಮೆ ತರುಣ ಬಂಧುವಿನ ಕಡೆಗೆ ನೋಡಿ ತನ್ನ ವಿಶಾಲ ಹಸ್ತದಿಂದ ಆವನನ್ನು ತಡೆಯುತ್ತ,....

ರಾಷ್ಟ್ರಪಿತ : [ದಯಾಭರಿತನಾಗಿ] ದೈವಹತರಾದವರ
ನೇಕಿಂತು ತಡೆಯುತಿಹೆ ನೀ ಬಂಧು? ಸಲ್ಲದಿದು;
ಜಗದಂತ ರಂಗದಲಿ ಮಿಡಿವ ದುಃಖಿದ ಕೊರತ
ವೆನ್ನದೆಗೆ ತಲ್ಲಣವು. ಯಾವ ದೇಶವೆ ಇರಲಿ,
ಯಾವ ಜನವೇ ಇರಲಿ, ಮನುಕುಲದ ಜನವೊಂದು;
ಮಾನವೀಯತೆಯೊಂದು, ತಡೆಯದಿರು ನೀನವರ!
ಶರಣು ಶರಣೆಂದವರ ಕಾಯುವದೆ ಸದ್ಧರ್ಮ;
ಭಾರತದ ಹಿರಿಧರ್ಮ. ಬಂದವರು ಬಂಧುಗಳು–
ದುಃಖಾರ್ತರಾಗಿಹರು...

ತರುಣ ಬಂಧು : [ಅತ್ಯಂತ ವ್ಯಗ್ರನಾಗಿ]
ಕ್ಷಮಿಸುವದು ರಾಷ್ಟ್ರಪಿತ!
ಇಲ್ಲಿ ಬಂದವರಾರು ಹಿಂದೆ ಹೋಗುವದಿಲ್ಲ
ಹಿಂದಿರುಗದಿದ್ದವರು ಭಾರತದ ಬೆನ್ನಿನೊಳ
ಗಿರಿಯುವರು, ಘೋರಕ್ತತಪ್ಪರು ತಂದೆ!
ಅವರ ಕರ್ಮದ ಕೊಸರಿಗೇಕೆಮ್ಮ
ಧರ್ಮದ ಬಿರುದ ಮೆರೆಸುವಿರಿ. ಓ! ತಂದೆ!
ಹಿಂದಿನನುಭವ ಸಾಕು......

ರಾಷ್ಟ್ರಪಿತ: (ತಡೆದು) ಮಾನವೀಯತೆ...
ತರುಣ ಬಂಧು: (ಅವಸರದಿಂದ).. ಮಣ್ಣು ಮುಕ್ಕಿದೆ ತಂದೆ!
ರಾಷ್ಟ್ರಪಿತ: ...ವಿಶ್ವಕೊಂದೇ ಧರ್ಮ...
ದಯೆಯೆ ಧರ್ಮದ ಮರ್ಮ. ಧರ್ಮಪುರಾತನ,
ದಯೆಯು ಸನಾತನ. ದಯೆಯೇ ಧರ್ಮದ
ಮೂಲವಾಗಿದೆ ಬಂಧು. ದುಡುಕದಿರು.
ನೊಂದ ದನಿ, ಕಣ್ಣಪನಿ, ಕರಗಿಸದೇ ತವ ಹೃದಯ!
ಗೋಳಿಗೆಲ್ಲಿಯ ಜಾತಿ? ವಿಶ್ವಧಾತ್ರಿಯು ನೆರಳ
ತಂಪೆಮಗೆ ರಕ್ಷಣೆಯು. ಅವರ ಬವಣೆಯು ಕೀಳು
ಕರೆದು ತಾ ನೊಂದವರ! ರಾಜಕೀಯದ ಕಹಿಯ
ಗುಟುಕರಿಸಿ ಕೆಟ್ಟವರ...

[ಕರಳು ಕೊರೆಯುವಂತಹ ಹಾಡು. ರಾಷ್ಟ್ರಪಿತನ ಕಣ್ಣಲ್ಲಿ ನೀರು ತರಿಸುವದು. ಕ್ರಾಂತಿಕಾರಿ ಅನಡುಗಚ್ಚುವನು. ತರುಣ ಬಂಧು ಮುಷ್ಟಿ ಬಿಗಿ ಮಾಡುವನು. ಹಾಡು ಹತ್ತಿರವೆ ಕೇಳುವದು... ]

ಮುದುಕರು ತದಕರು ಜರಾಜರ್ಜಿತರು.
ಸಣ್ಣ ಕಂದಮ್ಮಗಳು, ಹಾಲು ಮತ್ತಿದಾಕೆನೆಯ
ಹಸುಳೆ, ದಿನ ತುಂಬಿದ ಹೊಸ ಹರಯದ
ಬಸುರಿ, ಹೊರಸಿನ ಮೇಲಿನ ಬಾಣಂತಿ
ಕುಂಟರು
ಕುರುಡರು
ಮದುವೆಯ ಮಗಳು, ಮದುವಣಗಿತ್ತಿ
ಶೀಲದ ಸೊತ್ತನು ಹೊತ್ತಿಹ ತರುಣಿ
ಬಾಂಗ್ಲಾ ದೇಶದ ಸಂತಾನ
ಹೊರಟಿದೆ ಹೌಹಾರಿ;
ನಾಡಿನ ಗಡಿ ಮೀರಿ,



(ಬಹಳಷ್ಟು ದನಿಗಳು)

ಆಮಾರ್ ಸೋನಾರ್ ಬಾಂಗಲಾ!
ಆಮಾರ್ ಸೋನಾರ್ ಬಾಂಗಲಾ!
ಸಾಬಗೆ ಸೊಬಗೆ
ಬೇಗುದಿ ಬವಣೆಗೆ
ತುತ್ತಾದರು ಕೂಡಾ......
ಆಮಾರ್ ಸೋನಾರ್ ಬಂಗಲಾ!

ಸೋನಾರ್ ಬಂಗಲಾ
ಬಂಗಲಾ
ಅಭಿಮಾನದ ನೆಲ
ಆಯ್ನೆಲssssss...

[ ಶತಸಹಸ್ರ ದಿಕ್ಕುಗಳ ಸಪ್ಪಳ ಕೇಳುವದು. ಜೊತೆಗೆ ಆಮಾರ್ ಸೋನಾರ್ ಬಂಗಲಾ ಗರ್ಜನೆಯೂ ಕೇಳುವದು. ದೋಣಿಯ ಎತ್ತರದ ತುದಿಯಲ್ಲಿ ಕುಳಿತ ವಿಶ್ವಕವಿ ತಂತುವಾದ್ಯವನ್ನು ಮಿಡಿಯುತ್ತ ಆಮಾರ್... ಸೋನಾರ್... ಬಂಗಲಾ! ಎಂದು ದೀರ್ಘವಾದ ರಾಗ ಸ್ವರವನ್ನು ಎಬ್ಬಿಸುತ್ತಾನೆ. ಆ ಸ್ವರವು ದಿಕ್ಕು ದಿಕ್ಕುಗಳಲ್ಲಿ ನಾದ್ಧನಿಸುತ್ತದೆ. ]

## ದೃಶ್ಯ ಎರಡು

[ ವಿಚಾರ ಮಗ್ನರಾದ ಪಾಕಿಸ್ತಾನದ ಜನಕರು ಸುತ್ತಲೂ ನೋಡುತ್ತ ತಮ್ಮಲ್ಲಿಯೇ ಆದರೂ ದಟ್ಟವಾಗಿ 'ಒಂದಕ್ಕೆ ಎರಡಾಗಿ... ಎರಡಕ್ಕೆ ಮೂರಾಯ್ತೆ?' ಎನ್ನುವದನ್ನು ಕೇಳಿದ ತರುಣ ಬಂಧುವು 'ಮೂರಕ್ಕೆ ಹತ್ತಾಗಿ ಶೂನ್ಯವೇ ಆದೀತು' ಎಂದಕೂಡಲೆ ಬದ್ಧ ಭ್ರುಕುಟಿತರಾದ ಕಾಯದೇ ಆಜಂ ಅವರು ಅವನನ್ನು ಧಿಕ್ಕರಿಸಿ ನೋಡುತ್ತ- ]

**ಜಿನ್ನಾ ಜಿ :** ಏನೆಂದಿ ತರುಣ ಬಂಧು?

**ತರುಣ ಬಂಧು :** (ವ್ಯಂಗ್ಯವಾಗಿ)
ಶೂನ್ಯದಿಂ ಶೂನ್ಯಕೋಡುತಿದೆ ಎಂದೆ?

**ಜಿನ್ನಾ ಜಿ :** [ಪ್ರಶ್ನಾರ್ಥಕವಾಗಿ] ಆಂ? ಯಾವುದು?

**ತರುಣ ಬಂಧು :** [ಗಟ್ಟಿಯಾಗಿ]
ಸತ್ಯದ ತೆರೆಯನು ಮುಚ್ಚಲುಬಹುದೆ?

**ಜಿನ್ನಾ ಜಿ :** [ಅವಸರದಿಂದ] ಸತ್ಯವೆಂದಿಗೂ ಸತ್ಯ. ಅದನು ಮುಚ್ಚಿದರಾರು?

**ತರುಣಬಂಧು :** ಬೇಟೆಯಾಡಿದರದನು; ಸತ್ಯದಾರಾಧಕರು,

**ಜಿನ್ನಾ ಜಿ :** ಬೇಟೆಯಾಡಲು ಸತ್ಯ,
ಬೇಟೆಯಾ ಮೊಲವೇನು? ಅರ್ಥವಾಗದು ಬಂಧು!

**ತರುಣ ಬಂಧು :** [ತೀಕ್ಷ್ಣವಾಗಿ] ನಿಮಗರ್ಥವಾದರೂ
ಅರ್ಥವಾಗದ ತೆರೆದಿ ವ್ಯಾಖ್ಯಾರ್ಥ ಮಾಡುವದು
ನಿಮ್ಮ ಬುದ್ಧಿಯ ಕೇಡು. ಜಗವಕದಡಿದ ನೀವು
ನೆಮ್ಮದಿಯ ಹೂಳಿದಿರಿ. ಸತ್ಯ-ಶಾಂತಿಯ ಹಿಡಿದು
ಕಟ್ಟಿ ಬಿಟ್ಟಿರಿ ನೀವು. ಕೆಣಕುವದೆ ಛಲ:
ಬಣವ ಕಟ್ಟುವದೆ ನಿಮ್ಮ ಬಲ. ಬಲಗುಂದಿ
ದಾಗೊಮ್ಮೆ ಧರ್ಮಯುದ್ಧವ ಕರೆವ ತಂತ್ರ,
ನಿಮ್ಮದದು ಮಹಾಮಂತ್ರ. ಓ! ಪಾಕಿಸ್ತಾನದ
ಜನಕಾ ! ಸತ್ಯಕ್ಕೆ ... ...

**ಜಿನ್ನಾ ಜಿ :** (ತಿರುಗೇಟು ಕೊಡುವಂತೆ) ಸತ್ಯವೆಂದಿಗು ಸತ್ಯ
ನನ್ನ ದೇಶವು ಸತ್ಯ: ನಿಮ್ಮ ದೇಶವು ಕೂಡ.
ಹಿಡಿದು ಕಟ್ಟಲು ಸತ್ಯ ಭಾರತದ ಹಸುವೇನು?

**ತರುಣಬಂಧು:** [ತರ್ಕವನ್ನೆಬ್ಬಿಸುವಂತೆ] ಒಂದಕ್ಕೆ ಎರಡಾಗಿ
ಎರಡಕ್ಕೆ ಮೂರಾಗಿ ಎಂದೇನೊ ನುಡಿದಿರಲ್ಲ?
ಯಾವ ದೇಶದ ಮಾತು?

**ಜಿನ್ನಾ ಜಿ:** [ಅದೇ ತರ್ಕದ ಎಳೆಯನ್ನು ಜಗ್ಗುವಂತೆ]
ಶೂನ್ಯದಿಂ ಶೂನ್ಯಕೋ
ಡುತಿದೆ ಎಂದೆಯಲ್ಲ. ಅದು ಯಾವ ದೇಶದ ಮಾತು?

**ತರುಣಬಂಧು :** [ಗಂಭೀರ ಸ್ವರದಲ್ಲಿ] ನಿಮಗೆ ತಿಳಿದಿಹ ಮಾತ
ನೇತಕ್ಕೆ ಕೇಳುವಿರಿ? ಸತ್ಯವನು ಸೀಳುವದೆ
ನಿತ್ಯ ಕರ್ಮವು ನಿಮಗೆ.

**ಜಿನ್ನಾ ಜಿ:** ಸತ್ಯಕೆ ಸಾವಿರ ಮುಖವಿಹವಯ್ಯ !

[ದೋಣಿಯಲ್ಲಿ ಗಂಭೀರ ಗೀತವೊಂದನ್ನು ದೂರಕುಳಿತ ಯೋಗಿ ಹಾಡುವನು.]

ಸತ್ಯದ ಮುಖವನು ಮುಚ್ಚಿದೆ ದೊರೆಯೆ
ಚಿನ್ನದ ಹರಿವಾಣಾ
ಸತ್ಯಾರಾಧಕನಾಗಲು ಓ! ಪ್ರಭು!
ತೆರೆದು ತೋರು ಪ್ರಾಣಾ!
ತೆರೆ ತೆರೆ ಚಿನ್ನದ ಹರಿವಾಣಾ!

[ಬಹಳ ಹೊತ್ತಿನ ವರೆಗೆ ಏಕತಾರಿಯ ತುಡಿತ ಮಾತ್ರ ಕೇಳಬರುವದು ಈ ದನಿಯನ್ನು ಬದಿಗೆ ಸರಿಸಿ ಮತ್ತೊಂದು ಕಠೋರ ದನಿಯ ಹಾಡು ಎಲ್ಲರಲ್ಲಿಯೂ ಪ್ರತಿಕ್ರಿಯೆಯನ್ನು ಉಂಟು ಮಾಡುವದು]

ಭಾರತ ತಾಯಿಗೆ
ವಂದೆ ಮಾತರಂ
ಗೀತೆಯ ಕೊಟ್ಟ ನೆಲ
ದಿಕ್ಕೆಟ್ಟು ಓಡುತಿದೆ ಕಂಗೆಟ್ಟು
ಭಾರತ ತಾಯಿಗೆ ಮೊರೆಯಿಟ್ಟು

(ಏಕ ತಾರಿಯ ತುಡಿತ ಈಗ ಇನ್ನೂ ಜೋರಾಗಿ ಕೇಳುತ್ತದೆ)

ಅರವಿಂದ ರವೀಂದ್ರರ
ರಾಮಕೃಷ್ಣ ವಿವೇಕರ
ಖ್ಯಾತಿಯು ನೆಟ್ಟ ನೆಲ
ದಿಕ್ಕೆಟ್ಟು ಓಡುತಿದೆ ಕಂಗೆಟ್ಟು
ಭಾರತ ತಾಯಿಗೆ ಮೊರೆಯಿಟ್ಟು

[ಏಕತಾರಿ ಒಂದೇ ಸವನೆ ತುಡಿಯುತ್ತಲೇ ಇದೆ.]

ಸುಭಾಸ ರವೀಂದ್ರರ
ಸ್ಫೂರ್ತಿಗೆ ತಾಯಿನೆಲ
ದಿಕ್ಕೆಟ್ಟು ಓಡುತಿದೆ ಕಂಗೆಟು!
ಭಾರತ ತಾಯಿಗೆ ಮೊರೆಯಿಟ್ಟು

[ಏಕತಾರಿಯ ತುಡಿತ ನಿಲ್ಲುತ್ತದೆ.]

**ತರುಣ ಬಂಧು :** [ಕಣ್ಣೀರು ತುಂಬಿ] ನಿಮ್ಮ ಸತ್ಯದ
ಮುಖವ ನೋಡಿದಿರ ಜಿನ್ನಾಜಿ! ಸತ್ಯವೆಂದಿಗು
ಸತ್ಯವೆಂದಿರಲ್ಲ! ಸತ್ಯದುಚ್ಚಾಟನೆಯು ಕೂಡ
ಸತ್ಯವೇ ಎಂಬಿರ?......

**ಧೀರ ಸನ್ಯಾಸಿ :** [ಕಮಂಡಲವನ್ನು ಗಟ್ಟಿಸಿ]
ಬಂಧು ಬಂಧುವನೆ ಕೊಂದ
ನೆತ್ತರವ ಕಕ್ಕಿಸಿದ...

**ಜಿನ್ನಾಜಿ :** [ತುಟಿ ಬಿಗಿದು]
ಧರ್ಮ ನಿಷ್ಠುರವಿದುವು...

**ಧೀರ ಸನ್ಯಾಸಿ :** [ಎರಡೂ ಕೈಗಳನ್ನು ಮೇಲೆತ್ತಿ]
ಧರ್ಮ, ರಾಕ್ಷಸವೇನು? ರಕ್ಕಸನ ಪರಿವಾರ
ದಕ್ಕಸವೆ ಧರ್ಮವೆಂಬಿರ! ಓ!
ಧರ್ಮದ ದೊರೆಗಳೆ ಧರ್ಮವಂತರೆ!
ಡೊಳ್ಳು ಹೊಟ್ಟೆಯನು ಬಾಜಿಸಿರಯ್ಯ!
ಚಿನ್ನದ ಹುಡಿಯೊಳು
ಪಡುವಣದೋಕುಳಿ ರಕ್ತ ರಂಜಿತಳು.
ಧರ್ಮದ ತಾಯಿ! ಬಡಗಣ ಖಡ್ಗಕೆ
ಜಗ ತತ್ತರಿಸುತಲಿದೆ
ಹರಿಯಿತು ನೆತ್ತರ
ಬಾನೆತ್ತರ
ಬಿದ್ದವು ರುಂಡದ ರಾಶಿಗಳು
ತುಂಡರಸಿದ ಕೈ ಕಾಲುಗಳು

[ಕೈಗಳನ್ನು ಕೆಳಗೆ ಇಳುಹಿ ಕೋಲನ್ನು ಗಟ್ಟಿಸುತ್ತಿರುವಾಗ ಚೀರುದನಿ ಹೃದಯ ದ್ರಾವಕವಾಗಿ ಬರಲು ಎಲ್ಲ ಕಡೆಗೂ ಸ್ತಬ್ಧತೆ ನೆಲಸಲು. ಒಸ್ಟೆ ಕಾರಕ ಸ್ವರದಲ್ಲಿ ವಿಕಾರಿಯು ಮಿಡಿತ]

ಮಾನವ ದುಶ್ಶಕ್ತಿಗೆ ಹೆಣ
ಕೊಳೆತು ನಾರುತಿವೆ ದುರ್ಗಂಧ
ಗಾಳಿಯು ಹಾಕದೆ ವಿಗಂಧ

ಮಾರಿಯ ಮಸಣದ ಒಕಲು,
ಸತ್ತರು ಕಕ್ಕಲು
ಹೌಹಾರಿತು ಮಾನವ ಕುಲ
ಸತ್ತಿತು ಮಾನವತೆ
ಹೆಣ ಮಲಗಿತು ಧರ್ಮದ, ಕರ್ಮದ
ಸತ್ಯದ, ಶೀಲದ, ಸತ್ವದ ಗರಿ ಮುದುರಿ
ಸಂಸ್ಕೃತಿ ವಿಷಕಾರಿ

**ಶಾಂತಿದೂತ :** (ಬಡಿದೆಬ್ಬಿಸಿದವನಂತೆ).
ಶಾಂತಿಗೊಂದೇ ದಾರಿ ಪಂಚಶೀಲ! ಸಹಧರ್ಮ
ದಾಚರಣೆ ವಿಶದೌದಾರ್ಯ. ಕಾಯಕವೆ
ಕೈಲಾಸ. ಆರಾಮ ಹರಾಮ ಹೈ! ಇದು
ವಿಶ್ವದಾರಿ. ಜಾತಿ ಮತ ಪಂಥಗಳ ಕಾಲ್ತೊಡ
ಕಿನೆಳೆದಾಟಕೆಲ್ಲಿ ಪ್ರಗತಿಯದಾರಿ. ಜಾತಾ ತೀತ
ರಾಷ್ಟ್ರವೊಂದೆ ಜಾಗ್ರತೆಯ ಸಂಕೇತ. ಸಹನಶೀ
ಲತೆಯಲ್ಲಿ ತಿಳಿ ತಿಳಿಯುತಿದೆ ಶಾಂತಿ ಜಲ.
ವಿಶ್ವರಂಗದೊಳಿಂದು ಶಾಂತಿ–ಸಮತೆಯ
ಬಾಳು......

**ಕ್ರಾಂತಿಕಾರಿ :** [ಗಡಬಡಿಸಿದವನಂತೆ] ಹಿಡಿದು ತರ
ಬಹುದೇನು? ಜಗ್ಗಿ ನಿಲ್ಲಿಸಬಹುದೆ ಶಾಂತಿಧೇ-



ನುವ ನಾವು? ಶಾಂತತೆಯು ಏಕಾಂಗವಾಗಿಲ್ಲ
ವಲ್ಲವೆ ರಾಷ್ಟ್ರ ಶಿಲ್ಪಿ, ಸಮರದಿಂದಲೆ ಶಾಂತಿ
ಸಮರದಿಂದಲೆ ಕ್ರಾಂತಿ ಎನ್ನುತಿದೆ ವಿಶ್ವರಂಗ!

**ಶಾಂತಿದೂತ :** [ಮುತ್ಸದ್ದಿಯ ಭಾವದಲ್ಲಿ] ಸತ್ತರೋಕುಳಿಯಾಡಿ
ಶಾಂತಿಯನು ತರಬಹುದೆ? ಶಾಶ್ವತವೆ ಆ ಶಾಂತಿ?
ಶಾಂತಿ ಚಿರಂತನ; ಸಿತ ಸಿರಂತನ, ಕ್ರಾಂತಿಕಾರಿ!

[ಈ ಹೊತ್ತಿಗೆ ಹಸಿರು ಮಣಿಗಳನ್ನು ಎಣಿಸುತ್ತ ಸವಿಲುಗರಿಗಳ ಗೊಂಡೆಯುಳ್ಳ ಹಿಡಿದ ಸಾಧು ರಾಷ್ಟ್ರಶಿಲ್ಪಿಯ ಬಳಿಸಾರಿ, ಅತ್ಯಂತ ಧಾರ್ಮಿಕ ಮನೋಭಾವದಲ್ಲಿ......]

**ಸಾಧು :** ಓ! ವಿಶ್ವಚಿರಂತನ ಶಾಂತಿಯದೂತಾ!
ಬುಡಮೇಲಾಗಿದೆ ಶಾಂತಿಯಬೇರು
ಚೀರಿತು ಧರ್ಮದ ಹೊಸಗಾಳಿ
ಹುಚ್ಚೆದ್ದೋಡಿತು ತಂಗಾಳಿ
ನ್ಯಾಯ ದೇವತೆಯ ತುಳಿದರೊ ತಂದೆ!
ದಯಾಮಾಯೆಗಳ ಎದೆ ಸೀಳಿ
ದಯಾಭರಿತ ಶಿವ ಸುಂದರ ಮಾಧವ
ಪರಬ್ರಹ್ಮರೆಲ್ಲ
ಎಲ್ಲಿಹರೊ ತಂದೆ!
ಧರ್ಮ ರಕ್ಷಣೆಗೆ ಧರ್ಮದ ಯುದ್ಧವು
ಶಾಂತಿ ರಕ್ಷಣಕೆ ಹೆಣಗಳ ಬಣವೆ
ಬಿಸ್‌ಮಿಲ್ಲಾ–ಹಿರ್–ರಹಮಾನ್–ಇರ್–ರಹೀಮ್
ಲಾ ಇಲಾಹ ಇಲ್ ಅಲ್ಲಾ;
ದೇವರದಲ್ಲವೆ ಈ ಸೊಲ್ಲಾ,
ಧರ್ಮದ ಶಿವಮಂತ್ರ
ಶರಣಾಗತಿ ಮಂತ್ರ.

**ಶಾಂತಿದೂತ :** [ಸ್ಥಿರಚಿತ್ತನಾಗಿ] ಧರ್ಮವಂತರು ನೀವು
ಧರ್ಮವನೆ ಹೇಳುವಿರಿ. ರಾಜಕೀಯವು ಬೇರೆ
ಧರ್ಮವೊ ಅದು ಬೇರೆ...............

**ಧೀರ ಸನ್ಯಾಸಿ :** [ಮುಂದೆ ಬಂದು] ಧರ್ಮಯುದ್ಧವು ಮಾತ್ರ
ನಿಮಗೆ ಸಮ್ಮತವೇನು?

**ಶಾಂತಿದೂತ :** ಯುದ್ಧವೆನಗೆ ಅಸಮ್ಮತ.
ಧರ್ಮಯುದ್ಧವೆಂದರದು ಹೇಡಿ ಪ್ರಚೋದನೆ.
ಧರ್ಮಯುದ...... ಧರ್ಮಯುದ್ಧ......
ಯುದ್ಧ ಧರ್ಮದ ನೆರಳು ಧರ್ಮಯುದ್ಧ!

**ಧೀರ ಸನ್ಯಾಸಿ ;** [ಆಲಿಸುತ್ತ] ಕೇಳಲ್ಲಿ ಶಾಂತಿದೂತ
ಧರ್ಮಯುದ್ಧದ ಪರಿಯ ಕಿವಿದೆರೆದು ಕೇಳುವದು.
ಕರುಳ ಕಿವಿಚುವ ದನಿಯು! ಗೋಳು
ಗೋಳೇಗೋಳು. ರಾಜಕೀಯದ ಮೋಲಸು
ಕೆಸರಾಗಿ ನಾರುತಿದೆ! ಜೀವರಷ್ಟಿಲ್ಲೆನುವಂತೆ
ಕಗ್ಗೊಲೆಯ...... ಇದು ಧರ್ಮಯುದ......

[ಹೆಣ್ಣು ದನಿಯೊಂದು ಬಿಕ್ಕುಗಳಿಂದ ತಡೆತಡೆದು ಕೇಳಬರುವದು]

ಇದು ಧರ್ಮಯುದ್ಧವೆಂದನು
ಪೈಗಂಬರ ಶರಣ
ಹಾರಿದವೊ ಹರಣ.
ಸಣ್ಣ ಕಂದಮ್ಮಗಳ, ಕಣ್ಣು ಕವಡೆಗಳ
ಸೋಡೆಯಲು ಹೇಳಿತೆ ಈ ಧರ್ಮ?
ಅಶಕ್ತ ಮಕಳ, ಜರಾಜರ್ಜಿತರ
ಕೊಲ್ಲಲು ಹೇಳಿತೆ ಈ ಧರ್ಮ?
ವಿಶ್ವ ಧರಿತ್ರಿಗೆ, ಮಾನವ ಕೋಟಿಗೆ
ಕಲಂಕವಲ್ಲವೆ ಹೆಣ್ಣುಶೀಲಭಂಗ
ಇದ ಹೇಳಿತೆ ಈ ಧರ್ಮ?!

ಓ! ಧರ್ಮದ ಹೆಸರಿನ ಧರ್ಮಗೇಡಿಗಳೆ!
ಬನ್ನಿರಿ... ಬನ್ನಿರಿ... ನೋಡಬನ್ನಿ ಬನ್ನಿರೊ!...
ಧರ್ಮದುರಂತದ ಸಾವಿನ ನೋವಿನ
ಗೋಳಿನ...ಓ! ... ಓ! ... !

**ಧೀರ ಸನ್ಯಾಸಿ :** [ ಹಣೆಯನ್ನು ಮುಟ್ಟಿಕೊಳ್ಳುತ್ತ ]
ಧರ್ಮಸನಾತನ... ಶಿವಶಿವ...
ದಯೆಯು ಪುರಾತನ... ಭಾರತ ಧರ್ಮವಾಗಿದೆ...
ಯೇನೋ... ಜೀರ್ಣ... ಧರ್ಮಸಾಲೆ...

**ಹಸಿರು ಮಣೆಯ ಸಾಧು :** [ ವಿಶ್ವಾಸದಿಂದ ]
ಧರ್ಮವೆ ಧರ್ಮವ ರಕ್ಷಿಸುತಿಹುದು ಸತ್ಯವೆ
ಸತ್ಯವ ಕಾಪಾಡುವದು. ಬೆದರದಿರು
ಬೆಚ್ಚದಿರು ಓ! ಧೀರ ಸನ್ಯಾಸಿ !
ಸದ್ಧರ್ಮಕೆ ಬಾಗಿರಿ ನೀವೆಲ್ಲ
ಧರ್ಮವಂತರೆಲ್ಲ

**ಕ್ರಾಂತಿಕಾರಿ :** [ ಮುಖ ಗಂಟು ಹಾಕಿ ] ಅನ್ನಾನ್ನಗತಿಕರಿಗೆ
ಆಸರಕೆ ಬಂದರ್ಗೆ ಧರ್ಮಬೋಧನೆ ಸಾಕೆ?
ದಿಕ್ಕೆಟ್ಟು ಬಂದವರಿಗಾವ ಧೈರ್ಯದ ರಕ್ಷೆ?
ಶಂ... ಪ್ರತಿ... ಶಾಶ್ವಂ...

**ರಾಷ್ಟ್ರಪಿತ :** [ ತಡೆದು ] ದುಡುಕದಿರು ಕ್ರಾಂತಿಕಾರಿ!
ಶಾಂತಿಯಿಂದಲೆ ಶಾಂತಿ.

**ಕ್ರಾಂತಿಕಾರಿ:** ಈ ಮಾತು ಬರಿ ಭ್ರಾಂತಿ!
ಕ್ಷಮಿಸೆನ್ನ ರಾಷ್ಟ್ರಪಿತ!

**ನೇತಾಜಿ:** (ಪ್ರಕ್ಷುಬ್ಧ) ದುಃಖತಪ್ತ ಜನರೆದೆಯ
ನುರಿಯ ನಾನೆಂತು ಸಹಿಸೇನು ಗುರುದೇವ!
ನೋಡಲ್ಲಿ! ಹಸಿನೆತ್ತರ ನೊರೆ ಕೂಡಿದೆ
ಗಂಗಾಸಾಗರ! ಮಹಾಪೂರವು ನೆತ್ತರ...
ಬಂಧು...ಬಂಧುಗಳ...ಹಸಿ...ಹಸಿ...ನೆತ್ತರ

**ಕ್ರಾಂತಿಕಾರಿ:** (ಅವಡುಗಚ್ಚಿ) ನೆತ್ತರಕೆ...ನೆತ್ತರವೆ...

**ರಾಷ್ಟ್ರಪಿತ :** (ಅವಸರದಿಂದ) ಮದ್ದಲ್ಲು ತಮ್ಮ!

(ವಿಶ್ವಕವಿ ರವೀಂದ್ರರು ತಮ್ಮ ವೀಣೆಯನ್ನು ಜೋರಾಗಿ ಮೀಟತೊಡಗುತ್ತಾರೆ. ಆ ನಾದ ತರಂಗವು ಗಂಗಾಸಾಗರದುಬ್ಬರದಲೆಗಳಲ್ಲಿ ಕೂಡಿ ಮಹಾನಾದವಾಗಿ ಪರಿಣಮಿಸುತ್ತದೆ.
ವಿಶ್ವಕವಿ "ಜೋಯ್ ಬಾಂಗ್ಲಾ" ಎಂದು ಧ್ಯಾನಸ್ಥರಾಗಿ ಪ್ರಾರ್ಥನೆಗೆ ತೊಡಗುತ್ತಾರೆ. ಕಡಲು ಭೋರ್ಗರೆಯ ತೊಡಗುತ್ತದೆ.)

## ದೃಶ್ಯ ಮೂರು

(ಕಡಲು ಭೋರ್ಗರೆದು ಸ್ತಬ್ಧವಾಗಿ ವಿಶ್ವಕವಿಯ ಪ್ರಾರ್ಥನೆಯನ್ನು ಆಲಿಸುತ್ತದೆ. ಎಲ್ಲರೂ ಭಾರತದೇವಿಯನ್ನು ತಮ್ಮ ಚಿತ್ತಪಟಲದ ಮೇಲೆ ಆವಿರ್ಭವಿಸಿಕೊಂಡು ಪ್ರಾರ್ಥನಾ ಗೀತದಲ್ಲಿ ತಲ್ಲೀನರಾಗುತ್ತಾರೆ. ಒಂದು ವ್ಯಕ್ತಿ ಮಾತ್ರ ಅಲ್ಲಿಂದ ಸಾವಕಾಶವಾಗಿ ಸರಿದು ಹೋಗುತ್ತದೆ.
ಪ್ರಾರ್ಥನೆಯ ಕೊನೆಗೆ, ಎಲ್ಲರೂ, 'ಜಯ್ ಹಿಂದ್-ಜಯ ಭಾರತ ಮಾತಾ-' ಎಂದು ಉದ್ಘೋಷಿಸುತ್ತಾರೆ. ತರುಣಕವಿ ಭಾರತಮಾತೆಯನ್ನು ಆಹ್ವಾನಿಸುತ್ತಾನೆ. ಎಲ್ಲರೂ ಆ ಭಕ್ತಿ ಗೀತದಲ್ಲಿ ಭಾಗವಹಿಸುತ್ತಾರೆ.)

**ಕೃಷ್ಣಕವಿ**

ಏಳಮ್ಮ ಏಳು ತಾಯಿ! ಏಳುತಾಯಿ!
ಮಹಾಮಂಗಲೆ ಶರಣ ಜನವತ್ಸಲೆ
ಜಗದಂಬೆ ನೀನು ಭಾರತಾಂಬೆ

**ಎಲ್ಲರೂ**

ಜಗದಂಬೆ ನೀನು ಭಾರತಾಂಬೆ! ಜಗದಂಬೆ ನೀನು ಭಾರತಾಂಬೆ.

**ಕೃಷ್ಣಕವಿ**

ಜಯ ಜನನಿ! ಜಯ ಸುಶೋಭಿನಿ!
ಪ್ರಸನ್ನ ವದನೆ ತಾಯೆ
ಜಯ ಸಹನಾಧರಿ! ವಿಶ್ವ ವಿಶ್ವಂಭರಿ!
ಜಯ ಜಯ ಮಂಗಲ ದಾಯಿ
ಕಾಯೆಮ್ಮ ನಮ್ಮ ತಾಯೆ;

**ಎಲ್ಲರೂ**

ಜಗದಂಬೆ ನೀನು ಭಾರತಾಂಬೆ! ಜಗದಂಬೆ ನೀನು ಭಾರತಾಂಬೆ.

**ಕೃಷ್ಣಕವಿ**

ಓ! ಜನನಿ! ಓ! ಜನನಿ!

[ ಒಂದು ಕ್ಷಣ ಸ್ತಬ್ಧನಾಗುತ್ತಾನೆ. ಕಣ್ಣೊಳಗಿಂದ ಕೋಡಿಯಾಗಿ ನೀರು ಹರಿಯುತ್ತದೆ. ಅವನು ಮತ್ತೆ ತನ್ನ ಹಾಡನ್ನು ಮುಂದುವರಿಸುತ್ತಾನೆ.]

ಓ! ಜನನಿ,
ತವ ಪಾದಾಂಬುಜ ನೇತ್ರ ಪ್ರಫುಲ್ಲಿತ
ಭಾರತ ಜನಪದ ಸಂತಾನಾ
ಏನೆಂಥ ವ್ಯಕ್ತಿಗಳು. ಏನೆಂಥ ಶಕ್ತಿಗಳು
ನಿನ್ನ ಕೋಟಿ ಮಕ್ಕಳು.

ಓ! ಜನನಿ!

ಜನಪದರೆ ನಮಿಸಿ ನಿಂತಿಹರು ತಾಯೆ
ಪ್ರಾಣಾರ್ಪಣೆಗೆಂದು
ಬಂಗ ವಿಮೋಚನೆಗೆಂದು

**ಎಲ್ಲರೂ**

ಜಗದಂಬೆ ನೀನು ಭಾರತಾಂಬೆ! ಜಗದಂಬೆ ನೀನು ಭಾರತಾಂಬೆ,

**ಕೃಷ್ಣಕವಿ**

ಆಸೇತು ಹಿಮಾಚಲ — ನಮ್ಮ ನೆಲ
ಸಪ್ತ ಸಾಗರವೆ — ನಮ್ಮ ಜಲ
ವಾಯು ಮಂಡಲದಿ — ವಾಯು ಬಲ
ಸೇನಾ ಟ್ಯಾಂಕಿನ — ಪ್ರಚಂಡ ದಳ
ನಿನ್ನ ಸೇವೆಗಿದೆ ಭಾರತ ಮಾತಾ
ಬಲಾಢ್ಯ ಬಲಿಷ್ಠರ ತಾಯೆ

**ಎಲ್ಲರೂ**

ಜಗದಂಬೆ ನೀನು ಭಾರತಾಂಬೆ। ಜಗದಂಬೆ ನೀನು ಭಾರತಾಂಬೆ

**ಕೃಷ್ಣಕವಿ**

ಬೆಳಕಿರದ ಜನಕೆ ಬೆಳಕೀವ ತಾಯೆ —
ದೌರ್ಜನ್ಯ ಶಕ್ತಿಯನು ತರಿಯೆ
ಹಿಂಸಾ ಶಕ್ತಿಯ ಮುರಿಯೆ
ಓ! ಜನನಿ, ಭಾರತಾಂಬೆ
ಜಗದಂಬೆ ನೀನು ಭಾರತಾಂಬೆ!



**ಎಲ್ಲರೂ**

ಜಗದಂಬೆ ನೀನು ಭಾರತಾಂಬೆ ಜಗದಂಬೆ। ನೀನು ಭಾರತಾಂಬೆ।

**ಕೃಷ್ಣಕವಿ**

ಕೇಳಮ್ಮ ಕೇಳು ತಾಯೆ ಆಆ—
ವಿಶ್ವ ವಿಜೇತರು ಭಾರತ ಪುತ್ರರು
ಗೆಲ್ಲುವ ಸೊಲ್ಲಿಗೆ ನಿತ್ಯಪ್ರಸನ್ನರು
ಜಯ ಜಯ ಭಾರತ ತಾಯೆ

ಕಾಯಮ್ಮ, ನಮ್ಮ ಕಾಯೆ
ಜಗವಂದನೆ ನಿನಗೆ, ವಿಶ್ವ ವಿಳಸಿತಾಯೆ
ಶುಭಾ ಮಂಗಲೆ ಶರಣ ಜನ ವತ್ಸಲೇ—

**ಎಲ್ಲರೂ**

ಜಗದಂಬೆ ನೀನು ಭಾರತಾಂಬೆ। ಜಗದಂಬೆ ನೀನು ಭಾರತಾಂಬೆ।

[ಈ ಪ್ರಾರ್ಥನಾ ಗೀತವು ಮುಗಿಯುತ್ತಿರುವಂತೆ ತೆರೆಯ ಮೇಲೆ ದಟ್ಟವಾದ ಕತ್ತಲೆಯು ಹರಡುತ್ತದೆ. ಆ ಕತ್ತಲೆಯ ಹಿನ್ನೆಲೆಯಲ್ಲಿ ಪ್ರಚಂಡವಾದ ತೇಜಃಪುಂಜಳಾದ ಭಾರತಮಾತೆ ಶಕ್ತಿಯ ಅವತಾರಿಣಿಯಾಗಿ ಪ್ರಕಾಶಿಸುತ್ತಾಳೆ. ಸಹಸ್ರ ಸಹಸ್ರ ಜೋಡಿಸಿದ ಕರಗಳು ಕಾಣಿಸುತ್ತವೆ. ಕೋಟಿ ಕೋಟಿ ಕಂಠಗಳಿಂದ ಮತ್ತೆ ಪ್ರಾರ್ಥನೆ ಹೊಮ್ಮುತ್ತದೆ. ಸಾಮೂಹಿಕವಾಗಿ]

ಓಂ! ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥ ಸಾಧಿಕೇ।
ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತುತೇ ॥
ಸೃಷ್ಟಿ–ಸ್ಥಿತಿ–ವಿನಾಶಾನಾಂ ಶಕ್ತಿಭೂತೆ ಸನಾತನಿ ।
ಗುಣಾಶ್ರಯೇ ಗುಣಮಯೇ ನಾರಾಯಣಿ ನಮೋಽಸ್ತುತೇ ॥
ಶರಣಾಗತ – ದೀನಾರ್ತ – ಪರಿತ್ರಾಣ ಪರಾಯಣೇ ।
ಸರ್ವಸ್ಯಾರ್ತಿ ಹರೇ ದೇವಿ ನಾರಾಯಣಿ ನಮೋಽಸ್ತುತೇ ॥

[ಗಂಟೆ ಜಾಂಗಟೆಗಳ ಸಪ್ಪಳ, ಧೂಪ, ದೀಪಗಳು ಜಗ್ಗನೆ ಬೆಳಗು ಹೋಟಿ]
[ಮತ್ತೆ ದಟ್ಟವಾದ ಕತ್ತಲೆ. ಈ ಕತ್ತಲೆಯನ್ನು ಭೇದಿಸುವಂತೆ ಯುದ್ಧ ವಿಮಾನಗಳ ಭಯಂಕರ ಸಪ್ಪಳ ವೈಜಯಂತಿ ಟ್ಯಾಂಕುಗಳ ಖಟ ಖಟಾಟಿ ಮದ್ದು ಗುಂಡುಗಳ ಬೆಳಕು ಸಪ್ಪಳ- ಸೈನಿಕರ ಜಯ ಜಯಕಾರ ಕೋಲಾಹಲ ಧ್ವನಿ-ಬಾಂಬುಗಳ ಸಿಡಿತದ ನೋಟ ಗ್ರೆನೇಡುಗಳ ಬೆಂಕಿ ಜ್ವಾಲೆ ಸ್ಫೋಟ.

ಒಂದು ಕ್ಷಣ ರಂಗಭೂಮಿಯು ಸ್ತಬ್ಧ - ಮೌನ - ಮಹಾಮೌನ. ಗಂಗಾ ಸಾಗರದ ತೆರೆತರಂಗಗಳ ಮೇಲೆ ತೇಲುತ್ತಿರುವ ದೋಣಿ ನಿಧಾನವಾಗಿ ಬಾಂಗ್ಲಾ ದೇಶದ ಕಡೆಗೆ ಚಲಿಸತೊಡಗುತ್ತದೆ. ಎಲ್ಲ ಕಡೆಗೂ 'ಜಯ್ ಸೋನಾರ್ ಬಾಂಗಲಾ' 'ಜಯ್ ಭಾರತ ಮಾತಾ' ಘೋಷಣೆಗಳು ಕಿವಿಗಡಚಿಕ್ಕುತ್ತವೆ. ಮುಂಜಾನಿನ ಹರಿಕಾರನಂತೆ ಏಕತಾರಿಯ ಸ್ವಾಮಿಯ ಹಾಡು]

ಅರುಣೋದಯವಾಗಿದೆ ಬಾ
ಶಿವ ಕರುಣೋದಯ

ಹಾಡುವ ಮಂಗಳ ಗೀತಾ. ಬಾ ಸನ್ಮಂಗಳ ಸವಿತಾ,
ಬಾಳ ಬದುಕಿನೊಳು ತುಂಬಲಿ ಬೆಳಕು
ಭೇದಿಸು ಜೀವದ ತಿಮಿರಾ

ಜೀವ ಬಾನಿನೊಳು ಹರಿಯಲಿ ಹಾಲು
ಬೆಳಗಲಿ ಜ್ಞಾನದ ಕಿರಣಾ,

ಸೂರ್ಯೋದಯ ಶಿವಕರ ಚರಣಾ
ಬೆಳಕಾಗಿದೆ ಬಾ ಶ್ರೀ ಚರಣಾ,
ಧರಣಿಗೆ, ಧಾತ್ರಿಗೆ, ವಿಶ್ವಧರಿತ್ರಿಗೆ,

ಚೇತನ ಕಿರಣಾ ನಿನಗೆ ನಮೋ। ನಿತ್ಯ
ನೂತನಾ ನಮೋ ನಮೋ।
ರಾಜೀವ ಚೇತನಾ ನಮೋ...ನಮೋಽಽ—

ಸ್ವರ್ಣ ಪಿರಿ

# ದೃಶ್ಯ ನಾಲ್ಕು

[ಮೋಣಿಯು ಓರಿಯುರಿಲ್ಲ ರಂಗಭೂಮಿಯ ಮೇಲೆ, ಪರದೆಯಮೇಲೆ ನೆರಳುಗಳು ಕಾಣುತ್ತವೆ. ಹೆಣಗಳು, ತರಿದ ರುಂಡಗಳು, ಪರದೆಯ ತುಂಬ ಎರಡು ಕಣ್ಣುಗಳು... ಪಟ ಪಟ ಕಣ್ಣೀರು...... ಹೆಂಗಸಿನ ಹೆಣ, ಕೂಸುಗಳ ಹೆಣ- ಮುದುಕರ ಹೆಣ ಛಿದ್ರ ವಿಚ್ಛಿದ್ರ ದೇಹಗಳ ಈ ಎಲ್ಲ ನೆರಳುಗಳು.]

**ತರುಣಬಂಧು:** [ಉದ್ವಿಗ್ನತೆಯಿಂದ]
ಓ! ವಿಶ್ವ ಚಿಂತನ ಶಾಂತಿಯ ದೂತಾ!
ಓ! ರಾಷ್ಟ್ರಪಿತಾ! ಎದೆಗಟ್ಟಿಮಾಡಿ
ಒಳಹೊಕ್ಕು ನೋಡುವಿರಾ ಈ ಘೋರ ದೃಶ್ಯವನು.

[ನೆರಳುಗಳ ಚಲನವಲನ. ತೋರಿಸುವ ತರುಣ ಬಂಧುವಿನ ಕೈನೆರಳು]

ಮಾನವೀಯತೆಯಿಲ್ಲಿ
ಮಣ್ಣುಗೂಡಿಹುದೆಂದು ಕಣ್ಣೀರಕರೆಯದಿರಿ!
ಕ್ರೌರ್ಯವೂ, ದ್ರೋಹವೂ, ಪಶುವೃತ್ತಿ ಕಾಮವೂ
ಮೇರೆ ಮೀರಿಹುದಿಲ್ಲಿ. ಕಾಡು ಸಂಸ್ಕೃತಿಯಿಲ್ಲಿ
ಭಂಡಾಟ ನಡೆಸಿಹುದು. ಏನಿದುವು? ಗುರುದೇವ!
ವನ್ಯಪಶುಗಳು ಕೂಡ ಕ್ರೌರ್ಯವನು ನೋಡದೆಯೆ
ತಲೆ ಕೆಳಗೆ ಹಾಕಿಹವು. ನೋಡಲಾರೆನು ತಂದೆ!
ಈ ಕಣ್ಣ ಕೊರೆವ ನೋಟ!......

**ಕ್ರಾಂತಿಕಾರಿ:** (ತೋರಿಸುತ್ತ) ಎಲುಬಿನ ಹಂದರ!
ಡೋಗಿಯ ಕುಣಿತ! ಒಣಗಿದ ನೆತ್ತರ
ಚಪ್ಪಟೆ ದೇಹದ ಹೆಣಗಳ ಬಣವಿಯ
ಅಸಹ್ಯ ನೋಟ!

[ನೆರಳುಗಳು ಬಾಗುತ್ತವೆ. ಹನಿ ಹನಿಯಾಗಿ ಕಣ್ಣೀರು... ಕಟ... ಕಟ...]

**ತರುಣಬಂಧು:** [ಹಾವು ತುಳಿದವನಂತೆ ಗಾಬರಿ ಕಕ್ಕಾಬಿಕ್ಕಿಯಾಗಿ]
ವಿಜ್ಞಾನಿಯ ಹೆಣಮಲಗಿದೆ ಇಲ್ಲಿ
ಕಲಾವಿದನ ಕೊಲೆಯಾಗಿದೆ ನೋಡು
ನೃತ್ಯಗಾತಿಯದು ಹೆಣ ಭಂಗಿಯಿದು
ಗಾಯನ ಕೋಕಿಲೆ ಬಾಯಿ ಮುಚ್ಚಿಹುದೋ
ನೋಡಿಲ್ಲಿ. ಸುಂದರ ಬಂಧುರ ಸುಬುದ್ಧಿ
ವಂತರದು ಬಯಲು ಗೋರಿಯಿದೆ ಇಲ್ಲಿ,
ಹರಯದ ಹೆಣ್ಣಿನ ಮೊಲೆಗಳು ಹರಿದಿವೆ
ತುಟಿ ತುಂಡಾಗಿವೆ ಸೀಳಿಬಿದ್ದಿಹುದು
ಚೀತ್ಕಾರದ ಗಂಟಲು.

ಅಯ್ಯೋ! ಚೀತ್ಕಾರ!
ಏನಿದು ಅತ್ಯಾಚಾರ!!

[ನೆರಳುಗಳು ಮರೆಯಾಗುವವು. ಆ ಕೂಡಲೇ ನೆತ್ತರು ಚಿಮ್ಮಿದ ಹೆಣಗಳು, ಗಾಯಗೊಂಡ ಶರೀರಗಳು, ಕಡಿದ ಕಾಲುಗಳು, ಮುರಿದ ಕೈಗಳ ದೃಶ್ಯವು ಚೀತ್ ಚೀತ್ ಚೀತ್ ಎನ್ನುತ್ತಿರುವಾಗಲೆ ತೆರೆಯ ತುಂಬ ನೆತ್ತರಸಾಗರ ಧುಮುಕಿ ರುಂಡ ಮುಂಡಗಳು ತೇಲಾಡಿ ಬರುವ ದೃಶ್ಯ. ಗಿರಗಿರನೆ ಕಣ್ಣು ತಿರುಗಿಸುವ ಸುಂದರ ಹೆಣ್ಣು ಹೋಽಽ... ಹೋಽಽಽ ಎಂದು ಚೀರಿ ತೆರೆಯ ತುಂಬೆಲ್ಲ ಅವಳೇ ಕಾಣುತ್ತಾಳೆ.]

### ಸುಂದರ ಹೆಣ್ಣು

ಥೂ! ಥೂ! ಪಶುಗಳು! ಬರಿಯ ಬತ್ತಲೆ ಮಾಡಿ
ಮಾನ ಕಳೆಯುವುದಿರಲಿ ಚಿತ್ರ ಹಿಂಸೆಯ ಮಾಡಿ
ತಿವಿದು ಕೊಂದರು ಕೊನೆಗೆ! ಹುಡಿಗಿಯರ ಹಿಂಡನ್ನೆ
ಬೇಟೆಯಾಡಿದರಿವರು...... ಅಯ್ಯಯ್ಯೊ! 'ಬಾಯನೆಟ್'
...ಕಣ್ಣಲ್ಲಿ...ಮೊಲೆಯ ಮೇಲ್...ಬಾಯನೆಟ್
(ಭಯಂಕರ ಚೀರಿ) ಬಾಯನೆಟ್ ಸೀಳಿತು...



ದೂನೆದೆ... ಮಾತೋಶ್ರೀ ದೆವದ... ಅಯ್ಯೋ!...
ಅಯ್ಯಯ್ಯೋ !... ಡಂ- ಧಂ...ಡ್...ಢಮಾರ್ ಢು!

[ತೆರೆಯ ಇನ್ನೊಂದು ಮಗ್ಗುಲಿಂದ, ಸಾವಿಗೆಡುಂಡ ಕೆಂಗೇರಿದ ಮುಖ ಹಸ್ಕು ತೋರಲಾರದ ಬಿಕ್ಕಿ ಬಿಕ್ಕಿ ಅಳುತ್ತ ಬರುವಳು.]

### ಮಧ್ಯಮ ವಯಸ್ಸಿನ ಹೆಂಗಸು....

ಓ ! ನನ್ನ ದೇವರೆ ! ಪತಿಗೆ ಮೀಸಲು ದೇಹ
ಪತಿತರಿಗೆ ಹಾಳಾಯ್ತು... ನಾನೆಂತು ಬದುಕೇನು?
ಬದುಕಿ ಮೊಗದೋರೇನು ? ಬದುಕಿ ಬಾಳೇನಪ್ಪ !
ನಷ್ಟ ನಷ್ಟವೊ ನಷ್ಟ !

[ಇವಳನ್ನು ದೂಡಿ ಹುಚ್ಚನೊಬ್ಬ ಎಲುಬುಗಳನ್ನು ಬಾರಿಸುತ್ತ ವಿಲಕ್ಷಣವಾಗಿ ಕುಣಿಯುತ್ತ ಬರುವನು.]

### ಹುಚ್ಚ

ಕೊಂದು ತಿಂದರೋ ಕೊಂದು ತಿಂದರು,
ನನ್ನೆದುರಿಗೆ ಹೆಂಡತಿಯ
ಗಬಗಬನೆ ತಿಂದರು.
ಕೊಂದು ತಿಂದರೋ ಕೊಂದು ತಿಂದರು!

(ಕೆಕೆಃ ಕಿ.ಹು. ಎಲುಬುಗಳನ್ನು ಬಾರಿಸಿ)

ಹೆಂಡತಿಯ, ಮಕ್ಕಳನು ಅಣ್ಣನನು
ತಮ್ಮನನು, ಸುಟ್ಟುಬಿಟ್ಟರು... ಮನೆಮಾರುಗಳೆಲ್ಲ
ಬೆಂಕಿ... ಬೆಂಕಿ ಹಚ್ಚಿದರವರು... ರಕ್ಕಸರು...
ಧುಡ... ಧುಢ. ಬಾಯಸಟ್ಟೊ... ಕುಟ್ಟಿತು.
ಕೊಚ್ಚಿತು. ಚುಚ್ಚಿತು... ಸೀರೆಯ ಸೆಳೆದರು
... ಏ... ಏ... ಥಂ... ಡುಸ್... ಥಡ್
ಥಡ್... ಎಲ್ಲಿರುವೆ ? ಎಲ್ಲಿರುವೆ ?
ಎಲ್ಲಿರುವೆ ಬಂಧು ?
ವಂಗಬಂಧು ?
ನಮ್ಮ ವಂಗಬಂಧು ?

[ ಚೀರಾಡಿ ಹೊರಳುತ್ತ ಮರೆಯಾಗುವನು. ಆ ಹುಚ್ಚನನ್ನು ಅಪ್ಪಿಕೊಂಡ ಮುತ್ತೈದೆ ವಿಕಾರವಾಗಿ ಕೂಗುತ್ತ ]

## ಮುತ್ತೈದೆ

ಮೊಲೆಯ ಮಗುವನು ಕಿತ್ತು ಕತ್ತು ಹಿಚಿ
ಕೆದರಯ್ಯೊ ! ದುರ್ದಶೆಯನೆಸಗಿದರು...
ಬೀಸಿ ಒಗೆದರು...ನನ್ನ ಕುಪ್ಪುಸ...
ಹರಿದು... ಥೂ... ಥೂ... ಸೆರೆಕುಡಿದ ಬಾಯಿ.
ಒಂದೋ... ಎರಡೋ... ಮೂರೋ...
ಅಹಹಾ ! ಅಯ್ಯಯೊ.... ನಾಲ್ಕೊ... ಐದೋ
...ಕೋಣಗಳ... ಈ ಹಿಡಿಶಾಪ...
ದಿಂದಿವರ...

[ ನುಣ್ಣು ಹೊರಳುತ್ತ ನಿರ್ಗಮಿಸುವ ಹೊತ್ತಿಗೆ ಕೋಲೂರುತ್ತ ... ಮುದುಕಿ ಮುಚ್ಚಿಕೊಂಡ ಮುಸುಕನ್ನು ತೆಗೆದು ]

## ಮುದುಕಿ

ಭಗವಂತ! ಇಂಥದೂ! ಇಂಥದೂ!
ನಡೆಯುವೇಕೆ? ಮುದಿಹದಿಗೆರಗುವದೆ?
ಮಾನವರೊ, ದಾನವರೊ, ಕತ್ತೆಗಳೊ, ಕೋಣಗಳೊ
ನರಪಶುಗಳೇ ಮತ್ತೆ! ಉರಿದು ಹೋಗಿರಿ ನೀವು!
ಉರಿದುರಿದು... ಉರಿದುರಿದು...

[ ರಂಗದ ಮೇಲೆ ಭಯಂಕರ ಜ್ವಾಲೆ, ಛಳಛಟಲ್- ಸಿರಿಸಿಟಲ್ ಶಬ್ದ- ಧೊಪ್ಪಧೊಪ್ ಕಟ್ಟಡಗಳು ಬೀಳುವ ಸಪ್ಪಳ-ದಿಗ್ದಾಹಂತ ಕೆಂಪಾದಲ ಹಾಹಾಕಾರ ಧ್ವನಿ ಪ್ರಚಂಡ

ಆ ಜಳದುರಿಯ ಮಂದ ಪ್ರಕಾಶದಲ್ಲಿ ಪ್ರತಿಮೆಗಳು ಗೋಚರಿಸಿ ಸರಿಯ ತೊಡಗುವವು. ಬೆಳಕು ನಿಲ್ಲುವದು ]

...ರ ಸನ್ಯಾಸಿ : ( ಕಣ್ಣೊರಿಸಿ ಕೊಳ್ಳುತ್ತ )

ಜೀವರಝಲ್ಲೆನ್ನುವದು.
ಕಗ್ಗೊಲೆಯ ಕೃತ್ಯವಿದು, ಕಪ್ಪು ಇತಿಹಾಸವಿದು.
ನಾನೆನಿತೊ ಯುದ್ಧಗಳ ನೋಡಿಹೆನು. ಕೇಳಿಹೆನು
ಆದರೀ ಪರಿಯ ಹಿಂಸೆಯನು ಕಂಡಿಲ್ಲ ಕೇಳಿಲ್ಲ
ನೀತಿಯನು ಸದೆಬಡಿದು, ದಯೆಯು ಹೊಟ್ಟೆಯತಿವಿದು
ಧರ್ಮರಾಕ್ಷಸರಾಗಿ ಜೀವತಿಂದವರಿವರು.

... ಟಣಿಯ ಸಾಧು: (ಪಶ್ಚಿಮ ದಿಕ್ಕಿನ ಕಡೆಗೆ ...)

ಇಸ್ಲಾಮಂ ಧರ್ಮಕಿದು ಕಪ್ಪುಕಲೆ
ಹಜರತರ ವಾಣಿಗಿದು ಅಪಚಾರ. ಗೆದ್ದು ಸೋ
ತವರಿವರು, ಸೋತು ಸಾಯುವರು. ರಜಕೀಯ
ದೊಳಿವರು ನರಳಿಬೀಳುವರು. ಒಂದಕೆ ಎರಡಾಯ್ತು
ಎರಡಕ್ಕೆ ಮೂರಾಯ್ತು... ಮುಂದೆ ಮತ್ತೆಷ್ಟೊ...

**ತರುಣ ಬಂಧು:** ( ಧೃಡಸ್ವರದಲ್ಲಿ )

ಶೂನ್ಯದಿಂ ಶೂನ್ಯ ನೋಡುತಿದೆ...

[ ಬೆಳಕು ಮತ್ತಷ್ಟು ತೀಕ್ಷ್ಣವಾಗುವದು ]

**ನೇತಾಜಿ:** (ರಾಷ್ಟ್ರ ಭಕ್ತಿಯಿಂದ)

ಏನಂಥ ಹೊಳಪು ಏನೆಂಥ ತೇಜ
ರಾರಾಜಿಸುತ್ತಿ ದೇಶ
ಭಾರತ ಬಂಗ್ಲಾದೇಶ.
ಸ್ವಾತಂತ್ರ್ಯ ವೀರ ! ರಣರಂಗ ಧೀರ
ಮುಜಿಬೂರ್ ಧೀರೆ
ನನಗಿದ ಶ್ರೀಕಾರ
ವಂಗಬಂಧು ನೀ ! ದೇಶ ಬಂಧು... ...
ಜಯ್ ಹಿಂದ್... ಜಯ ಹಿಂದ್... ಜಯ ಹಿಂದ್
ಜೋಯ್ ಸೋನಾರ ಬಾಂಗಲಾ.

( ಬೆಳಕು ಬೆಳದಿಂಗಳಂತೆ ಪಸರಿಸುವದು. )

[ಬಾಂಗ್ಲಾ ದೇಶದ ಧೀರ ಯುವಕನು ಸ್ವಾತಂತ್ರ್ಯದ ಹಾಲನ್ನುಂಡ ಹಕ್ಕಿಯಂತೆ ಜೋಯ್ ಬಾಂಗ್ಲಾ ಜಯ್ ಭಾರತ್‌ಎಂದು ಉಚ್ಚಸ್ವರದಲ್ಲಿ ಹಾಡುತ್ತ ಬರುವನು. ಇದು ನವ ಯುವವಾಣಿಯಾಗಿ ನಭೋ ಮಂಡಲವನ್ನು ವ್ಯಾಪಿಸುವದು .]

### ಧೀರ ಯುವಕ

ಹೊಸ ದಿನ ಬಂದಿದೆ ಬನ್ನಿರಿ ಗೆಳೆಯರೆ ss
ಮೊಳಗುತಿ ಜಯಭೇರಿ
ನವ ಯುಗವನು ಸಾರಿ
ಶಾಂತಿ ಸಮರಕೂ
ವಿಶ್ವ ಶಾಂತಿಗೂ
ಹೊಸ ದಿನ ತಂದಿದೆ ಹೊಸದಾರಿ;
ನನಗೂ ನಿನಗೂ ಒಂದೇ ದಾರಿ
ಶಾಂತಿಗೆ ಬದ್ಧರು
ಯುದ್ಧಕು ಸಿದ್ಧರು
ನಮ್ಮದು ಈ ದಾರಿ
ವಿಶ್ವದ ಕೈವಾರಿ

**ತರುಣಬಂಧು:** (ಅದೇ ದನಿಯಲ್ಲಿ)

ನಾನೂ ನೀನೂ ಒಂದೇ ಒಂದು
ಬಾ ಬಂಧು
ಹಿಂದೂ, ಇಂದೂ, ಮುಂದೂ
ಬಾ ಬಂಧು
ಹೊಸ ದಿನ ಬಂದಿದೆ ಬಾ ಬಂಧು
ನಾನೂ ನೀನೂ ಒಂದೇ ಒಂದು

( ತೆರೆಯಲ್ಲಿ ಪ್ರಚಂಡವಾದ ಜಯಘೋಷ. ಸ್ವಾತಂತ್ರ್ಯ ಸಿದ್ಧಿಯ ಮೆರವಣಿಗೆ ಘೋಷ. ಈ ಮೆರವಣಿಗೆಯನ್ನು ಕಂಡು ... )

### ರಾಷ್ಟ್ರ ಪಿತ

ಈ ನಿನ್ನ ನೋವು ಈ ನಿನ ಸಾವು
ಬರೆ ಎಳೆದಿದೆ ಭಾರತ ತಾಯಿ !
ಓ ! ಪ್ರೀತಿಯ ಬಾಂಗ್ಲಾ ...
ಶಾಂತಿ ಸಮರಕಿದು ಜಯಭೇರಿ
ವಿಶ್ವ ಶಾಂತಿಗಿದು ಹೊಸ ದಾರಿ.

[ ಈ ಆಶೀರ್ವಚನದೊಂದಿಗೆ ಗಂಗಾ ಸಾಗರದಂಚಿನಲಿ ತೇಲುತ್ತಲಿದ್ದ ದೋಣಿಯು ಮಂದ ಮಂದವಾಗಿ ಚಲಿಸತೊಡಗುವದು. ದೂರ- ಬಹು- ದೂರ ನೀರ ಮೋಡವನ್ನು ಹೊಗುವ ನಕ್ಷತ್ರದಂತೆ ನೌಕೆ ಚುಕ್ಕೆಯಂತೆ ಕಾಣಿಸುವದು ಜಯಭೇರಿ, ಮಂಗಳವಾದ್ಯಗಳ ಮೊಳಗುವಿಕೆಯೊಡನೆ. ]

ತೆರೆ

# ಕಾಲೇಜಿನಲ್ಲಿ ಮಿನಿ

'ಬಿಜಿ'


ಇನ್ನೊಮ್ಮೆ, ಅನಂತರ ನೀವು ನಿಮ್ಮ
ಟೈಟ್ ಪ್ಯಾಂಟಿನಲ್ಲಿ ವರ್ಗಕ್ಕೆ
ತೆರಳಬಾರದು.


ಇದು ನಡೆಯಲಾರದು, ನಿಮ್ಮ ಮಿನಿಸ್ಕರ್ಟ್
ನಿರ್ದಿಷ್ಟ ಪಡಿಸಿದ ಉದ್ದಕ್ಕಿಂತ,
ಅರ್ಧ ಮಿಲಿಮೀಟರು
ಕಡಿಮೆ ಇದೆ.


ಹೌದು ಸರ್, ನೀವು ನನ್ನ ಮೊಳಕಾಲಿನ ವರೆಗೆ
ಮಿನಿ ಸ್ಕರ್ಟ್ ಇರಬೇಕೆಂದು ಹೇಳಿದ್ದಿರಿ


ಪ್ರಿನ್ಸಿಪಾಲರು
ಹೋಗಿದ್ದಾರೆ
ಶೀನೀಗ ನನ್ನ
ನಿಲುವಂಗಿಯಿಂದ
ಹೊರಗೆ ಬಾ.

ಹಾನಿಗಿ ಇಲ್ಲ. ಆದುದರಿಂದ ಅವು ಗಡಿಯ ವರೆಗೆ ಬಂದು ಎದುರು ಬದು ನಿಂತ ಕೊಳ್ಳುತ್ತವೆ.

ಇದು ಎಲ್ಲೆಕಟ್ಟೆಯ ಇತಿಹಾಸ.

* * * *

"ಅಡೀ, ಡೀ, ಕನ್ನಡಕ್ಕಾತೀ......"
"ಏನೇ, ಲೇ, ತಮಿಳಿನವಳೇ......"

ಎಲ್ಲೆಕಟ್ಟೆಯಲ್ಲಿ ಇತ್ತ. ಎಂದರೆ ಕರ್ನಾಟಕದ ನೆಲದಲ್ಲಿ ಒಂದು ದೊಡ್ಡ ಬೋರ್ಡು. ಅದರಲ್ಲಿ ಗಂಡ ಹೆಂಡತಿ, ಎರಡು ಮಕ್ಕಳ ಚಿತ್ರವಿದೆ. 'ನಾವಿಬ್ಬರು ನಮಗಿಬ್ಬರೇ ಮಕ್ಕಳು' ಎಂದು ಸಿರಿಗನ್ನಡದಲ್ಲಿ, ದಪ್ಪ ದಪ್ಪ ಅಕ್ಷರಗಳಲ್ಲಿ, ಆ ಬೋರ್ಡಿನ ಮೇಲೆ ಬರೆದಿದೆ. ಅದರ ಒಂದು ಮೂಲೆಯಲ್ಲಿ ಕೆಂಪು ತ್ರಿಕೋಣವೂ ಇದೆ.

ಅತ್ತ ತಮಿಳು ನಾಡಿನ ನೆಲದಲ್ಲಿ ಇಂಥದೇ ಬೋರ್ಡು. ಇಂಥದೇ ಚಿತ್ರ. ಇಂಥದೇ ತ್ರಿಕೋಣ. ಆದರೆ ಅಕ್ಷರಗಳು ಮಾತ್ರ ತಮಿಳು ಭಾಷೆಯಲ್ಲಿ ಇದೆ. 'ನಾಮ್ ಇರುವರ್, ನಾಮ್ ಪೆರುವದು ಇರುವರ್'.

ಈ ಎರಡು ಬೋರ್ಡುಗಳೂ ಗಡಿಯಲ್ಲಿ ಮುಖಾಮುಖಿ ಅಖಾಡಕ್ಕಿಳಿಯುವ ಜಟ್ಟಿಗಳಂತೆ ನಿಂತುಕೊಂಡಿವೆ.

ಪ್ರಯಾಣಿಕರು ಬಂದಾಗ ಇದರ ಲಾಭ ಪಡೆದುಕೊಳ್ಳಲಿ ಎಂದೊ ಏನೊ, ಎರಡೂ ರಾಜ್ಯ ಸರಕಾರಗಳು ತಮ್ಮ ತಮ್ಮ ನೆಲದಲ್ಲಿ ಈ ಬೋರ್ಡುಗಳನ್ನು ನಟ್ಟಿದಾರೆ, ಎಂದು ಕಾಣುತ್ತದೆ. ಧೂಳೆಬ್ಬಿಸಿಕೊಂಡು ಬಂದ ಬಸ್ಸಿನಿಂದ ಪ್ರಯಾಣಿಕರು ಇಳಿದೊಡನೆ ಈ ಬೋರ್ಡುಗಳು ತಮ್ಮ ತಮ್ಮ ಭಾಷೆಯಲ್ಲಿ ಒಮ್ಮೆಲೆ ಕೂಗಿಕೊಳ್ಳುತ್ತವೆ. ಬೊಬ್ಬೆ ಹಾಕುತ್ತವೆ.

"ನಾವಿಬ್ಬರು. ನಮಗಿಬ್ಬರೇ ಮಕ್ಕಳು."
"ನಾವಿಬ್ಬರು. ನಮಗಿಬ್ಬರೇ ಮಕ್ಕಳು."

ಕಾಡಿನ ನಡುವೆ ನಿಂತಿರುವ ಈ ಬೋರ್ಡುಗಳಿಂದ ಬಸ್ಸಿನಲ್ಲಿ ಬರುವ ಪ್ರಯಾಣಿಕರಿಗೆ ಅಲ್ಪ ಸ್ವಲ್ಪ ಲಾಭವಾದೀತೇನೋ. ಲಾಭವಿರಲಿ, ಬಿಡಲಿ, ಇವುಗಳಂತೂ ಆ ಸಮಯದಲ್ಲಿ ತಮ್ಮ ತಮ್ಮ ಭಾಷೆಗಳಲ್ಲಿ ಒಂದೇ ಸಮನೆ ಕಿರುಚಿಕೊಳ್ಳುತ್ತವೆ.

ಬಸ್ಸಿನಲ್ಲಿ ಬರುವ ಪ್ರಯಾಣಿಕರನ್ನು ಬಿಟ್ಟರೆ ಇನ್ನು ಆ ಮಾರ್ಗವಾಗಿ ಬರುವ ಜನರಂತೂ ತೀರಾ ಕಡಮೆ. ಪಾದಚಾರಿಗಳು ಆಗೊಮ್ಮೆ ಈಗೊಮ್ಮೆ. ಎತ್ತಿನ ಗಾಡಿಯೂ ಅಷ್ಟೆ. ಇವರು ಯಾರು ಬಂದರೂ ಇಲ್ಲಿ ನಿಲ್ಲುವುದಿಲ್ಲ. ತಮ್ಮಷ್ಟಕ್ಕೆ ದಾರಿ ಸವೆಯಿಸಿಕೊಂಡು ಹೋಗುತ್ತಾರೆ.

ಇಲ್ಲಿ ನಿಲ್ಲುವವರೆಂದರೆ ಬಸ್ಸಿನಲ್ಲಿ ಬರುವವರೇ. ಎರಡೂ ಕಡೆಯ ಬಸ್ಸುಗಳು ತಮ್ಮ ತಮ್ಮ ಪ್ರಯಾಣಿಕರನ್ನು ಈ ಬೋರ್ಡುಗಳ ಬಳಿಯೆ ಇಳಿಸುತ್ತವೆ. ಪ್ರಯಾಣಿಕರು ಬಸ್ಸಿನಿಂದಿಳಿದೊಡನೆ ಅವರ ಕಣ್ಣಿಗೆ ಮೊದಲು ಬೀಳುವುದೇ 'ನಾವಿಬ್ಬರು—ನಮಗಿಬ್ಬರು ಮಕ್ಕಳು',

ಇನ್ನು ಪ್ರಯಾಣಿಕರು ಇಲ್ಲದಾಗ ಈ ಬೋರ್ಡುಗಳಿಗೆ ಇಲ್ಲಿ ಏನು ಕೆಲಸ? ಮಾನವರೆ ಇವುಗಳ ಮಾತನ್ನು ಉಲ್ಲಂಘಿಸಿ ನಾಲ್ಕು, ಆರು ಮಕ್ಕಳ ತಂದೆ ತಾಯಿಗಳಾಗುವಾಗ, ಇನ್ನು ಅಲ್ಲಿ ಹಾರಾಡುವ ಬಣ್ಣ ಬಣ್ಣದ ಪಕ್ಷಿಗಳೂ, ಚಿಮ್ಮುವ ಮೊಲಗಳೂ, ಜಿಗಿಯುವ ಜಿಂಕೆಗಳೂ, ಚಿರತೆಗಳೂ, ಆನೆಗಳೂ, ಇನ್ನಿತರ ಕಾಡು ಪ್ರಾಣಿಗಳೂ ಇವುಗಳ ಮಾತನ್ನು ಕೇಳಿಯಾವೆ?

ಕರ್ನಾಟಕ ತಮಿಳುನಾಡುಗಳ ಎಲ್ಲೆಯನ್ನು ಸೂಚಿಸುವ ಎಲ್ಲೆಕಟ್ಟೆಯಲ್ಲಿ ಬೋರ್ಡುಗಳೆರಡಿವೆ. ಒಂದು ತಮಿಳಿನದು-ಇನ್ನೊಂದು ನಮ್ಮ ಕನ್ನಡದ್ದು. ಎರಡರಲ್ಲೂ "ನಾವಿಬ್ಬರು" ಎಂಬ ಕುಟುಂಬ ಯೋಜನೆಯ ಘೋಷಣೆ. ಉಭಯ ರಾಜ್ಯಗಳ ಬಸ್ಸುಗಳೂ ತಮ್ಮ ಎಲ್ಲೆ ಮೀರಿ ಹೋಗುವದಿಲ್ಲವಾದ್ದರಿಂದ ಅಲ್ಲಿ ಪ್ರವಾಸಿಗರು ಬಸ್ಸು ಬದಲಾಯಿಸುವರು. ಮನುಷ್ಯರು ಭಾಷಾಭಿಮಾನಿಗಳಾಗಿ ಜಗಳಾಡಿದರೆ ಬೋರ್ಡುಗಳೂ ಜಗಳಾಡಬೇಕೆ? ಅಂತೇ ವಿಶ್ರಾಂತಿ ಪಡೆಯುತ್ತಿದ್ದ ಪ್ರವಾಸಿಗರಲ್ಲಿದ್ದ ಗರ್ಭಿಣಿಗೆ ನೋವು ಬರಬೇಕೆ? ಕನ್ನಡದ ಬಸ್ಸು ಲೇಟಾಗಬೇಕೆ? ಅಂತೂ ನೋವು ಹೆಚ್ಚಾದಾಗ ತಮಿಳಿನ ಬಸ್ಸೆ ಆಸ್ಪತ್ರೆಯಾಯಿತು. ಹೆರಿಗೆಯೂ ಆಯಿತು. ಹುಟ್ಟಿದ ಕೂಸುಗಳೂ "ನಾವಿಬ್ಬರು......" ಎಂದು ರಾಗ ಎಳೆಯಬೇಕೇ?

ಹಾಗೆ ಕೆಲಸವಿಲ್ಲದಾಗ ಈ ಬೋರ್ಡುಗಳು ತಮ್ಮ ತಮ್ಮಲ್ಲಿಯೆ ಜಗಳವಾಡಿಕೊಳ್ಳುತ್ತವೆ. ಒಂದು ವಿಶೇಷವೆಂದರೆ ಇವುಗಳಿಗೆ ಭಾಷಾಭಿಮಾನ, ತುಂಬಾ! 'ನಮ್ಮ ನಾಡು ಚಿನ್ನ, ನಮ್ಮ ನುಡಿಯೂ ಚಿನ್ನವೇ' ಎಂದು ಎರಡೂ ಸೆಟೆದು ಸೆಟೆದು ಹೇಳುತ್ತವೆ.

ಮತ್ತೂ ಒಂದು ವಿಶೇಷವೆಂದರೆ ತಮಿಳು ಬೋರ್ಡು ತಮಿಳಿನಲ್ಲಿಯೇ ಮಾತಾಡುತ್ತದೆ, ಕನ್ನಡ ಬೋರ್ಡು ಕನ್ನಡದಲ್ಲಿಯೆ ಮಾತಾಡುತ್ತದೆ. ಎರಡು ಬೋರ್ಡುಗಳೂ ಗಡಿಯಲ್ಲಿರುವುದರಿಂದ ಜನರಂತೆಯೆ ಅವುಗಳಿಗೂ ಎರಡೆರಡು ಭಾಷೆ ಗೊತ್ತಿದೆ. ಭಾಷೆಗಳು ಗೊತ್ತಿದ್ದರೂ ಇವು ತಮ್ಮ ತಮ್ಮ ಅಭಿಮಾನವನ್ನು ಬಿಟ್ಟುಕೊಡುವುದಿಲ್ಲ. ತೀಟೆ ಮಾತು ಹೇಳುತ್ತ ತಮಿಳು ಬೋರ್ಡು ತಮಿಳಿನಲ್ಲಿಯೆ ಏನೊ ಕೆಣಕುತ್ತದೆ. ಅದು ಏನು ಹೇಳಿತು ಎನ್ನುವುದು ಕನ್ನಡ ಬೋರ್ಡಿಗೆ ಅರ್ಥವಾಗುತ್ತದೆ. ಆದರೆ ಇದು ತಮಿಳಿನಲ್ಲಿ ಉತ್ತರ ಕೊಡುವುದಿಲ್ಲ. ಕನ್ನಡದಲ್ಲಿಯೆ ಉತ್ತರ ಕೊಡುತ್ತದೆ.

ಅದೂ ಅಷ್ಟೆ. ಕನ್ನಡದ್ದು ಕನ್ನಡದಲ್ಲಿ ಮಾತನಾಡುವಾಗ ತನಗೆ ಆ ಭಾಷೆ ತಿಳಿದಿದ್ದರೂ ಹಾಗೆ ಹೀಗೆ ಕುಲುಕುತ್ತ ತಮಿಳಿನಲ್ಲಿಯೆ ಹಾವಭಾವ ವ್ಯಕ್ತಪಡಿಸುತ್ತದೆ. 'ವಾಡೀ, ಪೋಡೀ' ಎನ್ನುತ್ತದೆ.

ಮೊನ್ನೆ ಸಹ ಇವು ತಮ್ಮ ನಾಡಿನ ಬಗ್ಗೆ ಕಚ್ಚಾಡಿಕೊಂಡಿದ್ದುವು. ತಮಿಳು ಬೋರ್ಡು ಹೇಳಿತು:

"ನಮ್ಮ ನಾಡು ಎಂಥಾದ್ದು ನಿನಗೆ ಗೊತ್ತೇನೇ?

ವಲ್ಲಾದಿ ವಲ್ಲನ್ ವಿಲ್ಲಾದಿ ವಿಲ್ಲನ್ ಮಲ್ಲಾದಿ ಮಲ್ಲನ್ ಆಳಿದ ದೇಶ ನಮ್ಮದು. ರಾಜಾಧಿರಾಜನ್ ರಾಜ ಮಾರ್ತಾಂಡನ್ ಚೋಳನ್ ಪಾಂಡ್ಯನ್..."

"ನಿಲ್ಲಿಸೇ ನಿಲ್ಲಿಸೇ. ಮಹಾ ಇವಳದ್ದು! ನಮ್ಮ ದೇಶಾನ ಎಂಥೆಂಥವರು ಆಳಿದಾರೆ ಗೊತ್ತಾ? ಪುಲಿಕೇಶಿ, ಕೃಷ್ಣ ದೇವರಾಯ..."

"ನಮ್ಮ ಅಸೆಂಬ್ಲೀಲಿ ಎಷ್ಟು ಚೆನ್ನಾಗಿ ನಮ್ಮ ಭಾಷೆ ಬಗ್ಗೆ ಕುಣಿದಾಡಿಕೊಂಡು ಮಾತಾಡೋವ್ರು ಇದಾರೆ ನಿನಗೆ ಗೊತ್ತಾ?"

"ಹೋಗೇ, ಹೋಗೇ. ಇವಳದ್ದೇ ಮಹಾ ಅಸೆಂಬ್ಲಿ. ನಮ್ಮದೇ ಅಸೆಂಬ್ಲೀಲಿ ಇನ್ನೂ ಚೆನ್ನಾಗಿ ಕುಣಿಯೋವ್ರು ಇದಾರೆ"

ಈಗ, ಇವೊತ್ತು, ಇನ್ನು ಎಂಥ ತೀಟೆ ಮಾಡಲು ತನ್ನನ್ನು ಈ ತಮಿಳಿನವಳು "ಅಡೀ, ಡೀ, ಕನ್ನಡಕ್ಕಾತೀ" ಎನ್ನುತ್ತಿದಾಳೆ ಎಂದು ಈ ಕನ್ನಡದವಳು ಸೆಟೆದು ನಿಂತು "ಏನೇ, ಲೇ, ತಮಿಳಿನವಳೇ" ಎಂದು ಉತ್ತರ ಕೊಡುವಷ್ಟರಲ್ಲಿ, ಆ ಕಾಡೇ ತಲೆದೂಗುವಂತೆ ಅಲ್ಲಿನ ಬೆಟ್ಟಗಳು ತಾಳ ಹಾಕುವಂತೆ ಆ ಬಣ್ಣ ಬಣ್ಣದ ಪಕ್ಷಿಗಳು ಶ್ರುತಿಗೂಡಿಸಿದುವೊ ಎನ್ನುವಂತೆ ಮಧುರವಾದ ಒಂದು ಹಾಡಿನ ಮೊಳಗು. ಅಲ್ಲಿ ಅಲೆ ಅಲೆಯಾಗಿ ಚಿಮ್ಮಲಾರಂಭಿಸಿತು:

"ನಾನೇ ಪ್ರೇಮಕುಮಾರಾ
ಕನ್ನಡ ನಾಡಿನ ಮುದ್ದಿನ ಕುವರಾ
ನಾನೇ ಪ್ರೇಮ ಕುಮಾರಾ ........"

* * * *

ಇಂಥ ಕಾಡಿನಲ್ಲಿ ತೀಟೆ ಜಗಳ ಆಡುವ ಈ ಬೋರ್ಡುಗಳ ಬಳಿ, ಯಾರು ಹೀಗೆ ಮಧುರವಾಗಿ ಹಾಡುತ್ತಿರುವವರು?

ಹೌದು. ಹೀಗೆ ಅಲ್ಲಿ ಗಾನ ಲಹರಿಯನ್ನು ಹರಿಸುತ್ತ ಇರುವವನು ಕನ್ನಡದ ಚಲಚಿತ್ರ ನಟ ಪ್ರೇಮಕುಮಾರ. ಅವನ ಎದುರಿಗೆ ತಮಿಳು ನಾಡಿನ ಸುಪ್ರಸಿದ್ಧ ತಾರೆ ಮೋಹಿನಿ ಇದ್ದಾಳೆ.

ಪ್ರೇಮಕುಮಾರ ನಟಿಸಿರುವ ಒಂದು ಚಿತ್ರ ಚಾಮರಾಜನಗರದ ಒಂದು ಸಿನಿಮಾ ಮಂದಿರದಲ್ಲಿ ನಡೆಯುತ್ತಿದೆ. ಅವನ ಚಿತ್ರವನ್ನು ಎಂದರೆ ವಾಲ್‌ಪೋಸ್ಟರನ್ನು ಈ ಗಡಿಯಲ್ಲಿ ಒಂದು ಮರದ ಬುಡಕ್ಕೆ ಅಂಟಿಸಿದ್ದಾರೆ. ಈ ಸಿನಿಮಾದವರು ಕಾಡು, ಬೆಟ್ಟ, ಗುಡ್ಡ ಎಲ್ಲಿಯೂ ಬಿಡುವುದಿಲ್ಲ ಎಂದು ಕಾಣುತ್ತದೆ. ಪ್ರಚಾರಕ್ಕಾಗಿ ಅವರು ಪಾತಾಳಕ್ಕೆ ಹೋಗಲೂ ಸಿದ್ಧ.

ಅಲ್ಲಿಯೂ ಅಷ್ಟೆ. ಸತ್ಯಮಂಗಲದಲ್ಲಿಯೂ ಕೊಯಮುತ್ತೂರಿನಲ್ಲಿಯೂ ನಡೆಯುತ್ತಿರುವ ತಮಿಳು ಚಿತ್ರದ

ಶಾಯಕಿ ಮೋಹಿನಿಯ ಚಿತ್ರವನ್ನು ಆ ಮರದ ಬುಡಕ್ಕೆ ಅಂಟಿಸಿದ್ದಾರೆ.

'ನಾವಿಬ್ಬರು' ನಮಗಿಬ್ಬರೇ ಮಕ್ಕಳು' ಬೋರ್ಡು ಗಳು ಹೇಗೆ ಎದುರು ಬದುರಾಗಿ ಕುಸ್ತಿಗೆ ನಿಲ್ಲುವಂತೆ ಇವೆಯೊ, ಹಾಗೆಯೆ ಈ ಸುಪ್ರಸಿದ್ಧ ನಟ–ನಟಿಯ ಚಿತ್ರಗಳೂ ಆ ಕಡೆ ಈ ಕಡೆ ಮರದ ಬುಡಗಳಲ್ಲಿ ಇವೆ.

ಆದರೆ ಒಂದೇ ವ್ಯತ್ಯಾಸ.

ಬೆಳಗೆದ್ದರೆ ಆ ಬೋರ್ಡುಗಳು ಒಂದೇ ಸಮನೆ ಜಗಳವಾಡಿಕೊಳ್ಳುವಂತೆ ಈ ತಾರಾಮಣಿಗಳು ಹಾಗೆ ಮಾಡುತ್ತಿಲ್ಲ. ಇವರಿಗೂ ಭಾಷೆಯ ನಾಡಿನ ಮೇಲಿನ ಅಭಿಮಾನ ಇದ್ದರೂ ಆ ರೀತಿ ಕದನ ಸಾಧ್ಯವಿಲ್ಲ. ಇದಕ್ಕೆ ಕಾರಣ ಇಷ್ಟೇ:



ಈ ಇಬ್ಬರು ಕಲಾವಿದರೂ ಒಂದೇ ಭಾಷೆಯಲ್ಲಿ ಅಲ್ಲದೆ ಹಲವಾರು ಭಾಷೆಗಳ ಚಿತ್ರಗಳಲ್ಲಿ ನಟಿಸಿದ್ದಾರೆ. ತಮಿಳಿನ ಪ್ರಸಿದ್ಧ ತಾರೆ ಮೋಹಿನಿ ಕನ್ನಡ ಚಿತ್ರಗಳಲ್ಲಿಯೂ ಅಭಿನಯಿಸಿದ್ದಾಳೆ. ಇವನೂ ಅಷ್ಟೇ. ನಮ್ಮ ಚೆಲುವ ಕನ್ನಡ ನಾಡಿನ ಪ್ರೇಮಕುಮಾರ ಬೇಕಾದಷ್ಟು ತಮಿಳು ಚಿತ್ರಗಳಲ್ಲಿ ಮೆರೆದಿದ್ದಾನೆ.

ಒಂದು ಚಿತ್ರದಲ್ಲಿ ಮೋಹಿನಿ ಪ್ರೇಮಕುಮಾರನಿಗೆ ಕನೆ ಆಗಿದ್ದಾಳೆ. ಮತ್ತೊಂದರಲ್ಲಿ ಸೂಳೆ. ಇನ್ನೊಂದರಲ್ಲಿ ತಂಗಿ; ಒಂದು ಚಿತ್ರದಲ್ಲಿ ಪ್ರೇಮ ಕುಮಾರ ಧಣಿಯಾಗಿ ಭಿಕ್ಷೆ ಬೇಡಲು ಬಂದ ಮೋಹಿನಿಯನ್ನು ಕಾಲಿನಿಂದ ಒದೆದಿದ್ದಾನೆ. ಮತ್ತೊಂದು ಚಿತ್ರದಲ್ಲಿ ಗಿರಣಿ ಮಾಲಿಕನ ಮಗಳಾದ ಮೋಹಿನಿ ಕಾರ್ಮಿಕನಾದ ಪ್ರೇಮ ಕುಮಾರನನ್ನು ಛಳಾರನೆ ಕೆನ್ನೆಗೆ ಬಾಚಿ ಬಿಟ್ಟಿದ್ದಾಳೆ.

ಬಟ್ಟೆಗಳನ್ನು ಕಳಚಿ ಇವರಿಬ್ಬರೂ ಒಂದು ಸಿನಿಮಾದಲ್ಲಿ ನೀರಿಗೆ ಧುಮುಕಿದ್ದಾರೆ.ಅಲ್ಲಿ ಈಜುತ್ತಾ ಈಜುತ್ತಾ ಒಂದು ಗಂಟೆ ಹಾಡು ಹೇಳಿದ್ದಾರೆ.ಆಗ ಬಾಯಲ್ಲಿ ನೀರು ತುಂಬಿಸಿಕೊಂಡ ಮೋಹಿನಿ ಪ್ರೇಮಕುಮಾರನ ಮುಖಕ್ಕೆ ಉಗುಳಿದ್ದಾಳೆ. ಇವನೂ ಅಷ್ಟೇ. ಅವಳ ಮುಖಕ್ಕೆ. ಎಂದ ಮೇಲೆ ಏನೆಲ್ಲ ಮಾಡಬೇಕಿಲ್ಲ. ರಸಿಕರನ್ನು ಮೆಚ್ಚಿಸಬೇಕಲ್ಲ. ಅದಲ್ಲದೆ ಪ್ರಣಯ–ಪ್ರೇಮ ಇತ್ಯಾದಿಗಳಲ್ಲಿ ಎಂಜಲು ಮೈಲಿಗೆ ಎಲ್ಲಿಂದ ಬರಬೇಕು?

ಇಂಥ ಕಲಾವಿದರನ್ನು ಈಗ ಗಡಿಯಲ್ಲಿ ತಂದು ನಿಲ್ಲಿಸಿಬಿಟ್ಟರೆ ಈ ಬೋರ್ಡುಗಳ ಹಾಗೆ ಅವರು ಜಗಳ ಆಡಿಕೊಳ್ಳಲು ಸಾಧ್ಯವೆ? ಕಾಡಿನ ನಡುವೆ ಇರುವ ಪ್ರೇಮಕುಮಾರನಿಗೆ ಈಗ ಏನು ಖುಷಿಯಾಯಿತೊ ಏನೊ? ಅವನು ಹುಮ್ಮಸ್ಸಿನಿಂದ 'ನಾನೇ ಪ್ರೇಮ ಕುಮಾರಾ...' ಎಂದು ಹಾಡಲು ಪ್ರಾರಂಭಿಸಿಬಿಟ್ಟ.

ಅವನು ಹಾಡಿದ ಷಂದರೆ ಮೋಹಿನಿ ಸುಮ್ಮನೆ ಇದ್ದಾಳೆ? ಅವಳೂ ಮಧುರವಾಗಿ ಬಾಯಿ ತೆರೆದಳು.:

"ನಾನೇ ರಾಜಕುಮಾರಿ

ತಮಿಳು ನಾಡಿನ ಮುದ್ದಿನ ಕುವರಿ

ನಾನೇ ರಾಜಕುಮಾರಿ......"

ಯಾವಾಗ ಇವರು ಖುಷಿಯಿಂದ ಹಾಡಲು ಪ್ರಾರಂಭಿಸಿದರೊ, ಆಗ ಜಗಳಕ್ಕೆ ಸಿದ್ಧವಾಗಲು ತಯಾರಿ ಆಗುತ್ತಿದ್ದ ಈ ಬೋರ್ಡುಗಳು ತಮ್ಮ ಮಾತನ್ನು ನಿಲ್ಲಿಸಿಕೊಳ್ಳಬೇಕಾಯಿತು. ನಿಲ್ಲಿಸಿ, ಅವು ಪಿಳಿಪಿಳೀ ಎಂದು ದೃಷ್ಟಿಯನ್ನು ಇತ್ತ ಹರಿಯಿಸಿದುವು.

ಯಾವಾಗಲೂ ಜಗಳ ಆಡುವ ಈ ಬೋರ್ಡುಗಳು ಈಗ ತಮ್ಮನ್ನು ಪಿಳಿ ಪಿಳೀ ನೋಡುತ್ತಲೆ, ಪ್ರೇಮ ಕುಮಾರನಿಗೆ ಇವುಗಳ ಬಗ್ಗೆ ಏನು ಹೊಳೆಯಿತೊ ಏನು ಕೀಟಲೆ ಮಾಡಬೇಕೆನ್ನಿಸಿತೊ ಏನೊ? ಅವನು ಡ್ಯುಯಲ್ ಹಾಡುವುದನ್ನು ನಿಲ್ಲಿಸಿ ಮಾತಿಗೆ ಪ್ರಾರಂಭಿಸಿ ಬಿಟ್ಟ.

"ಮೋಹಿನೀ, ಮೋಹಿನೀ,"
"ಏನ್ರೀ?"
"ನಾವಿಬ್ಬರು, ನಮಗಿಬ್ಬರೇ ಮಕ್ಕಳು."
"ನಾವಿಬ್ಬರು, ನಮಗಿಬ್ಬರೇ ಮಕ್ಕಳು."
"ಥೂ ನಿಮ್ಮ...ಪೋಲೀ...ಶತ ಪೋಲೀ...
ಶತ ಶತ ಪೋಲೀ......"

* * * *

ಇವೊತ್ತು ಎರಡೂ ಕಡೆಯ ಬಸ್ಸುಗಳು ಬಂದೇ ಇಲ್ಲ. ಈ ಬೆಟ್ಟ ಸೀಮೆಯಲ್ಲಿ ಓಡಾಡುವ ಬಸ್ಸುಗಳೇ ಹೀಗೆ. ಸಮಯಕ್ಕೆ ಸರಿಯಾಗಿ ಹೋಗಬೇಕು, ಬರಬೇಕು ಎನ್ನುವ ನಿಯಮ ಇಲ್ಲ. ಈ ಕಾಡಿನಲ್ಲಿ ಅವು ಬಂದ ಹಾಗೆ ಬಿಟ್ಟ ಹಾಗೆ.

ಈ ವಿಚಾರದಲ್ಲಿಯೂ ಈ ಬೋರ್ಡುಗಳು ತಮ್ಮ ತಮ್ಮೊಳಗೆ ಜಗಳ ಆಡಿಕೊಳ್ಳುತ್ತವೆ. ಕನ್ನಡದ ಬಸ್ಸು ಬರುವುದಕ್ಕೆ ಮೊದಲೆ ತಮಿಳು ಬಸ್ಸು ಬಂದು ಬಿಟ್ಟರೆ ಈ ರಾಜ್ಯದ ಸಾರಿಗೆ ವ್ಯವಸ್ಥೆಯೆ ಹೀಗೆ. ನಿಮ್ಮಲ್ಲಿ ಶಿಸ್ತಿಲ್ಲ. ನಿಯಮವಿಲ್ಲ ಎಂದು ತಮಿಳು ಬೋರ್ಡು ಚುಚ್ಚಿ ಹೇಳುತ್ತದೆ.

ತಮಿಳು ಬಸ್ಸು ಬಾರದೆ, ಕನ್ನಡದ ಬಸ್ಸೇ ಮೊದಲು ಬಂದು ಬಿಟ್ಟರೆ ಇನ್ನು ಈ ಬೋರ್ಡು ಸುಮ್ಮನೆ ಇರುತ್ತದೆಯೆ? 'ನೋಡಿದೆಯೇನೇ, ಲೇ, ತಮಿಳಿನವಳೇ, ಶಿಸ್ತು ಶಿಸ್ತು ಅಂತ ಬಡ್ಕೊಳ್ತೀಯಲ್ಲ. ನಿಮ್ಮ ಶಿಸ್ತು ಹೀಗೇನೇ...' ಎನ್ನುತ್ತದೆ.

ಈಗ ಎರಡು ರಾಜ್ಯಗಳ ಬಸ್ಸುಗಳೂ ಬಾರದೆ ಇರುವುದರಿಂದ ಇನ್ನು ಯಾವ ಮಾತಿನಿಂದ ಪ್ರಾರಂಭಿಸಿ ಜಗಳ ಆಡಬಹುದು ಎಂದು ಈ ಎರಡು ಬೋರ್ಡುಗಳೂ ಮುಸಿ ಮುಸಿ ಸಿದ್ಧತೆಗೆ ತೊಡಗಿದ್ದಾಗ ಬೋಂಯ್ ಬೋಂಯ್ ಹಾರನ್ನಿನ ಶಬ್ದವಾಯಿತು.

ಬಂದದ್ದು ತಮಿಳು ಬಸ್ಸೇ. ಇನ್ನು ಆ ತಮಿಳು ಬೋರ್ಡನ್ನು ಹಿಡಿಯುವವರು ಯಾರು? ಅದು ಮೈಯನ್ನೆಲ್ಲ ಕುಲುಕಿಸುತ್ತ ಕನ್ನಡದ ಬೋರ್ಡಿನ ಕಡೆಗೆ ತಿರಸ್ಕಾರ ನೋಟವನ್ನು ಬೀರತೊಡಗಿತು.

ಬಸ್ಸಿನಿಂದ ಪ್ರಯಾಣಿಕರು ಇಳಿದರು. ಇವೊತ್ತು ಜಾಸ್ತಿ ಪ್ರಯಾಣಿಕರು ಇಲ್ಲ. ಹದಿನೈದೊ ಹದಿನಾರೊ ಜನ ಇದ್ದಾರೆ, ಅಷ್ಟೆ. ಒಬ್ಬಳು ಮಧ್ಯ ವಯಸ್ಸಿನ ಹೆಂಗಸು. ಮತ್ತೊಬ್ಬಳು ತುಂಬು ಗರ್ಭಿಣಿ. ಇಡೀ ಪ್ರಯಾಣಿಕರಲ್ಲಿ ಹೆಂಗಸರು ಇವರಿಬ್ಬರೇ. ಸಣ್ಣವು ಪುಟ್ಟವು ನಾಲ್ಕು ಐದು ಮಕ್ಕಳು, ಹತ್ತು ಹನ್ನೊಂದು ವರ್ಷದ ಹುಡುಗ ಒಬ್ಬ, ಬಳೆಗಾರ, ಸಾಬಿ, ಶೆಟ್ಟಿ, ಮೇಷ್ಟ್ರು–ಇಷ್ಟು ಜನ. ಉಳಿದವರು ಅಂಥವರು-ಇಂಥವರು.

ಕನ್ನಡದ ಬಸ್ಸು ಬಂದಿಲ್ಲದೆ ಇರುವುದರಿಂದ ಪ್ರಯಾಣಿಕರು ಅಲ್ಲಲ್ಲಿ ಚೆದುರಿದರು. ಹಾಗೀಗ ಅಡ್ಡಾಡ ತೊಡಗಿದರು. ಕೆಲವರು ಬೀಡಿ ಹತ್ತಿಸಿಕೊಂಡರು. ಮೇಷ್ಟ್ರು ಒಬ್ಬರು ನಶ್ಯ ತೀಡಲಾರಂಭಿಸಿದರು. ಗರ್ಭಿಣಿ ಹೆಂಗಸು ಒಂದು ಮರದ ಬುಡದಲ್ಲಿ ಕುಳಿತಿದ್ದಳು. ಅವಳ ಸನಿಹದಲ್ಲಿ ಅವಳ ಗಂಡ. ಮತ್ತೊಂದು ಮರದ ಬುಡದಲ್ಲಿ ಮತ್ತೊಬ್ಬ ಹೆಂಗಸು. ಅವಳ ಗಂಡ.

ಹನ್ನೊಂದು ವರ್ಷದ ಆ ಬಾಲಕ ತಂದೆಯೊಂದಿಗೆ ಅಲ್ಲಿ ನಿಂತಿದ್ದ. ಮಕ್ಕಳು ಸುಮ್ಮನೆ ನಿಂತುಕೊಳ್ಳುತ್ತವೆಯೆ? ಅವು ಏನಾದರೂ ಚೇಷ್ಟೆ ಮಾಡುತ್ತ ಇರಬೇಕು. ಆ ಹುಡುಗ ಈಗ ಹಾಗೆ ಹೀಗೆ ಕಳಾಯಿಸಿದ. ಬಳಿಕ ಈ ಕನ್ನಡದ ಬೋರ್ಡಿನ ಬಳಿ ಬಂದ. ಅದನ್ನೇ ನೋಡುತ್ತ ನಿಂತುಕೊಂಡ. ಪಿಟಿ ಪಿಟಿ ಪಿಟೀ ಎಂದು ತುಟಿಗಳನು ಕುಣಿಸಿದ.

ಆ ಬಾಲಕ ಶಾಲೆಗೆ ಹೋಗುತ್ತಿದ್ದ ಎಂದು ಕಾಣುತ್ತದೆ. ಐದನೆಯದೊ ಆರನೆಯದೊ ತರಗತಿ ಇರಬೇಕು.ಅದಕ್ಕೇ ಅವನು ನಾ–ವಿ–ಬ–ರು ನಾವಿಬ್ಬರು ನ–ಮ–ಗಿ–ಬ್ಬ...ಎಂದು ಓದಲು ಪ್ರಾರಂಭಿಸಿ ಬಿಟ್ಟ.

ಕನ್ನಡ ಬೋರ್ಡಿಗೆ ಖುಷಿ. ಹುಡುಗನ ದೃಷ್ಟಿ ತನ್ನ ಮೇಲೆ ಬಿದ್ದಿತಲ್ಲ ಎಂದು , ಅದು ಅತ್ಯುತ್ಸಾಹದಿಂದ ಕೂಗಿಕೊಂಡಿತ್ತು

"ನಾವಿಬ್ಬರು. ನಮಗಿಬ್ಬರೇ ಮಕ್ಕಳು...ನಾವಿಬ್ಬರು. ನಮಗಿಬ್ಬರೇ ಮಕ್ಕಳು..." "

ತಮಿಳು ಬೋರ್ಡಿಗೆ ತುಂಬ ಸಿಟ್ಟು, ಅಳು. ಅಲ್ಲ, ಈ ಹುಡುಗ ತಾನು ಕೂಗಿಕೊಳ್ಳುತ್ತಿದ್ದರೂ ತನ್ನತ್ತ ಲಕ್ಷ್ಯವನ್ನೆ ಹರಿಸದೆ, ಈ ಕನ್ನಡದವಳನ್ನು ಈ ಮಾಯಗಾತಿಯನ್ನು ನೋಡುತ್ತ ನಿಂತು ಬಿಟ್ಟನಲ್ಲ. ಸೊಕ್ಕೆ? ಈ ಕನ್ನಡಕ್ಕಾತಿಯೂ ಮುಸಿ ಮುಸಿ ನಗುತ್ತ ಇದ್ದಾಳಲ್ಲ. ಕಳುದೇ ಕಳುದೇ..."

ಈಗ ಆ ಬಾಲಕ ಕನ್ನಡದವಳನ್ನು ಬಿಟ್ಟು ಅತ್ತ ತಿರುಗಿ ತಮಿಳಿನವಳ ಕಡೆಗೆ ಕಣ್ಣು ಹಾಯಿಸಿದ. ಅವಳನ್ನೇ ನೋಡುತ್ತ ನಿಂತು ಬಿಟ್ಟ.

ತಮಿಳು ಬೋರ್ಡಿಗೆ ಈಗ ಎಲ್ಲಿಲ್ಲದ ಖುಷಿ. ಅದು ಈಗ ಈ ಕನ್ನಡದವಳ ಕಡೆ ಮೋರೆ ತಿರುಗಿಸಿ ಆ ಕಾಡೇ ಪ್ರತಿಧ್ವನಿಸುವಂತೆ ಕೂಗಿಕೊಂಡಿತು.

"ನಾವಿಬ್ಬರು. ನಮಗಿಬ್ಬರೇ ಮಕ್ಕಳು. ನಾವಿಬ್ಬರು..."

ಆ ಬಾಲಕ ಕನ್ನಡ ನಾಡಿನವನಾದರೂ ಗಡಿಯಲ್ಲಿದ್ದರೂ ಅವನಿಗೆ ಇನ್ನೂ ತಮಿಳು ಭಾಷೆ ತಿಳಿಯುತ್ತಿಲ್ಲ. ತಮಿಳು ಅಕ್ಷರಗಳ ಪರಿಚಯ ಇಲ್ಲ. ಅದಕ್ಕೇ ಅವನು ತನಗೆ ತಿಳಿಯದ ಭಾಷೆಯಲ್ಲಿ ಈ ಬೋರ್ಡಿನಲ್ಲಿ ಏನೊ ಬರೆದಿರುವುದರಿಂದ ಕುತೂಹಲದಿಂದ ಅದನ್ನೇ ನೋಡುತ್ತ ಅಷ್ಟು ಹೊತ್ತು ನಿಂತಿದ್ದ.

ಬಳಿಕ ಅವನಿಗೆ ಏನು ಮನಸ್ಸಾಯಿತೊ ಏನೊ? ಹುಡುಗ ಬುದ್ಧಿ. ಒಂದು ಕಲ್ಲನ್ನೆತ್ತಿದವನೆ ತಮಿಳು ಬೋರ್ಡಿಗೆ ಎಸೆದ. ಡಾಣ್ ಎಂದು ಶಬ್ದವಾಯಿತು. ಹುಡುಗನಿಗೆ ತುಂಬಾ ಹಿತವಾಯಿತು ಎಂದು ಕಾಣುತ್ತದೆ. ಅವನು ಬಾಗಿ ಮತ್ತೊಂದು ಕಲ್ಲನ್ನು ಹೆಕ್ಕಿ ಕನ್ನಡದ ಬೋರ್ಡಿಗೆ ತೂರಿದ. ಅದೂ ಡಾಣ್.

ಎರಡೂ ಬೋರ್ಡುಗಳೂ ಅಯ್ಯೋ ಅಮ್ಮಾ... ಅಯ್ಯೋ ಅಮ್ಮಾ... ಎಂದು ಕೂಗಿಕೊಂಡವು.

ಆ ಹುಡುಗನ ಈ ಕೃತ್ಯದಿಂದ ಎಲ್ಲರೂ ಇತ್ತ ದೃಷ್ಟಿ ಹರಿಯಿಸಬೇಕಾಯಿತು. ಒಂದು ಬಗೆಯ ಮನರಂಜನೆಯೂ ಅಲ್ಲಿದ್ದವರಿಗೆ ದೊರೆತಂತಾಯಿತು. ಈ ಡಾಣ್ ಶಬ್ದದಿಂದ ಆ ಕಾಡೂ ಡಾಣ್ ಡಾಣ್ ಎಂದು ಪ್ರತಿಧ್ವನಿಸಿತು.

ಈಗ ಆ ಹುಡುಗನ ತಂದೆ ಆ ಕಡೆ ಯಾರೊಂದಿಗೊ ಮಾತಾಡುತ್ತ ನಿಂತಿದ್ದವನು ಗದರಿಸಿಕೊಳ್ಳುವ ಧಾಟಿಯಲ್ಲಿ ಇವನನ್ನು ಕೂಗಿ ಹೇಳಿದ:

"ಲೋ, ಯಾಕೊ ನಿನಗೆ ಸುಮ್ನೆ ಇರೋಕೆ ಆಗೊಲ್ವೇನೊ? ಯಾಕೊ ಅದಕ್ಕೆ ಕಲ್ಲು ಎಸೇತೀ? ಈ ಕಡೆ ಬಾರೊ?"

ಹುಡುಗ ತಂದೆಯ ಕೂಗಿಗೆ ಬೆದರಿ ಇತ್ತ ಬಂದು ಬಿಟ್ಟ.

ಏಟು ತಿಂದ ಆ ಎರಡೂ ಬೋರ್ಡುಗಳು ಮಾತ್ರ ತಮ್ಮ ತಮ್ಮ ಭಾಷೆಯಲ್ಲಿ ದೇವರೇ ದೇವರೇ ಎಂದು ಈಗ ಸಣ್ಣದಾಗಿ ನರಳತೊಡಗಿದವು.

* * * *

ಇಷ್ಟು ಹೊತ್ತು ಆ ಮರದ ಬುಡದಲ್ಲಿ ಕುಳಿತಿದ್ದ ಗರ್ಭಿಣಿ ಹೆಂಗಸು ಸಣ್ಣದಾಗಿ ನರಳಿದಳು. ಕುಳಿತಂತೆಯೆ ಹಾಗೆ ಹೀಗೆ ಮೈ ಕೈಯನ್ನು ತಿರುಚಿದಳು. ಆದರೆ ಎಷ್ಟು ಹೊತ್ತು ಹೀಗೆ ಮಾಡಲು ಸಾಧ್ಯ?

ಕನ್ನಡದ ಬಸ್ಸು ಇನ್ನೂ ಬಂದೇ ಇಲ್ಲ.

ಪತಿಯ ಕೂಡ ಆಕೆ ಈಗ "ನನಗೆ ಹೊಟ್ಟೆ ನೋವು ತ್ತ ಇದೆ" ಎಂದಳು. ಆತ ಬೆಚ್ಚಿದ. ಅವನಾದರೂ ಈಗ ಏನು ಮಾಡಲು ಸಾಧ್ಯವಿದೆ? ಹಾಳು ಬಸ್ಸು ಬರಲೇ ಇಲ್ಲ. ಅದು ಸಮಯಕ್ಕೆ ಸರಿಯಾಗಿ ಬಂಧಿದ್ದರೆ ತಾವು ತಲಪುವ ಸ್ಥಳವನ್ನು ಇದುವರೆಗಾಗಲೇ ಹೋಗಿ ಮುಟ್ಟಬಹುದಿತ್ತೋ ಏನೋ.

ಕ್ಷಣಕ್ಷಣಕ್ಕೆ ಅವಳಿಗೆ ನೋವು ಜಾಸ್ತಿಯಾಯಿತು. ಈ ವಿಷಯವನ್ನು ಅವಳೊಬ್ಬಳೇ ಬಚ್ಚಿಟ್ಟುಕೊಳ್ಳುವ ಹಾಗಿಲ್ಲ. ಸೃಷ್ಟಿಯ ರಹಸ್ಯವೇ ಇದರಲ್ಲಿ ಅಡಗಿರುವಂಥದು. ಹೇಗೆ ಬಚ್ಚಿಡಲು ಸಾಧ್ಯ?

ಅಲ್ಲಿದ್ದವರಲ್ಲಿ ಒಬ್ಬೊಬ್ಬರು ಒಂದೊಂದು ಬಗೆಯಾಗಿ ಮಾತಾಡಲಾರಂಭಿಸಿದರು. ವೃದ್ಧರು ಒಬ್ಬರು "ಬೇಗ ಅವಳನ್ನು ಬಸ್ಸಿಗೆ ಹತ್ತಿಸಿ ಬಿಡಿ" ಎಂದರು.

ಇನ್ನೊಂದು ಮರದ ಬುಡದಲ್ಲಿ ಕುಳಿತಿದ್ದ ಮಧ್ಯ ವಯಸ್ಸಿನ ಹೆಂಗಸು ಈಗ ಸಹಾಯಕ್ಕೆ ಬಂದಳು. ಗರ್ಭಿಣಿ ಹೆಂಗಸಿನ ಗಂಡ, ಈಕೆ ಇಬ್ಬರೂ ಸೇರಿ ರಟ್ಟೆ ಹಿಡಿದು ಬಸ್ಸಿಗೆ ಅವಳನ್ನು ಹತ್ತಿಸಿದರು. ಆ ಮಧ್ಯ ವಯಸ್ಸಿನ ಹೆಂಗಸು ಈ ಗಂಡ ಮಹಾನುಭಾವನ ಕಿವಿಯಲ್ಲಿ ಏನೊ ಮೆಲ್ಲಗೆ ಉಸುರಿದಳು.

ಆತ ಈ ಮರದ ಬುಡಕ್ಕೆ ಓಡಿ ಬಂದವನೇ ಕೈ ಚೀಲದಲ್ಲಿದ್ದ ಆ ಹೆಂಗಸಿನ ಸೀರೆ ಟವಲ್ಲು ಒಂದು ದುಪ

ಟ ಇಷ್ಟನ್ನೂ ತೆಗೆದುಕೊಂಡು ಆ ಹೆಂಗಸಿಗೆ ಕೊಟ್ಟು ಹಿಂದಿರುಗಿದ.

ಪ್ರಯಾಣಿಕರಲ್ಲಿ ಒಬ್ಬೊಬ್ಬರೂ ಒಂದೊಂದು ಬಗೆಯಾಗಿ ಈಗ ಅವನನ್ನು ತರಾಟೆಗೆ ತೆಗೆದುಕೊಂಡರು.

"ನಿನಗೆ ಸ್ವಲ್ಪವೂ ಬುದ್ಧಿಯಿಲ್ಲವೇನಯ್ಯಾ? ತುಂಬಿದ ಗರ್ಭಿಣೀನ ಬಸ್ಸಿನಲ್ಲಿ ಹ್ಯಾಗೆ ಕರೆದುಕೊಂಡು ಬಂದೆ?"

"ಎಂಥಾ ಜನವಪ್ಪಾ, ಎಂಥಾ ಜನ!"

"ಛೆ,ಛೆಛೆ"

"ತು ತ್ತುತ್ತು"

ಬಸ್ಸಿನಲ್ಲಿ ಒಮ್ಮೆಲೆ ಕೂಗಾಟ. ನರಳಾಟ ಜಾಸ್ತಿಯಾಯಿತು. ಇಲ್ಲಿ ಈ ಗಂಡ ಗಡಗಡನೆ ನಡುಗುತ್ತ ನಿಂತಿದ್ದ. ಒಮ್ಮೆಲೇ ಅಷ್ಟೂ ಜನರು ತನ್ನನ್ನು ಈಗ ಹೀಯಾಳಿಸುತ್ತಿದ್ದಾರೆ. ಆ ಅವಮಾನ ಒಂದು ಕಡೆ. ಕಾಡಿನಲ್ಲಿ ಹೆಂಡತಿಗೆ ಹೊಟ್ಟೆನೋವು ಪ್ರಾರಂಭವಾಗಿಬಿಟ್ಟಿದೆ. ಏನಾಗುತ್ತದೊ ಏನೊ ಎನ್ನುವ ಭಯ ಮತ್ತೊಂದು ಕಡೆ.

ಹೌದು. ಈಗ ಆ ಬಸ್ಸೇ ಅವರಿಗೆ ಹೆರಿಗೆ ಆಸ್ಪತ್ರೆಯಾಗಿ ಬಿಟ್ಟಿದೆ.

ಆ ಮಧ್ಯವಯಸ್ಸಿನ ಹೆಂಗಸಿಗೆ ಧೈರ್ಯ ಜಾಸ್ತಿ. ಈ ವಿಷಯದಲ್ಲಿ ಆವಳಿಗೆ ಅನುಭವವೂ ಇರುವ ಹಾಗಿದೆ. ಆವಳು ಗರ್ಭಿಣಿ ಹೆಂಗಸನ್ನು ಸಮಾಧಾನಪಡಿಸುತ್ತ ಚುರುಕಾಗಿ ಕೆಲಸವನ್ನು ಮುಂದುವರಿಸಿದಳು.

ಸ್ವಲ ಹೊತ್ತಿನೊಳಗಾಗಿಯೆ ಬಸ್ಸಿನೊಳಗಿಂದ "ಕ್ವಾ ಕುವಾ ಕ್ವಾ ಕುವಾ" ಎನ್ನುವ ಶಬ ಕೇಳಿ ಬಂತು. ಆ ಮಧ್ಯವಯಸ್ಸಿನ ಹೆಂಗಸು ಬಾಗಿಲಿಗೆ ಬಂದವಳೆ "ಏನೂ ಹೆ[illegible]ಬೇಕಾಗಿಲ್ಲ. ಹೆರಿಗೆ ಆಗ್ಹೋಯ್ತು. ಎರಡೂ ಗಂಡು ಕೂಸು" ಎಂದಳು; ಕೂಗಿ ಹೇಳಿದಳು.

ಅಲ್ಲಿದ್ದವರೆಲ್ಲ ಜಯ ಜಯಕಾರ ಮಾಡಿದರು. ಭಗವಂತನಿಗೆ ಜೈ. ಎಂದರು.

ಆಕೆ ಮತ್ತೆ ಕೂಗಿಕೊಂಡಳು:

"ಯಾರಾದ್ರೂ ಹೋಗಿ ಒಂದು ಬಕೆಟ್ ನೀರು ತನ್ನಿ"

ಕಂಡಕ್ಟರ್ ಧಾವಿಸಿದವನೇ ಬಸ್ಸಿನ ಬಾಗಿಲ ಬಳಿ ಹೋಗಿ ಸೀಟಿನ ಕೆಳಗಿದ್ದ ಬಕೆಟ್ಟನ್ನು ಎತ್ತಿಕೊಂಡು ಆ ಹಳ್ಳದ ಕಡೆ ಓಡಿ ಹೋದ.

ಇತ್ತ ಮುದುಕರೊಬ್ಬರು "ಕಾಫಿ ಇದೇಮ್ಮಾ ತಗೊ" ಎನ್ನುತ್ತ ಆ ಹೆಂಗಸಿನ ಕೈಗೆ ಫ್ಲಾಸ್ಕನ್ನು ನೀಡಿ ಹಿಂದಿರುಗಿದರು. ಹೌದು, ಊರಿಂದ ಬರುವಾಗ ಎರಡು ಲೋಟಾ ಕಾಫಿಯನ್ನು ಅವರು ಫ್ಲಾಸ್ಕಿಗೆ ಹಾಕಿ ಕೈ ಚೀಲದಲ್ಲಿ ಅದನ್ನು ತುರುಕಿ ತಂದಿದ್ದರು. ದಾರಿಯಲ್ಲಿ ಈ ಕಾಡಿನಲ್ಲಿ ತಮಗಾಗಿ ಅದನ್ನು ಅವರು ತಂದದ್ದು. ಈಗ ಅದು ಎಷ್ಟು ಪ್ರಯೋಜನಕ್ಕೆ ಬಂದಿದೆ! ಎಷ್ಟು ಬೆಲೆಯುಳ್ಳದ್ದಾಗಿದೆ!!

ಬೊಂಯ್ ಬೊಂಯ್. ಹಾರ್ನ್ ಶಬ್ದ. ಹೌದು, ಕನ್ನಡದ ಬಸ್ಸು ಕೊನೆಗೂ ಬಂದೇ ಬಿಟ್ಟಿತು. ಪ್ರಯಾಣಿಕರು ಆ ಬಸ್ಸಿನಿಂದ ದಿಮು ದಿಮು ಎಂದು ಕೆಳಗಿಳಿದರು.

ಸುದ್ದಿ ಮಿಂಚಾಯಿತು. ಈ ಬಸ್ಸಿನೊಳಗೆ ಒಬ್ಬಳು ಎರಡು ಮಕ್ಕಳ ತಾಯಿಯಾಗಿದ್ದಾಳೆ ಎಂದು. ಮುಂದೇನು ಮಾಡಬೇಕು ಎನ್ನುವ ಚರ್ಚೆ ಸ್ವಲ್ಪ ಸಮಯ ಅಷ್ಟೆ.

ಇದೇ ಬಸ್ಸನ್ನೇ ಕೊಂಡು ಹೋಗಿ ಅವಳನ್ನು ಬಿಟ್ಟು ಬರುವುದು ಎಂದು ತೀರ್ಮಾನವಾಯಿತು. ತಮಿಳು ಬಸ್ಸಿನಿಂದ ಇನ್ನು ಕನ್ನಡ ಬಸ್ಸಿಗೆ ಬದಲಾಯಿಸಿ ಮಾಡುತ್ತ ಇದ್ದರೆ ಅವಳಿಗೆ ಆಯಾಸವಾದೀತು. ಹೀಗೆಯೆ ಬಸ್ಸಿನೊಂದಿಗೆ ಹೊರಟು ಬಿಡುವುದು. ಈ ಬಸ್ಸು ಕನ್ನಡದ ನೆಲಕ್ಕೆ ಬಂದಿತು ಎಂದು ಪೋಲೀಸಿನವರು ಯಾಕೆ ಹಿಡಿಯುತ್ತಾರೆ. ಅವರಿಗೂ ವಿಷಯ ತಿಳಿಸಿದರಾಯಿತು. ಪೋಲೀಸಿನವರೇನು ಮನುಷ್ಯರೇ ಅಲ್ಲವೆ?

ಇಂಥ ಸಂದರ್ಭಗಳಲ್ಲಿ ಜನರಿಗೆ ಒಗ್ಗಟ್ಟು ಮೂಡುತ್ತದೆ. ಇಷ್ಟರವರೆಗೂ 'ಬಸ್ಸು ಬರಲಿಲ್ಲ' ಎಂದು ಗೊಣಗುತ್ತಿದ್ದವರು ಈಗ ಆ ವಿಷಯವನ್ನೇ ಮರೆತುಬಿಟ್ಟರು. 'ಏನೊ ಸದ್ಯ ದೇವರ ದಯೆ. ಕಾಡಿನಲ್ಲಿ ಎರಡು ಕೂಸು ಹುಟ್ಟಿತಲ್ಲ. ಯಾಕೆ ಹುಟ್ಟಬಾರದು? ಹಿಂದಿನ ಕಾಲದಲ್ಲಿ ಆಸ್ಪತ್ರೆ, ನರ್ಸು. ಎಲ್ಲ ಎಲ್ಲಿ ಇತ್ತು? ಕಾಡಿನಲ್ಲಿ ಋಷಿ ಪತ್ನಿಯರು ಮಕ್ಕಳನ್ನು ಹೆರುತ್ತಲೆ ಇರಲಿಲ್ಲವೆ? ಈ ಬಸ್ಸು ಹೋಗಿದ್ದು ಬರೋವರೆಗೆ ಮತ್ತಷ್ಟು ಸಮಯ ಕಾಯೋಣ' ಎಂದುಕೊಂಡರು.

ಸರಿ, ಈ ಗಂಡ ಮಹಾಶಯ ತಲೆ ತಗ್ಗಿಸಿ ಮೆಲ್ಲಗೆ ಬಸ್ಸನ್ನು ಹತ್ತಿ ಹಿಂದಿನ ಸೀಟಿನಲ್ಲಿ ಕುಳಿತುಕೊಂಡ. ಸಹಾಯಕ್ಕಾಗಿ ಆ ಹೆಂಗಸು ಇದ್ದೇ ಇದ್ದಳು. ಡ್ರೈವರ್ ತನ್ನ ಸೀಟಿನಲ್ಲಿ ಹೋಗಿ ಕುಳಿತು ಬಸ್ಸನ್ನು ಸ್ಟಾರ್ಟ್ ಮಾಡಿಬಿಟ್ಟ. ಕಂಡಕ್ಟರ್ ಬಾಗಿಲಿನಲ್ಲಿ ನಿಂತ.

ಬಸ್ಸು ಹೊರಟು ಬಿಟ್ಟಿತು.

ಮತ್ತೊಮ್ಮೆ ಜನ ಜೈಕಾರ ಮಾಡಿದರು.

ಬಸ್ಸಿನ ಮೇಲೆ ಹಾರಾಡುತ್ತಿದ್ದ ಹಿಂಡು ಹಿಂಡು ಹಕ್ಕಿಗಳಿಗೆ ಈಗ ಎಲ್ಲಿಲ್ಲದ ಖುಷಿ. ಎಲ್ಲ ಸುಸೂತ್ರವಾಗಿ ಮುಗಿಯಿತಲ್ಲ ಎಂದು ಅವು ಹಾಗೆ ಹೀಗೆ ಹಾರಾಡುತ್ತ, ತಾರಮ್ಯಯ್ಯ ಆಡುತ್ತ ಎರಡು ಭಾಗವಾಗಿ ಎರಡೂ ಬೋರ್ಡುಗಳ ಮೇಲೆ ಅಷ್ಟಷ್ಟು ಹೋಗಿ ಕುಳಿತುಕೊಂಡುವು.

ಕೀಟಲೆ ಹಕ್ಕಿಗಳು. ಸುಮ್ಮನೆ ಅವು ಇರಬಾರದೆ? ಒಮ್ಮೆಲೆ ಅವು ಈಗ ಕೂಗಿಕೊಂಡುವು:

"ಚಿಂವ ಚಿಂವೋ ಚಿಂವ ಚಿಂವ ಚಿಂವೋ ಚಿಂವ"

ನಾವಿಬ್ಬರು. ನಮಗಿಬ್ಬರೇ ಮಕ್ಕಳು. ನಾವಿಬ್ಬರು. ನಮಗಿಬ್ಬರೇ ಮಕ್ಕಳು...

ಮೊದಲೆ ಕೆಂಪು ಮುಖದ ಆ ಬೋರ್ಡುಗಳು ಈಗ ಮತ್ತಷ್ಟು ಕೆಂಪಾಗಿ ನಾಚಿಕೆಯಿಂದ ಮುದ್ದೆಯಾಗಿ ಹೋಗಿದ್ದುವು. ಈಗ ಅವುಗಳ ಪ್ರಚಾರವೆ ಇಲ್ಲ. ಅಲ್ಲ, ತಾವು ಘೋಷಿಸುತ್ತಿದ್ದ ಹಾಗೆ ಈ ಕಾಡಿನಲ್ಲಿ ಹಾಗೆ ನಡೆದಿದೆಯಲ್ಲ. ಎಲ್ಲರೂ ತಮ್ಮನ್ನು ನೋಡಿ ಮುಸಿ ಮುಸಿ ನಗುತ್ತ ಹಾಸ್ಯ ಮಾಡುತ್ತಿದ್ದಾರಲ್ಲ.

ಯಾವಾಗ ಈ ಹಕ್ಕಿಗಳು ಕೀಟಲೆ ಹಾಡಿನೊಂದಿಗೆ ದನಿ ತೆಗೆದುವೋ, ಆಗ ನಮ್ಮ ಚೆಲುವ ಕನ್ನಡ ನಾಡಿನ ಶತಚಿತ್ರ ನಟನಿಗೂ ಆ ಬೋರ್ಡುಗಳನ್ನು ನೋಡಿ ಕೀಟಲೆ ಮಾಡಬೇಕು ಎನ್ನಿಸಿತು, ಅವನೂ ಜೋರಾಗಿ ಕೂಗಿಕೊಂಡ.

"ಮೋಹಿನೀ, ಮೋಹಿನೀ......"

"ಏನ್ರೀ?"

"ನಾವಿಬ್ಬರು. ನಮಗಿಬ್ಬರೇ ಮಕ್ಕಳು."

"ಥೂ ನಿಮ್ಮ...ಪೋಲೀ...ಶತ ಪೋಲೀ... ನೀವು ಶತಶತ ಪೋಲೀ..."

●

---

ತಮಿಳು- ಕನ್ನಡ ಶಬ್ದಾರ್ಥ

ಅಡೀಡೀ—ಲೇ.ಲೇ:ಪ್ಪಾ.ರಾ ನಾಮ್ ಇರುವರ್ ನಾವತ್ ಪೆರುವದು ಇರುವರ್—ನಾವಿಬ್ಬರು, ನಾವು ಪಡೆಯುವುದು ಎರಡೇ ಮಕ್ಕಳನ್ನು.

ಪಾಡೀ. ಪೋಡೀ—ಬಾರೇ ಹೋಗೇ.

ಕಳುದೇ ಕಳುದೇ—ಕತ್ತೇ ಕತ್ತೇ,

▼

ಪ್ರಚಲಿತ ದಂತಕತೆ

ವನಮಾಲಾ ಆಚಾರ



# ಇಥಿಯೋಪಿಯಾಕ್ಕೆ ಬಂದಿತು....



ಇಥಿಯೋಪಿಯಾದ
ಚಕ್ರವರ್ತಿ ಹೈಲೆ ಸೆಲಾಸಿ

ಇಸ್ರೇಲದ ದೊರೆ ಸಾಲೋಮನ್ ಒಂದು ದೇವಾಲಯ ಕಟ್ಟಿಸುತ್ತಿದ್ದಾಗ ತನಗೆ ಬೇಕಾದ ಸಲಕರಣೆಗಳನ್ನು ಒದಗಿಸಿದರೆ, ಅದಕ್ಕೆ ಬದಲಾಗಿ ಚಿನ್ನ ಬೆಳ್ಳಿ ಕೊಡುವೆನೆಂದು ಚತುರ್ದಿಕ್ಕುಗಳ ವ್ಯಾಪಾರಿಗಳಿಗೆ ಬಿನ್ನಹ ಪತ್ರ ಕಳಿಸಿದ. ಆಗ ಇಥಿಯೋಪಿಯದ ರಾಣಿ ಮಾಕೆಡಾಳ ರಾಜ್ಯದಿಂದ ವ್ಯಾಪಾರಿ ಟ್ಯಾಮ್ರಿನ್ ಎಂಬಾತ ಅರಸನಿಗೆ ಚಿನ್ನ, ನೀಲಮಣಿ, ವಜ್ರ ವೈಡೂರ್ಯಗಳು, ಬೆಲೆ ಬಾಳುವ ಕಟ್ಟಿಗೆ, ಹಲಗೆಗಳನ್ನು, ಕಾಣಿಕೆಯಾಗಿ ಕೊಂಡೊಯ್ದು. ಅರಸನ ಬುದ್ಧಿಮತ್ತೆ, ಅವನ ಆಸ್ಥಾನದ ಸೌಂದರ್ಯ ವೈಭವಗಳನ್ನು ಕಂಡು ಆತ ದಿಙ್ಮೂಢನಾದ. ಮರಳಿ ಬಂದು ರಾಣಿಗೆ ತಾನು ಕಂಡುದೆಲ್ಲವನ್ನೂ ಬಣ್ಣಿಸಿದ. ರಾಣಿಗೂ, ದೊರೆಯನ್ನೂ, ಅವನ ಆಸ್ಥಾನವನ್ನೂ ತಾನೂ ನೋಡಬೇಕೆಂಬ ಲವಲವಿಕೆಯಾಯಿತು.

ರಾಣಿ ಮಾಕೆಡಾ ಸ್ವತಃ ತಾನೇ ಏಳು ನೂರಾ ತೊಂಭತ್ತೇಳು ಒಂಟೆಗಳ ಜೊತೆ ಲೆಕ್ಕವಿಲ್ಲದಷ್ಟು ಹೇಸರಗತ್ತೆ, ಕತ್ತೆಗಳ ಮೇಲೆ ಹೇರಳವಾಗಿ ಕಾಣಿಕೆಗಳನ್ನು ಹೊರಿಸಿಕೊಂಡು ಜರೂಸಲೇಮಿನ ದೊರೆಯ ಆಸ್ಥಾನಕ್ಕೆ ಬಂದಳು.

ದೊರೆ ಸಾಲೋಮನ್ ಅವಳನ್ನು ಅತ್ಯಾದರ ಗೌರವಗಳಿಂದ ಸ್ವಾಗತಿಸಿದ. ಅವಳ ಉಪಯೋಗಕ್ಕೆ ದಿನಕ್ಕೆ ಹನ್ನೊಂದು ಸಲ ಬದಲಿಸುವ ಹಾಗೆ ಬೆಲೆ ಬಾಳುವ ಉಡುಪು ಕೊಟ್ಟ; ವೈಭವದ ಔತಣ ಕೂಟಗಳನ್ನೇರ್ಪಡಿಸಿದ. ರಾಣಿ ಮಾಕೆಡಾ ದೊರೆ ಸಾಲೋಮನ್‌ನ ಅರಮನೆಯಲ್ಲಿ ಹಲವಾರು ತಿಂಗಳು ಅತಿಥಿಯಾಗಿ ಉಳಿದಳು. ಅರಸನ ಜೊತೆ ಧಾರ್ಮಿಕ ಚರ್ಚೆ ನಡೆಸಿದಳು. ಅವನ ಬುದ್ಧಿಮತ್ತೆ ಹಾಗೂ ಶಿಲ್ಪಿಗಳಿಗೆ ಅವನು ಕೊಡುವ ಕುಶಲ ಸೂಚನೆಗಳನ್ನು ಕಂಡು ಬೆರಗಾದಳು. ಕ್ರಮೇಣ ಸೂರ್ಯಚಂದ್ರರನ್ನು ಪೂಜಿಸುತ್ತಿದ್ದ ರಾಣಿ ಇಸ್ರೇಲದ ದೇವರನ್ನೇ ಪೂಜಿಸುವಷ್ಟು ಪರಿವರ್ತನೆ ಹೊಂದಿದಳು. ಹೀಗೆಯೇ ಆರು ಮಾಸಗಳು ಕಳೆದ ನಂತರ ರಾಣಿ ತನ್ನ ದೇಶಕ್ಕೆ ಮರಳುವ ಉತ್ಸುಕತೆ ತೋರಿದಳು.

"ಇಂಥ ಸುಂದರಿಯಾದ, ಕುಶಾಗ್ರಮತಿಯಾದ ರೂಪಸಿ ರಾಣಿಯಿಂದ ನನಗೆ ಮಗುವಾದರೆ...?" ಎಂದು ಅರಸು ಯೋಚಿಸಿದ. ಅರಸನಿಗೆ ಹೆಣ್ಣಿನ ಮೋಹಕ್ಕಿಂತ ಮಿಗಿಲಾಗಿ, ತನ್ನ ಸಂತತಿ ಬಲಶಾಲಿಯಾಗಿ, ಅವರು ನಿಸರ್ಗ ಶಕ್ತಿಯ ಆರಾಧಕ (Heathens) ರಾದ ರಾಜ್ಯಗಳಿಗೆ ವಾರಸುದಾರರಾಗಿ ತನ್ನ ಧರ್ಮವನ್ನು ಮುಂದುವರಿಸಬೇಕೆನ್ನುವ ಅಭಿಲಾಷೆಯಿತ್ತು.

ರಾಣಿಯ ಗೌರವಾರ್ಥ ಭೋಜನಕೂಟವನ್ನೇರ್ಪಡಿಸಿದ. ಬೇಕೆಂದೇ ಅಡಿಗೆಯಲ್ಲಿ ಮೆಣಸು, ವಿನಿಗರ್‌ಗಳನ್ನು ಹೇರಳವಾಗಿ ಉಪಯೋಗಿಸಲು ಬಾಣಸಿಗರಿಗೆ ಆಜ್ಞೆಯಿತ್ತ. ಭೋಜನ ಮುಗಿದಾಗ ತುಂಬಾ ಸಮಯವಾದುದರಿಂದ ತನ್ನ ಅರಮನೆಯಲ್ಲೇ ಪವಡಿಸಲು ರಾಣಿಗೆ ಕೇಳಿಕೊಂಡ. ಮೊದಮೊದಲು ರಾಣಿ ಹಿಂಜರಿದಳು. ಕೊನೆಗೆ ತಾನಿನ್ನೂ ಕನ್ಯೆಯಾಗಿಯೇ ಇರುವದರಿಂದ ಅರಸು ತನ್ನ ಒಪ್ಪಿಗೆಯಿಲ್ಲದೆ ಬಲಾತ್ಕರಿಸ

---

ಇಥಿಯೋಪಿಯಾದ ಚಕ್ರವರ್ತಿ ೧ ನೆಯ ಹೈಲೆ ಸೆಲಾಸಿ (Haile Selassie I) ಅವರು ತಮ್ಮ ೮೦ ನೆಯ ಹುಟ್ಟು ಹಬ್ಬವನ್ನು ಈ ವರ್ಷ ಜುಲೈ ೨೩ ರಂದು( ಇಥಿಯೋಪಿಯಾದ ತಿಂಗಳು ಹ್ಯಾಮ್ಲೆ ೧೬ ಕ್ಕೆ ) ವಿಜೃಂಭಣೆಯಿಂದ ಆಚರಿಸಿದರು. ಅಂದಿನ ವಿದ್ಯುದಲಂಕಾರ ಮೈಸೂರಿನ ದಸರಾ ಹಬ್ಬದ ನೆನಪನ್ನು ತರುತ್ತಿದ್ದಿತು. ೪೧ ವರ್ಷಗಳ ಹಿಂದೆ ಪಟ್ಟಕ್ಕೆ ಬಂದ ಈ ಚಕ್ರವರ್ತಿ ದೇಶವನ್ನು ಪ್ರಗತಿಪಥದಲ್ಲಿ ಮುನ್ನಡೆಸುತ್ತಿದ್ದಾರೆ. ಅವರು ಭಾರತದ ಸ್ನೇಹಿತ.

ಇಥಿಯೋಪಿಯಾಕ್ಕೆ ಮೊದಲು ಅಬಿಸೀನಿಯಾ ಎಂದು ಕರೆಯುತ್ತಿದ್ದರು. ಈ ಹಳೆಯ ಹೆಸರು ಹೊಸ ಪೀಳಿಗೆಯ ಯುವಜನಾಂಗಕ್ಕೆ ಹಿಡಿಸಲಿಲ್ಲ. ಮೇಧಾವಿ ದೊರೆ ಸಾಲೋಮನ್‌ನ ವಂಶದವರೆಂದು ಈ ಜನ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಅದಕ್ಕೊಂದು ದಂತಕಥೆಯೂ ಇಥಿಯೋಪಿಯಾದಲ್ಲಿ ಪ್ರಚಲಿತವಿದೆ.

---

ಬಾರದು ಎಂದು ಕರಾರು ಹಾಕಿದಳು. ಇದಕ್ಕೆ ಅರಸು ಒಪ್ಪಿಕೊಂಡ. ಆದರೆ, ಆತನದೂ ಒಂದು ಕರಾರು; ತನ್ನ ಅನುಮತಿಯಿಲ್ಲದೆ ರಾಣಿ ಅರಮನೆಗೆ ಸಂಬಂಧಿಸಿದ ಯಾವ ವಸ್ತುವಿಗೂ ಕೈಹಾಕಬಾರದು ಎಂದು. "ಓಹೋ, ನಾನೇನು ಕಳ್ಳಿಯೇ?" ಎಂದು ಮೂದಲಿಸಿ, ಅಂದು ರಾತ್ರಿ ರಾಣಿ ಅಲ್ಲಿಯೇ ವಿಶ್ರಮಿಸಿದಳು.

ಅರಸನ ಅಂತಃಪುರದಲ್ಲಿ ಎರಡು ಸುಪ್ಪತ್ತಿಗೆಗಳು ಎದುರು ಬದುರಾಗಿ ಹಾಸಲ್ಪಟ್ಟವು. ರಾಣಿಗೆ ನಿದ್ರೆ ಬರಲೇ ಇಲ್ಲ. ಮೆಣಸಿನ ಅತಿ ಸೇವನೆಯಿಂದ ಸಹಿಸಲಾರದಷ್ಟು ನೀರಡಿಕೆಯಾಯಿತು. ಅರಸು ಗಾಢ ನಿದ್ರೆಯಲ್ಲಿದ್ದಂತೆ ನಟಿಸಿದ. ದೊರೆಯ ಸೂಚನೆಯಂತೆ ನೀರು ತುಂಬಿದ ಒಂದು ಹೂಜಿಯನ್ನು ಅಲ್ಲಿಡಲಾಗಿತ್ತು. ನೀರನ್ನು ನೋಡಿ ರಾಣಿಗೆ ತಡೆಯಲಾಗಲಿಲ್ಲ. ಹೇಗೂ ಅರಸು ನಿದ್ರೆಯಲ್ಲಿದ್ದಾನೆ ಎಂದುಕೊಂಡು ನೀರಿನ ಪಾತ್ರೆಗೆ ಕೈ ಹಾಕಿದಳು. ಅರಸನು ತಟ್ಟನೆ ಎದ್ದು ಬಂದು ಅವಳ ಕೈ ಹಿಡಿದ. "ಅರಸಿ, ಏನು ಭಾಷೆ ಕೊಟ್ಟಿದ್ದಿರಿ?" ಎಂದ ಮುಗುಳ್ನಗುತ್ತ. "ನೀರಿಗೂ, ವಚನಕ್ಕೂ ಏನು ಸಂಬಂಧ?" ಎಂದಳು ರಾಣಿ. ಅರಸು ಕೇಳಲಿಲ್ಲ. "ಈ ಗಳಿಗೆಯಲ್ಲಿ ನೀರಿಗೆ ಸಮಾನವಾದದ್ದು ಏನಾದರೂ ಇದೆಯೇ ಈ ಧರೆಯಲ್ಲಿ? ಇದು ವಚನಭಂಗವಲ್ಲವೆ?" ಎಂದ. ರಾಣಿ ತಾನು ಕೊಟ್ಟ ವಚನದ ಸುಳಿಯಲ್ಲಿ ತಾನೇ ಸಿಕ್ಕು ಬಿದ್ದಿದ್ದಳು. ಅಂದೇ ದೊರೆ ಸಾಲೋಮನ್, ರಾಣಿ ಮಾಕೆಡಾರ ಸಮಾಗಮವುವಾಯಿತು.

ಅಂದು ರಾತ್ರಿ ದೊರೆ ಒಂದು ಸ್ವಪ್ನ ಕಂಡ. ತೇಜಸ್ವಿಯಾದ ರವಿ ಇಸ್ರೇಲಿಗೆ ಇಳಿದು ಬಂದು ರಾಜ್ಯವನ್ನು ಬೆಳಗಿದ. ನಂತರ ಆತನ ತೇಜಸ್ಸು ಇಥಿಯೋಪಿಯಕ್ಕೆ ಸಾಗಿ ಆ ರಾಜ್ಯವನ್ನೂ ಬೆಳಗಿತು. ಮತ್ತೊಮ್ಮೆ ಅದೇ ತೇಜಸ್ಸು ಇಸ್ರೇಲಿಗೆ ಬಂದಾಗ ಜ್ಯೂ ಜನರು ಅದನ್ನು ದ್ವೇಷಿಸಿ ಅಟ್ಟಿದರು. ತೇಜಸ್ಸು ಅಲ್ಲಿಂದ ಸಾಗಿ ಇಥಿಯೋಪಿಯ ಹಾಗೂ ರೋಮ್ ದೇಶಗಳಿಗೆ ಸಾಗಿತು. ದೊರೆ ಸಾಲೋಮನ್ ಅದೊಂದು ಅರ್ಥಪೂರ್ಣವಾದ ಸಾಂಕೇತಿಕ ಸ್ವಪ್ನ ಎಂದುಕೊಂಡ.

ಮರುದಿನ ರಾಣಿ ತನ್ನ ದೇಶಕ್ಕೆ ಹೊರಟು ನಿಂತಾಗ ದೊರೆ ಅವಳಿಗೆ ತನ್ನ ಉಂಗುರು ಕೊಟ್ಟು, "ನಿನಗೆ ಪುತ್ರ ಸಂತಾನವಾದರೆ ಈ ಉಂಗುರವನ್ನು ಅವನಿಗೆ ತೊಡಿಸಿ ನನ್ನ ಬಳಿ ಕಳಿಸು" ಎಂದು ಹೇಳಿದ.

ಕಾಲಾಂತರದಲ್ಲಿ ರಾಣಿಗೆ ಗಂಡು ಮಗುವಾಯಿತು. ಆತನಿಗೆ ಮೆನೆಲಿಕ್ ಎಂದು ಹೆಸರಿಟ್ಟರು. ಮಗು ಬೆಳೆದು ದೊಡ್ಡವನಾದಾಗ ತನ್ನ ತಂದೆಯ ಬಳಿ ಹೋಗಲು ಇಚ್ಛಿಸಿದ. ರಾಣಿ ಅವನಿಗೆ ದೊರೆ ಕೊಟ್ಟ ಉಂಗುರ ತೊಡಿಸಿ ಸಾಕಷ್ಟು ಕಾಣಿಕೆಗಳೊಂದಿಗೆ ವ್ಯಾಪಾರಿ ಟ್ಯಾಮ್ರಿನ್ ಜೊತೆ ಮೆನೆಲಿಕ್‌ನನ್ನು ದೊರೆಯ ಬಳಿ ಕಳಿಸಿದಳು. "ಮೆನೆಲಿಕ್‌ನಿಗೆ ಪವಿತ್ರ ಸ್ನಾನ ಮಾಡಿಸಿ ಆತ ದೊರೆ ಎಂದೂ, ಮುಂದೆ ಆತನ ವಂಶದ ಗಂಡು ಮಕ್ಕಳೇ ಇಥಿಯೋಪಿಯ ರಾಜ್ಯವನ್ನಾಳಬೇಕೆಂದೂ ಸಾರಬೇಕು" ಎಂದು ಸಂದೇಶ ಕಳಿಸಿದಳು. ಅಲ್ಲಿಯ ವರೆಗೆ ರಾಣಿಯರೇ ರಾಜ್ಯವಾಳುತ್ತಿದ್ದರು.

ವ್ಯಾಪಾರಿಯನ್ನೊಡಗೂಡಿ ಮೆನೆಲಿಕ್ ಇಸ್ರೇಲಿಗೆ ಬಂದ. ಗಾಝಾ ಎಂಬಲ್ಲಿಗೆ ಬಂದಾಗ ಜನರೆಲ್ಲ ಅವನೇ ಸಾಲೋಮನ್ ದೊರೆಯೆಂದು ಭ್ರಮಿಸಿ ನಮಸ್ಕರಿಸಿದರು. ಇನ್ನು ಕೆಲವರು, "ಇದು ಹೇಗೆ? ನಮ್ಮ ದೊರೆ ಜೆರೂಸಲೇಮಿನಲ್ಲಿ ದೇವಸ್ಥಾನದ ಕಾರ್ಯದಲ್ಲಿ ನಿರತನಾಗಿಲ್ಲವೆ?" ಎಂದು ಶಂಕಿಸಿದರು. ಏನೂ ತೋಚದೆ "ನಿಮ್ಮನ್ನೇ ಹೋಲುವ ತೇಜಸ್ವಿ ಪುರುಷನೊಬ್ಬ ಇಲ್ಲಿ ಬಂದಿದ್ದಾನೆ" ಎಂಬ ಸಂದೇಶದೊಂದಿಗೆ ಜೆರೂಸಲೇಮಿಗೆ ದೂತರನ್ನಟ್ಟಿದರು.

"ಆತ ಎಲ್ಲಿಯವ ಎಂದು ಕೇಳಿದಿರಾ?" ಎಂದು ಕೇಳಿದ ದೊರೆ.

"ಆತನ ಪ್ರಭಾವಶಾಲಿ ವ್ಯಕ್ತಿತ್ವ ನೋಡಿ ನಮಗೆ ಕೇಳಲು ಧೈರ್ಯ ಬರಲಿಲ್ಲ. ಆತ ಇಥಿಯೋಪಿಯದವನು ಎಂದು ಅವನ ಅನುಯಾಯಿಗಳು ಹೇಳಿದರು" ಎಂದು ದೂತರು ನುಡಿದರು.

ಅರಸು ಅತ್ಯಂತ ಆನಂದಿತನಾದ. ದೇವರು ಆತನ ಮೊರೆ ಕೇಳಿದ್ದ. ಈಗ ಆತನಿಗಿದ್ದದ್ದು ಒಂದೇ ಒಂದು ಗಂಡು ಸಂತತಿ. ಅದೂ ಏಳು ವರುಷದ ಹಸುಳೆ ರೆಹೊಬೊಆಮ್. ತನ್ನ ಆಸ್ಥಾನಕ್ಕೆ ಬರಲು ಮೆನೆಲಿಕ್‌ಗೆ ಹೇಳಿ ಕಳುಹಿದ. ಮೆನೆಲಿಕ್ ಬಂದು ತನ್ನ ಗುರುತಿಗೆಂದು ತಾಯಿ ಕೊಟ್ಟ ಉಂಗುರ ತೋರಿಸಿದಾಗ "ಅದರ ಅವಶ್ಯಕತೆ ಇದೆಯೇ ಮಗೂ? ನಿನ್ನನ್ನು ನೋಡಿದಾಗಲೇ ನೀನು ನನ್ನ ಮಗ ಎಂದು ಖಚಿತವಾಗಿದೆ" ಎಂದು ದೊರೆ ಹರ್ಷದಿಂದ ನುಡಿದ.

ವ್ಯಾಪಾರಿ ಟ್ಯಾಮ್ರಿನ್ ರಾಣಿಯ ಸಂದೇಶವನ್ನು ದೊರೆಗೆ ತಿಳಿಸಿದ. ಇಸ್ರೇಲದ ದೊರೆಯಾಗಿಯೇ ರಾಜ್ಯಭಾರ ಮಾಡಲು ಅರಸು ಮಗನಿಗೆ ತಿಳಿಸಿದ. ಮೆನೆಲಿಕ್ ಒಪ್ಪಲಿಲ್ಲ. ಕೊನೆಗೆ ಅರಸು ರಾಣಿಯ ಕೋರಿಕೆಯ ಪ್ರಕಾರ ಮೆನೆಲಿಕ್‌ಗೆ ಪವಿತ್ರ ಎಣ್ಣೆಯನ್ನು ಲೇಪಿಸಿ, ಧಾರ್ಮಿಕ ವಿಧಿ ಪೂರೈಸಿ, ಮೆನೆಲಿಕ್ ಇಥಿಯೋಪಿಯದ ದೊರೆ; ಇನ್ನು ಮುಂದೆ ಅವನ ಗಂಡು ಸಂತತಿಯೇ ರಾಜ್ಯಭಾರ ಮಾಡಬೇಕೆಂದು ಸಾರಿದ. ಅವನಿಗೆ ಡೇವಿಡ್ ಎಂಬ ಹೆಸರನ್ನೂ ಕೊಟ್ಟ. ಧರ್ಮಗುರು



ಸಾಲೋಮನ್ ದೊರೆ ಮತ್ತು ರಾಣಿ ಮಾಕೆಡಾ

ಝೂಡೋಕ್ "ನನ್ನ ಹಾರೈಕೆ ಹೇಳಿ ಎಲ್ಲಿಯವರೆಗೆ ನೀನು ಇಸ್ರೇಲದ ಆದೇಶದ ಪ್ರಕಾರ ನಡೆಯುತ್ತೀಯೋ, ಅಲ್ಲಿಯವರೆಗೆ ನನ್ನ ಹಾರೈಕೆ ನಿನ್ನನ್ನು ಕಾಪಾಡುವದು" ಎಂದು ಹೇಳಿ ಆಶೀರ್ವದಿಸಿದ. ಮೆನೆಲಿಕ್ ತಾಯಿಯ ಹೇಳಿಕೆಯ ಪ್ರಕಾರ ಇಸ್ರೇಲದ ದೇವಸ್ಥಾನದ ಪವಿತ್ರ ಕಹಳೆಯ ( Arc of covenant ) ಒಂದಂಶವನ್ನು ತನ್ನ ರಾಜ್ಯಕ್ಕೆ ಕೊಂಡೊಯ್ಯಲು ಅನುಮತಿ ನೀಡಬೇಕೆಂದು ವಿನಂತಿಸಿದ. ಅರಸು ಒಪ್ಪಿದ.

"ನನ್ನ ಮೊದಲ ಮಗ ತನ್ನ ರಾಜ್ಯಕ್ಕೆ ದೊರೆಯಾಗಿ ಹೋಗುತ್ತಿದ್ದಾನೆ. ನೀವೂ ನಿಮ್ಮ ನಿಮ್ಮ ಹಿರಿಯ ಗಂಡು ಮಕ್ಕಳನ್ನು ಅವನ ಜೊತೆ ಮಂತ್ರಾಲೋಚಕರನ್ನಾಗಿ, ಬೆಂಬಲಿಗರನ್ನಾಗಿ ಕಳಿಸಿಕೊಡಿರಿ" ಎಂದು ರಾಜ್ಯದ ಹಿರಿಯ ಅಧಿಕಾರಿಗಳಿಗೆ ಸಾಲೋಮನ್ ದೊರೆ ಆಜ್ಞಾಪಿಸಿದ. ಅವರೆಲ್ಲರೂ ಒಪ್ಪಿದರು.

ಆದರೆ ತಮ್ಮ ತಾಯ್ನಾಡನ್ನು ಬಿಟ್ಟು ಹೊರಟಾಗ ಆ ತರುಣರೆಲ್ಲರಿಗೆ ತುಂಬ ಖೇದವಾಯಿತು. ಮನಸ್ಸಿನಲ್ಲಿಯೇ ಅರಸನನ್ನು ನಿಂದಿಸಿರಬೇಕು. ಎಲ್ಲಕ್ಕೂ ಮಿಗಿಲಾಗಿ ತಮ್ಮ ರಕ್ಷಣಾದೇವಿ ಪವಿತ್ರ ಕಹಳೆ ( Arc of covenant ) ಯಿಂದ ದೂರ ಹೋಗಬೇಕಲ್ಲ ಎಂದು ಹಳಹಳಿಸಿದರು. ಆ ತರುಣರಲ್ಲಿ ಧರ್ಮಗುರು ಝೂಡೋಕ್‌ನ ಮಗ ಅಝೂರಿಯಾನೂ ಇದ್ದ. ಆತ ತನ್ನ ಸಂಗಡಿಗರಿಗೆ ತನ್ನ ಹಂಚಿಕೆ ಹೇಳಿ ಎಲ್ಲರಿಂದಲೂ ಹತ್ತು ಹತ್ತು ಬೆಳ್ಳಿಯ ನಾಣ್ಯಗಳನ್ನು ಕಲೆ ಹಾಕಿದ. ಒಬ್ಬ ಬಡಿಗನಲ್ಲಿಗೆ ಹೋಗಿ "ನಮಗೇನಾದರೂ ಮುಳುಗುವ ಪ್ರಸಂಗ ಬಂದರೆ ಪಾರಾಗಲು ಒಂದು ನಾವೆ ಮಾಡಿಕೊಡು" ಎಂದು ಪವಿತ್ರ ಕಹಳೆಯ ಆಳತೆ, ರೂಪರೇಷೆ ಕೊಟ್ಟು, ಅಂತಹದೇ ಒಂದನ್ನು ತಯಾರಿಸಿಕೊಂಡ. ಅಂದು ರಾತ್ರಿ ದೇವಾಲಯಕ್ಕೆ ಬಂದಾಗ ದೇವದೂತನೊಬ್ಬ ಗರ್ಭಗುಡಿಯ ಬಾಗಿಲು ತೆರೆದನಂತೆ! ಅಝೂರಿಯಾ ತಾನು ಮಾಡಿಸಿದ ನಾವೆಯನ್ನು ಅಲ್ಲಿಟ್ಟು ಮೊದಲಿನ ಪವಿತ್ರ ರಕ್ಷಣಾದೇವಿಯನ್ನು ಅಪಹರಿಸಿದ, ಮೊದಲಿನ ಹಾಗೆಯೇ ಮೂರು ಹೊದಿಕೆಗಳನ್ನು ಹೊದಿಸಿ ಯಾರಿಗೂ ಸಂಶಯ ಬಾರದಂತೆ ಮಾಡಿದ್ದ.

ಮರುದಿನ ತಾನು ಕೊಟ್ಟ ವಚನದ ಪ್ರಕಾರ ರಕ್ಷಣಾದೇವಿಯ ಮೂರರಲ್ಲೊಂದು ಹೊದಿಕೆಯನ್ನು ತಂದು ಕೊಡಲು ಅರಸು ಧರ್ಮಗುರುವಿಗೆ ಹೇಳಿದ. ಅದನ್ನು ಮೆನೆಲಿಕ್‌ಗೆ ಕಾಣಿಕೆಯಾಗಿ ಕೊಟ್ಟ. ಮೆನೆಲಿಕ್ ಹರ್ಷಿತನಾದ. ದೊಡ್ಡ ದೊಡ್ಡ ಗಾಡಿಗಳಲ್ಲಿ ಮೆನೆಲಿಕ್ ಹಾಗೂ ಅವನ ಸಂಗಡಿಗರು ಹೊರಟರು. ಹದಿಮೂರು ದಿನಗಳ ಮಾರ್ಗವನ್ನು ಒಂದೇ ದಿನದಲ್ಲಿ ವಾಯುವೇಗದಿಂದ ಕ್ರಮಿಸಿದರು. ಇಜಿಪ್ತಕ್ಕೆ ಬಂದ ನಂತರ ಸಂಗಡಿಗರು ತಾವು ಹಂಚಿಕೆ ಮಾಡಿ ಪವಿತ್ರ ಕಹಳೆ ತಂದುದನ್ನು ಹೇಳಿದಾಗ ಚಿಕ್ಕ ಮಗುವಿನಂತೆ ಮೆನೆಲಿಕ್ ಕುಣಿದಾಡಿದ. ಪ್ರಯಾಣ ಮುಂದುವರಿಸಿ ಇಥಿಯೋಪಿಯಾ ತಲ್ಪಿದರು. ಮೆನೆಲಿಕ್ ಕೆಲ ಕಾಲದ ವರೆಗೆ ರಾಜ್ಯಭಾರ ಮಾಡಿದ.

ಇತ್ತ, ಮಗ ಹೊರಟು ಹೋದ ನಂತರ ಸಾಲೋಮನ್ ದೊರೆ ಬಹಳ ಉದಾಸೀನನಾದ. ಅಂದು ರಾತ್ರಿ ತಾನು ಕಂಡ ಸ್ವಪ್ನವನ್ನು ಧರ್ಮಗುರು ಝೂಡೋಕ್‌ಗೆ ಹೇಳಿದ. ಒಡನೆ ಧರ್ಮಗುರು ಕಳವಳದಿಂದ ನುಡಿದ, "ಅಯ್ಯೋ ದೊರೆಯೇ, ಮೊದಲೇ ನನಗೇಕೆ ಹೇಳಲಿಲ್ಲ? ನಮ್ಮ ಪವಿತ್ರ ರಕ್ಷಣಾದೇವಿ ಹೊರಟು ಹೋಗಿರಬೇಕು."

ಗಡಬಡಿಸಿ ಗರ್ಭಗುಡಿಗೆ ಬಂದು ಹೊದಿಕೆ ಸರಿಸಿ ನೋಡಿದರೆ ಅಲ್ಲಿ ಬರೀ ಒಂದು ನಾವೆ ಇದ್ದುದನ್ನು ನೋಡಿ ಧರ್ಮಗುರು ಎಚ್ಚರ ತಪ್ಪಿ ಬಿದ್ದು ಬಿಟ್ಟ. ಮತ್ತೊಬ್ಬ ಬಂದು ನಡೆದ ಸಂಗತಿಯನ್ನು ದೊರೆಗೆ ತಿಳಿಸಿದ. ದೊರೆ ಇಜಿಪ್ತಕ್ಕೆ ಹೋಗಿ ಅಲ್ಲಿ ಜನರನ್ನು ಕೇಳಿದಾಗ, ಇಥಿಯೋಪಿಯದವರು ಎಷ್ಟೋ ದಿನಗಳ ಹಿಂದೆಯೇ ಇಜಿಪ್ತ ಬಿಟ್ಟು ಹೊರಟು ಹೋದುದಾಗಿ ಹೇಳಿದರು. ದೊರೆ ಜೆರೂಸಲೇಮಿಗೆ ಮರಳಿದ. "ಚಿಂತಿಸಬೇಡ ದೊರೆಯೇ, ರಕ್ಷಣಾದೇವಿ ಅಪರಿಚಿತನ ಸ್ವತ್ತಾಗಿಲ್ಲ. ನಿನ್ನ ಸ್ವಂತ ಮಗನ ಹತ್ತಿರ ಸುರಕ್ಷಿತವಾಗಿದ್ದಾಳೆ" ಎಂದು ಕಾರಣಿಕ ವಾಕ್ಯ ನುಡಿದಾಗ ಸಾಲೋಮನ್ ದೊರೆ ಸಮಾಧಾನಗೊಂಡ.

ರೋಮ್ ದೇಶದ ದೊರೆ ಬಾಲ್ತಾಝಾರ (Balthazar)ನಿಗೆ ಗಂಡು ಮಕ್ಕಳಿರಲಿಲ್ಲ. ಬರೀ ಮೂವರು ಹೆಣ್ಣು ಮಕ್ಕಳಿದ್ದರು. ಆತ "ನಿನ್ನ ಗಂಡು ಮಕ್ಕಳಲ್ಲಿ ಒಬ್ಬನನ್ನು ನನ್ನ ಅಳಿಯನನ್ನಾಗಿ ಮಾಡಿಕೊಳ್ಳುವೆ. ಅವನೇ ನನ್ನ ನಂತರ ರೋಮದ ಅಧಿಪತಿಯಾಗಲಿ" ಎಂದು ಸಾಲೋಮನ್ ದೊರೆಗೆ ಬಿನ್ನವಿಸಿಕೊಂಡ. ಅರಸು ತನ್ನ ಕೊನೆಯ ಮಗ ಅಡ್ರಾಮಿಸ್‌ನನ್ನೂ ಅವನ ಜೊತೆ ಆಸ್ಥಾನದ ಸಚಿವರ ಕೊನೆಯ ಮಕ್ಕಳನ್ನೂ ರೋಮ್‌ಗೆ ಕಳಿಸಿದ.

ರೆಹೋಬೋಮ್ ಇಸ್ರೇಲನ್ನೂ, ಮೆನೆಲಿಕ್ ದಕ್ಷಿಣ ಹಾಗೂ ಪೂರ್ವ ಭಾಗಗಳನ್ನೂ, ಅಡ್ರಾಮಿಸ್ ಉತ್ತರ ಹಾಗೂ ಪಶ್ಚಿಮ ದೇಶಗಳನ್ನೂ ಆಳಿದರು. ಹೀಗೆ ಸಾಲೋಮನ್ ಹಾಗೂ ಡೇವಿಡ್‌ರ ವಂಶಜರು ಚಕ್ರವರ್ತಿಗಳಾಗಿ ಬಾಳುತ್ತಾರೆ ಎನ್ನುವ ಕಾರಣಿಕ ವಾಕ್ಯ ನಿಜವಾಯಿತು.

"ರೋಮದ ದೊರೆ ಹಾಗೂ ಇಥಿಯೋಪಿಯದ ದೊರೆ ಜೆರೂಸಲೇಮಿನಲ್ಲಿ ತಮ್ಮ ಅಧಿಕಾರವನ್ನು ಸಮ್ಮಿಳಿಸಿ ಇಡೀ ಜಗತ್ತನ್ನೇ ಆಳುತ್ತಾರೆ" ಎಂಬ ಇನ್ನೊಂದು ಕಾರಣಿಕ ವಾಕ್ಯವೂ ಕಾಲಾಂತರದಲ್ಲಿ ಸತ್ಯವಾಗಿ ಪರಿಣಮಿಸಿತು. ಯಹೂದ್ಯರು ದೇವಪುತ್ರ ಕ್ರಿಸ್ತನನ್ನು ಶಿಲುಬೆಗೇರಿಸಿದ ನಂತರ ರೋಮದ ಅರಸು ಜಸ್ಟಿನ್ ಹಾಗೂ ಇಥಿಯೋಪಿಯದ ಅರಸು ಕಾಲೆಬ್ ಯಹೂದ್ಯರ ರಾಜ್ಯವನ್ನು ಹಾಳು ಮಾಡಿದರು. ಮುಂದೆ ರೋಮನ್‌ರೂ ತಮ್ಮ ಮದಾಂಧತೆಯಿಂದ ಅಧರ್ಮಿಗಳಾಗಿ ತಮ್ಮ ಹಕ್ಕು ಕಳೆದುಕೊಂಡರು. ಅಂದಿನಿಂದ ಇಂದಿನವರೆಗೆ ಇಥಿಯೋಪಿಯನ್ನರು ನಿಜವಾದ ಕ್ರಿಸ್ತ ಧರ್ಮೀಯರಾಗಿ ಉಳಿದುಕೊಂಡು ಬಂದಿದ್ದಾರೆ.

ಈ ದಂತಕತೆಯನ್ನು ಕೆಲವೊಂದು ಉದ್ದೇಶಗಳನ್ನಿಟ್ಟುಕೊಂಡೇ ಇಥಿಯೋಪಿಯದವರು ಪ್ರಚಲಿತಗೊಳಿಸಿರಬೇಕು. ಕ್ರಿಶ್ಚಿಯನ್ ದೇಶದ ಸಂಸ್ಕೃತಿಯೊಡನೆ ಸಂಬಂಧ ಬಂದೊಡನೆ ಅದನ್ನು ನೆರವಿಗಿಟ್ಟುಕೊಂಡು ತಮ್ಮ ನಾಡಿನ ಹೆಸರನ್ನು ಇತಿಹಾಸದ ಪರಂಪರೆಯಲ್ಲಿ ಬೆಳಗಿಸಬೇಕಿತ್ತು. ಶೇಬಾ ರಾಣಿಯ ಬಗೆಗೂ ಹಲವಾರು ದಂತಕತೆಗಳು ಪ್ರಚಲಿತವಾಗಿವೆ. ಇಥಿಯೋಪಿಯದ ಶೇಬಾ ರಾಣಿಗೂ, ಸಾಲೋಮನ್ ದೊರೆಗೂ ರಕ್ತ ಸಂಬಂಧ ಕಲ್ಪಿಸಿ ಮೆನೆಲಿಕ್ ಅವಳ ಮಗ ಎಂದು ಹೇಳುವದರಲ್ಲಿಯೂ ಒಂದು ಉದ್ದೇಶವಿದೆ. ಮೆನೆಲಿಕ್ ದೊರೆಯ ಹಿರಿಯ ಮಗನಾದುದರಿಂದ ಕ್ರೈಸ್ತ ಧರ್ಮ ಪಾಲಿಸುವ ದೇಶಗಳಲ್ಲಿ ಇಥಿಯೋಪಿಯಕ್ಕೆ ಅಗ್ರಸ್ಥಾನ ಸಿಕ್ಕಿದೆ. ಮೂರನೆಯದಾಗಿ ಸಿಂಹಾಸನಕ್ಕೆ ದೈವದತ್ತ (Divine Right) ಹಕ್ಕು ಇದೆ ಎಂದು ಸಾಧಿಸಬೇಕಾದುದು. ಈ ಕತೆಯ ಪ್ರಕಾರ ಸಾಲೋಮನ್ ದೊರೆ ಮೆನೆಲಿಕ್‌ಗೆ ಪವಿತ್ರ ತೈಲ ಲೇಪಿಸಿ ಆತ ಇಥಿಯೋಪಿಯ (ಅಬಿಸೀನಿಯ)ದ ದೊರೆ ಎಂದು ಸಾರಿದಾಗಲೇ ಆ ಹಕ್ಕು ಭದ್ರವಾಗಿದೆ.

ಈ ಕತೆ ಎಂದಿನಿಂದ ಹುಟ್ಟಿತು ಎಂದು ನಿಶ್ಚಿತವಾಗಿ ಹೇಳುವದು ಕಷ್ಟ. ಹದಿನಾಲ್ಕನೆಯ ಶತಮಾನದಲ್ಲಿ ರಚಿಸಿದ 'ಕೆಬ್ರಾ ನಿಗಾಸ್ತ' ("ಅರಸರ ಹಿರಿಮೆ") ಎಂಬ ಕೃತಿಯಲ್ಲಿ ಈ ಕತೆ ಬರುತ್ತದೆ. ಅದರ ಪ್ರಕಾರ ಕ್ರಿ.ಶ. ೧೨೭೦ರಿಂದ ಈ ವಂಶ ಆಳುತ್ತಿದೆ.

ತಾವು ದೇವರಿಂದ ಆರಿಸಲ್ಪಟ್ಟವರು ಎಂಬ ಭಾವನೆಯೇ ಈ ವಂಶದ ಪರಂಪರೆಯನ್ನು ಅತಿ ತಡೆಯಿಲ್ಲದೆ ಸಾಗಿಸಿಕೊಂಡು ಬಂದಿದೆ. ●

# ಪತ್ತೇದಾರ ಡೆರೆಕ್ ಡಿಸೋಝಾ

**ತಮ್ಮ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದ ಅರುಣಾ-ಪ್ರಸಾದ ವಿಷಪ್ರಾಶನದಿಂದ ಸತ್ತಿದ್ದಾನೆಂಬುದನ್ನರಿತ ಡಾಕ್ಟರ್ ಸಕ್ಸೇನಾ ಖಾಸಗಿ ಪತ್ತೇದಾರ ಡೆರೆಕ್ ಡಿಸೋಝಾನೆಡೆ ಹೋಗಿ, ಅಪರಾಧಿ ಯಾರು? ಎಂಬುದನ್ನು ಶೋಧಿಸಲು ಕೇಳಿಕೊಳ್ಳುತ್ತಾರೆ....**

ಆಫೀಸಿನ ಬಾಗಿಲು ಕಾಕಿ ಊಟಕೆ ಹೊರಡ ಬೇಕೆನ್ನುವಷ್ಟರಲ್ಲಿ ಹಿಂದ ಹೆಜ್ಜೆಗಳು ಕೇಳಿಸಿದವು. ಹೊರಳಿ ನೋಡಿದೆ. ಡಾ. ಸಕ್ಸೇನಾ ನಿಂತಿದ್ದರು. ಮುಖ ಬೆಳ್ಳಗೆ ಬಿಳಿಚಿಕೊಂಡಿತ್ತು, ಕೈ ನಡ ಗುತ್ತಿದ್ದವು. ಸನ್ನತ್ತ ನೆಟ್ಟಗೆ ನೋಡತೊಡಗಿದರು. ಹೀಗೆ ನೇರವಾಗಿ ಅವರು ನನ್ನ ಕಡೆಗೆ ನೋಡುತ್ತ ನಿಂತದ್ದೇ ಇಲ್ಲ. ಅವರನ್ನು ಆಫೀಸಿನ ಒಳಗೆ ಕರೆದೊಯ್ದು ಕೋಕಾಕೋಲಾ ಕೊಟ್ಟೆ. ನೀರಡಿಸಿದ ಮಗುವಿನಂತೆ ಅವರು ಕುಡಿದರು. ತುಸು ಶಾಂತರಾದ ಮೇಲೆ ಕೇಳಿದೆ: "ಯಾಕೆ ಡಾಕ್ಟ್ರೆ, ಏನಾಯಿತು? ಇಂದು ಪ್ರಕೃತಿ ಸ್ವಸ್ಥವಿದ್ದಂತೆ ಕಾಣುವುದಿಲ್ಲವಲ್ಲ"

ಉಸಿರು ನೀಳವಾಗಿ ಎಳೆಯುತ್ತ, ಅವರೆಂದರು: "ಮಿ. ಡಿಸೋಝಾ, ನಮ್ಮ ಆಸ್ಪತ್ರೆಯಲ್ಲಿ ಒಬ್ಬ ರೋಗಿ ಇದ್ದರಲ್ಲ, ಅರುಣಪ್ರಸಾದ ಗುಪ್ತಾ, ಅಂತ. ಅವರ ನೆನಪಿದೆಯೇ ನಿಮಗೆ? ಯಾರೋ ಅವರಿಗೆ ವಿಷ ಕೊಟ್ಟು, ಕೊಲೆ ಮಾಡಿದ್ದಾರೆ...!"

ಇದೆಂಥ ಅವಿವೇಕ! ಅರುಣಪ್ರಸಾದನನ್ನು ಬಲ್ಲೆ. ಮುಪ್ಪಾದ ಮುದುಕ. ಅವನ ಕೊಲೆ...? ತಾನೇ ಸತ್ತಿರಬೇಕು. ಅವನನ್ನಾರು ಕೊಲ್ಲುವವರು? "ಹೀಗೇಕೆ ಡಾಕ್ಟ್ರೇ? ಕೊಲೆ ಆಗಿರಲಾರದು..."

"ಇಲ್ಲಪ್ಪ, ಸಂದೇಹವೇ ಇಲ್ಲ. ಕೊಲೆಯೇ ಸರಿ. ಅವನ ಉಗುಳಿನಲ್ಲಿ, ಔಷಧದ ಬಾಟ್ಲಿಯಲ್ಲಿ ಒಂದು ಆನೆ ಕೊಲ್ಲುವಷ್ಟು ಆರ್ಸೆನಿಕ್ ವಿಷ ಬಿದ್ದಿದೆ..."

"ಅವನು ಸತ್ತದ್ದು ಯಾವಾಗ ಲಕ್ಷಕ್ಕೆ ಬಂತು...?"

"ಅವನನ್ನು ಭೆಟ್ಟಿಯಾಗಲು ಹೊರಗಿನವರಾರೂ ಬರುತ್ತಿರಲಿಲ್ಲ. ಇಂದು ಮುಂಜಾನೆ ಏಳು ಗಂಟೆಗೆ ಕಸ ಗುಡಿಸುವವನು ಅವನ ಕೋಣೆಗೆ ಹೋದಾಗ ಮುದುಕ ಆಗಲೇ ಹೆಣವಾಗಿದ್ದ..."

"ನಿಮ್ಮ ಅಭಿಪ್ರಾಯವೇನ ಡಾಕ್ಟ್ರೇ? ಅವನು ಯಾವಾಗ ಸತ್ತಿರಬೇಕು?"

"ನರ್ಸ ಅವನಿಗೆ ನಿನ್ನೆ ಮೂರು ಗಂಟೆಗೆ ಇಂಜೆಕ್ಷನ್ ಕೊಟ್ಟಳಂತೆ. ಆಗ ನೆಟ್ಟಗಿದ್ದ. ಸರ್ವ ಸಾಧಾರಣ ರಾತ್ರಿ ಹತ್ತಕ್ಕೆ ಸತ್ತಿರಬೇಕೆಂದು ನನ್ನ ತರ್ಕ."

"ಯಾರ ಮೇಲಾದರೂ ನಿಮಗೆ ಸಂಶಯವಿದೆಯೇ"?

"ಯಾರ ಮೇಲೆ ಸಂಶಯ ಪಡಲಿಕ್ಕೆ ನನಗೆಲ್ಲಿದೆ ಅವಕಾಶ...ಪೋಲಿಸರಿಗೆ ನನ್ನ ಮೇಲೆಯೇ ಸಂಶಯ ವಿರುವಾಗ..."

ಅವರ ಮಾತು ಕೇಳಿದ ಕೂಡಲೆ ಬಹುತರ ನನ್ನ ಮಿತ್ರ ಪೋಲೀಸ ಇನ್ಸ್‌ಪೆಕ್ಟರ ಪೆರುಮಾಳನ ಬಾಯಿ ಪ್ರಸಾದ ಇವರಿಗೆ ದೊರಕಿದೆ ಅನ್ನಿಸಿತು. ಪೆರುಮಾಳ್ ತುಸು ಹುಂಬ. ಎಲ್ಲರನ್ನೂ ಹಿಂದು ಮುಂದಿನ ವಿಚಾರ ವಿಲ್ಲದೆ ಬೆದರಿಸುವುದು ಅವನ ಪದ್ಧತಿ. ಅವನ ಕೈಗೆ ಸಿಕ್ಕ ಡಾಕ್ಟರ ಸಾಹೇಬರಿಗೆ ನಾನು ಮೊದಲ ಬಾರಿ ನೆನಪಾಗಿದ್ದೆನಂತೆ ತೋರುತ್ತದೆ. ಇಲ್ಲವಾದರೆ ಅವರ ಆಸ್ಪತ್ರೆಯ ಬದಿಯಲ್ಲೇ ನಾನು ನನ್ನ ಬೋರ್ಡ: "ಡೆರೆಕ್ ಡಿಸೋಝಾ, ಖಾಸಗೀ ಪತ್ತೇದಾರ" ಅಂತ ಹಚ್ಚಿದ್ದು ಅವರಿಗೆ ಕಣ್ಣು ಕೀಸರಾಗಿತ್ತು. ನಮ್ಮ ಶಾಂತಮಯ ಭಾರತದಲ್ಲಿ ನನ್ನಂಥ ಪತ್ತೇದಾರರು ಎಲ್ಲಿ ಧಂದೆ ಹೂಡಬೇಕೋ ತಿಳಿಯದು. ಇನ್ನು ಮೇಲೆ ಮಸಣದ ಕಂಪೌಂಡ ಎದುರಿಗೆ ಬೋರ್ಡ ಹಾಕಿದರೆ ಮಾತ್ರ ಜನ ನಮ್ಮ ಧಂದೆ ಸಹಿಸುತ್ತಾರೆಂದು ತೋರುತ್ತದೆ. ಆದರೂ ಕೇಳಿದೆ.

"ಯಾಕೆ, ನಿಮ್ಮ ಚೌಕಶಿ ಮಾಡಲಿಕ್ಕೆ ಇನ್ಸ್‌ಪೆಕ್ಟರ ಪೆರುಮಾಳ ಬಂದಿದ್ದನೆ?" ಶಕ್ಯವಿದಷ್ಟು ಮುಗುಳುನಗೆ ಹತ್ತಿಕ್ಕಿ ಹಿಡಿದೆ.

"ಯಾಕೋ ಗಿಡ್ಡಪುಟಾಣಿ! ಇಲ್ಲೇನು ಕೆಲಸವೋ ನಿನ್ನದು? ನಿನ್ನ ನೆರಮನೆಯ ಡಾಕ್ಟರ ಅತ್ತು ಕರೆದು ನಿನ್ನನ್ನು ಇಲ್ಲಿ ಕಳಿಸಿದಾನೆ ತಾನೇ? -ಹೌದಲ್ಲೋ? ಬೊಗಳೋ!..."

"ಈ ಕೊಲೆ ಅವರಿಂದ ಆಗಿದೆಯೆಂದು ನಿನಗೆ ಸಂಶಯವಿದೆಯೋ?"

"ಸಂಶಯ?...ಇನ್ನ್ಯಾಕೆ ಸಂಶಯ! ನನಗೆ ಎಲ್ಲ ಗೊತ್ತಾಗಿದೆ. ಮೊನ್ನೆ ಬೆಳಿಗ್ಗೆ ನಿಮ್ಮ ಡಾಕ್ಟರ ಮಹಾಶಯ ಅದೇ ರಸ್ತೆಯ ಔಷಧದ ಅಂಗಡಿಯಿಂದ ಆರ್ಸೆನಿಕ್ ವಿಷ ಖರೀದಿ ಮಾಡಿದ. ಒಂದು ತಿಂಗಳ ಹಿಂದೆ ಆ ಮುದುಕನಿಗೆ ಏನೇನೋ ಭುಲಥಾಪೇ ಕೊಟ್ಟು ಮೃತ್ಯುಪತ್ರ ಮಾಡಿಸಿದ. ಬನಾರಸ್ ಟೆಕ್ಸಟೈಲ್ ಕಂಪನಿಯ ಎಲ್ಲ ಶೇರುಗಳು ಸ್ವಾರ್ಜಿತ ಆಸ್ತಿ, ಅದೆಲ್ಲ ಡಾಕ್ಟರಿಗೇ ಹೋಗಬೇಕೆಂದು ಬರೆಸಿದ. ಇದನ್ನೆಲ್ಲ ನಿಮ್ಮ ಮಹಾಶಯ ನಿನಗೆ ಹೇಳಿದನೋ?" ಎಂದು ಪೆರುಮಾಳ್ ನನ್ನ ಹೊಟ್ಟೆಗೆ ತಿವಿದ.

"ಡಾಕ್ಟರರೇ ಕೊಲೆ ಮಾಡಿದವರು ಅಂತ ಕೋರ್ಟಿನಲ್ಲಿ ಸಿದ್ಧ ಆದ ಮೇಲೆ ನೀವೇ ಅವರನ್ನು ಗಲ್ಲಿಗೆ ಏರಿಸುವಿರಂತೆ. ಸದ್ಯಕ್ಕಂತೂ ಅವರ ಜೊತೆ ತುಸು ಸಂಭಾವಿತತನ, ಸೌಮ್ಯ ರೀತಿ ತೋರಿಸಬಾರದೇಕೆ? ನೋಡು, ಅವರು ಸುಶಿಕ್ಷಿತರು. ಡಾಕ್ಟರರು. ಜೀವ ಬದುಕಿಸುವವರು..."

"ಹೌದು ಮಹಾರಾಯಾ...! ನಿನಗೆ ಅವನ ಗುರುತು ಇದೆಯೇ?"

"ಅವ ಜನರಿಗೆ ಗದರಿಸುವುದು ಹೆಚ್ಚು. ಅದು ಅವನ ರೀತಿ ಅಷ್ಟೆ"

ಹಾಗೂ ಹೀಗೂ ಸಮಾಧಾನ ಹೇಳಿ ಅವರಿಗೆ ಊಟ ಮಾಡಿ ವಿಶ್ರಮಿಸಲಿಕ್ಕೆ ಹೇಳಿದೆ. ಪೆರುಮಾಳನನ್ನು ಭೆಟ್ಟಿಯಾಗುವೆನೆಂದು ವಚನ ಕೊಟ್ಟೆ. ಡಾಕ್ಟರರು ಹೋಗುತ್ತ ಏನನ್ನೋ ಹೇಳಲಿಕ್ಕೆಂದು ತಡವರಿಸಿ ನಿಂತರು. ಆದರೂ ಮತ್ತೇನೋ ವಿಚಾರ ಮಾಡಿ ಧಡಧಡನೆ ಅಟ್ಟವೇರಿ ಮನೆಗೆ ಹೋದರು. ಆದೇಕೋ ನಾನು ಗಿಡ್ಡ ಪುಟಾಣಿಯಾದ್ದರಿಂದಲೋ, ಏನೋ.-ಹೇಳಬೇಕೆನ್ನುವುದನ್ನೂ ನನಗೆ ಜನರು ಹೇಳುವುದಿಲ್ಲ...

ಹೆಡ್‌ಕ್ವಾರ್ಟರ್ಸಗೆ ಹೋಗಿ ಪೆರುಮಾಳನನ್ನು ಕಂಡೆ. ನನಗೂ ಪೆರುಮಾಳ್‌ಗೂ ರಮ್ಮೀ ಆಟದ ದೋಸ್ತಿ. ಮೂರನೆಯವರು ಬಂದರೆ ನೋಡಬೇಕು ನಮ್ಮ ಆಟದ ಮೋಜು! ನನ್ನನ್ನು ಕಾಣುತ್ತಲೆ ಪೆರುಮಾಳ್ ಗರ್ಜಿಸಿದ.

"ಹೌದು ಹೌದು, ಹೋಗೋ ಪುಟಾಣಿ! ನಿಮ್ಮ ಡಾಕ್ಟರರು ಆಸ್ಪತ್ರೆಯ ಬಾಟ್ಲಿಯಲ್ಲಿ ಆರ್ಸೆನಿಕ್ ಹಾಕಿ ಮೇಲೆ ಡೋಸ್ ಬರೆದು ಕೊಡತಾರೆ ಹೋಗೋ!" ಎಂದು ಪೆರುಮಾಳ್ ಮೋರೆ ತಿರುವಿದ. ಅಂತೂ ನನ್ನ ಸಂಧಾನ ವಿಫಲವಾಯಿತು.

ಕಂಗಾಲಾದೆ. ಡಾಕ್ಟರರು ನನಗೆ ಮೃತ್ಯುಪತ್ರದ ಬಗ್ಗೆ ಏಕೆ ಹೇಳಲಿಲ್ಲ?

-೨-

ಅರಕಳಿ ಮಾಹಿತಿಯ ಮೇಲೆ ಪತ್ತೇದಾರ ನಂಬಿದರೆ ಮೋಸ. ನನಗೂ ಹೇವ. ಡಾಕ್ಟರರನ್ನು ಮತ್ತೆ ಅಲ್ಲಾಡಿಸಿಯೇ ಬಿಡಬೇಕು. ಉಯಿಲಿನ ಬಗ್ಗೆ ಹೋಗಲಿ, ಆರ್ಸೆನಿಕ್ ಬಗ್ಗೆಯಾದರೂ ಅವರು ನನಗೆ ಸತ್ಯ ಹೇಳುವುದು ಅವರ ಧರ್ಮವಲ್ಲವೆ?

ಡಾಕ್ಟರ ಊಟಕ್ಕೆ ಕುಳಿತಿದ್ದರು. ನಾನೂ ಕಾಲು ಅಪ್ಪಳಿಸುತ್ತ, ಅಡಿಗೆಯ ಮನೆಯ ವರೆಗೇ ಹೋದೆ.

ವೀಣಾ ಮೊಕಾಶಿ ಮತ್ತು ಶಂಕರ ಮೊಕಾಶಿ ( ಪುಣೇಕರ )

ತುಸು ಬೇಸರದಿಂದಲೇ ಆರ್ಸೆನಿಕ್ ಖರೀದಿಯ ಬಗ್ಗೆ ವಿಚಾರಿಸಿದೆ.

ಏನೂ ತಪ್ಪಾಗದವರಂತೆಯೇ ಡಾಕ್ಟರರು "ಹೌದು, ನಾನೇ ಆರ್ಸೆನಿಕ್ ತರಿಸಿದೆ, ಹೆಗ್ಗಣಗಳಿಗಾಗಿ. ಆಸ್ಪತ್ರೆಯಲ್ಲಿ ಅವುಗಳ ಹಾವಳಿ ಹೆಚ್ಚಾಗಿತ್ತು.!" ಎಂದು ಹೇಳಿದರು. ಎರಡು ಕಾಲ ಹೆಗ್ಗಣಗಳೇ ಎಂದುಕೊಂಡೆ. ಅರ್ಧ ಸತ್ಯ ಆಡುವವರನ್ನು ಕಂಡರೆ ನನಗೆ ಬೇಸರ.

"ತರಲು ಅಂಗಡಿಗೆ ನೀವೇ ಹೋಗಿದ್ದಿರಾ?" ಎಂದು ಕೇಳಿದೆ.

"ನಾನೇ ಹೋಗಬೇಕೆ? ತೋಟಿಗ ಶಿವಜಿ ಮಾಡುವ ಕೆಲಸವದು. ಅವನಿಗೆ ನಾನು ಚೀಟಿ ಬರೆದು ಕೊಟ್ಟಿರುತ್ತೇನೆ. ಅವನು ಇದೇ ರಸ್ತೆಯ ಬಾಜೂಕ್ಕೆ ಇರುವ ಕೆಮಿಸ್ಟ–ಡ್ರಗಿಸ್ಟ ಅಂಗಡಿಯಿಂದ ತರುತ್ತಾನೆ. ತಿಂಗಳ ಕೊನೆಗೆ ನನಗೆ ಅವರು...ಬಿಲ್ ಕಳಿಸುತ್ತಾರೆ."

ಇದನ್ನು ನೆನಪಿಟ್ಟುಕೊಂಡೆ. ಇಷ್ಟೊತ್ತಿಗೆ ಕಾಲ್ ಬೆಲ್ ಬಾರಿಸಿತು. ತಾನೇ ಬಾಗಿಲು ತೆರೆದು ಇನ್ಸಪೆಕ್ಟರ ಪೆರುಮಾಳ್ ಒಳನುಗ್ಗಿದ. ಅಲ್ಲಿರುವುದು ಸರಿಯಲ್ಲವೆಂದುಕೊಂಡು ನಾನು ಹೊರಗೆ ಹೊರಟೆ. ಹೋಗುವಾಗ ಪೆರುಮಾಳ್‌ನಿಂದ ಹಾಸ್ಪಿಟಲ್‌ದಲ್ಲಿ ಮೃತನ ಕೋಣೆಯನ್ನು ಪ್ರತ್ಯಕ್ಷ ನೋಡಲು ಪರವಾನಿಗೆ ಚೀಟಿ ಪಡೆದೆ.

ತೋಟಿಗ ಶಿವಜಿ ಕಂಪೌಂಡ ಬಾಗಿಲ ಹತ್ತರ ಬೀಡಿ ಸೇದುತ್ತ ಕುಳಿತಿದ್ದ. ಅವನ ಮೂಗು ವಿಕರಾಳವಾಗಿತ್ತು. ನೋಡಲಿಕ್ಕೆ ಭಯ ಬರುವಂತಿತ್ತು. ಕೊಲೆಯಾದರೆ ಇಂಥವನಿಂದಲೇ ಆಗಬೇಕು, ನಿಜ. ಆದರೆ ಉದ್ದೇಶವೇನು?

"ಅಂಗಡಿಯಿಂದ ಆರ್ಸೆನಿಕ್ ವಿಷ ತಂದವ ನೀನೇ ಅಲ್ಲವೆ?" ಎಂದು ಕೇಳಿದೆ.

ಶಿವಜಿಯ ಒಂದೇ ಮೂಗಿನ ಹೊಳ್ಳೆ ನಡುಗತೊಡಗಿತು. ಇದು ಅವನು ಮಾತಾಡುವವನಿದ್ದಾನೆ ಎಂಬುದರ ಮುನ್ಸೂಚನೆ ಇರಬೇಕು. ಯಾವ ಹೆದರಿಕೆ ಇಲ್ಲದೆ ಒಕ್ಕಣ್ಣು ಹಾರಿಸುತ್ತ ಹೇಳಿದ: "ಸಾಹೇಬ ಹೇಳುತ್ತಾರೆ, ನಾನು ಮಾಡುತ್ತೇನೆ."

ನನ್ನ ತಲೆ ತಿರುಗಿತು. "ಸಾಹೇಬರು ನಿನಗೆ ಅರುಣ ಪ್ರಸಾದರ ಔಷಧದಲ್ಲಿ ಆರ್ಸೆನಿಕ್ ಕೂಡಿಸಲು ಹೇಳಿದ್ದರೇನೋ ಮುಠ್ಠಾಳಾ?" ಎಂದು ಗದರಿಸಿದೆ.

ಈಗ ಅವನಿಗೆ ತುಸು ವಿನಯ ಬಂದಿತು. ಚಟ್ಟನೆ ಎದ್ದವನೆ ಚುಟ್ಟವನ್ನು ಕೈ ಮರೆ ಮಾಡಿ ಹಿಡಿದ. "ಇಲ್ಲ ಸಾಹೇಬರೆ; ನಾನು ಪೇಶಂಟರ ಕೋಣೆಯ ಒಳಕ್ಕೆ ಎಂದೂ ಹೋಗುವುದಿಲ್ಲ"

"ನಿಜವೇ?...ಸುಳ್ಳಾಡಿದರೆ ನೋಡು. ನಾನು ಚೌಕಶಿ ಮಾಡುತ್ತೇನೆ."

"ಇಲ್ಲ ಸಾರ್, ಒಮ್ಮೊಮ್ಮೆ ಅರುಣ ಪ್ರಸಾದಜಿಯವರಿಗೆ ಪೂಜೆಗೆ ಹೂ ಒಯ್ದು ಕೊಡುತ್ತಿದ್ದೆ ಅಷ್ಟೆ. ದಿವಸಕ್ಕೆ ಅವರನ್ನು ಕಾಣುವುದು ಒಮ್ಮೆ. ಇಲ್ಲವಾದರೆ ಅವರಿಗೆ ಏನಾದರೂ ಪೇಡೆ, ಪೆಪ್ಪರುಮಿಂಟ್ ಬೇಕಾದರೆ ನನ್ನ ಕಡೆಯಿಂದ ತರಿಸುತ್ತಿದ್ದರು...ಅಷ್ಟೆ"

"ಹಾಂ, ಫೇಡೆ, ಪೆಪ್ಪರುಮಿಂಟು!...ಶಿವಜಿ ಅಂದು ಏನಾಯಿತು? ಸರಿಯಾಗಿ ನೆನಪು ಮಾಡಿಕೊಂಡು ಹೇಳು. ನೀನು ಅಂಗಡಿಗೆ ಹೋದದ್ದು ಯಾವಾಗ?"

"ನಿನ್ನೆಯಲ್ಲ, ಮೊನ್ನೆ ಮುಂಜಾನೆ; ಸುಮಾರು ಒಂಭತ್ತು ಗಂಟೆಗೆ. ಅಂದು ಶನಿವಾರ. ಆಸ್ಪತ್ರೆಯ ಗ್ರೌಂಡ ಫ್ಲೋರ ಮೇಲೆಲ್ಲ ಹೆಗ್ಗಣಗಳು ಹೆಚ್ಚಾಗಿವೆ. ಶನಿವಾರ ನರ್ಸ ಸಾಳೂಬಾಯಿ ಬಟ್ಟೆಯ ಸ್ಟೋರ ರೂಮ ನೋಡಲು ಹೋದಾಗ ಎಂಟು ಹತ್ತು ಚದ್ದರಗಳಿಗೆ ತೂತು ಬಿದ್ದು ಚಿಂದಿ ಚಿಂದಿಯಾಗಿದ್ದವು. ಅದನ್ನು ಡಾಕ್ಟರರಿಗೆ ರಿಪೋರ್ಟ ಮಾಡಿದಳು. ಕೂಡಲೆ ಡಾಕ್ಟರರು ನನ್ನ ಕರೆದು ಚೀಟಿ ಕೊಟ್ಟರು. ನಾನು ಅಂಗಡಿಗೆ ಹೋದವನೆ ಆರ್ಸೆನಿಕ್ ತಂದೆ."

"ತಂದಾಗ ಎಷ್ಟು ಗಂಟೆ ಆಗಿತ್ತು?"

"ಹತ್ತು ಆಗಿರಬೇಕು."

"ಹೊಸಾ ತುಂಬಿದ ಸೀಲ್ಡ ಬಾಟಿ ಇತ್ತೊ?"

"ಬಾಟ್ಲಿಯಲ್ಲಿ ತಂದೆ. ಸೀಲ ಇರಲಿಲ್ಲ. ತುಂಬಿದ ಬಾಟ್ಲಿ ಅಲ್ಲ. ಅಂಗಡಿಯ ಜೀವನರಾವ ಬಿಡಿ ಪಾವಡರವನ್ನು ಇನ್ನೊಂದು ಖಾಲಿ ಬಾಟ್ಲಿಗೆ ಹಾಕಿ ನನಗೆ ಕೊಟ್ಟ. ಅದಕ್ಕೆ ಕಾಗದದ ಬೂಚು ಮಾಡಿ ಕೊಟ್ಟ ಕೈಗೆ. ಅದನ್ನು ಹಚ್ಚಿಕೊಳ್ಳಬಾರದೆಂದು ತಾಕೀತು ಮಾಡಿದ."

"ಸೀಲ್ಡ ಬಾಟ್ಲಿಯನ್ನೇ ಕೊಡು ಅಂತ ಯಾಕೆ ಹೇಳಲಿಲ್ಲ?"

"ಅವನೇಕೆ ಸೀಲ ಬಾಟ್ಲಿ ಕೊಡಬೇಕು. ದಾನಾ ಕೊಟ್ಟ ಆಕಳದ ಹಲ್ಲು ಎಣಿಸಿದರಂತೆ."

"ದಾನಾ ಕೊಟ್ಟ ಆಕಳನೇ?"

"ಹೌದು ಮತ್ತೆ. ಈ ರಸ್ತೆಯ ಮೇಲೆ ಈ ಔಷಧದ ಅಂಗಡಿಯಿಂದ ಖರ್ಚು ಆಗೋದು ನಮ್ಮ ಆಸ್ಪತ್ರೆಗೇ ಹೆಚ್ಚಾಗಿ. ನಮ್ಮಿಂದಲೇ ಅವರಿಗೆ ಎರಡು ದುಡ್ಡು ಹುಟ್ಟುತದೆ. ಡಾಕ್ಟರರ ಖಾಸಗಿ ಉಪಯೋಗಕ್ಕೆ ಏನಾದರೂ ಔಷಧ ಬೇಕಾದಾಗ ಅವರು ದುಡ್ಡು ಬೇಡೋದಿಲ್ಲ..." "ಖಾಸಗೀ ಉಪಯೋಗ" ಶಬ್ದದ ಅರ್ಥ ಹೊಳೆದು ಶಿವಜಿ ಕಣ್ಣು ಮಿಟುಕಿಸಿದ.

ಅದೇಕೋ?...ಅಂತೂ ಅವನ ಬಾಯಿ ತಾನಾಗಿ ಬಂದಾದದ್ದು ನೋಡಿ ಅಷ್ಟಕ್ಕೆ ಅವನನ್ನು ಬಿಟ್ಟೆ. ಸಮಯ ಬಹಳಿರಲಿಲ್ಲ. ಪೆರುಮಾಳ್ ಬರುವುದರೊಳಗೆ ಮೃತನ ಕೋಣೆಯನ್ನು ನಿರೀಕ್ಷಿಸಿ ನೋಡಬೇಕು.

-೩-

ಆಸ್ಪತ್ರೆಯಲ್ಲಿ ನರ್ಸ ಸಾಳೂತಾಯಿ ನೆರವಾದಳು. ಗುಪ್ತಾಜಿ ಅವರ ದೈನಂದಿನ ರೀತಿಯ ಬಗ್ಗೆ ಅವಳಿಗೆ ಪ್ರಶ್ನಿಸಿದೆ. ಅರುಣಪ್ರಸಾದ ಗುಪ್ತಾ ಅಂದರೆ ಅಂಥ ಹೊರಗಿನವನೂ ಅಲ್ಲ, ಪೇಶಂಟನೂ ಅಲ್ಲ. ಡಾಕ್ಟರರ ಹೆಂಡತಿಯ ಕಡೆಯಿಂದ ದೂರದ ಬಳಗ. ಕಾನಪುರದವನು. ಅವನ ಹೃದಯ ದುರ್ಬಲವಾಗಿ ಆಗೊಮ್ಮೆ ಈಗೊಮ್ಮೆ ನಾಡಿ ಹಿಂದುಮುಂದಾಗುತ್ತಿತ್ತು. ಅವನು ಬೇನೆಯವನೆಂದರೆ ಬೇನೆಯವ, ಅಲ್ಲವೆಂದರೆ ಅಲ್ಲ. ಪಕ್ಕಾ ಜೀವಗಳ್ಳ. ಹಾಸಿಗೆ ಬಿಟ್ಟು ಎದ್ದರೆ ಎಲ್ಲಿ ಹೃದಯ ನಿಂತು ಹೋದೀತೋ ಎಂಬ ಕಳ್ಳ ಭಯವೇ ಹೆಚ್ಚು. ತನ್ನ ಬೇನೆಗಾಗಿ ಶುಶ್ರೂಷೆ ಎಂದು ಅತಿ ಖರ್ಚು ಮಾಡುವ ಚಟ ಬಹಳ. ಇದರಿಂದ ಇವನ ಮಕ್ಕಳು, ಸೊಸೆಯಂದಿರು ಬೇಸತ್ತು ಮನೆಯಲ್ಲಿ ಮನಸ್ತಾಪವಾಗಹತ್ತಿತು. ಇವನದು ಕಾನಪುರದಲ್ಲಿ ಅತ್ತರಿನ ಅಂಗಡಿ ಇತ್ತು. ಆದರೆ ಮಕ್ಕಳು ಅವನನ್ನು ಅಂಗಡಿಯ ದುಡ್ಡು ಹಿಡಿಯಲು ಹರಕತ್ತು ಮಾಡಿದರು. ಅಂಗಡಿಯ ಅಕೌಂಟದಿಂದ ಹೇಗೋ ದುಡ್ಡು ಕಿತ್ತಿಕೊಂಡು, ತನ್ನ ಕೆಲವು ಶೇರುಗಳನ್ನು ತಾಬೇಕ್ಕೆ ತೆಗೆದುಕೊಂಡು ಮುಂಬೈಗೆ ಓಡಿ ಬಂದ. ಸಕ್ಸೇನಾ ಡಾಕ್ಟರರು ಅದೇ ಆಸ್ಪತ್ರೆ ಹಾಕಿದ್ದರು. ಇಲ್ಲಿ ಎಕ್ಸಾಮಿನೇಷನ್‌ಗೆ ಬಂದವನು ಇಲ್ಲಿಯೇ ಕಳೆದು ಎರಡು ವರ್ಷಗಳಿಂದ ಉಳಿದುಕೊಂಡಿದ್ದ. ಇವನಿಗಾಗಿ ಒಂದು ಕೋಣೆ ಕಾಯಂ ಕೊಟ್ಟಿದ್ದರು. ಯಾವಾಗಲೂ ಮಲಗಿಕೊಂಡೇ ಇರುತ್ತಿದ್ದ. ಬೆಳಿಗ್ಗೆ ಒಮ್ಮೆ ಸ್ನಾನಮಾಡಿದ ಮೇಲೆ ಒಂದು ದೇವರ ಫೋಟೋ: ಪೂಜಿ ಮಾಡಿ ಮಲಗಿದನೆಂದರೆ ಹಾಗೇ ಮಲಗಿರುತ್ತಿದ್ದ. ಅವನ ಮನಸ್ಸಮಾಧಾನಕ್ಕಾಗಿ ದಿನಾಲು ನಾಲ್ಕೈದು ಬಾರಿ ಜನರಲ್ ಮಿಕ್ಸರ್ ಇವನಿಗೆ ಕುಡಿಸುತ್ತಿದ್ದರು. ಇವನ ಉದಾರ ಬಕ್ಷೀಸುಗಳಿಂದ ಸಂಪ್ರೀತರಾದ ಆಳುಗಳು–ನರ್ಸುಗಳು ಇವನ ಕೋಣೆಗೆ ಬಂದು ತುಸು ಹರಟೆ ಹೊಡೆದು ಹೋಗುತ್ತಿದ್ದರು. ಇವನಾದರೂ ಅವರಿಗೆ ಕಾಲ ಕಾಲಕ್ಕೆ ಮಿಠಾಯಿ, ಧೋತರ, ಖಣ, ತರಿಸಿ ಕೊಡುತ್ತಿದ್ದ. ಅವರ ಮಕ್ಕಳನು ಮುದ್ದಾಡುತ್ತಿದ್ದ.

ಸಕ್ಸೇನಾ ಡಾಕ್ಟರರ ಮೇಲೆ ಮುದುಕನ ವಿಶ್ವಾಸ ಬಹಳ. ಅವರು ಕೊಟ್ಟ ಔಷಧವೆಂದರೆ ಇವನಿಗೆ ಜಾನ್ನ ವೀತೋಯ. ಯಾವ ಸಮಯಕ್ಕೆ ತೆಗೆದುಕೊಳ್ಳಬೇಕೆಂದು ಹೇಳಿದರೂ ಅದಕ್ಕೆ ತಕ್ಕಂತೆ ಅಲಾರ್ಮ ಇಟ್ಟು ಔಷಧ ತೆಗೆದುಕೊಳ್ಳುತ್ತಿದ್ದ. ನಿಜವಾಗಿಯೂ ಅವನ ಟ್ರೀಟ್‌ಮೆಂಟ್ ನಡೆದಂತೆ ನಟಿಸಲು ಒಮ್ಮೊಮ್ಮೆ ಕೆಂಪು ಔಷಧದ ಬದಲು ಹಳದಿ, ಬಿಳಿ ಔಷಧಗಳನ್ನೂ ಅವನಿಗೆ ಕೊಡುತ್ತಿದ್ದರು "The Doctor said what he needs, is Psychological treatment" ಎಂದಳು ಸಾಳೂಬಾಯಿ. ವಾರೆ ಬಹಾದ್ದರ, ಎಂದುಕೊಂಡೆ. ಸಾಳುಬಾಯಿ ಚತುರೆ. ತಾನೇ ದಿನಾಲು ಎರಡು ಮೂರು ಬಾರಿ ಮುದುಕನ ಕೋಣೆಗೆ ಹೋಗಿ, ಅವನ ಮೈದಡವಿ, ಔಷಧ ಕುಡಿಸಿ, ಅವನಿಂದ ವೇದಾಂತ ಕೇಳಿ, ಕುಲು ಕುಲು ನಗುತ್ತ ಬರುತ್ತಿದ್ದಳು. ಇದನ್ನೆಲ್ಲ ನೋಡಿ ಇತರರು ಅವಳಿಗೆ ಗೇಲಿ ಕೂಡ ಮಾಡುತ್ತಿದ್ದರಂತೆ. ತಾನೇ ಹೇಳಿದಳು. ಈಗಿನ ಕಾಲದ ಹೆಂಗಸರಿಗೆ... ಇದರಲ್ಲಿಯೂ ಅಭಿಮಾನವೇ. ಮೂರು ನಾಲ್ಕು ದಿವಸಕ್ಕೊಮ್ಮೆ ಅವನಿಗೆ ಕೊಡುವ ಸಿರಪ್ಪಿನ ಬಣ್ಣವೂ ಬದಲಾಗುತ್ತಿತ್ತು.

ಆರ್ಸೆನಿಕ್ ಬೆರೆತದ್ದು ಶನಿವಾರ ಸಂಜೆಗೆ. ಅಂದು ಮುದುಕನಿಗೆ ಸಂಜೆ ಉಪವಾಸ. ರವಿವಾರ ಕೆಲಸ ಹೆಚ್ಚು ಇರುತ್ತಿದ್ದ ಮೂಲಕ ಶನಿವಾರ ಆಳು ಹೋಳುಗಳೂ ರಜೆಯ ಮೇಲೆ ಇರುತ್ತಿದ್ದರು. ಶನಿವಾರ ಬೆಳಿಗ್ಗೆ ಮಧ್ಯಾಹ್ನ ಡೋಜಿನಲ್ಲಿ ಯಾವ ಅಂತರವೂ ಇರಲಿಲ್ಲ. ಶನಿವಾರ ಸಂಜೆ ಮಾತ್ರ ಸಹಸಾ ಸಾಳೂಬಾಯಿ ಮುದುಕನ ಕೋಣೆಗೆ ಹೋಗುತ್ತಿರಲಿಲ್ಲ. ಆದರೆ ಡ್ಯೂಟಿ ಮೇಲೆ ಇರುತ್ತಿದ್ದಳು. ಅಷ್ಟೆ. ಶನಿವಾರ ಯಾರೋ ೧೨ ಗಂಟೆ ಮತ್ತೂ ನಾಲ್ಕು ಗಂಟೆಯ ನಡುವೆ ವಿಷ ಕುಡಿಸಿರಬೇಕೆಂದು ಅವಳ ತರ್ಕ.

ಮುದುಕನ ಕೋಣೆಗೆ ಇಬ್ಬರೂ ಕೂಡಿಯೇ ಹೋದೆವು. ಅವಳಿಗೆ ಅನುಮತಿ ಇಲ್ಲದ ಮೂಲಕ ಹೊರಗೆಯೇ ನಿಂತುಕೊಂಡಳು. ನಾನು ಅತ್ತಿತ್ತ ಒಮ್ಮೆ ನೋಡಿ ಔಷಧದ ಬಾಟಲ್ ಪರೀಕ್ಷಿಸಿ, ನಂತರ ನೆಲವನ್ನೆಲ್ಲ ಪರೀಕ್ಷೆ ಮಾಡಿ ನೋಡಿದೆ. ಕಾಟಿನ ಕೆಳಗೆ ಎರಡು ಭಜಿ ಸಿಕ್ಕವು. ಬೇನೆ ಬಿದ್ದವರಿಗೆ ಭಜಿ ತಿನ್ನಲಿಕ್ಕೆ ಕೊಡುತ್ತೀರಾ?" ಎಂದು ಕೇಳಿದೆ. ಆದರೆ ಸಾಳೂಬಾಯಿಗೆ ನನ್ನ ಕಡೆಗೆ ಲಕ್ಷವಿರಲಿಲ್ಲ. ಅವಳು ಬಾಗಿಲ ಹೊರಗಿಂದಲೇ ಟೇಬಲ್ ಮೇಲಿನ ಔಷಧದ ಬಾಟ್ಲಿಯತ್ತ ದಿಟ್ಟಿಸಿ ನೋಡ ತೊಡಗಿದ್ದಳು. ಮತ್ತೊಮ್ಮೆ ಗಡುಸಾಗಿ ಕೇಳಿದೆ. ಅವಳು ಗಡಬಡಿಸಿದಂತೆ ಎಚ್ಚತ್ತು ಹೇಳಿದಳು: "ಇಲ್ಲ, ಇಲ್ಲ, ಆ ಭಜಿ ಅವಿವೇಕಿ ಶಿವಜಿ ಅಲ್ಲಿ ಇಟ್ಟಿರಬೇಕು. ಅದು ಅವನದೇ ವಿಚಾರ. ಆರ್ಸೆನಿಕ್ ಹೆಗ್ಗಣಗಳಿಗೆ ತಿನ್ನಿಸಲು ಭಜಿ ಉತ್ತಮ ವಾಸನೆಯ ಆಹಾರ. ಎಂದು ಹೇಳಿ ಅವನೆ ರಸ್ತೆಯ ಮೇಲಿಂದ ಎರಡು ರೂಪಾಯಿ ಭಜಿ ತಂದು, ಅವರ ಮೇಲೆ ಆರ್ಸೆನಿಕ ಪುಡಿ ಉದುರಿಸಿ ಹೆಗ್ಗಣದ

ಗುದ್ದು ಇದ್ದಲ್ಲೆಲ್ಲ ಎರಡೆರಡು ಭಜಿ ಒಗೆದು ಬಂದ. ಡಾ. ಸಕ್ಸೇನಾರ ಆಸ್ಪತ್ರೆಯಲ್ಲಿ ಇಂಥ ಭಜಿ ಪೇಶಂಟರಿಗೆ ಕೊಡುತ್ತಾರೆಂದು ತಿಳಿದಿದ್ದೀರಾ?" ಎಂದಳು. ಆಸ್ಪತ್ರೆಯ ಬಗ್ಗೆ ಅವಳ ಅಭಿಮಾನ ನೋಡಿ ನರ್ಸ ಇದ್ದರೆ ಹೀಗಿರಬೇಕು ಎಂದುಕೊಂಡೆ. ಎಲ್ಲ ಕಡೆಗೂ ಸ್ವಚ್ಛತೆ, ಬೆಳಕು, ವ್ಯವಸ್ಥೆ–ಇವು ಸಾಳೂಬಾಯಿಯ ತತ್ವಗಳು.

"ಅದು ನಿಜ ಸಿಸ್ಟರ್, ಆದರೆ ಅಂದು ಶನಿವಾರ. ಮುದುಕನ ಉಪವಾಸ. ನಿಮ್ಮ ಕಣ್ಣು ತಪ್ಪಿಸಿ ಆತ ಭಜಿ ತಿಂದಿರಲಿಕ್ಕಿಲ್ಲವೇ? ಮುದುಕರ ಬಾಯಿ ಚಪಲ ನಿಮಗೇನು ಗೊತ್ತು?"

"ಇಲ್ಲ, ಇಲ್ಲ, ಇದನ್ನು ನಾನು ನಂಬಲಾರೆ. ಅದು ಅವರ ಸ್ವಭಾವಕ್ಕೆ ವಿರುದ್ಧ. ಊಟದ ವಿಷಯಕ್ಕೆ ಗುಪ್ತಾಜಿ ಬಹಳೇ ತಾರತಮ್ಯ ಉಳ್ಳವರು. ಶನಿವಾರ ತಮ್ಮೊಡನವನಾದ ರಾಠೋಡನ ಅಂಗಡಿಯಿಂದ ಶಿವಜಿ ತಂದು ಕೊಟ್ಟ ಫೇಡೆ ಅಷ್ಟೇ ತಿನ್ನುತ್ತಿದ್ದರು. ಇಲ್ಲವಾದರೆ ಆಸ್ಪತ್ರೆಯಲ್ಲಿಯ ಹಾಲು ಮಾತ್ರ ಕುಡಿಯುತ್ತಿದ್ದರು. ಯಾವಾಗಾದರೂ ನಾನು ಮನೆಯಲ್ಲಿ ಸಾಬೂದಾಣಿ ಮಾಡಿದ್ದರೊಂದು ಮಾತ್ರ..." ಎನ್ನುತ್ತಲೆ ಸಾಳೂಬಾಯಿ ನಾಲಿಗೆ ಕಚ್ಚಿಕೊಂಡಳು.

"ಇರಲಿ ಸಿಸ್ಟರ್, ನೀವು ಸಾಭೂದಾಣಿಯಲ್ಲಿ ಅರ್ಸೆನಿಕ್ ಹಾಕುವಿರೆಂದು ನಾನೇನೂ ಸಂಶಯ ಪಡುವುದಿಲ್ಲ. ಶಿವಜಿ ತರುವ ಫೇಡೆ ಬಗ್ಗೆ ಬೇರೆ ವಿಚಾರ ಮಾಡುತ್ತೇನೆ. ಮಾತಾಡಿರಿ. ಪೆರುಮಾಳನ ಎದುರು ಮಾತಾಡುವಾಗ ತುಸು ಜೋಕೆ, ಅಷ್ಟೆ. ಭಜಿಯ ಬಗ್ಗೆ ಹೇಳಿರಿ, ನೀವು ಖಂಡಿತ ಗುಪ್ತಾಜಿ ಕಳುವಿನಿಂದ ತಿಂದಿರಲಿಕ್ಕಿಲ್ಲ ಎಂದು ಹೇಳಲಾರಿರಿ. ಅವರ ಹೊಟ್ಟೆಯೊಳಗಿನ ಅರ್ಧ ಜೀರ್ಣ ಆಹಾರ (Stomach Content) ಪರೀಕ್ಷೆ ಮಾಡಿ ನೋಡಲಾಗಿದೆಯೇ?"

"ಅದಕ್ಕೆ ಸಮಯವೆಲ್ಲಿದೆ? ಪೋಲೀಸರು ನಮಗೆ ಒಳಗೆ ಬರಲೂ ಬಿಡುವುದಿಲ್ಲ. ಮುಂಜಾನೆ ಕಸಗುಡಿಸುವವ ಬಂದಾಗ ಗುಪ್ತಾಜಿ ಆಗಲೇ ಅಸು ನೀಗಿದ್ದರು."

ಅಷ್ಟೊತ್ತಿಗೆ ಬೂಟಿನ ಸಪ್ಪಳ ಕೇಳಿಸಿದುವು. ಸಾಳೂಬಾಯಿ ನೆರಳಿನಂತೆ ಸದ್ದಿಲ್ಲದೆ ಬದಿಯ ಕೋಣೆಯಲ್ಲಿ ಮರೆಯಾದಳು. ಪೆರುಮಾಳ್ ಡಾಕ್ಟರ ಸಕ್ಸೇನಾರನ್ನು ಮುಂದೆ ಇಟ್ಟುಕೊಂಡು ಸಿಡಿಮಿಡಿ ಮುಖದಿಂದ ಕಾಲು ಅಪ್ಪಳಿಸುತ್ತ ಬಂದ. ಗಕ್ಕನೇ ಹೆಣದ ಎದುರಿಗೇ ಕುರ್ಚಿ ಎಳೆದುಕೊಂಡು ಮಾತಾಡದೆ ಕುಕ್ಕರಿಸಿದ. ಡಾಕ್ಟರರು ಎಲ್ಲಿ ಕೂಡಬೇಕೋ ತಿಳಿಯದೆ ಕಿಟಕಿಯ ಹೊರಗೆ ನೋಡುತ್ತ ನಿಂತರು. ಅವನನ್ನು ರಮಿಸಲಿಕ್ಕೆಂದು ತುಸು ಚೇಷ್ಟೆಯ ದನಿಯಲ್ಲಿ ಹೇಳಿದೆ ಭಜಿ, ತೋರಿಸುತ್ತ.

"ಪೆರುಮಾಳ್, ಇದೆಲ್ಲ ಮುದುಕರ ಬಾಯಿ ಚಟದ ಪರಿಣಾಮ. ಪಾಪ, ಆಸ್ಪತ್ರೆಯ ಊಟ ಮುದುಕನಿಗೆ ಬೇಸರ ಬಂದಿರಬೇಕು. ಶನಿವಾರ ಉಪವಾಸ ಬೇರೆ. ಈ ಭಜಿ ಹೆಗ್ಗಣಗಳಿಗೆ ಹಾಕಿದ್ದು. ಆದರ ಗಮ ಗಮ ವಾಸನೆಗೆ ಹೆಗ್ಗಣದ ಬದಲು ಮುದುಕ ಒಲಿದಿರಬೇಕು" "Shut up" ಎಂದು ಪೆರುಮಾಳ್ ಕೂಗಿಕೊಂಡ. ನಂತರ ಡಾಕ್ಟರರ ಕಡೆಗೆ ತಿರುಗಿ ಗುಂಡು ಹೊಡೆದಂತೆ ಹೇಳಿದ. "ಈ ಪೆದ್ದನಿಗೆ ಹೇಳಿರಿ, ಈಗ ತಾನೆ ನನಗೆ ಹೇಳಿದ್ದನ್ನು."

ಡಾಕ್ಟರರು ಮುಖ ಕೆಳಗೆ ಹಾಕಿದರು. ನನ್ನತ್ತ ಅವರು ನೋಡಲೆ ಇಲ್ಲ. ನಾನು, "ಅದೇನು ಡಾಕ್ಟರ? ಸಂಕೋಚ ಪಡಬೇಡಿರಿ! ಹೇಳಿರಿ" ಎಂದೆ, ಅವರ ಬಾಯಿಂದ ಮಾತೇ ಹೊರಡಲಿಲ್ಲ. ನಂತರ ಪೆರುಮಾಳ್ ಗದ್ದರಿಸಿದ:

"ಈ ಡಾಕ್ಟರರಿಗೆ ಕಳೆದ ಮೂರು ಗಂಟೆಯಿಂದ ಕೇಳುತ್ತಿದ್ದೇನೆ...ಅಹಾಹಾ, ನೆನಪೇ ಆಗಲಿಲ್ಲ ಇವರಿಗೆ, ಇವರ ಗೋದ್ರೇಜ ಕಪಾಟಿನಲ್ಲಿ ಬಲು ಜೋಕೆಯಿಂದ ಇವರು ಮುದುಕನ ಮೃತ್ಯುಪತ್ರ ಇಟ್ಟಿದ್ದಾರೆ, ಸಾಕ್ಷಿಗೂ ಇವರದೇ ಸಹಿ. ಇವರೇ ನೌಕರಿ ಕೊಡಿಸಿದ ಆ ಕೆಮಿಸ್ಟನ ಸಹಿ. ಮುದುಕನಿಗೆ ಏನು ತಲೆ ತುಂಬಿಸಿದರೋ ಏನೋ, ಅವನ ೪೦,೦೦೦ ರೂಪಾಯಿ ರೋಖ ಹಣ ಇವರಿಗೆ ಸಲ್ಲುತ್ತದೆ...ಅವನ ಸಾವಿನ ನಂತರ...ಇವರಿಗೆ ೪೦,೦೦೦ ರೂಪಾಯಿ, ಇವರ ನರಸಮ್ಮಗೆ ೪೦೦೦ ರೂಪಾಯಿ..."

"ಇದು ನೋಡು ಪೆರುಮಾಳ್, ಹಾಗೆ ರಜಿಸ್ಟ್ರಿ ಆದ ವಿಲ್ ಆಗಿದ್ದರೆ ನಿನಗೆ ಸರಕಾರದಿಂದ ಕಾಪಿ ಸಿಕ್ಕುತ್ತದಲ್ಲ..."

"ನನಗೆ ಗೊತ್ತಾಗಿ ಈಗ ಎರಡು ಗಂಟೆಯಾಯಿತು. ಇವರ ಬಾಯಿಂದ ಬಂದೀತೇನೋ ಅಂತ ಹಾದಿ ನೋಡಿದೆ. ಇವರಿಂದ ಬರಲೇ ಇಲ್ಲ. ನಾನೇ ಇವರಿಗೆ ಹೇಳಿದ ಮೇಲೆ ಒಮ್ಮೆಲೇ ನೆನಪಾಯಿತಂತೆ. ಆದರೂ ತಮಗೆ ೪೦,೦೦೦ ರೂ ಬರುವುದಿದೆಯೆಂಬುದು ಮಾತ್ರ ನೆನಪಿರಲಿಲ್ಲವಂತೆ, ಯಾರಿಗೆ ಕಲಿಸುತ್ತಾರೆ ಇದನ್ನೆಲ್ಲ...?"



"ಇನ್ಯಾರಾರಿಗೆ ಇದರಿಂದ ಲಾಭವಿದೆ?"

"ತೇಲ ಮಾಲೀಶ ಮಾಡುವವನಿಗೆ ೨೦೦ ರೂಪಾಯಿ; ಮಾಳಿಗೆ ೪೦೦ ರೂಪಾಯಿ, ಅಡಿಗೆ ಯವನಿಗೆ ೨೦೦ ರೂಪಾಯಿ, ಹನುಮಂತ ದೇವರ ಗುಡಿಗೆ ೩೦೦ ರೂಪಾಯಿ. ಕಂಬಳಿ ಒಬ್ಬರಿಗೆ, ಕಾಲ್ಮರಿ ಒಬ್ಬರಿಗೆ, ಇನ್ನೂ ಏನೇನೋ..."

"ಅದೇ, ಅದೇ, ...ನಿನಗೇ ನೆನಪಿಲ್ಲ. ಪಾಪ, ಡಾಕ್ಟರರಿಗೆ ಹೇಗೆ ನೆನಪಿರಬೇಕು...?" ಎಂದವನೇ ಆ ಕೋಣೆಯಿಂದ ಜಾರಿದೆ.

ಹೊರಗೆ ಬಂದಕೂಡಲೇ ಏನೋ ಯೋಚನೆ ಹೊಳೆಯಿತು. ನನ್ನ ಮೆದುಳು ಒಮ್ಮೆಲೇ ಜಾಗ್ರುತವಾಗಿರಬೇಕು. ಏನೇ ಆಗಲಿ ಎಂದು ಹಿಂದಿರುಗಿದವನೇ ಔಷಧದ ಬಾಟಲಿ ಇನ್ನೊಮ್ಮೆ ಎತ್ತಿ ಬೆಳಕಿಗೆ ಹಿಡಿದು ನೋಡಿದೆ. "ಜೋಕೆ ನಿನ್ನ ಬೆರಳು ಮೂಡಿದರೆ ನಿನ್ನನ್ನೂ ಅರೆಸ್ಟ ಮಾಡುವೆ" ಎಂದು ಪೆರುಮಾಳ್ ಗರ್ಜಿಸುತ್ತಿರುವಾಗಲೇ ಅಲ್ಲಿಂದ ಕಾಲ್ದೆಗೆದೆ.

"ಹೋಗುವಾಗ ಸಾಳೂಬಾಯಿಯ Duty Room ದಲ್ಲಿ ಹಣಿಕ್ಕಿದೆ. ಅವಳು ಏಕಾಗ್ರತೆಯಿಂದ ಯಾವುದೋ ಪುಸ್ತಕ ಓದುತ್ತ ಈಜಿಚೇರ ಮೇಲೆ ಕುಳಿತಿದ್ದಳು. ಕೈಯಲ್ಲಿ ಇದ್ದದ್ದು ಬಾಬೂರಾವ ಅರ್ನಾಳಕರರ ಮರಾಠಿ ಪತ್ತೇದಾರಿ ಕಾದಂಬರಿಯೊಂದು. Disturb ಮಾಡಲೊ ಬೇಡೋ ಎನ್ನುತ್ತಲೇ ಒಳಗೆ ಹೋದೆ. ಕಾಲು ಚಾಚಿ ಓದುತ್ತಿದ್ದವಳು ನನ್ನನ್ನು ನೋಡುತ್ತಲೆ ಚಟ್ಟನೆ ಕಾಲು ಮಗುಚಿದಳು. ಪುಸ್ತಕವನ್ನು ತನ್ನ ಟೇಬಲ್ಲಿನ ಕಪಾಟಿಗೆ ಹಾಕಿದವಳೆ ಅದರಲ್ಲೇ ಇದ್ದ ಕೀಲಿ ತಿರುವಿ ಕೀಲಿಕೈ ಪರ್ಸಿಗೆ ಹಾಕಿದಳು.

"ನನ್ನ ಅಣ್ಣನ ಮಗುವಿಗೆ ಎಲುವು ಬಹಳ ಮೆತ್ತಗೆ. ಕಾಲು ಮಣಿಯುತ್ತಿವೆ, ಹಲ್ಲು ಸರಿಯಾಗಿಲ್ಲ. ಏನಾದರೂ ಔಷಧ ಬರೆದು ಕೊಡುವಿರಾ? ಇಂಥ ಬೇಬಿ ಫುಡ್ ನೀವು ಸೂಚಿಸಿದರೂ ಸರಿ. ಸದ್ಯಕ್ಕೆ ಡಾಕ್ಟರ ಸಕ್ಸೇನಾರನ್ನು ಕೇಳಲು ಸಮಯವಲ್ಲ!" ಎಂದೆ.

ಅವಳು ಒಂದು ಕಾಗದದ ಮೇಲೆ ಆ್ಯಬ್ಡೆಕ್ ಡ್ರಾಪ್ಸ ಎಂದು ನೀಟಾದ ಅಕ್ಷರಗಳಲ್ಲಿ ಬರೆದು ಕೊಟ್ಟಳು. ಅದರ ಡೋಸೇಜ ಬರೆಯಲೂ ಹೇಳಿದೆ. ಅವಳು ಬರೆಯುವಾಗ ತುಸು ಅತ್ತಿತ್ತ ನೋಡಿಕೊಂಡೆ. ಅಲ್ಲಿಯೇ ಕತ್ತರಿಸಿಟ್ಟ ಡೋಸೇಜ ಮಾರ್ಕಿಂಗಿನ ಕಾಗದವನ್ನೂ ಕಿಸಿಗೆ ಹಾಕಿದೆ.

ಅಲ್ಲಿಂದ ಹೊರಟವನು ಕನೋಜ ಮಿಠಾಯಿ ಮಂದಿರಕ್ಕೆ ಭೆಟ್ಟಿ ಕೊಟ್ಟೆ. "ನೀವು ಪ್ರತಿ ಶನಿವಾರ ಆಸ್ಪತ್ರೆಗೆ ಫೇಡೆ ಕಳಿಸುತ್ತಿದ್ದಿರಾ?" ಎಂದು ಮಾಲಿಕರಿಗೆ ಕೇಳಿದೆ.

"ಒಂದೊಂದು ಶನಿವಾರ ಕಳಿಸುತ್ತಿದ್ದೆವು. ಅಲ್ಲಿಂದ ಯಾರಾದರೂ ಬಂದು ಧುಡ್ಡು ಕೊಟ್ಟು ಒಯ್ಯುತ್ತಿದ್ದರು."

"ಮೊನ್ನೆ ಶನಿವಾರ ಯಾರಾದರೂ ಬಂದಿದ್ದರೆ?"

"ಬಂದಿರಬೇಕು. ನನಗೆ ನೆನಪಿಲ್ಲ."

ತುಸು ಅವನೊಡನೆ ಹರಟಿ, ಹಾಗೆಯೇ ಕೇಳಿದೆ, "ಇಲ್ಲಿಯ ಆಳು ಮಕ್ಕಳು ಸಾಳೂಬಾಯಿಗೂ ಮುದುಕ ಅರುಣಪ್ರಸಾದರಿಗೂ ಏನೋ ರೋಮಾನ್ಸ ಅಂತ ಗೇಲಿ ಮಾಡುತ್ತಾರಲ್ಲ...?"

"ಇದನ್ನು ಅವಳೇ ನಿಮಗೆ ಹೇಳಿದಳಷ್ಟೆ!"

"ಹೌದು."

"ಯಾರಾದರೂ ಹೆಂಗಸರು ಹಾಗೆ ಮಾತಾಡುತ್ತಾರೆಯೆ? ನೀವೇ ವಿಚಾರ ಮಾಡಿರಿ. ನಿಜವಾಗಿ ನಾವೆಲ್ಲ ಕೇಳಿದ್ದು ಡಾ. ಸಕ್ಸೇನಾರ ಜೊತೆಗೆ ಇವಳ ರೋಮಾನ್ಸ ಅಂತ. ಸಕ್ಸೇನಾರ ಹೆಂಡತಿ ಇದಕ್ಕಾಗಿಯೇ ಜಗಳಾ ಈಗ ತಿಂಗಳ ಹಿಂದೆ ಊರಿಗೆ ಹೊರಟುಹೋದಳು. ಅದನ್ನು ಮುಚ್ಚಲಿಕ್ಕೆಂತ ಇವಳು ಇಂಥ ಹುಚ್ಚು ತಾನಾಗಿಯೇ ಮಾತಾಡುತ್ತಾಳೆ...ಪಾಪ, ಅವಳ ಗಂಡ ಜೀವಣರಾವನ ದುರ್ದೈವ...ಬಡಪಾಯಿ ನಮ್ಮಲ್ಲಿ ಬಂದು ಕಣ್ಣೀರು ಮಿಡಿಯುತ್ತಾನೆ. ಅವಳ ಮೇಲೆ ಜೀವಣರಾವನ ಅಧಿಕಾರವೇ ನಡೆಯುವಂತಿಲ್ಲ"

"ಅವನು ಏನು ಕೆಲಸ ಮಾಡುತ್ತಾನೆ?"

"ಕೆಮಿಸ್ಟ್ಸ ಆ್ಯಂಡ ಡ್ರಗ್ಗಿಸ್ಟ್ಸ ಅಂಗಡಿಯಲ್ಲಿ ಕಾರಕೂನ, ಮಾರಾಟಗಾರ, ಸಿಪಾಯಿ, ಎಲ್ಲ ಅವನೇ. ಆ ಕೆಲಸ ಹಚ್ಚಿ ಒಂದು ಎಂಭತ್ತು ರೂಪಾಯಿಗೆ ಗತಿ ಹಚ್ಚಿ ಕೊಟ್ಟರೆಂಬ ಉಪಕಾರಕ್ಕೆ ಡಾಕ್ಟರ ಸಕ್ಸೇನಾರ ವಿರುದ್ಧ ಮಾತಾಡಲ ರ. ಸುಮ್ಮನೂ ಇರಲಾರ. ತಿರುಗಾ ಮುರುಗಾ ತನ್ನ ಹೆಂಡತಿಗಷ್ಟು ಬೈಯುತ್ತಾನೆ. ಸಹನೆ ಮೀರಿದಾಗ ಹೆಂಡ ಕುಡಿಯುತ್ತಾನೆ. ಸೊರಗಿ ಕಡ್ಡಿಯಾಗಿದ್ದಾನೆ."

ಅವರ ಕಡೆಯಿಂದ ಒಂದಿಷ್ಟು ಮಿಠಾಯಿ ಕಟ್ಟಿಸಿಕೊಂಡು ಹೊರಟೆ. ಕೆಮಿಸ್ಟ್ಸ ಆ್ಯಂಡ ಡ್ರಗ್ಗಿಸ್ಟ್ಸ ಅಂಗಡಿಗೆ ಹೋಗಿ ಸಾಳೂಬಾಯಿ ಬರಕೊಟ್ಟ ಔಷಧ ಕೇಳಿದೆ. ಸಾಳೂಬಾಯಿಯ ಗಂಡ ಜೀವಣರಾವ ಹೆಚ್ಚಿಗೆ ಮಾತಾಡಲಿಲ್ಲ. ಬೆಲೆ ೪ ರೂಪಾಯಿ ಹೇಳಿದ. ಹಣ ಕೊಟ್ಟೆ. ಅವನು ಆ ಕಾಗದ ನೋಡುತ್ತ ಹೆಂಡತಿಯ ಅಕ್ಷರ ಗುರುತಿಸಿರಬೇಕು. ಕಾಗದದ ಮುಳ್ಳು ಸ್ಟ್ಯಾಂಡ್ ಮೇಲೆ ಅದನ್ನು ಚುಚ್ಚಿದ. ಔಷಧ ತಂದು ಕೊಟ್ಟ. ಅವನನ್ನು ದಿಟ್ಟಿಸಿ ನೋಡಿದೆ. ನಿಜವಾಗಿಯೂ ಸೊರಗಿ ಕಡಿಯಾಗಿದ್ದ. ಕುಡಿತಕ್ಕೆ ಕಣ್ಣು ಗುಳಿಗಟ್ಟಿದಂತಿತ್ತು.

ಎದುರಿಗೆಯೇ ಇದ್ದ ಒಂದು ಎಲೆ ಅಡಿಕೆ ಸಿಗರೇಟ ಅಂಗಡಿಯಲ್ಲಿ ಸಿಗರೇಟು ಕೊಂಡೆ. ಸಿಗರೇಟ್ ಅಂಗಡಿಯವನ ಜೊತೆಗೆ ಹರಟುತ್ತ ಅರುಣಪ್ರಸಾದರ ಮಾತು ಎತ್ತಿದೆ.

"ಅವರ ಕಿರಿಯ ಮಗ ದ್ವಾರಕಾಪ್ರಸಾದ ಶನಿವಾರ ಇಲ್ಲಿ ಬಂದಿದ್ದ. ಮಧ್ಯಾಹ್ನ ಎರಡು ಆಗಿರಬಹುದು. ಅರುಣಪ್ರಸಾದರನ್ನು ಕೇಳುತ್ತಿದ್ದ. ನಾನೇ ಜೀವಣರಾಯನನ್ನು ಕರೆದು ಅವನನ್ನು ಜೊತೆ ಮಾಡಿ ಆಸ್ಪತ್ರೆಗೆ ಕಳಿಸಿಕೊಟ್ಟೆ. ಆದರೆ ಮುದುಕ ಭೆಟ್ಟಿಯಾಗಲು ಒಪ್ಪಲಿಲ್ಲವಂತೆ" ಎಂದು ಹೇಳಿದ.

ಇದು ಮಹತ್ವದ ಸುದ್ದಿ. ಅಲ್ಲಿಂದ ಅತ್ತಿತ್ತ ಸುತ್ತಾಡಿ ಒಂದು ಪಬ್ಲಿಕ್ ಟೆಲಿಫೋನಿಗೆ ಹದಿನೈದು ಪೈಸೆ ಸುರಿದು ಪೆರುಮಾಳ್‌ಗೆ ಫೋನ್ ಮಾಡಿದೆ. ಅರುಣಪ್ರಸಾದರ ಕಿರಿಯ ಮಗ ದ್ವಾರಕಾಪ್ರಸಾದ ಶನಿವಾರ ಅವರನ್ನು ಭೆಟ್ಟಿಯಾಗಲು ಯತ್ನಿಸಿದ ಸುದ್ದಿಯನ್ನು ಪ್ರಾಮಾಣಿಕವಾಗಿ ಹೇಳಿದೆ.

"ಪುರಾಣೀ, ಮೆನಿ ಥ್ಯಾಂಕ್ಸ. ಅವನು ಬಂದದ್ದು ಗೊತ್ತಾಗಿದೆ. ಅವನನ್ನು ಅರೆಸ್ಟ ಮಾಡಿಯೂ ಆಗಿದೆ. ಇದೀಗ ಅದು ಮುಂಬೈ ತುಂಬ ಗೊತ್ತಾಗಿದೆ. ನನಗೆ ಸುದ್ದಿ ಹೇಳಿ ದೊಡಸ್ತಿಕೆ ಪಡೆಯಬೇಕೆಂದು ಮಾಡಿದ್ದೆಯಾ...?"

"ಮಹಾರಾಯಾ, ನಿನಗೆ ಸಹಾಯ ಮಾಡಿದರೂ ಅಷ್ಟೇ, ಮಾಡದಿದ್ದರೂ ಅಷ್ಟೆ. ಎರಡಕ್ಕೂ ಸಂಶಯ ಪಡುತ್ತೀಯೆ" ಎಂದೆ.

"ಏ ಗಿಡ್ಡಾ...ಮತ್ತೇನೋ ಮುಚ್ಚಿ ಇಟ್ಟುಕೊಂಡು ಎಲ್ಲರಿಗೂ ಗೊತ್ತಿದ್ದನ್ನು ರಿಪೋರ್ಟ ಮಾಡುವ ನಾಟಕ ಹೂಡಬೇಡ."

"ಇದಕ್ಕೆ ಅಂತಾರೆ ನೋಡು, ಉದ್ದನ್ನವರಿಗೆ..." ನಾನು ಮಾತು ಮುಗಿಸುವಷ್ಟರಲ್ಲಿ ಪೆರುಮಾಳ್ ಫೋನ್ ಕೆಳಗೆ ಇಕ್ಕರಿಸಿದ್ದ.

-೪-

ಮಂಗಳವಾರ ಮುಂಜಾನೆ ಎಂಟರ ಸುಮಾರಿಗೆ ಸಾಳೂಬಾಯಿಯ ಖಾಸಗೀ ಮನೆಗೆ ಸಾಯಕಲ್ ಮೇಲೆ ಬಂದೆ. ಡಾಕ್ಟರರು ಪೂರ್ವಕ್ಕೆ ಕಟ್ಟಿಸಿದ ಗರಾಜ ಹಾಗೂ ಮೇಲೆ ಒಂದು ಕಿಡಕಿಗಳಿದ್ದ ಅಡಿಗೆ ಕೋಣೆ. ಇವೇ ಸಾಳೂಬಾಯಿಯ ಕ್ವಾರ್ಟರ್ಸ. ಆದರೂ ಅದನ್ನು ಹಕ್ಕಿಗೂಡಿನಂತೆ ಸಾಳೂಬಾಯಿ ಚೆಲ್ವಗೆ ಮಾಡಿದ್ದಳು. ತರ ತರದ ಕರ್ಟನ್ನುಗಳು, ಹಳೆಯ ನೈಲಾನ್ ಸೀರೆಯ ಗೋಡೆ ಪರದೆ. ಹಳೆಯ ಆರಾಮ ಕುರ್ಚಿಗಳಿಗೆ ನೇಯ್ಗೆಯ ಝೂಲರು. ಮನೆ ಇಟ್ಟುಕೊಳ್ಳುವುದನ್ನು ಇವಳಿಂದಲೇ ಕಲಿಯಬೇಕು. ಒಂದು ಕಣ ಧೂಳಿ ಎಲ್ಲಿಯೂ ಇರಲಿಲ್ಲ. ಮಕ್ಕಳಿಲ್ಲದ ಮನೆ ಇರಬೇಕು. ಅವಳ ಪಗಾರ ಏನಿರಬೇಕೋ...? ಅಂತೂ ಎರಡು ಮನೆಯನ್ನಾದರೂ ಮುಗಿಸಿದುದದಕ್ಕೆ ಇಷ್ಟೆಲ್ಲ ಪರದೆ ಝೂಲರು ಹೆಚ್ಚೆ?

ಒಳಗೆ ಜಗಳಾಟ ನಡೆದಿತ್ತು. ಜೀವಣರಾವ ಅವಳಿಗೆ ಕೊಂಕಣಿ ಉಚ್ಚಾರಗಳಲ್ಲಿ "ಅವದಶೇ" ಎಂದು ಬಯ್ಯುತ್ತಿದ್ದ. "ನಿನ್ನ ಕೊರಳಿಗೆ ಕಟ್ಟಿಕೊಂಡು ನಾನು ಮಣ್ಣು ಮುಕ್ಕಿದೆ" ಎಂದು ಆಕ್ರೋಶಿಸುತ್ತಿದ್ದ. ಉತ್ತರರೂಪವಾಗಿ ಸಾಳೂಬಾಯಿ ಅಡಿಗೆಯ ಭಾಂಡಿಗಳನ್ನು ಧಡಾಧಡಾ ಬಡಿಯುತ್ತಿದ್ದಳು.

ನಾನು ಬಂದದ್ದನ್ನು ಮೊದಲು ಕಂಡವಳು ಸಾಳೂಬಾಯಿ. ಒಮ್ಮೆಲೇ ಮುಖ ಬದಲಿಸಿ ಒಯ್ಯಾರದಿಂದ ಮುಗುಳುನಗೆ ನಗುತ್ತ, "ಬರ್ರಿ, ಪತ್ತೇದಾರರೇ!" ಎಂದು ಗೇಲಿ ಮಾಡಿದಳು. ತನ್ನ ವಾಗ್ವರಿ ನಿಂತದ್ದಕ್ಕೆ ಜೀವಣರಾವ ತುಸು ಬೇಜಾರದಿಂದಲೆ ಒಂದು ಕುರ್ಚಿ ಮುಂದೆ ಎಳೆದ. ಅವನು ಕುಳಿತ ದೊಡ್ಡ ಈಜಿಚೇರದಲ್ಲಿ ಅವನು ಕುಗ್ಗಿದ ಮಂಗನಂತೆ ಸಣ್ಣಗೆ ಕಾಣಿಸುತ್ತಿದ್ದ ಸಾಳೂಬಾಯಿ ಮಾತ್ರ ಈಗ ಯುನಿಫಾರ್ಮದಲ್ಲಿ ಇರಲಿಲ್ಲ. ಗುಲಾಲು ಬಣ್ಣದ ಕ್ರೇಪ್ ಜಾರ್ಜೆಟ್ ಸೀರೆಯಲ್ಲಿ ಊರ್ವಶಿಯಂತೆ ಕಾಣುತ್ತಿದ್ದಳು. ಆದೇ ಜಳಕ ಮಾಡಿ ವಿಪುಲವಾಗಿ ಪೌಡರ ಬಳಿದ ಅವಳ ಮುಖ ತಾಜಾ ತವಾನೆಯಾಗಿ ಕಾಣಿಸುತ್ತಿತ್ತು. ಇಂಥ ಸ್ವಚ್ಛ ಮನೆಯಲ್ಲಿ ಇಷ್ಟು ಸುಸಂಸ್ಕೃತ ಹೆಣ್ಣು ನಾಲ್ಕು ಮಕ್ಕಳನ್ನು ಹೆತ್ತಿದ್ದರೆ ಎಷ್ಟು ಚೆಂದವಾಗಿ ಅವರನ್ನು ಸಾಕುತ್ತಿದ್ದಳೋ ಏನೋ. ಮಕ್ಕಳು ಮಾತ್ರ ಇರಲಿಲ್ಲ. ಮಕ್ಕಳೇ ಆಗಲಿಲ್ಲವೋ, ಆದ ಮಕ್ಕಳಿಗೆ ತುಸು ತುಸು ಆರ್ಸೆನಿಕ್ ಕೊಟ್ಟು ನೀಗಿದಳೋ...ನನ್ನ ವಿಚಾರಗಳ ವಿಕೃತಿಗೆ ನಾನೇ ಹೆದರಿ ತಲೆ ಜಾಡಿಸಿಕೊಂಡೆ...ಸಾಳೂಬಾಯಿ ಗಂಡನಿಗೆ ಗುರುತು ಮಾಡಿಕೊಟ್ಟಳು.

"ಓಹೋ, ಬದಿಯ ಫ್ಲ್ಯಾಟ್‌ಗೆ ಹೊಸತಾಗಿ ಬಾಡಿಗೆ ಬಂದವರು ನೀವೇ ಏನು? ಪ್ರ್ಯಾವೇಟ್ ಡಿಟೆಕ್ಟಿವ್ ಎಂದರೆ ದಪ್ಪಗೆ ಎತ್ತರವಾಗಿ ಮೀಸೆ ಬಿಟ್ಟವರಂತೆ ಇರುತ್ತಾರೆಂದು ನಾನು ತಿಳಿದಿದ್ದೆ." ಎಂದು ಜೀವಣರಾವ ಗೇಲಿ ಮಾಡಿದ. ಏನೇ "ಆಗಲಿ, ನಿಮಗಿಂತ ನಾನು ಅರ್ಧ ಇಂಚು ಎತ್ತರ" ಎಂದು ನಾನೂ ಗೇಲಿ ಮಾಡಿದೆ. ಇಬ್ಬರೂ ನಕ್ಕರು.

"ಗುಪ್ತಾಜಿಯ ಕಿರಿ ಮಗ ದ್ವಾರಕಾಪ್ರಸಾದ ನಿನ್ನೆ ಬಂದಿದನಂತೆ. ಹೌದೆ?".

"ಹೌದು. ನಾನೇ ಅವನನ್ನು ಆಸ್ಪತ್ರೆಗೆ ಕರೆದೊಯ್ದೆ. ನಿದ್ದೆಗಣ್ಣನಲ್ಲಿದ್ದ ಮುದುಕ. ಎಚ್ಚರವಾಗಿ ಯಾರು ಬಂದಿದ್ದಾರೆಂಬುದು ಗುರ್ತಾದೊಡನೆ ರಂಭಾಟ ಮಾಡಿದ. ಅವನನ್ನು ಒಳಗೆ ಕರಕೊಂಡು ಬಂದದ್ದಕ್ಕೆ ನನ್ನ ಮೇಲೆ

ಯೂ ಕೊಗಾಡಿದ. ಅದೇ ಹೊತ್ತಿಗೆ ಭಜಿ ಒಳಗೆ ಹಾಕಲು ಬಂದಿದ್ದ ಶಿವಜಿ. ಅವನಿಗೆ ಹೇಳಿ ದ್ವಾರಕಾ ಪ್ರಸಾದರನ್ನು ಹೊರಗೆ ದಬ್ಬಿಸಿದ ವ.ಂದುಕ."

"ಏನು ಕೆಲಸವಿತ್ತಂತೆ ದ್ವಾರಕಾಪ್ರಸಾದರದು?"

"ಏನಿತ್ತೋ! ತಂದೆಯನ್ನು ಭೆಟ್ಟಿಯಾಗಲು ಬಂದಿರಬೇಕು. ಆದರೆ ಮಾತುಕತೆ ಆಗಲಿಲ್ಲ."

"ಅವರು ಬರುವಾಗ ಅರ್ಸೆನಿಕ್ ಅಥವಾ ಇತರ ಪಾವಡರದ ಚೀಟು ತಂದಿರಬಹುದೆ?"

"ಅದೇನೋ ತಿಳಿಯದು...ಆಗೊಮ್ಮೆ ಈಗೊಮ್ಮೆ ಕಿಸೆಯಲ್ಲಿ ಕೈ ಹಾಕುತ್ತಿದ್ದರಷ್ಟೆ."

"ಅರುಣಪ್ರಸಾದರಿಗೆ ಎಚ ರವಾಗುವ ವರೆಗೆ ಅವರಿಗೆ ಔಷಧಿಯಲ್ಲಿ ಏನನ್ನಾದರೂ ಬೆರೆಸಲಿಕ್ಕೆ ಅವಕಾಶವಿತ್ತೆ?"

"ಶಿವಜಿ ಬಂದಾಗ ಅರುಣಪ್ರಸಾದ ಮಲಗಿ ಎಷ್ಟೊತ್ತಾಯಿತು. ಈಗ ಎಬ್ಬಿಸಬಹುದೆ?" ಎಂದು ನಾನು ಅವನ ಕಿವಿಯಲ್ಲಿ ಮೆಲು ದನಿಯಿಂದ ಮಾತಾಡುತ್ತ ನಿಂತೆ. ಆಗ ಮೂರು ನಾಲ್ಕು ನಿಮಿಷ ದ್ವಾರಕಾ ಪ್ರಸಾದರತ್ತ ನಮ್ಮಿಬ್ಬರ ಲಕ್ಷವೂ ಇರಲಿಲ್ಲ. ಹಾಗಿದ್ದರೆ ಆಗ ಅವರು ವಿಷ ಹಾಕಿರಬಹುದು. ಆದರೆ ನಾನಂತೂ ಅವರು ಬಾಟ್ಲಿ ಹಿಡಿದದ್ದನ್ನು ನೋಡಲಿಲ್ಲ" ಎಂದ.

"ಇದು ಸಂಭಾವ್ಯ. ಏಕೆಂದರೆ ಅವರು ಅತ್ತರದ ವ್ಯಾಪಾರಸ್ಥರು. ಸಣ್ಣ ಬಾಟಲಿಯಲ್ಲಿ ಚೆಲ್ಲದಂತೆ ಅತ್ತರು ಹಾಕಿ ಅವರಿಗೆ ಅಭ್ಯಾಸವಿರುತ್ತದೆ"

ಈ ಸೂಚನೆ ಇಬ್ಬರಿಗೂ ಒಪ್ಪಿಗೆಯಾಯಿತು.

"ಇನ್ನೊಂದು ಮಾತು. ನೀವು ಶಿವಜಿಯಂಥ ಅಶಿಕ್ಷಿತನಿಗೆ ವಿಷವನ್ನು ಲೂಜ ಕೊಡುವುದು ತಪ್ಪಾಯಿತೇನೋ!"

"ಅದಕ್ಕೆ ಉಪಾಯವೇ ಇಲ್ಲ. ಸೀಲ್ಡ ಬಾಟ್ಲಿ ಕೊಟ್ಟರೆ ನಮ್ಮ ಲೆಕ್ಕಕ್ಕೆ ತಪ್ಪಾಗುತ್ತದೆ. ಒಡೆದು ಅರ್ಧ ತುಂಬಿದ ಬಾಟ್ಲಿ ಇದ್ದರೂ ನಮ್ಮ ಲೆಕ್ಕ ಸರಿ ಹೋಗುತ್ತದೆ. ಡಾಕ್ಟರರ ಖಾಸಗಿ ಕೆಲಸಕ್ಕೆ ಇಂಥ ಸಣ್ಣ ಪುಟ್ಟ ಸಾಮಾನಿಗೆ ನಾವು ಹಣ ಕೇಳುವುದಿಲ್ಲ"

"ಇದಕ್ಕೇಕೆ ಭಿಡೆ. ಸಾಮಾನು ಕೊಟ್ಟರೆ ಹಣ ತೆಗೆದುಕೊಳ್ಳಬೇಡವೆ?"

"ಅವರೇ ಈ ನೌಕರಿ ನನಗೆ ಕೊಡಿಸಿದದವರು. ಅಲ್ಲದೆ ಅಂಗಡಿಯ ಮಾಲಕರಾದರೂ ಡಾಕ್ಟರರ ಖಾಸಗೀ ಉಪಯೋಗದ ಸಾಮಾನಿಗೆ ರೊಕ್ಕ ತೆಗೆದುಕೊಳ್ಳಬಾರದೆಂದು ಹೇಳಿದ್ದಾರೆ. ಲೆಕ್ಕಕ್ಕಾಗಿ ಮಾತ್ರ ಅರ್ಧ ತುಂಬಿದ ಬಾಟ್ಲಿ ಇಟ್ಟುಕೊಳ್ಳುತ್ತೇವೆ. ಇಲ್ಲವಾದರೆ ಹಣ ನಾನು ಕೈಯಿಂದ ಕೊಡಬೇಕಾದೀತು. ಖರ್ಚಾದ ಮಾಲು ಅಂಗಡಿಯ ಉಪಯೋಗಕ್ಕೆ ಎಂದು ಕೊನೆಗೆ ತೋರಿಸುತ್ತೇವೆ. ನಮ್ಮ ಅಂಗಡಿ ಬದುಕುವುದು ಡಾಕ್ಟರ ಸಕ್ಸೇನಾ ಕಳಿಸಿಕೊಟ್ಟ ಪೇಶಂಟರ ಮೇಲೆಯೇ ಅನ್ನಬಹುದು. ಈ ಭಾಗದಲ್ಲಿ ಇನ್ನಾವ ಡಾಕ್ಟರರೇ ಇಲ್ಲ"



"ಆದರೂ ಅರ್ಸೆನಿಕ್ ಆ ಅಶಿಕ್ಷಿತನ ಕೈಯಲ್ಲಿ..."

"ಅದೇಕೆ?–ಅವನ ಅಶಿಕ್ಷಿತನಾದರೇನು? ಡಾಕ್ಟರರ ಖಾಸಗೀ ಬೇಡಿಕೆಗಳನ್ನು ಒಯ್ಯುವವ ಶಿವಜೀನೆ. ಅಲ್ಲದೆ ಅವರು ಸಹಿ ಮಾಡಿ ಚೀಟಿ ಕಳಿಸಿಕೊಟ್ಟರು"

"ಅವರ ಖಾಸಗೀ ಉಪಯೋಗಕ್ಕೇ ಎಂದು ನಿಮಗೆ ಹೇಗೆ ಗೊತ್ತು?"

"ಶಿವಜೀ ಬರುವುದೇ ಅದರ ಲಕ್ಷಣ. ಸಿಗ್ನಲ್ ಇದ್ದ ಹಾಗೆ."

"ಕದಾಚಿತ್ ಶಿವಜಿ ಬಂದು ಡಾಕ್ಟರರಿಗೆ ಬೇಕೆಂದು ಹೇಳಿ ತನ್ನ ಕೆಲಸಕ್ಕಾಗಿ ಏನನ್ನಾದರೂ ಬೇಡಿದರೆ ನಂಬುತ್ತೀರೋ?"

"ಖಂಡಿತಾ ಇಲ್ಲ. ಹಾಗೆ ಆತ ಹಿಂದಕ್ಕೆ ಪೆಪ್ಪರುಮಿಂಟ್ ಒಯ್ದುದ್ದುಂಟು. ಅಂದಿನಿಂದ ಡಾಕ್ಟರದೇ ಚೀಟಿ ಬರದಿದ್ದರೆ ನಾವು ಏನನ್ನೂ ಕೊಡುವುದಿಲ್ಲ."

"ಈ ಚೀಟಿ ಜೋಕೆಯಿಂದ ಇಟ್ಟುಕೊಳ್ಳಿರಿ. ಇಂಥ ಸಮಯದಲ್ಲಿ ಯಾರನ್ನೂ ನಂಬಬಾರದು."

"ಅದನ್ನು ನಾನು ಎಲ್ಲಿಯೂ ಕಳೆದುಕೊಳ್ಳುವುದಿಲ್ಲ"

"ನಿಮ್ಮ ಬಳಿ ಉಂಟೆ? ಅಂಗಡಿಯಲ್ಲಿ ಇಟ್ಟದ್ದೀರಾ?

"ಉಂಟು. ಅದನ್ನು ನನ್ನ ಕಿಸೆಯಲ್ಲೇ ಇಟ್ಟಿರುತ್ತೇನೆ." ಎಂದು ಚೀಟಿ ತೋರಿಸಿದನು. ಅದನ್ನು ಕಿಡಕಿಯ ಬೆಳಕಿಗೆ ಹಿಡಿದು ನೋಡಿದೆ. ಡಾಕ್ಟರರ ಕೈ ಬರಹ, ಲೆಟರ್ ಹೆಡ್, ಎಲ್ಲವೂ ಇತ್ತು. ಗಡಿಬಿಡಿಯಿಂದ ಗೀಚಿದ್ದರು., ಅಷ್ಟೆ.

"ನೋಡಿರಿ, ಇದು ಡಾಕ್ಟರರ ಕೈ ಬರಹವೇ ಅಂತ ನೀವು ಹೇಗೆ ಗುರುತಿಸಿದಿರಿ?"

"ನಾನು ಗುರುತಿಸಬಲ್ಲೆ. ತುಸು ಗಜಿಬಿಜಿ ಅಕ್ಷರ ಇದೆ ಅಷ್ಟೆ. ಆದರೇನಂತೆ? ಅವರು ಏಜೆಂಗೀ ಸಾಮಾನು ಬೇಡುವಾಗ ಒಮ್ಮೊಮ್ಮೆ ನಿಂತು, ಒಮ್ಮೊಮ್ಮೆ ಗೋಡೆಗೆ ಆನಿಸಿ ಬರೆದಿರುತ್ತಾರೆ. ಅದಕೆ ಅಕ್ಷರ ಗಜಿಬಿಜಿ ಆಗುತ್ತದೆ."

"ನಾಳೆ ಡಾಕ್ಟರರು ಇದು ನನ್ನ ಕೈ ಬರಹವಲ್ಲ ಎಂದು ಹೇಳಿದರೆ..."

"ಹೇಳಿದರೆ ಸುಳ್ಳಾಡಿದಂತಾಗುತ್ತದೆ. ಅವರವರ ಪಾಪ ಪುಣ್ಯ ಅವರವರಿಗೆ"

"ಅರುಣಪ್ರಸಾದರು ಒಂದು ವಿಲ್ ಮಾಡಿದ್ದರು. ಗೊತ್ತೇ?"

"ಇಲ್ಲವಲ್ಲ."

"ಯಾಕೆ, ಸಿಸ್ಟರ್ ಅವರು ನಿಮಗೆ ಹೇಳಲಿಲ್ಲವೆ? ನಿನ್ನೆ ಪೆರುಮಾಳ್ ಡಾಕ್ಟರರನ್ನು ಪ್ರಶ್ನಿಸುವಾಗ ಬಾಗಿಲ ಹಿಂದೆ ಅವರು ನಿಂತಂತಿತ್ತು, ಕೇಳಿರಬೇಕು."

"ಅವಳು ನನಗೆ ಹೇಳುತ್ತಾಳೆಯೇ?!...ಅವದಶೆ." ಜೀವಣರಾವ ಸಿಟ್ಟಿಗೇಳುವ ಲಕ್ಷಣ ತೋರಿಸಿದ. ಅವರಿಗೆ ಸಂತೋಷವಾಗಲಿಯೆಂದು ನುಡಿದೆ.

"ಹಾಗಾದರೆ ನಿಮಗೆ ಸಂತೋಷದ ಸುದ್ದಿ. ಅರುಣ ಪ್ರಸಾದ ನಿಮ್ಮವರಿಗೆ ೪೦೦೦ ರೂಪಾಯಿ ಕೊಟ್ಟಿದ್ದಾರೆ"

ಆ ಒಣಗಿ ಹೋದ ದೇಹ ಥರಥರನೆ ನಡುಗುತ್ತ ಚಟ್ಟನೆ ಕುರ್ಚಿಯಿಂದ ಎದ್ದಿತು. ನಿಂತಲ್ಲಿಯೇ ನಿಂತು ಅವಳತ್ತ ಮುಖ ಮಾಡಿ "ಈ ಅವದಶೆ ದುಡ್ಡಿಗಾಗಿ ಇನ್ನೂ ಏನೇನು ಮಾಡುತ್ತಾಳೋ..." ಎಂದವನೆ ಮತ್ತೆ ಕುರ್ಚಿಯಲ್ಲಿ ಗಕ್ಕನೆ ಕುಳಿತುಕೊಂಡು ಮುಖ ಮುಚ್ಚಿಕೊಂಡ.

ಅವಮಾನದಿಂದ ಕಠೋರಳಾದ ಸಾಳೂಬಾಯಿ ಅವನ ಎದುರಾಗಿ ನಿಂತಳು "ನಾನೂ ಈಮಾತು ಕೇಳಿ ಕೇಳಿ ಕಿವಿಗೆ ತೂತು ಬಿದ್ದಿತು. ಇದು ನೋಡಿ, ನಾನು ನಿಮ್ಮ ಲಗ್ನದ ಹೆಂಡತಿಯಲ್ಲ. ನನ್ನ ಮೇಲೆ ನಿಮ್ಮ ಅಧಿಕಾರ ಯಾವುದೂ ಇಲ್ಲ: ದಾರಿಗೆ ಬಿದ್ದು ಸಾಯುವವರಿದ್ದಿರಿ. ನಾನೂ ಒಂಟಿ ಜೀವ. ಮನೆಗೆ ತಂದು ಸಾಕಿದೆ. ನೌಕರಿ ಕೊಡಿಸಿದೆ. ಸಾಕು ಇಲ್ಲಿ ಈ ಬಾಳು. ಇನ್ನು ನೀವು ನಿಮ್ಮ ಪಾಡಿಗೆ, ನಾನು ನನ್ನ ಪಾಡಿಗೆ. ನನ್ನ ಮನೆ ಬಿಟ್ಟು ಹೊರಡಿ. ನಿಮ್ಮಂಥವರನ್ನು ಸಾಕಿದ್ದು ನನ್ನದೇ ಮೂರ್ಖತನ." ಎಂದು ಗರ್ಜಿಸಿದಳು.

ತುಸು ಹೊತ್ತು ಇಬ್ಬರೂ ಸ್ತಬ್ಧರಾಗಿ ಒಬ್ಬರನ್ನೊಬ್ಬರು ಹರಿದು ತಿನ್ನುವವರಂತೆ ನೋಡತೊಡಗಿದರು. ಅಚಾತುರ್ಯವಾಯಿತು.

ನಾನು ಎದ್ದು ನಿಂತು ಅವರಿಬ್ಬರಿಗೂ ಹೇಳಿಕೊಂಡೆ: "ನೋಡಿರಿ, ನಾನು ನಿಮ್ಮ ನಡುವೆ ಜಗಳ ಹಚ್ಚಲ ಬಂದವನಲ್ಲ. ಏನೋ ಒಳ್ಳೆ ಸುದ್ದಿ ಅಂತ ಹೇಳಲಿಕ್ಕೆ ಬಂದೆ. ನಾನು ಬಂದದ್ದಕ್ಕೆ ಹೀಗಾಯಿತೆಂದು ನನಗೆ ನಿದ್ದೆಗೆಡುವುದು ಬೇಡ. ನಿಮ್ಮ ಸುಖಜೀವನದಲ್ಲಿ ಉಪ್ಪು ಹಾಕಲು ಬಂದವನಲ್ಲ."

"ಇಲ್ಲ, ಇಲ್ಲ, ಹಾಗೇನೂ ಇಲ್ಲ. ಚಹಾ ಮಾಡುತ್ತೇನೆ. ಕೂಡಿರಿ" ಎಂದಳು ಸಾಳೂಬಾಯಿ. "ಇವೆಲ್ಲ ನಮ್ಮ ದಿವಸದ ರಗಳೆ" ಅಂದ ಜೀವಣರಾವ.

"ಹಾಗಾದರೆ ನಿಮಗೆ ನಿಜವಾಗಿ ಸಂತೋಷವಾಗುವ ಇನ್ನೊಂದು ಸುದ್ದಿ ಹೇಳುತ್ತೇನೆ. ಹೇಳಲಿ?"

"ಆಗಬಹುದು."

"ದ್ವಾರಕಾಪ್ರಸಾದರನ್ನು ಪೋಲೀಸರು ಅರೆಸ್ಟ ಮಾಡಿದ್ದಾರೆ ಅವನ ಹತ್ತಿರ ಒಂದು ಕಣ ಅರ್ಸೆನಿಕ್ ಸಿಕ್ಕರೂ ಸಾಕು–ಕೋಟಿಗೆ, ಶರ್ಟಿಗೆ,ಬೂಟಿಗೆ–ಎಲ್ಲಿ ತುಸು ಹತ್ತಿದರೂ ಆಯಿತು, ಅವನ ಕ್ರೈಮ್ ಸಿದ್ಧವಾದಂತೆಯೇ!" ನಾನು ಪೆರುಮಾಳ್‌ನಿಗೆ ಹೇಳಿ ತನ್ನ ಕೈ ಬರಹ ಗುರುತಿಸಿ ಹಾಗೆ ಜವಾಬು ಬರಕೊಡಲಿ ಅಂತ ಹೇಳಿದೆ. ಹಾಗೆ ವ್ಯವಸೆ ಮಾಡುವುದಾಗಿ ನಾನು ಜೀವಣರಾವ–ಸಾಳೂಬಾಯಿ ದಂಪತಿಗಳಿಗೆ ಅಭಿವಚನ ಕೊಟ್ಟಿರುವುದಾಗಿ ತಿಳಿಸಿದೆ.

"ನಿನ್ನಂಥ ಹಸಿರು ಮಿರಚೀ ವಚನಾ ಪಾಲಿಸಲಿಕ್ಕೆ ಪೋಲೀಸ ಡಿಪಾರ್ಟಮೆಂಟ ಮಾಡಿಲ್ಲ ಸರಕಾರದವರು–ಏನು, ಖರೇ ಹೇಳು. ಛೋಟೂ!"

ಹೇಳುವುದನ್ನು ಹೇಳಿದೆ.

-೫-

ಪೆರುಮಾಳ, ನಾನು ಶಿವಾ, ಡಾಕ್ಟರ, ಒಬ್ಬಿಬ ಖಾಸಾ ಪಂಚರು, ಪೋಲೀಸ ಕಾರಕೂನ, ಇಷ್ಟೆಲ್ಲ ಕೂಡಿ ಮರು ದಿವಸ ಮುಂಜಾನೆ ಜೀವಣರಾವನ ಕೆಮಿಸ್ಟ್ಸ–ಡ್ರುಗ್ಗಿಸ್ಟ್ಸ ಅಂಗಡಿಗೆ ಜಬಾನಿಗೆ ಬಂದೆವು.

ಜೀವಣರಾವ ನಮ್ಮದೇ ದಾರಿ ಕಾಯುತ್ತಿದ್ದ. ತನ್ನ ಬಕ್ಕಣದಲ್ಲಿ ನಾಲ್ಕು ಮಡಿಸಿದ ಆ ಚೀಟಿಯನ್ನು ಪೆರುಮಾಳನ ಕೈಗೆ ಇತ್ತ. ಪೆರುಮಾಳ್ ತನ ಪೋಲೀಸ ಠೀವಿಯಿಂದ "ಡಾಕ್ಟರ್, ಇದು ನೀವು ಬರೆದ ಕಾಗದ ಹೌದೋ ಅಲ್ಲೋ." ಎಂದು ಕೇಳಿದ.

ಡಾಕ್ಟರ ಅಳ್ಳೆದೆಯವರು. ಆ ಚೀಟಿ ನೋಡುತ್ತ ಅಲ್ಲಲ್ಲಿ ಅಕ್ಷರ ಸೊಟ್ಟ ಪಟ್ಟ ಆದದ್ದನ್ನು ನೋಡುತ್ತ "ಕೆಲವು ಅಕ್ಷರ ನನ್ನಂತಿವೆ. ಕೆಲವು ಸೊಟ್ಟ ಪಟ್ಟ ಇವೆ. ನಾನು ಹೀಗೆ ಬರೆಯುವುದಿಲ್ಲ" ಎಂದು ಗೊಣಗಿದರು.

"ಇದು ನಿಮ್ಮ ಲೆಟರ್‌ಹೆಡ್ ತಾನೆ?"

"ಹೌದು, ಆದರೆ ಯಾರಾದರೂ ಒಂದು ಹಾಳೆ ದಿಯಬಹುದು"

"ಆಗಲಿ, ಅಂತೂ ಕೆಲವಾದರೂ ನಿಮ್ಮ ಅಕ್ಷರ ಹೌದಲ್ಲೋ?"

"ನನ್ನ ಅಕ್ಷರದಂತೆ ಇನ್ನಾರಾದರೂ ಫೋರ್ಜರಿ ಮಾಡಲಾರರೇ?" ಎಂದ ಪುಕ್ಕ ಸಕ್ಸೇನಾ?.

"ಆಯಿತು, ಹಾಗೇ ನಿಮ್ಮ ಜಬಾನಿ ಆಗಲಿ: ಶಿವಜಿ, ಈ ಕಾಗದ ನೀನು ಡಾಕ್ಟರರ ಟೇಬಲ್ ಮೇಲಿಂದ ಕದ್ದು ಯಾರಿಗಾದರೂ ಕೊಟ್ಟಿದ್ದೀಯ?"

"ಇಲ್ಲ ಸಾರ್."

"ಹಾಗಾಧರೆ ನೀನು ತೆಗೆದುಕೊಂಡು ಡಾಕ್ಟರರ ಹಾಗೆ ಕೈ ಬರಹ ಬರೆದಿದ್ದೀಯಾ?"

"ನನಗೆ ಇಂಗ್ಲೀಷೇ ಬರೋದಿಲ್ಲ ಸಾರ" ಎಂದ ಶಿವಜಿ.

"ಹಾಗಾದರೆ ನಿನಗೆ ಒಬ್ಬ ಸಹಾಯಕರು ಇರಬೇಕು."

"ಇಲ್ಲ ಸರ್" ಎಂದು ಶಿವಜಿ ನಡುಗತೊಡಗಿದ.

"ಜೀವಣರಾವ, ಇದು ಡಾಕ್ಟರರ ಕೈಬರಹ ಹೌದೊ ಅಲ್ಲೊ?"

ಜೀವಣರಾವ ಯಾವ ಹೆದರಿಕೆ ಇಲ್ಲದೆ "ಹೌದು ಸರ್. ನನಗೆ ಯಾವ ಸಂಶಯವಿಲ್ಲ. ಈ ಮೊದಲು ಡಾಕ್ಟರರು ತಮ್ಮ ಖಾಸಗೀ ಲೆಟರ ಹೆಡ್ ಮೇಲೆ ಬರೆದ ಇತರ ಚೀಟಿಗಳೊಡನೆ ನಾನು ಇದನ್ನು ಹೋಲಿಸಿ ನೋಡಿದ್ದೇನೆ. ಡಾಕ್ಟರರು ಪೇಶಂಟರಿಗಾಗಿ ಬರೆದು ಕೊಡುವಾಗ ಟೇಬಲ್ ಬದಿಗೆ ಕುಳಿತಿರುತ್ತಾರೆ. ಹೀಗೆ ಖಾಸಗಿ ಆರ್ಡರ್ ಕೊಡಬೇಕಾದಾಗ ಒಮ್ಮೊಮ್ಮೆ ಅಟ್ಟದ ಮೇಲೆ ತೋಟದಲ್ಲಿ ಎಲ್ಲಿ ಬೇಕಾದಲ್ಲಿ ನಿಂತೇ ಬರೆದು ಕೊಟ್ಟಿರುತ್ತಾರೆ. ಇಂಥ ಎಲೆಂಟು ಚೀಟಿ ನನ್ನ ಮೆಮೊ ಸ್ಟ್ಯಾಂಡ್ ಮೇಲೆ ಇವೆ. ನೀವೇ ಹೋಲಿಸಿ ನೋಡಬಹುದು." ಎಂದು ಆ ಮುಳ್ಳು ಮೆಮೊ ಸ್ಟ್ಯಾಂಡ ಮೇಲಿನ ಕಾಗದಗಳನ್ನು ಹೊರತೆಗೆದು ಅದರಲ್ಲಿ ಎಂಟು ಚೀಟಿಗಳನು ಬೇರ್ಪಡಿಸಿ ಪೆರುಮಾಳನ ಕೈಗಿತ್ತ.

ಪೆರುಮಾಳ್ ಅತ್ತ ನೋಡಲೆ ಇಲ್ಲ. "ಇಂಥ ಆರ್ಡರ್ ಬಂದಾಗೆಲ್ಲ ನೀವು ಅವನ್ನು ಈ ಮೆಮೊ ಸ್ಟ್ಯಾಂಡ್ ಮೇಲೇ ಚುಚ್ಚಿ ಇಟ್ಟಿರುತ್ತೀರಲ್ಲವೇ?"

"ಹೌದು ಸರ್."

"ಹಾಗಾದರೆ ಡಾಕ್ಟರರ ಅರ್ಸೆನಿಕ್ ಆರ್ಡರ್ ಮೇಲೆ ಪಂಚ್ ಮಾರ್ಕ (ತೂತು) ಇಲ್ಲವೇಕೆ?"

ಜೀವಣರಾವ ತುಸು ಕಂಗಾಲಾದ.

"ಇಲ್ಲ, ಇದೊಂದು ಆರ್ಡರ್ ನಾನು ಸ್ಟ್ಯಾಂಡಿಗೆ ಚುಚ್ಚಲಿಲ್ಲ."

"ಏಕೆ?"

"ಅರ್ಸೆನಿಕ್ ಆದ್ದರಿಂದ ಅದನು ಜೋಕೆಯಿಂದ ಇಡಬೇಕಾಯಿತು."

"ಈ ಚೀಟಿ ನಿಮಗೆ ಮುಟ್ಟಿದನಂತರ ಅದು ನಿಮ್ಮ ಕೈ ಬಿಟ್ಟು ಇನ್ನೊಬ್ಬರ ಕೈ ಸೇರಿಲ್ಲವಷ್ಟೆ?"

"ಇಲ್ಲ, ಅದನ್ನು ನಾನು ಎಲ್ಲಿಯೂ ಯಾರ ಕೈಗೂ ಹತ್ತದಂತೆ ಇಟ್ಟಿದ್ದೇನೆ. ಎಲ್ಲಿ ಹೋದರೂ ಅದು ನನ್ನ ಕಿಸೆ ಬಿಟ್ಟು ತೆಗೆದಿಲ್ಲ."

"ಅದನ್ನು ಕಿಸೆಗೆ ಹಾಕುವಾಗ ನಾಲ್ಕು ಮಡಿಕೆಯಾಗುವಂತೆ ಮಡಿಚಿದ್ದೂ ನೀವೇ ಏನು?"

"ಹೌದು."

"ನಿಮ್ಮ ಕಿಸೆ ಬಿಟ್ಟು ಅದು ಕದಲಲಿಲ್ಲ ತಾನೆ"

"ಖಂಡಿತಾ ಕದಲಲಿಲ್ಲ. ನನ್ನ ಜೀವದಂತೆಯೇ ಜೋಕೆಯಿಂದ ಕಾಯ್ದಿದ್ದೇನೆ."

"ವಾಹವ್ವಾ, ಇದಕ್ಕೆ ಅನ್ನಬೇಕು ದಕ್ಷತೆ" ಎಂದು ಪೆರುಮಾಳ್ ಹೊಗಳುತ್ತ, "ಎಲ್ಲಿ ನೋಡುವಾ?" ಎಂದು ಕಾಗದ ಬಿಚ್ಚಿ ನೋಡ ತೊಡಗಿದ. "ಎಲ, ನೀವು ನಾಲ್ಕು ಮಡಿಕೆ ಅಂದಿರಿ. ಪೂರ್ತಿ ನಾಲ್ಕು ಮಡಿಕೆ ಕಾಣಿಸುವುದಿಲ್ಲವಲ್ಲ? ಯಾರೋ ಬುಡಕ್ಕೆ ಒಂದು ಚೂರು ಕಾಗದ ಹರಿದಂತೆ ತೋರುತ್ತದೆ. ಪೂರ್ತಿ ಚಚ್ಚೌಕ ಅಲ್ಲದಿದರೂ ಒಂದಿಷ್ಟು ಸೊಟ್ಟ ಪಟ್ಟ ಉದ್ದ ಪಟ್ಟಿ ಹರಿದಿದ್ದಾರಲ್ಲ. ಅಲ್ಲವೇ ಡರೆಕ್?" ಎಂದು ಕಾಗದ ನನ್ನೆದುರಿಗೆ ಹಿಡಿದು ನನ್ನತ್ತ ದಿಟ್ಟಿಸಿ ನೋಡತೊಡಗಿದ.

ನಾನು ಪೆರುಮಾಳ್ ಒಬ್ಬರನ್ನೊಬ್ಬರ ವಿಸ್ಮಯದಿಂದ ನೋಡುತ್ತಿರುವಾಗ ಒಮ್ಮೆಲೆ ಏನೋ ಒಂದು ಪ್ರಾಣಿ ನಮ್ಮ ಹತ್ತಿರ ನುಸುಳಿದಂತಾಯಿತು; ಏನೋ ಬಾಗಿಲು ತೆರೆದಂತಾಯ್ತು; ಯಾರೋ ಓಡಿದಂತಾಯ್ತು; ದೊಪ್ಪನೆ ಬಿದ್ದಂತಾಯ್ತು....

ಜೀವಣರಾವ ಕೌಂಟರಿನ ಬಾಗಿಲು ತೆಗೆದು ನುಸುಳಿ ಓಡಿ ಹೋಗಲು ಭರದಿಂದ ಯತ್ನಿಸುವಾಗ ಪೆರುಮಾಳ್ ಏನೂ ಅರಿಯದವರಂತೆ ನನ್ನ ಕಡೆಗೇ ನೋಡುತ್ತ ತನ್ನ ಪೋಲೀಸ ಠೀವಿಯ ಅಡ್ಡಗಾಲು ಹಾಕಿ ಅವನನ್ನು ನೆಲಕ್ಕೆ ಉರುಳಿಸಿದ್ದ. ಅವನ ನಟನೆ ವಿಸ್ಮಯಕಾರಿಯಾಗಿತ್ತು. ಯಾರೋ ಪೋಲೀಸ್ ವ್ಹಿಸಲ್ ಊದಿದರು. ಗುಪ್ತವೇಷದಲ್ಲಿ ಗೋಡೆಯ ಮರೆಗೆ ಅಡಗಿದ್ದ ಮೂವರು ಕಾನ್‌ಸ್ಟೇಬಲ್‌ರು ಓಡಿಬಂದು ನೆಲಕ್ಕುರುಳಿದ ಜೀವಣರಾವನ ಕೈಗೆ ಬೇಡಿ ತೊಡಿಸಿದರು. ಅವನನ್ನು ಎಬ್ಬಿಸಿ ಕುಳ್ಳಿರಿಸಿದರು.

ಪೆರುಮಾಳ್ ಮತ್ತೆ ನನ ಕಡೆಗೆ ಹೊರಳಿ, Congratulations" ಎಂದ.

ಅವನಿಗೆ ಥ್ಯಾಂಕ್ಸ್ ಹೇಳುತ್ತ "ನಿನ್ನನ್ನೂ ಅಭಿನಂದಿಸಬೇಕು. ಇಂದಿನ ನಾಟಕಕ್ಕೆ ನೀನೂ ಹೀರೋ," ಎಂದೆ.

"ಮೊದಲು ನಮ್ಮ ಪುರಾವೆ ಸಾಬೀತು ಮಾಡುವಾ" ಎನ್ನುತ್ತ ಪೆರುಮಾಳ್ ಕಿಸೆಯಿಂದ ಅರುಣಪ್ರಸಾದನ ಔಷಧದ ಬಾಟಲಿ ಹೊರಗೆ ತೆಗೆದ. ಅದಕ್ಕೆ ಅಂಟಿಸಿದ ಡೋಸೇಜ ಕಾಗದದ ಅಂಚಿಗೆ ಡಾಕ್ಟರರ ಚೀಟಿಯ ಬುಡಕ್ಕೆ ಹರಿದ ಅಂಚನ್ನು ಜೋಡಿಸಿ ನೋಡಿದೆವು. ಕಾಗದದ ಬಣ್ಣ, ಟೆಕ್ಸ್ಚರು, ಸಾಧಾರಣ ದಪ್ಪಳತೆ ಹೋಲಿಸಿದೆವು. ಈ ಚೀಟಿಯ ಬುಡದಿಂದ ಹರಿದ ಪಟ್ಟಿಯನ್ನೇ ಡೋಸೇಜ ಸ್ಲಿಪ್ ದಂತೆ ಅಂಟಿಸಿದುದು ಸಾಬೀತ ಆಯಿತು.

ಪೆರುಮಾಳ್‌ನ ಧಮ್ಕಿಗೆ ಹೆದರಿದ ಜೀವಣರಾವ ಅರ್ಸೆನಿಕ್‌ದ ಮೂಲ ಬಾಟಲಿ ತೆಗೆದು ತೋರಿಸಿದ. ಅರ್ಧದಷ್ಟು ಅರ್ಸೆನಿಕ್ ಶಿವಜಿಗೆ ಕೊಟ್ಟನೆಂದೂ, ಉಳಿದರ್ಧ ಮೂಲ ಬಾಟಲಿಯಲ್ಲಿ ತನ್ನ ಲೆಕ್ಕಕ್ಕಾಗಿ ಹಾಗೆಯೇ ಇಟ್ಟನೆಂದೂ ಮೊದಲು ಹೇಳಿದ್ದನಷ್ಟೆ. ಈಗ ಆ ಬಾಟ್ಲಿ ನೋಡಲಾಗಿ ಅದರಲ್ಲಿ ಇದ್ದ ಎಲ್ಲ ಅರ್ಸೆನಿಕ್ ಪಾವಡರ್ ತೀರಿಹೋಗಿತ್ತು. ಅದನ್ನೂ ಪಂಚನಾಮೆ ಮಾಡಿದೆವು. ಅವೆಲ್ಲ ಕಾಗದ ಬಾಟಲಿಗಳ ಮೇಲೆ ಐಡೆಂಟಿಟಿ ಮಾರ್ಕ ಮಾಡಿ ಎಲ್ಲರೂ ಜೀವಣರಾಯನೊಡನೆ ಚೌಕಿಗೆ ಮರಳಿದೆವು.

ಚೌಕಿಯಲ್ಲಿ ಇನ್ನಿಬ್ಬರು ಕಾನ್‌ಸ್ಟೇಬಲ್‌ರೊಡನೆ ಪೆರುಮಾಳ್ ಜೀವಣರಾಯನನ್ನು ಒಳಕೋಣೆಯಲ್ಲಿ ಕರೆದೊಯ್ದನು. ಅರ್ಧ ಗಂಟೆಯೊಳಗಾಗಿ ಅವನಿಂದ ಪೂರ್ತಿ ಜಬಾನಿ ಪಡೆದುಕೊಂಡು ಬಂದನು.

-೩-

ಡಾಕ್ಟರರ ಭಿಡೆಗಾಗಿ ಕೆಮಿಸ್ಟ್-ಡ್ರಗ್ಗಿಸ್ಟ್ ಕಂಪನಿಯ ಮಾಲಕನು ಜೀವಣರಾಯನಿಗೆ ನೌಕರಿ ಕೊಟ್ಟಿದ್ದನಾದರೂ ಅವನಿಗೆ ಪೂರ್ತಿ ಪಗಾರ ಗೊತ್ತು ಮಾಡಿರಲಿಲ್ಲ. ತಿಂಗಳಾ ೮೦ ರೂಪಾಯಿ ಮಾತ್ರ ಕೊಡುತ್ತಿದ್ದನು. ಸಾಳೂಬಾಯಿ ಮೇಲೆ ಅವಲಂಬನದಿಂದಾಗಿ ಅಲ್ಲಿಯೇ ಇರದೆ ಉಪಾಯವಿರಲಿಲ್ಲ. ಮಾಲಕನು ನೌಕರಿಯನ್ನು ಕಾಯಂ ಮಾಡಬೇಕಾದರೂ ೨೦೦೦ ರೂಪಾಯಿ ಡಿಪಾಜಿಟ್ ಕೇಳತೊಡಗಿದ್ದನ. ಇವನದಾದರೂ ಬೋರೆ ಕೈ. ಸಾಳೂಬಾಯಿ ಸ್ವತಂತ್ರಳು. ಇವನಿಗಾಗಿ ೨೦೦೦ ಉಳಿಸಲು ಅವಳು ಸರ್ವಥಾ ಸಿದ್ಧಳಿರಲಿಲ್ಲ. ಮಾಲಕ ಕಾಡಿದರೆ ಡಾಕ್ಟರರಿಗೆ ಹೇಳೋಣ ಎಂದು ಅವಳ ಸುಲಭ ಉಪಾಯ. ಜೀವಣರಾಯನಿಗೆ ತನ್ನ ಸಣ್ಣ ಪುಟ್ಟ ಚಟಕ್ಕಾಗಿ ದುಡ್ಡು ಇಲ್ಲದೆ ಸ್ನೋ ಪಾವಡರ ಒಳಗಿಂದೊಳಗೆ ಮಾರಿಕೊಂಡು ದುಡು ತಿಂದದ್ದು ಹೊರ ಬಿದ್ದ ಕೂಡಲೆ ಮಾಲಕ ಹೆಚ್ಚು ಕಾಡತೊಡಗಿದ. ಇಂಥ ಸಂದರ್ಭದಲ್ಲಿ ಡಾಕ್ಟರರಿಗೆ ಹೇಳುವುದೂ ಕಠಿಣವಾಯಿತು.

ಅರುಣಪ್ರಸಾದನ ಮೃತ್ಯುಪತ್ರಕ್ಕೆ ಸಾಕ್ಷಿಯಾಗಿ ಹೊರಗಿನವನೊಬ್ಬ ಬೇಕಾದಾಗ ಡಾಕ್ಟರ ಸಕ್ಸೇನಾ ಇವನಿಗೆ ಹೇಳಿಕಳಿಸಿದ್ದರು. ಅದರ ಮೇಲೆ ಇವನ ಸಹಿಯೂ ಇತ್ತು. ಆದ್ದರಿಂದ ಅರುಣಪ್ರಸಾದ ಸತ್ತರೆ ಸಾಳೂಬಾಯಿಗೆ ೪೦೦೦ ರೂಪಾಯಿ ರೋಖ ಬರುವ ಮಾತು ಜೀವಣರಾವನಿಗೆ ಗೊತ್ತಿತ್ತು. ಆದರೆ ಗೊತ್ತಿಲ್ಲದವರಂತೆ ನನ್ನ ಎದುರು ನಟಿಸಿದ್ದ. ಸಾಳೂಬಾಯಿಗೆ ಗೊತ್ತಾದದ್ದು ಪೆರುಮಾಳನ ಗರ್ಜನೆ ಕೇಳಿದಾಗಲೆ.

ಅಂದು ಶನಿವಾರ ಜೀವಣರಾವನ ದೈವ ತೆರೆಯಿತು. ಬೇಗ್ಗೆ ಶಿವಜಿ ಚೀಟಿ ಕೊಟ್ಟು ಅರ್ಸೆನಿಕ್ ಒಯ್ದೊಡನೆ ಜೀವಣರಾಯನ ವಿಚಾರ ಚಕ್ರ ಸುರುವಾಯಿತು.

ಆಸ್ಪತ್ರೆಯ ದಾರಿ ಕೇಳುತ್ತ ದ್ವಾರಕಾಪ್ರಸಾದ ಅಂದೇ ಮಧ್ಯಾಹ್ನ ಅಲ್ಲಿ ಬಂದಾಗ ಪಾನ ಸಿಗರೇಟ ಅಂಗಡಿಯವನು ಜೀವಣರಾಯನನ್ನೇ ಜೋಡು ಮಾಡಿ ಕಳಿಸಿದ. "ಓಹೋ, ಬರ್ರಿ. ಅದಕ್ಕೇನಂತೆ. ನಾನು ಕರೆದೊಯ್ಯುತ್ತೇನೆ" ಮುಂತಾಗಿ ಆಶ್ವಾಸನೆ ಕೊಟ್ಟು ಜೀವಣರಾಯ ಅವನ ಏಕೆ ಬಂದಿದ್ದನೆಂಬುದನ್ನು ತಿಳಿದುಕೊಂಡ. ಜೀವಣರಾಯ ಸಾಳೂಬಾಯಿ ಸಂಬಂಧ ಗೊತ್ತಿರದ ದ್ವಾರಕಾಪ್ರಸಾದ ಸತ್ಯವನ್ನು ಗೊಣಗಿರಬೇಕು. ದ್ವಾರಕಾಪ್ರಸಾದ ಬಂದದ್ದು ತಂದೆಯ ಕಾಲು ಬಿದ್ದು ಮನ ಕರಗಿಸಿ, ಅವನನ್ನು ವಿಲ್ಲು ಬದಲಾಯಿಸಲಿಕ್ಕೆಂದು. ಅವನು ಯಶಸ್ವಿಯಾಗಿದ್ದರೆ ಜೀವಣರಾಯನ ಆಸೆ ಮಣ್ಣು ಗೂಡಬಹುದಾಗಿತ್ತು.

ಈ ಸಂಕಟ ತಪ್ಪಿಸುವುದು ಹೇಗೆ? ವಿಲ್ಲು ಬದಲಾಯಿಸುವ ಮೊದಲೇ ಅರುಣಪ್ರಸಾದ ಸಾಯಬೇಕು, ಇದೊಂದೇ ಉಪಾಯ.! ಜೀವಣರಾವ ಉಳಿದ ಅರ್ಸೆನಿಕ್ ಕಾಗದ ಪೊಟ್ಟಣದಲ್ಲಿ ಕಟ್ಟಿಕೊಂಡು ಕಿಸೆಗಿಟ್ಟುಕೊಂಡೇ ದ್ವಾರಕಾನ ಜೊತೆಗೆ ಆಸ್ಪತ್ರೆಗೆ ಬಂದ. ಶನಿವಾರ ಮಧ್ಯಾಹ್ನವಾದ್ದರಿಂದ ಆಳು ಹೋಳು ಯಾರೂ ಇರಲಿಲ್ಲ ದ್ವಾರಕಾಪ್ರಸಾದ 'ಪಿತಾಜಿ, ಪಿತಾಜಿ' ಎನ್ನುತ್ತಿರುವಾಗಲೇ ಜೀವಣರಾವ ಆ ಪುಡಿಯನ್ನು ಔಷಧದಲ್ಲಿ ಸೇರಿಸಿದ. ಶಿವಜಿ ಬಂದ ನಂತರ ಆದ ಗಡಿಬಿಡಿಯ ಕಾಲಕ್ಕೆ ಬಾಟ್ಲಿಯನ್ನು ಹೊರಗೊಯ್ದು ಇನ್ನಷ್ಟು ನೀರು ಬೆರೆಸಿ ಹಾಕಿ ಬಿಟ್ಟ. ಡೋಸೇಜ ಸ್ಲಿಪ್ ಮೇಲೆ ಬೇರೆ ಕಾಗದ ಅಂಟಿಸಲು ಇರಲಿಲ್ಲ. ಗಡಿಬಿಡಿಯಲ್ಲಿ ಡಾಕ್ಟರ್ ಕಳಿಸಿದ ಚೀಟಿಯ ತಳದಿಂದ ಒಂದು ಪಟ್ಟಿ ಹರಿದು ಸಾಳೂಬಾಯಿಯ ಕೋಣೆಯಿಂದ ತುಸು ಅಂಟು ಹಚ್ಚಿ ಬಾಟಲಿಯ ಮೇಲೆ ಹಚ್ಚಿಬಿಟ್ಟ. ಅವನ ಪ್ರಯತ್ನಕ್ಕೆ ಯಶ ಸಿಕ್ಕಿತು.

ಜೊತೆಗೆ ಜೀವಣರಾವ ಮುದುಕನ ಕೋಣೆಯಲ್ಲೂ ಬಹಳ ಹೊತ್ತು ಇರಲಿಲ್ಲ. ಸಂಶಯ ಪಡಲೇಬೇಕಾದರೆ ಅರ್ಸೆನಿಕ್ ಕೊಂಡ ಡಾಕ್ಟರ ಅಲ್ಲಿಯೇ ಒಬ್ಬಳೇ ಡ್ಯೂಟಿ ಮೇಲೆ ಇದ್ದ ಸಾಳೂಬಾಯಿ, ತಂದೆಯ ಮೇಲೆ ಸಿಟ್ಟಾದ ಮಗ ದ್ವಾರಕಾಪ್ರಸಾದ ಅರ್ಸೆನಿಕ್ ಮಿಶ್ರಿತ ಭಜಿ ಕೈಯಲ್ಲಿ ಹಿಡಿದು ತಿರುಗಾಡುತ್ತಿದ್ದ ಶಿವಜಿ, ಇವರೆಲ್ಲ ಇದ್ದಾಗ ಕೋಣೆಯೊಳಗೆ ಎರಡೇ ನಿಮಿಷ ಹೋಗಿ ನಿಂತ ಜೀವಣರಾವನ ಬಗ್ಗೆ ಯಾರು ಸಂಶಯ ಮಾಡಬೇಕು? ಅದೇ ಅವನ ಧೈರ್ಯ. ಜೊತೆಗೆ ಆಸೆಬುರುಕ ಡಾಕ್ಟರ್ ಸಕ್ಸೇನಾ ದ್ವಾರಕಾಪ್ರಸಾದ ಬಂದ ಸುದ್ದಿ ಗೊತ್ತಾದೊಡನೆ ಗಡಿಬಿಡಿಯಿಂದ ಮೂರು ಗಂಟೆಗೊಮ್ಮೆ ಆಸ್ಪತ್ರೆಗೆ ಬಂದಿದ್ದನ್ನು ಹಲವರು ನೋಡಿದ್ದರು. ಆದರೆ ಸಾಳೂಬಾಯಿಯಿಂದ ಅರುಣಪ್ರಸಾದರಿಗೂ ದ್ವಾರಕಾನಿಗೂ ಆದ ಮನಸ್ತಾಪದ ಸುದ್ದಿ ತಿಳಿದ ಕೂಡಲೇ ಅವರು ಕೋಣೆಯ ಒಳಕ್ಕೆ ಹೋಗುವ ಗೋಜಿಗೆ ಬೀಳಲಿಲ್ಲ. ಮಾನಕ್ಕೆ ಹೆದರಿ ಆಸ್ಪತ್ರೆಗೆ ಬಂದ ವಿಷಯ ಪೆರುಮಾಳನಿಗೆ ಹೇಳಿರಲಿಲ್ಲ. ಅದನ್ನು ಇತರರಿಂದ ಕೇಳಿಕೊಂಡ ಮೇಲೆ ಪೆರುಮಾಳ್‌ಗೆ ಡಾಕ್ಟರರ ಮೇಲಿನ ಸಂಶಯವೇ ಖಂಡಿತವಾಗಿತ್ತು.

-೪-

ದ್ವಾರಕಾಪ್ರಸಾದನನ್ನು ಬೇಲ್ ಮೇಲೆ ಬಿಟ್ಟುಬಿಟ್ಟರು.

ಸಂಜೆ ಡಾಕ್ಟರರ ಮನೆಯಲ್ಲಿ ಶರಬತ್ ಕುಡಿಯುತ್ತ ನಾನು, ಪೆರುಮಾಳ್ ಡಾಕ್ಟರ್, ಆದ ಸಂಗತಿಗಳನ್ನು ಮೆಲುಕು ಹಾಕುತ್ತಾ ಕುಳಿತಿದ್ದೆವು.

ತಮ್ಮ ಗೀಳುತನದಿಂದ ಡಾಕ್ಟರ ಸಕ್ಸೇನಾ ತಮ್ಮ ಮೇಲೆಯೇ ರೋಸಿಕೊಂಡಿದ್ದರು. ಅವರ ಆತ್ಮವಿಶ್ವಾಸ ಕರಗಿ ಹೋಗಿತ್ತು.

"ನೋಡು ಡೆರೆಕ್, ನೀನು ಪಕ್ಕದ ಫ್ಲ್ಯಾಟ್‌ಗೆ ಬಂದದ್ದು ನನಗೆ ಸರ್ವಥಾ ಸಹನೆ ಇರಲಿಲ್ಲ. ನೀನು ಎಂಥವನೋ ಅಂದುಕೊಂಡಿದ್ದೆ. ನಿನ್ನ ಜೊತೆಗೆ ಮಾತಾಡಿರಲಿಲ್ಲ. ಆದರೆ ನೀನು ನನ್ನನ್ನು ಉಳಿಸಿದಿ" ?

'We should help each other ಎಂದೆ. ಪೆರುಮಾಳನಿಗೆ ಇಂಥ ಅಳದಕ್ಕಿ ಎಳ್ಳಷ್ಟೂ ಸಹನವಿರಲಿಲ್ಲ. "ಗೊತ್ತೋ ನಿನ್ನ ಗತ್ತು: ಗಿಡ ಮೆಣಸಿನಕಾಯಿ ನೀನು"! ಈಗಿದ್ದ ಕೋಣೆಗೆ ನೀನು illegal tenant. ನಿನ್ನ ಹೆಸರಿನಿಂದ ಪಗಡಿ ಇಲ್ಲದೆ ಖೋಲಿಯ legal tenant ಆಗಿಬಿಡುವ ಗತ್ತು ತಾನೇ ನಿನ್ನದು! ನಾವು ಪೋಲಿಸಿನವರು ಗಿರಾಕಿಗಳು ಕೊಟ್ಟ ಒಂದು ಸಿಗರೇಟು ಸೇದಿದರೆ ಮಂದಿ ಸಂಶಯಪಡತಾರೆ."

"ಇಲ್ಲ, ನಿಮ್ಮ ಉಪಕಾರವೂ ಬಹಳ ಆಯಿತು!" ಎಂದರು ಡಾಕ್ಟರ್ ತುಸು ಮನಸ್ಸಿಲ್ಲದೆ.

"ನೋಡಿರಿ, ಡಾಕ್ಟರ್ ಸಕ್ಸೇನಾ! ನಾನು ದೊಡ್ಡವರು ಸಣ್ಣವರು ಎನ್ನದೆ ಎಲ್ಲರನ್ನು ತುಸು ಬಾಯಿ ಸಡಿಲು ಬಿಟ್ಟು ಬೆದರಿಸಿಕೊಳ್ಳುತ್ತೇನೆ! ಏಕೆ ಗೊತ್ತೋ! ಈಗ ನೀವೇ ಸುಶಿಕ್ಷಿತರಿದ್ದೀರಿ. ಸಮಾಜದಲ್ಲಿ ನೀವು ಪ್ರತಿಷ್ಠಿತರು. ಜವಾಬದಾರ ನಾಗರಿಕರು. ಆದರೂ ನಿಮ್ಮ ಕೈ ಬರಹವನ್ನೇ ನೀವೇ ಅಲ್ಲಗಳೆದಿರಿ. ನೀವು ಮೂರು ಗಂಟೆಗೆ ಆಸ್ಪತ್ರೆಗೆ ಹೋದದ್ದನ್ನು ನನಗೆ ಹೇಳಲಿಲ್ಲ. ಅರುಣಪ್ರಸಾದರ ಉಯಿಲಿನ ಬಗ್ಗೆಯೂ ನೀವಾಗಿ ಹೇಳಲಿಲ್ಲ. ಹೌದೋ ಅಲ್ಲೊ!"

ಮೊದಲೇ ಕಂಗಾಲಾದ ಡಾಕ್ಟರರಿಗೆ ನೆಲಕ್ಕೆ ಕುಕ್ಕರಿಸುವಂತಾಗಿರಬೇಕು.

"ನಾನು ಮಾನಕ್ಕೆ ಭಯಪಟ್ಟೆ..."

"ಮಾನ, ಮರ್ಯಾದೆ, ದೊಡ್ಡಿಸ್ತನ... ನಿಮ್ಮಂಥ ಸಂಭಾವಿತರಾದರೂ ಈ ಭ್ರಮೆಗಳಿಂದ ದೂರ ಇರಲಿ ಎಂದು ನಾನು ಬಾಯ್ಬಡಕತನದಿಂದ ಬೆದರಿಕೆ ಹಾಕುತ್ತೇನೆ. ನೀವು ಭಯಪಟ್ಟಿರಾದರೂ ಸತ್ಯವನ್ನು ಹೇಳಲಿಲ್ಲ..."

"ಇರಲಿ ಬಿಡು ಪೆರುಮಾಳ್...ನಿನ್ನ ಬುದ್ಧಿಯ ಮಾತು ಆ ಕೊಲೆಗಾರನಿಗೆ ಹೇಳುವುದನ್ನು ಬಿಟ್ಟು ಪಾಪ ಈ ನಿರಪರಾಧಿಗೆ ಯಾಕೆ ಹೇಳುತ್ತೀಯೆ?" ಎಂದು ನಾನು ಸಾವರಿಸಿದೆ.

ತುಸು ಹೊತ್ತು ಮೌನ ಆವರಿಸಿತು.

ಡಾಕ್ಟರರು ದೀರ್ಘ ನಿಟ್ಟುಸಿರು ಬಿಟ್ಟು ನನ್ನ ಕಡೆಗೆ ನೋಡತೊಡಗಿದರು.

"ನಾನು ನಿರಪರಾಧಿ...! ಹೌದು. ಆದರೆ ಈ ಎರಡು ದಿನಗಳನ್ನು ಘಟನೆಗಳ ಪರೀಕ್ಷಿಸಿ ನೋಡಿದರೆ ನನಗೆ ಸಂಧಿ ದೊರಕಿ, ಜೀವಣರಾಯನಂತೆ ನನಗೂ ೨೦೦೦ಕ್ಕೆ ನೌಕರಿ ಕಳಕೊಳ್ಳುವ ಪ್ರಸಂಗ ಬಂದಿದ್ದರೆ, ನಾನಾದರೂ ಏನು ಮಾಡುತ್ತಿದ್ದೆನೋ, ಯಾರು ಬಲ್ಲರು? ನನ್ನಲ್ಲೂ ಒಬ್ಬ ಕ್ರಿಮಿನಲ್ ಇಲ್ಲವೆಂದು ಇದೀಗ ವಿಶ್ವಾಸದಿಂದ ಹೇಳಲಾರೆ". ಇಷ್ಟೆನ್ನುವಾಗ ಒಮ್ಮೆಲೆ ಅವರ ಕಣ್ಣು ತುಂಬಿದುವು. ಅವರು ಎದ್ದವರೇ ಹೊರಟು ಹೋದರು.

"ನೋಡು ಪೆರುಮಾಳ್, ಭಯ ಕೆಟ್ಟದೆಂದು ನೀನು ತಿಳಿದಿದ್ದೀ. ಆದರೆ ಈ ಡಾಕ್ಟರರ ಭಯವೇ ಅವರನ್ನು ಕಾಯ್ದಿತು. ಇಲ್ಲವಾದರೆ ಅರುಣಪ್ರಸಾದ ಉಯಿಲು ಮಾಡಿದ ನಂತರ ಇವರಿಗೆ ಸಂಧಿಗಳಿರಲಿಲ್ಲವೆ? ನಾನು ಹೇಳಿದೆ.

"ಪ್ರಕ್ಕರು ಪ್ರಕ್ಕರ ಬೆನ್ನು ಕಟ್ಟುತ್ತಾರೆ...ನೀನೊಬ್ಬ ಅವನೊಬ್ಬ..."

"ಅದೆಲ್ಲ ನಾವು ಕಿರಸ್ತಾನರಿಗೆ ಹೆಚ್ಚು ತಿಳಿಯುತ್ತದೆ. ನಾವು God-fearing ಎಂದು ಹೇಳುತ್ತೇವೆ.ದೇವರ ಅಂಜಿಕೆಯಿಂದ ನಾವು ಒಳ್ಳೇ ದಾರಿ ಹಿಡಿಯುತ್ತೇವೆ. ಹಿಂದುಗಳಿಗೆ ಇಲ್ಲದ ಜಂಭ. ದೇವರ ಮೇಲೆ ಭಕ್ತಿ ಮಾಡಿ ಲಂಚ ಪಡೆಯಲು ಯತ್ನಿಸುತ್ತೀರಿ. ನಿಮ್ಮ ವಶೀಲಿ ದೇವರ ವರೆಗೂ ಹೋಗುತ್ತದೆ.ನಿಮ್ಮ ನೇವಿದ್ಯ ಪ್ರಸಾದಕ್ಕೆ ಆಸೆ ಪಟ್ಟುಕೊಂಡು ದೇವರೇ ತನ್ನ ಕಾಯ್ದು ಮುರಿಯಬೇಕೆಂದು ನಿಮಗೆ ಆಸೆ. ಅಂತೆಯೇ ಕಾರಣವಿಲ್ಲದೆ ಈ ಸುಶಿಕ್ಷಿತ ಡಾಕ್ಟರರು ನಾಲ್ಕಾರು ಸುಳ್ಳು ಹೇಳಿದರು. ನಾಳೆ ಹನುಮಂತದೇವರಿಗೆ ಕಾಯಿ ಒಡೆಸುತ್ತಾರೆ. ಯಾಕೆಂದರೆ ನಿಮಗೆ ಭಯವೇ ಬೇಡ.ಭಕ್ತಿ ಒಂದಿದ್ದರಾಯಿತು. ಅಂತೇ ನಿಮ್ಮ ಜೀವನದಲ್ಲಿ ಶಿಸ್ತು ಹೊರಟು ಹೋಗಿದೆ. ಅಳದಕ್ಕಿ ಮಾತ್ರ ಬೇಕಾದಷ್ಟು. ಎಂ. ಬಿ. ಬಿ.ಎಸ್ ಎಂ. ಡಿ. ಡಿ.ಡಿ.ಟಿ. ಎಷ್ಟು ಡಿಗ್ರಿ ಇದ್ದರೂ ಚಿಲ್ಲರೆತನ ಹೋಗಲಿಲ್ಲ. ಕಣ್ಣೀರು ತೆಗೆಯುವದೂ ಹೋಗಲಿಲ್ಲ. ಇಷ್ಟೆಲ್ಲ ಕಣ್ಣೀರು ತೆಗೆದ ಡಾಕ್ಟರರು ನಾಳೆ ಆ ಬಡಪಾಯಿ ದ್ವಾರಕಾಪ್ರಸಾದನಿಗೆ ಸಲ್ಲುವ ಹಣವನ್ನೇನೂ ಅವನಿಗೆ ತಿರುಗಿ ಕೊಟ್ಟಾರೆಂದು ನನಗೆ ಭರವಸೆ ಇಲ್ಲ. ಏಕೆಂದರೆ ಅದರ ಬದಲು ಹನುಮಂತ ದೇವರಿಗೆ ಒಂದು ಗಂಟೆ ದಾನ ಮಾಡಿದರೆ ಪಾಪ ಪರಿಹಾರವಾಯಿತು...! ಕಂಬನಿ ಮಿಡಿಯುತ್ತ ಆರತಿ ಎತ್ತಿದರಾಯಿತು, ಅಲ್ಲವೆ? ...ಒಳ್ಳೇ ಸುಲಭ ಉಪಾಯದವರು ನೀವು..."

ಪ್ರಥಮ ಬಾರಿ ಪೆರುಮಾಳ್ ನನ್ನ ಮಾತು ಕೇಳಿಕೊಂಡ.

ನನ್ನ ಮಾತಿನ ಪರಿಣಾಮ ಅವನ ಬಾಯ್ಬಡಕತನದ ಮೇಲೆ ಏನಾದರೂ ಆದೀತೆಂದು ಯೋಚಿಸಿದ್ದೆ. ಇನ್ನೊಂದು ಸಿಗರೇಟು ಹೊತ್ತಿಸಿ ಏಳುತ್ತ ಪೆರುಮಾಳ್ "ಅದಕ್ಕೇ ನಮ್ಮ ತಮಿಳು ನಾಡಿನಲ್ಲಿ ಎಲ್ಲ ಹಿಂದೂ ದೇವರಿಗೆ ಮೊಚ್ಚಿ ಸರದ ಮೆರವಣಿಗೆ ಮಾಡುತ್ತಾರೆ..." ಎಂದ. ಹಣೆ ಹಣೆ ಗಟ್ಟಿಸಿಕೊಂಡೆ. ಪೆರುಮಾಳನ ಜೊತೆಗೆ ತತ್ವಜ್ಞಾನ ಮಾಡಿದರೆ ಕೋಣನ ಮುಂದೆ ಕಿನ್ನರಿ...

"ಇರಲಿ, ಪುರಾಣಿ, ಇನ್ನು ನಿಮ್ಮ ದೇವರ ಸ್ಮರಿಸಿ ಹೇಳು ನೋಡುವಾ, ನಿನಗೆ ಜೀವಣರಾಯನ ಮೇಲೆ ಮೊದಲಿಗೆ ಯಾವಾಗ ಸಂಶಯ ಬಂತು?"

"ನಾನು ಯಾರ ಮೇಲೂ ಸಂಶಯ ಮಾಡುವುದಿಲ್ಲ. ಅದು ನಮ್ಮ ಧರ್ಮದ ವಿರುದ್ಧ. 'Assume a man innocent till he is found guilty ತತ್ವ ನಾನ ನಂಬುತ್ತೇನೆ"

"ಆಯ್ತು. ಸಂಶಯ ಬಟ್ಟು ಒಬ್ಬ ಅಪರಾಧಿಯನ್ನು ಬೆನ್ನು ಹತ್ತುವದು ನಮ್ಮಂಥ ಪೋಲೀಸಿನವರ ಪದ್ಧತಿ. ನಿನಗೆ ಇನ್ನಾರ ಮೇಲೂ ಸಂಶಯ ಬರಲೇ ಇಲ್ಲವೆ? ನೀನು ಒಂದೂ ತಪ್ಪು ಮಾಡದೆ ನೇರವಾಗಿ ಜೀವಣರಾಯನ ಕಾಲರಿಗೇ ಬ್ಲಡ್ ಹೌಂಡ್‌ದಂತೆ ಕೈ ಹಾಕಿದೆಯಾ?"

"ಹೌದು." ಎಂದೆ, ತುಸು ಬೇಜಾರದಿಂದ.

"ಹೇಗೆ?"

"ಬ್ಲಡ್‌ಹೌಂಡ್ ಎಂದಿಯಲ್ಲ"

"ಇರಲಿ ಮರಿ, ಸಿಟ್ಟಿಗೇಳಬೇಡ ಹೇಳು. ನಿನ್ನ ಮೆಥಡ್ ತಿಳಿದುಕೊಳ್ಳುವಾ!"

"ಮೆಥಡ್ ಏನಿದೆ ಅದರಲ್ಲಿ. ಡಾಕ್ಟರ ಸಕ್ಸೇನಾ ಇದನ್ನು ಮಾಡಿರುವುದು ಶಕ್ಯವಿಲ್ಲ. ಏಕೆಂದರೆ ವಿಲ್ ರಜಿಸ್ಟರ್ ಆಗಿತ್ತು. ಮೊದಲನೇ ಸಂಶಯ ಅವರ ಮೇಲೆಯೇ ಬರುತ್ತಿತ್ತು. ಹಾಗೇ ಸಾಳೂಬಾಯಿಯದೂ ಮಾತು. ಉಯಿಲಿನ ಸುದ್ದಿ ಅವಳಿಗೆ ಗೊತ್ತಿದ್ದರೆ ಸಂಶಯ ಹುಟ್ಟೀತೆಂಬ ಭಯದಿಂದ ಅವಳು ಕೊಲ್ಲಲಾರಳು.ಗೊತ್ತಿರದಿದ ರೆ ಕೊಲ್ಲಲು ಕಾರಣವಿರಲಿಲ್ಲ ಕೈಯಿಂದ ಆರ್ಸೆನಿಕ್ ಹಿಡಿದುಕೊಂಡು ಓಡಾಡಿದ ಶಿವಜಿಗೂ ಅದೇ ಮಾತು. ಜೊತೆಗೆ ಅವನಿಗೆ ಸಿಗುವ ೪೦೦ ರೂಪಾಯಿಗಾಗಿ ಈ ಸಾಹಸಕ್ಕೆ ಕೈ ಹಾಕಲಾರ. ದ್ವಾರಕಾಪ್ರಸಾದನು ಉಯಿಲು ಕ್ಯಾನ್ಸಲ್ ಮಾಡಿಸಲಿಕ್ಕೆ ಬಂದವನು. ಆ ಉಯಿಲ್ಲು ಕ್ಯಾನ್ಸಲ ಆಗುವವರೆಗೆ ಅಪ್ಪನನ್ನು ಕೊಲ್ಲಲಾರ."

"ಮೊದಲ ಬಾರಿ ನಾನು ಮೃತನ ಕೋಣೆಗೆ ಹೋದಾಗ ಒಳಗೆ ಬರಲು ನನಗೆ ಮಾತ್ರ ಪರ್ಮಿಟ್ ಇತ್ತು. ನಾನು ನೆಲ ಪರೀಕ್ಷಿಸುವಾಗ ಭಜಿಯ ಬಗ್ಗೆ ದೊಡ್ಡ ದನಿಯಲ್ಲೇ ಹೊರಗೆ ನಿಂತ ಸಾಳೂಬಾಯಿಗೆ ಮಾತಾಡಿದೆ. ಅವಳಿಗೆ ಲಕ್ಷವೇ ಇರಲಿಲ್ಲ. ಅವಳು ಬಾಗಿಲ ಹೊರಗಿನಿಂದ ಬಾಟಲ್‌ದತ್ತ ಏಕಚಿತ್ತದಿಂದ ನೋಡತೊಡಗಿದ್ದಳು. ಅದೇಕೆಂದು ನನಗೆ ಕುತೂಹಲವಾಯಿತು. ನಾನು ಒಳಗೆ ಬಂದಾಗ ಔಷಧದ ಬಾಟಲಿಯ ಡೋಸೇಜ ಸ್ಲಿಪ್ ಗೋಡೆಯತ್ತ ಇತ್ತು. ಆಗ್ಯೂ ದೂರಿಂದ ಅವಳು ಅದನ್ನು ನೋಡಿದ್ದಳು. ಆದರೆ ಇಷ್ಟು ಕುತೂಹಲದಿಂದ ನೋಡಿರಲಿಲ್ಲ. ನಾನು ಅದನ್ನು ಒಮ್ಮೆ ಕಿಡಿಕಿಗೆ ಎತ್ತಿ ನೋಡಿ ತಿರುಗಿ ಇಡುವಾಗ ಬಾಗಿಲ ಕಡೆಗೆ ಸ್ಲಿಪ್ ಆಗುವಂತೆ ತಿರುವಿ ಇಟ್ಟಿದ್ದೆ.

ಈಗೇಕೆ ಈ ಬಾಟಲ್ ಅವಳ ಕುತೂಹಲ ಕೆರಳಿಸಿರಬಹುದು, ಮೊದಲು ಏಕೆ ಕೆರಳಿಸಲಿಲ್ಲ ಎಂದು ವಿಚಾರ ಮಾಡಿದೆ. ಡೋಸೇಜ ಸ್ಲಿಪ್ ಇರಬೇಕೆಂದು ಊಹಿಸಿಕೊಂಡೆ. ಮೊದಲು ಅದು ಅವಳ ಕಣ್ಣಿಗೆ ಬಿದ್ದಿರಲಿಲ್ಲ. ಹೀಗಿದ್ದರೂ ನಾನು ಒಮ್ಮೊಮ್ಮೆ ಮಾತಾಡಿದ ಕೂಡಲೇ ಅಷ್ಟೇ ನಿರುತ್ಸಾಹದಿಂದ ಯಾವ ಚಿಂತೆಯಿಲ್ಲದೆ ನನಗೆ ಕೊಡಬೇಕಾದ ಉತ್ತರವನ್ನು ಕೊಟ್ಟಳು. ನೀನು ಬಂದ ನಂತರ ಅವಳು ಬದಿಯ ಕೋಣೆಯ ಮರೆಯಲ್ಲಿ ನಿಂತು ತುಸು ಹೊತ್ತು ನಿಮ್ಮ ಮಾತು ಕೇಳಿಕೊಂಡು ತನ್ನ ಕೋಣೆಗೆ ಹೊರಟು ಹೋದಳು.

ಅವಳು ನಿಂತಲ್ಲಿಂದ ನಿಂತು ಬಾಟ್ಲಿಯ ಲೇಬಲ್ ನೋಡಿದೆ. ಲೇಬಲ್ ಮೇಲೆ ಏನೋ ಗೀಚಿದಷ್ಟು ಕಾಣಿಸುತ್ತಿತ್ತೇ ಹೊರತು ಅಷ್ಟು ದೂರಿಂದ ಏನು ಬರೆದಿದೆಯೆಂಬುದನ್ನು ಓದುವುದು ಶಕ್ಯವಿರಲಿಲ್ಲ. ಆದರೂ ಮೊದಲು ಕುತೂಹಲಿಯಾದ ಸಾಳೂಬಾಯಿ ನಂತರ ಅದರ ಬರಹವನ್ನು ತಿಳಿದುಕೊಳ್ಳಲು ಏಕೆ ಕುತೂಹಲಪಡಲಿಲ್ಲ?...ಎಂಬ ಪ್ರಶ್ನೆ ಕಾಡತೊಡಗಿತು.

"ನೀನು ಡಾಕ್ಟರರನ್ನು ಮಾತಾಡಿಸುತ್ತಿರುವಾಗ ನಾನು ಬಾಟ್ಲಿ ಎತ್ತಿ ಕಿಡಿಕಿಯ ಬಳಿ ಒಯ್ದೆ. ಕಾರಣವೇನು ಗೊತ್ತೇ...?"

ಬಾಟ್ಲಿಯ ಡೋಸೇಜ ಲೇಬಲ್ ಸೊಟ್ಟ ಪಟ್ಟ ಕಾಗದದ್ದು. ಅದರ ಮೇಲ್ಭಾಗದಲ್ಲಿ ದುಂಡು ಅಕ್ಷರಗಳಲ್ಲಿ ದೇವನಾಗರಿ ಲಿಪಿಯಲ್ಲಿ 'ಚಾರ ಬಜೆ ಆಧಾ' ಎಂದು ಬರೆದಿತ್ತು. ಇಷ್ಟು ಮುತ್ತಿನಂಥ ಅಕ್ಷರಗಳು ಇಂಥ ಸೊಟ್ಟ ಪಟ್ಟ ಕಾಗದಕ್ಕೆ ಅದೇಕೋ ಹೊಂದಿಕೆ ಕಾಣಿಸಲಿಲ್ಲ. Out of Character ಕಂಡವು. ಅಂತೆಯೇ ಕಿಟಕಿಯ ಬೆಳಕನ್ನು ಎದುರು ಹಿಡಿದು ಪಾರದರ್ಶಕ ಬೆಳಕಿನಲ್ಲಿ ಬಾಟ್ಲಿ ನೋಡಿದೆ. ಆಗ ಒಮ್ಮೆಲೆ ತಿಳಿಯಿತು.

ನಿಜವಾದ ಡೋಸೇಜ ಸ್ಲಿಪ್ ಮೇಲೆ ಯಾರೋ ಇನ್ನೊಂದು ಕಾಗದ ಅಂಟಿಸಿದ್ದರು! ದುಂಡು ಅಕ್ಷರಗಳು ಒಳಗಿನ ಸ್ಲಿಪ್ ಮೇಲೆ ಬರೆಯದವುಗಳು. ಮೇಲೆ ಮಾತ್ರ ಈ ಅಕ್ಷರಗಳು ಕಂಡರೂ ಅಖಂಡ ಬಾಟ್ಲಿಯ ಮೇಲಿನಿಂದ ಕೆಳಗಿನ ವರೆಗೆ ಆಗುವ ಹಾಗೆ ಈ ಕಾಗದ ಅಂಟಿಸಲಾಗಿತ್ತು. ಕಿಡಿಕಿಯ ಬೆಳಕಿನಲ್ಲಿ ಒಳಗಿನ ಸ್ಲಿಪ್ ಷಟ್ಕೋನ ಆಕಾರದ ಮಾರ್ಕಿಂಗ ಆಗುವಂತೆ ಚಂದವಾಗಿ ರಿಕತ್ತಿದ್ದು, ಮೇಲಿನ ಸ್ಲಿಪ್ ಮಾತ್ರ ಗಡಿಬಿಡಿಯಿಂದ ಹರಿದ ಅಖಂಡ ಪಟ್ಟಿ.

ಹಾಗೆಂದರೇನು? ಅಕ್ಷರಗಳನ್ನು ಹೋಲಿಸಿ ನೋಡಲಿಕ್ಕೆಂದು ಸಾಳೂಬಾಯಿಯ ಕೈಯಿಂದ ನನ್ನ ಅಣ್ಣನ ಮಗನಿಗಾಗಿ ಪ್ರಿಸ್ಕ್ರಿಪ್ಷನ್ ಬರೆಸಿಕೊಂಡೆ. ಡೋಸೇಜ್ ಸ್ಲಿಪ್ ಮೇಲೆ ಇದ್ದ ಅಕ್ಷರ ಸಾಳೂಬಾಯಿಯವೇ ಎಂದು ಖಂಡಿತ ಆಯಿತು. ಪಾಪ, ಬಡಪಾಯಿ, ನರ್ಸ್, ಹೃದಯ ಉಳ್ಳವಳು. ಚೆನ್ನಾಗಿ ಕೆಲಸ ಮಾಡುವವಳು. ಅವಳ ಕೋಣೆಯಲ್ಲಿ, ಎಲ್ಲಿ ನೋಡಿದರೂ ಅವಳು ತಾನಾಗಿಯೇ ತನ್ನ ಕೈಯಿಂದಲೆ ಕಾಗದ ಕತ್ತರಿಸಿ ಚೆಂದವಾದ ಷಟ್ಕೋನಾಕೃತಿಯ ಡೋಸೇಜ್ ಸ್ಲಿಪ್‌ಗಳೇ ಕಾಣಸುತ್ತಿದ್ದವು. ನನಗೂ ಒಂದು ನನ್ನ ಅಣ್ಣನ ಮಗನಿಗಾಗಿ ಎಂದು ನೆವ ಮಾಡಿ ಒಂದು ಸ್ಲಿಪ್ ಕತ್ತರಿಸಿಕೊಡಲು ಕೇಳಿಕೊಂಡೆ. ಅದನ್ನು ಕತ್ತರಿಸಿ ಕೊಡುವಾಗ ನನ್ನತ್ತ ಮುಖ ಎತ್ತಿ ನಸುವೆ ನಕ್ಕಳು. ..."

"ಏ ಲಬಾಡಾ ಹೆಂಗಸರು ನಕ್ಕ ಕತೆ ಕೇಳಲು ನಾನು ಇಲ್ಲಿ ನಿಂತಿಲ್ಲ..." ಎಂದ ಪೆರುಮಾಳ್

"ನಿನ್ನ ನೋಡಿ ಯಾವ ಹೆಂಗಸರೂ ಮುಗುಳು ನಗೆ ನಗುವುದಿಲ್ಲ ಎಲು. ನಿನಗೆ ಕಣ್ಣಿನ ಭಾಷೆ ಗೊತ್ತಾಗುವುದು ಶಕ್ಯವೇ ಇಲ್ಲ. ನಿನ್ನ ಕೆಕ್ಕರಿಸಿದ ಕಣ್ಣು ನೋಡಿ ಉಳಿದವರು ಕಣ್ಣು ಕೆಳಗೆ ಮಾಡುತ್ತಾರೆ. ಅಂದ ಮೇಲೆ ನಿನಗೆ ಆ ಭಾಷೆ ತಿಳಿಯುವುದೆಂತು?...ಅವಳು ನಕ್ಕದ್ದು ಅರ್ಥಗರ್ಭಿತವಾಗಿ.ನನಗೆ ಅವಳು ಬರೆಕೊಟ್ಟದ್ದು Abdec drops ಅದಕ್ಕೆ ಡೋಸೇಜ್ ಸ್ಲಿಪ್ ಏತಕ್ಕೆ ಬೇಕು?...ಆದರೆ ಮೃತನ ಔಷಧದ ಬಾಟಲಿಯ ಮೇಲಿನ ಡೋಸೇಜ್ ಸ್ಲಿಪ್ ತಾನು ಮಾಡಿದ್ದಲ್ಲವೆಂಬುದು ತಿಳಿದುಕೊಳ್ಳಬಲ್ಲ ಒಂದು ನರಪಿಳ್ಳೆಯಾದರೂ ಉಂಟಲ್ಲ ಎಂಬ ಸಂತೋಷದಿಂದ, ತಿಳುವಳಿಕೆಯಿಂದ, appreciationದಿಂದ ಬಂದ ನಗೆ ಅದು. ನಿನ್ನ ಪೆರುಮಾಳ್ ತಲೆಗೆ ಇದನ್ನೆಲ್ಲ ಬಿಡಿಸಿ ಹೇಳಬೇಕು ನಾನು. ಆ ಕ್ಷಣದಿಂದ ನನಗೂ ಸಾಳೂಬಾಯಿಗೂ ನಡುವೆ ಒಂದು Sympathetic ಕರೆಂಟ್ ಹರಿಯತೊಡಗಿತು.

ಅವಳು ಫ್ರೆಂಡ್ ನರ್ಸ್; ಜಾಸ್ತಾ ಬುದ್ಧಿವಂತೆ ಯಾರೇ ಕೊಲೆಗಡುಕನೇ ಇರಲಿ, ಆ ಡೋಸೇಜ್ ಸ್ಲಿಪ್ ನನ್ನದಲ್ಲ ಎಂಬ ಒಂದು ಮಾತಿನಿಂದಲೇ ಅವಳು ತನ್ನ ಮೇಲಿನ ಸಂಶಯವನ್ನು ದೂರ ಮಾಡುವುದು ಶಕ್ಯವಿತ್ತು. ಅವಳೇ ಬರೆದ Instruction ಕೂಡ ಅವಳಿಗೆ ಗೊತ್ತು. ಅಂತಲೇ ಅಕ್ಷರ ತನ್ನವೇ ಅಂದ ಮೇಲೆ ತಾನು ಕತ್ತರಿಸಿದ ಡೋಸೇಜ ಸ್ಲಿಪ್ಪು ಒಳಗೆ ಇದೆ, ಮೇಲೆ ಬೇರೆ ಕಾಗದ ಹಚ್ಚಲಾಗಿದೆ, ಇಷ್ಟೊಂದು ಮನವರಿಕೆ ಅವಳಿಗೆ ಅಷ್ಟು ದೂರದಿಂದಲೇ ಆಯಿತೆಂದೇ ಅವಳು ಎಲ್ಲ ಕುತೂಹಲವನ್ನೂ ತೊರೆದು ಕೋಣೆಗೆ ಬಂದು ನಿರ್ಭಯಳಾಗಿ ಕಾದಂಬರಿ ಓದುತ್ತ ಕುಳಿತಿದ್ದಳು. "

"ಜೀವಣರಾಯನೇ ಈ ಕೆಲಸ ಮಾಡಿದ್ದಾನೆಂಬುದೂ ಅವಳಿಗೆ ನನ್ನಕಿಂತ ಹದಿನಾಲ್ಕು ತಾಸು ಮೊದಲೇ ಗೊತ್ತಾಗಿರಬೇಕೆಂದು, ನಾನು ಈಗ ಹೇಳಬಲ್ಲೆ. ಏಕೆ ಹೇಳು..."

"ನನ್ನ ಪರೀಕ್ಷೆ ಮಾಡುತ್ತೀಯಾ?...ಮರಿ... Simple ಅಂಟಗಾಗಿ ಜೀವಣರಾವ ಅವಳ ಕೋಣೆಗೇ ಬಂದಿದ್ದ....ಇಷ್ಟೇ ತಾನೆ"

That's right."

"ಸಾಳೂಬಾಯಿ ಅಕ್ಷರಗಳಿಂದ ಅವಳ ಮೇಲೆ ಸಂಶಯ ಬರಲಿಲ್ಲವೆ?"

"ಅವಳನ್ನೇ ಕೇಳಿದೆ.'ಚಾರ ಬಜೆ ಆಜಾ'ಎಂದು ಪ್ರತಿ ಶನಿವಾರ ಬರೆಯುವ Routine instruction ಅದರ ಅರ್ಥ ಇಷ್ಟೆ, ಶನಿವಾರ ಆಳು ಹೋಳಿಗೆ ಸುಧಾ.ಶ್ಯ ರಜೆ. ಸಾಳೂಬಾಯಿಯೂ ಸಂಜೆಯ ಡ್ಯೂಟಿಯ ಇನ್ನೊಬ್ಬ ಆಳು ಯಾರಾದರೂ ಬಂದೊಡನೆ ಹೊರಟು ಹೋಗುತ್ತಿದ್ದಳು. ಶನಿವಾರ ಅರುಣ ಪ್ರಸಾದನ ಆಹಾರವೂ ಕಡಿಮೆ. ಉಳಿದ ದಿನಗಳಷ್ಟೇ ರಾತ್ರಿಯ ವರೆಗೆ ನಾಲ್ಕು ನಾಲ್ಕು ತಾಸಿಗೆ ಒಂದೊಂದು ಡೋಜ ಔಷಧ ಕುಡಿದರೆ ಮರು ದಿನ ಮುಂಜಾನೆ ಮುದುಕನಿಗೆ ತುಸು Constipation ಆಗುತ್ತಿತ್ತು. ಆದರೆ ಔಷಧ ಕಡಿಮೆ ಮಾಡುವಾಗಲೂ ಮುದುಕನಿಗೆ Psychological ಸಮಾಧಾನ ಆಗುವಂತೇ ಆಗಬೇಕು.ಅಂತೆಯೇ ಮುಂಜಾನೆ ತುಂಬಿಟ್ಟ ಔಷಧದ ಬಾಟಲಿಯನ್ನು ಡೋಸೇಜ ಮಾರ್ಕಿಂಗದಂತೆ ಅವನು ಕುಡಿಯುತ್ತ ಬಂದು, ಬಾಟಲಿಯಲ್ಲಿ ಉಳಿದ ಒಂದು ಡೋಜನು ೪ ಗಂಟೆಗೆ ಮುಗಿಸುವ ಪದ್ಧತಿ ಬಿದ್ದಿತ್ತು. 'ಆಜಾ' ಎಂದರೆ ಬಾಟಲಿಯಲ್ಲಿ ಉಳಿದ ಎಲ್ಲ ಔಷಧವನ್ನೂ ಕುಡಿದು ಬಿಡು, ಹೆಚ್ಚಿಗೆ ಬೇಡಬೇಡ, ಎಂಬ ಸೂಚನೆ. ಹಾಗೆ ಬರೆದಿಲ್ಲವಾದರೆ ಮತ್ತೆ ಔಷಧ ತೀರಿತು" ಎಂದು ಗೊಣಗುತ್ತಿದ್ದ ಮುದುಕ. ಮರುದಿನ ಎಲ್ಲರನ್ನೂ ಕಾಡುತ್ತಿದ. ಅಂತೆಯೇ ಉಪಾಯ ಮಾಡಿದಳು. ಸಾಳೂಬಾಯಿಯ ಕೈ ಬರಹದಿಂದ ಬಂದ ವಾಕ್ಯ ಅವನಿಗೆ ಚೆಬಲ್ಲು.

"ಆದರೆ ಜೀವಣರಾಯನಿಗೂ ಇದೂ ಲಾಭಕರ ಕಂಡಿತು. ಅವನ ಆರ್ಸೆನಿಕ್ ಸರಿಯಾಗಿ ಮಿಕ್ಸ ಆಗಲಿಕ್ಕೆ ಬೇಕಾಗುವಷ್ಟು ಔಷಧ ಬಾಟಲಿಯಲ್ಲಿ ಉಳಿದಿರಲಿಲ್ಲ. ಅದ್ದರಿಂದ ನಳಕ್ಕೆ ಒಯ್ದು ಇನ್ನಷ್ಟು ನೀರು ತುಂಬಿ ಬಾಟಲಿ ಅಲ್ಲಾಡಿಸಿ ಒರೆಸಿ ತಂದಿಟ್ಟರಬೇಕು. ಇಮ್ಮಡಿ ಖಾತ್ರಿಯಾಗಿ ಮುದುಕನಿಗೆ ಮನವರಿಕೆಯಾಗಲೆಂದು ಕಾಗದಗಳ ಷಟ್ಕೋನಾಕೃತಿಯ ಮಾರ್ಕಿಂಗಗಳನ್ನು ಮುಚ್ಚಲಿಕ್ಕೆಂದು ಜೀವಣರಾಯ ಮೇಲೆ ಒಂದು ಅಖಂಡ ಸ್ಲಿಪ್ ಹಚ್ಚಿದ. ಮುದುಕ ತುಸು ಸಂಶಯಿ. ಮೊದಲಿನದೇ ಷಟ್ಕೋನಾಕಾರದ ಕತ್ತರಿಸಿದ ಸ್ಲಿಪ್ ಉಳಿದಿದ್ದರೆ ಮುದುಕನಿಗೆ ಸಂಶಯ ಬರುತ್ತಿತ್ತು. ಇಷ್ಟು ಈಗಾಗಲೇ ನುಡಿದಿದ್ದೆ. ಬೇರೆ ರುಚಿಯ ಔಷಧ ಬಾಟ್ಲಿಯಲ್ಲಿ ಹೇಗೆ ಬಂತು? ಅದೂ ಡೋಸೇಜ ಮಾರ್ಕಿಂಗ್‌ಗಿಂತ ಹೆಚ್ಚಿಗೆ ಏಕೆ? ಮುಂತಾಗಿ. ಅಕ್ಷರಗಳು ಸ್ಲಿಪ್ಪಿನ ಮೇಲ್ಭಾಗಕ್ಕೆ ಇದ್ದವು. ಅಂತೂ ಅಕ್ಷರ ಸಾಳೂಬಾಯಿಯದು. ಕಾಗದದ ಪಟ್ಟಿಯು ಮೇಲ್ಭಾಗಕ್ಕೆ ಇತ್ತು. ಮಾರ್ಕಿಂಗ ಅಳಿಸಿ ಬಿಟ್ಟರೆ ಬೇರೆ ಸಂಶಯವಿಲ್ಲದೆ ತುಂಬಿದ ಬಾಟಲಿಯನ್ನೂ ಗಟ ಗಟ ಕುಡಿದೂ ಬಿಡುವ ಎಂದು ಜೀವಣರಾಯನ ಬುದ್ಧಿಗೆ ತೋಚಿರಬೇಕು. ಅಖಂಡ ಸ್ಲಿಪ್ ಇದೆ ಎಂದು ಮುದುಕನಿಗೆ ಸೂಚಿತವಾಗುವಂತೆ ಜೀವಣರಾಯ ಹಾಗೆ ಉಪಾಯ ಹೂಡಿದ.

"ಮರುದಿನ ಸಾಳೂಬಾಯಿ–ಜೀವಣರಾಯರ ಮನೆಗೆ ನಾನು ಭೆಟ್ಟಿ ಕೊಟ್ಟೆ. ಅಲ್ಲಿ ರಿಹರ್ಸಲ್ ಇಲ್ಲದೆ ಡಬ್ಬಲ್ ನಾಟಕ ನಡೆಯಿತು. ಒಂದು ನಾಟಕದಲ್ಲಿ ನಾವು ಮೂವರೂ ಪಾತ್ರಧಾರಿಗಳು; ಇನ್ನೊಂದು ನಾಟಕದಲ್ಲಿ ಕೇವಲ ನಾನು ಮತ್ತು ಸಾಳೂಬಾಯಿ ಅಷ್ಟೇ ಮೂಕ ಸಂಭಾಷಣೆ ಮಾಡಿದೆವು!

"ಅದು ಅದದು ಹೀಗೆ. ನಾನು ಮುನ್ನಾ ದಿನ ಆ್ಯಬ್ಡೆಕ್ ಡ್ರಾಪ್ಸದ ನೆವಮಾಡಿಕೊಂಡು ಜೀವಣರಾಯನ ಅಂಗಡಿಗೆ ಹೋಗಿದ್ದೆ. ಅವನ ಕೈಗೆ 'ಪ್ರಿಸ್ಕ್ರಿಪ್ಷನ್ ಕೊಟ್ಟಕೂಡಲೆ ಆಭ್ಯಾಸಬಲದಿಂದ ಅವನು ಒಮ್ಮೆಲೆ ಮೆಮೋ ಸ್ಟ್ಯಾಂಡಿನ ಮೊಳೆಗೆ ಅದನು ಚುಚ್ಚಿ ಔಷಧ ತರಲು ಶೆಲ್ಫಿನ ಕಡೆಗೆ ಹೋದ. ಡಾಕ್ಟರ್ ಕಳಿಸಿದ ಚೀಟಿ ಎರಡೇ ದಿನ ಮುಂಚೆ ಬಂದದ್ದು. ಅದನ್ನು ಹೀಗೇ ಚುಚ್ಚಿರಬೇಕೆಂದು ನಾನು ಮೆಮೋ ಸ್ಟ್ಯಾಂಡಿನ ಮೇಲಿನ ಏಳೆಂಟು ಕಾಗದಗಳನ್ನು ಮಗುಚಿ ನೋಡಿದೆ ಆದು ಅಲ್ಲಿರಲಿಲ್ಲ. ಹಾಗಾದರೆ ಬೇಕಂದೇ ಜೀವಣರಾವ ಅದನ್ನು ಜೋಕೆಯಿಂದ ಬೇರೆಡೆಗೆ ಇಟ್ಟರಬೇಕೆಂದು ಅನ್ನಿಸಿತು. ತನಗೆ ನೌಕರಿ ಇಲದಾಗ ನೌಕರಿ ಕೊಟ್ಟವರ ಬಗ್ಗೆ ಹೀಗೆ ನಡೆದುಕೊಳ್ಳುವದು ನನಗೆ ಹೇಗೇಗೋ ತೋರಿತು. ಅವರ ಮನೆಗೆ ಹೋಗಿ ಸಾಳೂಬಾಯಿಯ 'ವಶೀಲಿ'ಯಿಂದ ಅದನ್ನೊಮ್ಮೆ ನೋಡಬೇಕೆಂದು ನಿಶ್ಚಯಿಸಿದೆ. ಎಲ್ಲರೂ ತಿಳಿದಂತೆ ಸಾಳೂಬಾಯಿ ಅವನ ಪತ್ನಿಯೆಂದೇ ನಾನೂ ತಿಳಿದಿದ್ದೆ.

"ಅವರ ಮನೆಗೆ ಹೋಗುವಾಗ ಆಗಲೇ ರಂಭಾಟ

ಶುರುವಾಗಿತ್ತು. ಸ್ವಾಭಾವಿಕವೇ ಅಲ್ಲವೆ?- ಕಾರಣ ತಿಳಿಯಲಿಲ್ಲ. ಆದರೆ ಜೀವಣರಾವ ತನ್ನ ಶುದ್ಧ ಏಕನಾಥೀ ಭಾಗವತದ ಮರಾಠಿ ಭಾಷೆಯಲ್ಲಿ ಸಾಳೂಬಾಯಿಗೆ ಸಣ್ಣದನಿಯಿಂದ ಬಯ್ಯುತ್ತಿದ್ದ, 'ಅವದಶೇ, ಅವದಶೇ' ಎಂದು. ನಾನು ಹೋದ ಮೇಲೆ ಜಗಳ ನಿಂತಿತಾದರೂ ಚಹಾ ಬರಲಿಲ್ಲ. ಇಬ್ಬರ ಮೇಲಿಂದ ತುಸು ದೀರ್ಘಕಾಲದ ಜಗಳ ಆಗಿರಬೇಕು, ಬೇಜಾರದಿಂದ ಇಬ್ಬರೂ ನಿರುತ್ಸಾಹಿಗಳಾಗಿದ್ದಾರೆ ಎನ್ನಿಸಿತು.

"ಕೈ ಬರಹದ ನೆವ ಮಾಡಿ ಡಾಕ್ಟರ [illegible]ಸಿದ ಚೀಟಿ ಪ್ರಸ್ತಾಪಿಸಿದೆ. ಆ ಚೀಟಿ ಮಹತ್ವದ್ದೆಂದೂ, ಅದನ್ನು ತಪ್ಪಿ ಕೂಡ ಮೆಮೋಸ್ಟ್ಯಾಂಡ ಮೇಲೆ ತಾನು ಚುಚ್ಚಲಿಲ್ಲವೆಂದೂ, ಅದು ಬಂದಾಗಿನಿಂದ ನಾಲ್ಕು ಮಡಿಕೆ ಮಾಡಿ ತನ್ನ ಜುಬ್ಬದ ಕಿಸೆಯಲ್ಲಿಯೇ ಹಗಲು ರಾತ್ರಿ ಇಟ್ಟುಕೊಂಡಿದ್ದೇನೆಂದೂ, ತನ್ನ ಜೀವಕ್ಕಿಂತ ಮಿಗಿಲಾಗಿ ಕಾಯುತ್ತಿದ್ದೇನೆಂದೂ ಜೀವಣರಾವ ಕೊಚ್ಚಿಕೊಂಡ. ಅವನ ಜೊತೆಗೆ ವಿಶ್ವಾಸದಿಂದಲೇ ಮಾತಾಡಿದೆ. ನನ್ನನ್ನು ಪತ್ತೇದಾರನೆಂದೇ ಸಾಳೂಬಾಯಿ ಗುರುತು ಮಾಡಿಕೊಟ್ಟಿದ್ದಳು. ಅದೂ ಅನುಕೂಲವೇ ಆಯಿತು. "ತುಸು ಆ ಚೀಟಿ ನೋಡುವಾ!" ಎಂದು ನಾನು ಕೇಳಿದಾಗ ಅವನು ತೋರಿಸಲೇಬೇಕಾಯಿತು. ಕೊಡದಿದ್ದರೆ ತನ್ನ ಮೇಲೆ ತಾನೇ ಸಂಶಯ ಎಳೆದುಕೊಳ್ಳುತ್ತಿದ್ದ. ಆತ ಮಡಿಚಿಯೇ ಕೊಟ್ಟ ಆ ಚೀಟಿ ನಾನು ಬಿಡಿಸಿ, ಅದರ ಒಂಭಾಗ ಸಾಳೂಬಾಯಿಗೆ ಕಾಣಿಸುವಂತೆ ಹಿಡಿದು ನೋಡಿದೆ. ಅದರ ಬುಡಕ್ಕೆ ಹರಿದ ಭಾಗವನ್ನು ನಾನು ಲಕ್ಷವಿಲ್ಲದವರಂತೆ ನೋಡುತ್ತಿರುವಾಗ ಓರೆಗಣ್ಣಿನಿಂದ ಸಾಳೂಬಾಯಿಯನ್ನು ನೋಡಿದೆ. ಸಾಳೂಬಾಯಿಯಾದರೂ ಆ ಕಾಗದವನ್ನೇ ದೂರಿಂದ ದಿಟ್ಟಿಸಿ ನೋಡತೊಡಗಿದ್ದಳು. ಕಾಗದದ ಡುಬ್ಬವನ್ನು ಅವಳೇಕೆ ಅಷ್ಟು ಕುತೂಹಲದಿಂದ ನೋಡಬೇಕು- ಅದರ ಬುಡಕ್ಕೆ ಹರಿದ ಪಟ್ಟಿಯ ಜಾಗೆಯನ್ನಲ್ಲದೆ ಇನ್ನೇನು? ನನಗೆ ಬೇಕಾದದ್ದೂ ಅದೇ! ಒಂದೇ ವಿಚಾರ ಇಬ್ಬರಲ್ಲೂ ಮೂಡಿ ತಾಕಲಾಡಿ ಬೇರೆಯಾದವು.

"ಆದರೂ ಒಂದು ವಿಷಯ ಖಂಡಿತವಾಯಿತು. ಜೀವಣರಾವ ಆ ಕಾಗದ ಹೆಂಡತಿಗೆ ಈ ಮೊದಲೇ ತೋರಿಸಿದ್ದರೆ ಅವಳು ಹೀಗೆ ದಿಟ್ಟಿಸಿ ನೋಡುವ ಕಾರಣವಿರಲಿಲ್ಲ. ನನ್ನ ಓದುವಿಕೆ ಮುಗಿದ ಮೇಲೆ ಆ ಕಾಗದದ ಹರಕು-ಭಾಗದ ಕಡೆಗೆ ನನ್ನ ಲಕ್ಷ ಹೋಗಿ ಅದರ ಆಕಾರವನ್ನು ಗುರುತಿಸಿತು. ಅವಳಿಗೆ ಚೀಟಿಯ ಬಗ್ಗೆ ಕುತೂಹಲವಿರಲಿಲ್ಲ. ಆದರೆ ಅವಳಾದರೂ ಕಾಗದದ ಹರಿದ ಭಾಗದ ಅಳತೆ ಆಕಾರಗಳಿಂದ ಆಕರ್ಷಿತಳಾಗಿ ಗುರುತಿಸಿದ್ದಳು. ನಾನು ಗುರುತಿಸಿದ್ದೇನೆಂಬುದನ್ನೂ ಅವಳು ತರ್ಕಿಸಿದ್ದಳು.

"ಬೇಕೆಂತಲೇ ನಾನು ಅವರಿಗೆ ವುಯಿಲಿನಿಂದ ಬರಬೇಕಾದ ೪೦೦೦ ರೂಪಾಯಿಯ ಸುದ್ದಿ ಎತ್ತಿದೆ. ಈವರಿಗೆ ಹೇಗೆ ಜಗಳಾಟ ನಡೆದಿತ್ತೋ. ಇದೀಗ ಮಾತ್ರ ಅದರ ರೂಪವೇ ಬದಲಾಯಿತು. ಜೀವಣರಾಯ ತನಗೆ ವುಯಿಲಿನ ಬಗ್ಗೆ ಏನೂ ಗೊತ್ತಿಲ್ಲದವನಂತೆ ಮಾತಾಡಿದ ಕೂಡಲೆ ಸಾಳೂಬಾಯಿ ಬಲು ಬೇಜಾರದಿಂದ "ನಾನೇನೂ ನಿಮ್ಮ ಲಗ್ನದ ಹೆಂಡತಿಯಲ್ಲ; ನನ್ನ ಮನೆ ಬಿಟ್ಟು ಹೊರಡಿ," ಎಂದು ಚೀರಿದಳು.

"ಇದರಿಂದ ನನ್ನ ಕೊನೆಯ ಪ್ರಶ್ನೆಗೂ ಉತ್ತರ ದೊರಕಿತು. ಗಂಡ-ಹೆಂಡತಿ ಇಬ್ಬರೂ ಕೂಡಿ ಸಂಚು ಹೂಡಿರುವರೋ ಹೇಗೆ?-ಎಂಬುದೇ ಕೊನೆಯ ಪ್ರಶ್ನೆ-ಪ್ರತ್ಯಕ್ಷ ಜೀವಣರಾಯನ ಕೈಯಿಂದ ಕೊಲೆಯ ಕೆಲಸ ಆಯಿತೆಂಬುದನ್ನು ಆ ಕಾಗದದ ಹರಕು ತಳವೇ ಸಾಬೀತು ಮಾಡಿಬಿಟ್ಟಿತ್ತು. ಇದನ್ನು ಸಾಳೂಬಾಯಿ ಬಲ್ಲಳು. 'ಲಗ್ನದ ಹೆಂಡತಿ ಅಲ್ಲ, ಮನೆ ಬಿಟ್ಟು ಹೊರಡಿ' ಎಂಬ ಮಾತು ನನಗಾಗಿ ಇನ್ನೊಂದು ಅರ್ಥ ಸೂಚಿಸುವಂತಿದ್ದವು- ಲಗ್ನದ ಸಂಬಂಧದಿಂದಾಗಲೀ, ಸ್ವಾರ್ಥ ಸಂಬಂಧದಿಂದಾಗಲೀ, ಪ್ರೇಮ ಸಂಬಂಧದಿಂದಾಗಲೀ, ತನ್ನ ಅಂಗವು ಏನೂ ಇಲ್ಲವೆಂದು ನನಗೆ ಅಪ್ರತ್ಯಕ್ಷವಾಗಿ ಆ ಚಾಣಾಕ್ಷೆ ಸೂಚಿಸಿ ಬಿಟ್ಟಳು! ಅಷ್ಟೊತ್ತನಕ ಸುಮ್ಮನಿದ್ದವಳು ತನ್ನ ರಕ್ಷಣೆಯ ಕವಚವನ್ನು ಜೀವಣರಾವನಿಂದ ತೆಗೆದೊಗೆದು ಬಿಟ್ಟಳು: ಅದರಿಂದ ತನ್ನ ರಕ್ಷಣೆಯನ್ನೂ ಮಾಡಿಕೊಂಡಳು. ಸಿಟ್ಟಿನ ನಟನೆ ಮಾಡಿದರೂ, 'ಚಹಾ ಮಾಡುತ್ತೇನೆ' ಎಂದು ಅವಳು ಹೇಳಿದಾಗ, ಇದೆಲ್ಲ ನಾಟಕವೆಂಬುದು ನನಗೆ ತಿಳಿಯಿತು.

"ಪಾಪ, ಅವಳಿಗೆಂಥ ಅನ್ಯಾಯವಾಗುತ್ತಿತ್ತು, ನೋಡು. ಏನೋ ಜೀವ ಕರಗಿ ಈ ಬೀದಿಗೆ ಬಿದ್ದ ಖಂಡೇರಾಯನನ್ನು ಬದುಕಿಸಿ ಸಾಕಿ ಸಲುಹಿ ತನ್ನ ಒಂಟಿ ಜೀವನಕ್ಕೆ ಒಂದು ಆಸರೆ ಮಾಡಿಕೊಂಡಿದ್ದಳು. ನೌಕರಿ ಕೊಡಿಸಿದವಳೂ ಇವಳೇ. ಇಂಥವರ ಬಗ್ಗೆ ಜನರು ಆಡಿಕೊಳ್ಳಬಹುದು; ಅದರಲ್ಲಿ ಸತ್ಯವೂ ಇರಬಹುದು; ಅಥವಾ ಜೀವಣರಾಯನು ಹೆಸರಿಗೆ ಗಂಡನೆಂದು ಭ್ರಮೆ ಹುಟ್ಟಿಸಿರಬಹುದು. ಆದರೆ ಅವನಿಗೊಂದು ಮನೆಯನ್ನಾದರೂ ಮಾಡಿಕೊಟ್ಟು ಸಾಕಿ ಸಲುಹಿದ್ದಳಷ್ಟೇ. ಆದರೆ ಈ ಮುಸುವ ತನ್ನ ಸ್ವಾರ್ಥಕ್ಕಾಗಿ ಮಾಡಿದ ರಾಜಕಾರಣ ಎಷ್ಟು? ವುಯಿಲಿನ ಸಂಗತಿ ಗೊತ್ತಿದ್ದೂ ಅವಳಿಂದ ಬಚ್ಚಿಟ್ಟ; ಅವಳ ಕೈಬರಹದ ಚೀಟಿ ಉಪಯೋಗಿಸಿ ಅವಳ ಮೇಲೆ ಸಂಶಯ ಬರುವಂತೆ ಯತ್ನಿಸಿದ; ಮೊದಲ ಕ್ಷಣದಿಂದ ಡಾಕ್ಟರರ ಮೇಲೆ ಸಂಶಯ ಬರುವಂತೆ ಮಾಡಲು ಇವನ ಯತ್ನ. ಜೊತೆಗೆ 'ಅವದಶೆ' ಅನ್ನುತ್ತಿದ್ದ. ಆದರೆ ತಾನೇ ಸಾಕ್ಷಿಯಾಗಿ ಸಹಿ ಮಾಡಿದ ಕಾಗದದ ಮಹತ್ವದ ಕಲಮು ತನಗೇ ಗೊತ್ತಿಲ್ಲದಂತೆ ಅವರು ನಟಿಸುವಾಗ ಅವಳಿಗೆ ವೇದನೆ ಎಷ್ಟಾಗಿರಬೇಕು?-ಅಂತೇ ತನ್ನ ಅಂಗವನ್ನೂ ಕವಚವನ್ನೂ ಕೂಡಿಯೇ ತೆಗೆದೊಗೆದಳು. ಆ ಕ್ಷಣಕ್ಕೆ ಜೀವಣರಾಯನ ಕಥೆಯೂ ಮುಗಿಯಿತು..."

"ಅಂತೂ ಕತೆ ಮುಗಿಯಿತು. ಹೆಂಗಸರ ಇಂಗಿತ ತಿಳಿಯುವ ನಿನ್ನ ಬುದ್ಧಿಗೆ ನೂರಕ್ಕೆ ನೂರು ಮಾರ್ಕ್ಸ!" ಎಂದು ಪೆರುಮಾಳ್ ಸಿಗರೇಟು ಹೊತ್ತಿಸಲಿಕ್ಕೆ ಬಾಗಿದ.

"ಆ ಮುಸುವ ಓಟ ಕೊಡುವಾಗ ನೀನು ಹಾಕಿದ ಅಡ್ಡಗಾಲು ಪೇಟಿಗೆ ನೂರಕ್ಕೆ ಇನ್ನೂರು ಮಾರ್ಕ್ಸ." ಎನ್ನುತ್ತ ಪೆರುಮಾಳನ ಆಫೀಸಿನ ಅಟ್ಟದಿಂದ ದಡದಡನೆ ಇಳಿದು ಓಡಿದೆ.

ಇನ್ನೊಂದು ಕ್ಷಣ ನಿಂತಿದ್ದರೆ ಪೆರುಮಾಳ್ ನನ್ನ ಎಲುಬನ್ನೇ ಮುರಿಯುತ್ತಿದ್ದ.





# ಬೆಳ್ಳಿಹಬ್ಬದ ಮುಡಿಪು

ಅಂದು ಮಧ್ಯರಾತ್ರಿ-
ಕತ್ತಲೆಗೂ ಅದೆಂಥ ಬೆಳಕಿನ ಮೈತ್ರಿ!
ಚುಕ್ಕಿಗಳು ನೆಲದೊಳಗೆ ಭವ್ಯ ಕನಸಿನ ಬೀಜ ಊರಿದಂತೆ
ಗಾಳಿ-ನೀರು ನಿರ್ಭಯವಾಗಿ ಹರಿದಂತೆ
ತೇರು ಸಡಗರಗೊಂಡು ಸಾಗಿದಂತೆ;
ಬಾನಿನಲಿ ಗರುಡ ಗಂಭೀರವಾಗಿ ತೇಲಿದಂತೆ;
ಎಲ್ಲರಿಗೂ ಎತ್ತರದಲ್ಲಿ ಬಲಭುಜದ ಮೇಲೆ
ಧ್ವಜವು ಹಾರಿದಂತೆ,
ಸಾಧಿಸುದ್ದಗಲಕ್ಕು, ಬಿಡುಗಡೆಯ ತೊರೆಯುಕ್ಕಿ
ಧುಮ್ಮಿಕ್ಕಿ ಮೊರೆದಂತೆ,
ಬಿದ್ದಿರುವ ಆನೆ ತಾನೆ ಮೈಕೊಡವಿ ಮೇಲೆದ್ದು ನಿಂತಂತೆ,
ಮರದ ತುದಿಯಿಂದ ಹಾರಿದ ಹದ್ದು ಮೋಡಗಳ ದಾಟಿ
ವಿಮಾನವಾಗಿ ಪಯಣಿಸಿದಂತೆ,
ನೆಲದ ಕರಿಕೆಯ ಬೇರು ಮಾರುದ್ದ ಕುಡಿಚಾಚಿದಂತೆ
ಹೊಸಯುಗದ ಹಸುಗೂಸಿಗುಸಿರು ಬಂದಂತೆ
ಅಂದು ಮಧ್ಯರಾತ್ರಿ:
ಎಷ್ಟು ಹೇಳಿದರೂ ತೀರದಂತೆ.

ಕಾಲುಗಲ್ಲಿನ ಗೋಪುರದ ತಳಹದಿಯ
ಕಲ್ಲಾಗಿ, ಗಚ್ಚು-ಗಾರೆಗಳಾಗಿ
ಮಣ್ಣು ಮರೆಗಿರುವ ಚಿನ್ಮಯ ಹುತಾತ್ಮರಿಗೆ
ಶ್ರದ್ಧಾಂಜಲಿ-
ಇಂದಿನುತ್ಸವದಲ್ಲಿ ಅವರದೇ ಬಿಜಲಿ.

ಕಾಲುಶತಮಾನ ಕಾಲನಿಗೊಂದು ಹನಿ-
ನಮಗೋ ನಮ್ಮ ಹೋರಾಟದಲಿ ಅಗೆಯುತ್ತ ಹೊರಟ ಚಿನ್ನದ ಗಣಿ
ಕಲ್ಲುಮಣ್ಣನು ಹೊತ್ತು ಬೆವರೊರೆಸಿ ಮತ್ತೆ
ತೋಳೇರಿಸಲು ಈಗ ದೊರಕಿದ್ದು ಬೆಳ್ಳಿ:
ಲಕಲಕಿಸಿ ದೂರ ಗುರಿಯೆಡೆಗೆ ತೋರುಬೆರಳೆತ್ತಿ.
ದಾರಿಯಲಿ ಕಾಗೆ ಬಂಗಾರಕ್ಕೆ ಮರುಳಾಗಿ ಅಗೀಗ
ಬಾಯಿ ಬಿಟ್ಟದ್ದುಂಟು

ಕೊನೆಗೆ ಸಾಕೆನಿಸಿದ್ದು ಹದಿನಾಲ್ಕು ಕ್ಯಾರೆಟ್ಟು.
ಏರಬೇಕಾದಲ್ಲಿ ಇಳಿದು, ಇಳಿಯಬೇಕಾದಲ್ಲಿ ಹುಚ್ಚುಚ್ಚಾಗಿ
ಏರಿದೆ ಬೆಲೆ: ಭಲೆ ನಾವು ಹಾರಿಸಿದ ರಾಕೆಟ್ಟು-
ಒಟ್ಟು ಎಡವಿದರೂ ದಾರಿ ಸಾಗಿದೆ;
ತಡವಾದರೂ ಕಾಲ ಮಿಂಚಿಲ್ಲ, ಕಾರ್ಮೋಡದಂಚಿನಲಿ
ಬೆಳ್ಳಿರೇಖೆ. ಗಾಳಿಗಲ್ಲಾಡಿದರೂ ಗಟ್ಟಿನಿಂತಿದೆ
ನಿರ್ಧಾರದ ಪತಾಕೆ.

ಘೋಷಣೆಯ ಮಂಜು ಗೌಸಣಿಗೆ ಸರಿದು
ನಿಜರೂಪಕ್ಕೆ ಜನವು ಹಾತೊರೆದಿದೆ.
ಅಲ್ಲಲ್ಲಿ ತಗ್ಗಿ ಬಗ್ಗಿ ಮುದುಡಿಕೊಂಡಿರುವ
ಸಮಾಜದ ಬಟ್ಟೆ ನಿಗುಚಿ, ಏರುಪೇರುಗಳನುಳಿದು
ಒಂದೆ ಪಾತಳಿಯಲ್ಲಿ ನಿಲಬಯಸಿದೆ.
ಗಳಿಕೆ-ಬಳಕೆಯ ಲೆಕ್ಕ ಬಾಯ್ದೂಡದೆಯೆ ಭಾರದೊತ್ತಡಕೆ
ತ್ರಾಸು
ತೂಗುತ್ತಿದೆ ಹಾಗು-ಹೀಗೂ;
ಬಂದು ಹೋಗುತ್ತವೆ ನಡುವೆ ಅಡ್ಡ ಸೋಗು.
ಮುಗಿದೀತು ಬೇಗ್ಗೆ ಶ್ರೀರಾಮಪಟ್ಟಾಭಿಷೇಕ,
ತೊಳಡಿಸದಿದ್ದರೆ ಬೆಳತನಕ ಕಾದದ್ದಕ್ಕು ಸಾರ್ಥಕ.

ಸಾಮಾನ್ಯ ಇಂದಿನ ಅನನ್ಯ ಧಾನ್ಯ-
ಬೀಸುಕಲ್ಲಿನ ಮುಕ್ಕು? ಅಲ್ಲ
ಭದ್ರಾವತಿಯ ಉಕ್ಕು.
ಹಕ್ಕು ಚಲಾಯಿಸುವವರೆ ಎಲ್ಲರೂ
ಹೊಣೆಗಾರಿಕೆಗೆ ಮಾತ್ರ ಸುಕ್ಕು.
ಮಿಕ್ಕವರ ಕಲ್ಯಾಣಕ್ಕೆ ಯೋಜನೆಯ ಯೋಜನೆ ಕಡತ,
ಭೂಮಿ-ಸೀಮಿ ನಮ್ಮದೇ: ನಾವೇ ಸ್ವಾಮಿ-
ನಿಂತದ್ದು ಹೆರವರ ಕಾಲಮೇಲೆ, ಕೈಯೂರಿದ್ದು
ಮತ್ತೊಬ್ಬರ ಹೆಗಲ ಮೇಲೆ,
ಎರಡೂ ಜಾರಿ ಬಿದ್ದು, ಎದ್ದು ನಮ್ಮ ಅಸ್ತಿತ್ವಕ್ಕೆ ಧಕ್ಕೆ
ತಾಗದ ಹಾಗೆ ಎದೆ ಸೆಟೆಸಿದೆ ಹೀಗೆ.
ನಾವುನಾವಾಗಿ ಸುಳಿದೆಗೆದು ಬೆಳೆದು
ಸ್ವಯಂ ಪರಿಪೂರ್ಣತೆಯ ಕಾವಿನಲಿ ಮಾಗಿ
ನಿಲ್ಲುತ್ತೇವೆ ನಮ್ಮ ಕಾಲ ಮೇಲೆ,
ಅಡಿಯ ಮುಂದಿಟ್ಟು ಗೆಲ್ಲುತ್ತೇವೆ ಅನಿಷ್ಟಗಳನೆಲ್ಲ
ಬಡಿದು ಅಡಿಗಲ್ಲ ಮೇಲೆ.

ಬಿಡುಗಡೆಯ ಬೆಳ್ಳಿಹಬ್ಬದ ಮುಡಿಪು ಸಲ್ಲಿಸಲು
ಹರಯದ ನಡುಹಗಲಲ್ಲಿ ನಿಂತು
ಹೆಗಲುಗೊಟ್ಟಿದ್ದೇವೆ: ಕಳೆದ ಮುಂಜಾವಿಗು
ಬರುವ ಮುಂಜಾವಿಗು.
ಕಂಬಿ ಹೊತ್ತು ಪರಿಷೆಯ ಕೂಡ ಪರ್ವತವನೇರಿ
ಹೊರಟಿದ್ದೇವೆ:
ಹೊಸ ಯುಗಾದಿಯ ರಥೋತ್ಸವಕ್ಕೆ.
ಹಾಲಗಿರಿ, ಮೇಲಗಿರಿ, ಸಿದ್ಧಗಿರಿ, ಸಿಂಹಾಸನ ಗಿರಿ
ಶ್ರೀಪಾದಕೆ
ಉಘೇ ಉಘೇ ಉಘೇ.

— ಚೆನ್ನವೀರ ಕಣವಿ





# ಹರಿತ ಕತ್ತಿಯ ಧಾರೆಯಂತೆ ತುಳಿಯುವ ದಾರಿ

( ಪಿತೃ ವಾಜಶ್ರವಸನ ಆದೇಶದಂತೆ ಕುಮಾರ ನಚಿಕೇತನು ಯಮಲೋಕವನು ಸೇರಿ, ಯಮಧರ್ಮನ ಮನಮೆಚ್ಚಿಸಿ ಮೂರು ವರಗಳನು ಪಡೆವನು. ತಂದೆಯ ಮನಃಪ್ರಸನ್ನತೆಯನ್ನು ಪ್ರಥಮ ವರದಲ್ಲಿಯೂ, ಅಗ್ನಿವಿದ್ಯೆಯನು ದ್ವಿತೀಯ ವರದಲ್ಲಿಯೂ ಪಡೆದ ಮೇಲೆ, ತೃತಿಯ ವರದಲ್ಲಿ 'ಮರಣದಿಂ ಮುಂದೇನು?' ಎಂಬ ಪ್ರಶ್ನೆಗೆ ಉತ್ತರವನು ಕೇಳಲು, ಯಮಧರ್ಮನು ನಚಿಕೇತನನ್ನು ಸಾಕಷ್ಟು ಪರೀಕ್ಷಿಸಿದ ನಂತರ ಆತ್ಮಜ್ಞಾನವನ್ನು ಉಪದೇಶಿಸುವನು. ಈ ಉಪದೇಶ ಕಠೋಪನಿಷತ್ತಿನಲ್ಲಿದೆ. ಪೌರ್ವಾತ್ಯ ತತ್ತ್ವಶಾಸ್ತ್ರ ಜಿಜ್ಞಾಸುಗಳಿಗಿದು ಮಾರ್ಗದರ್ಶಕ. ಇಲ್ಲಿ ಕಠೋಪನಿಷತ್ತಿನ ಮೂರನೆಯವಲ್ಲಿಯ ಅನುವಾದ ಪದರೂಪವಾಗಿ ಕೊಡಲಾಗಿದೆ. ಶರೀರವೇ ರಥ ಆತ್ಮನೇ ರಥಿಕ, ಬುದ್ಧಿಯೇ ಸಾರಥಿ. ಮನಸ್ಸೇ ಕಡಿವಾಣ, ಇಂದ್ರಿಯಗಳೇ ಕುದುರೆಗಳು—ಎಂಬೀ ರೂಪಕ ರೂಪದಲ್ಲಿ ವಿಶದೀಕರಿಸುತ್ತಾ, ಮನುಷ್ಯನು ವಿವೇಕವುಳ್ಳವನಾದಲ್ಲಿ ಪರಮಪದವನ್ನು ಪಡೆಯಲು ಅರ್ಹನಾಗುವನೆಂದು ಯಮಧರ್ಮನು ಬೋಧಿಸುವನು )

೧

ಸುಕೃತ ಫಲವನ್ನುಂಡು, ಹೃದಯದಾಕಾಶವನು
ಬುದ್ಧಿಯನು ಹೊಕ್ಕವರು ಇರ್ವರಲ್ತೆ;
ನೆಳಲು ಬೆಳಕುಗಳೆಂದವರ ಬ್ರಹ್ಮವಿದರು ಪಂ-
ಚಾಗ್ನಿಗಳು ನಾಚಿಕೇತರ್ಪೇಳ್ವರಂತೆ.

೨

ಆವುದಾಗಿಹುದೊ ಸೇತುವೆಯು ಯಾಜ್ಞಿಕರಿಂಗೆ
ಆನಾಚಿಕೇತ ಯಜ್ಞಕೆ ಶಕ್ತರಾವು;
ಭಯ ರಹಿತ ಪಾರನಾವುದೊ ತಿತೀರ್ಷುಗಳಿಂಗೆ
ಅಕ್ಷರ ಪರಬ್ರಹ್ಮವದ ತಿಳಿವುದು.

೩

ಆತ್ಮನಂ ರಥಿಕನೆಂದರಿವುದು, ಶರೀರವನು
ರಥವೆಂದು ನಚಿಕೇತ ನೀನೆಣಿಪುದು;
ಬುದ್ಧಿಯಂ ವಿದ್ಧಿ ಸಾರಥಿಯೆಂದು ಮನವನ್ನು
ಕಡಿವಾಣವೆಂದರಿತುಕೊಂಡಿರುವುದು.

೪

ಇಂದ್ರಿಯಗಳಂ ಹಯಗಳೆನ್ನುವರು ತಿಳಿದವರು
ಗೋಚರಗಳವುಗಳಿಗೆ ವಿಷಯಂಗಳು;
ದೇಹವಿಂದ್ರಿಯ ಮನಸ್ಸುಗಳಿಂದ ಕೂಡಿರುವ
ಆತ್ಮನಂ ಭೋಕ್ತೃವೆಂದೆನ್ನುತಿಹರು

ಆವನೆಂದೆಂದಿಗುಂ ತಡೆ ಹಿಡಿಯದಿಹ ಮನದಿ
ತಿಳಿಗೇಡಿಯೆಂದೆನಿಸಿ ಕೊಂಡಿರ್ಪನು;
ಇಂದ್ರಿಯಗಳಾತಂಗೆ ವಶ್ಯವೆನಿಸವು ನಿಜದಿ
ದುಷ್ಟಾಶ್ವವೆಂತು ಸಾರಥಿಗಂತೆ ಹದನು.

೬

ಆವನೆಂದೆಂದಿಗುಂ ತಡೆ ಹಿಡಿದಿರುವ ಮನದಿ
ತಿಳುವಳಿಕೆಯುವನೆನೆ ಪೆಸರ್ವಡೆವನು
ಇಂದ್ರಿಯಂಗಳವಂಗೆ ವಶ್ಯವೆನಿಪವು ನಿಜದಿ
ಉತ್ತಮಾಶ್ವಗಳ ಸಾರಥಿ ಹೊಡೆವನು.

೭

ತಿಳುವಳಿಕೆಯಿಲ್ಲದೆಯು, ಸುವಿಚಾರವಿಲ್ಲದೆಯು,
ಶುಚಿಯಿಲ್ಲದೆಯು ಸದಾ ಯಾವನಿರುವಂ:
ಆ ನೆಲೆಯನವ ಹೊಂದಲಾರನದುಮಲ್ಲದಯು
ಹುಟ್ಟು ಸಾವಿನ ಸುಳಿಗೆ ಸಿಲುಕುತಿರುವಂ.

೮

ತಿಳುವಳಿಕೆಯುಳ್ಳವನು, ಸುವಿಚಾರವುಳ್ಳವನು,
ಶುಚಿಯುಳ್ಳವನು ಸದಾ ಯಾವನಿರುವಂ;
ಆ ನೆಲೆಯನವ ಹೊಂದಬಲ್ಲನದುಮಲ್ಲದೆಯು
ಹುಟ್ಟು ಸಾವಿನ ಸುಳಿಗೆ ಸಿಲುಕದಿರುವಂ.

೯

ಮತಿಯ ಸಾರಥಿ ಮಾಡಿ, ಮನವ ಹಗ್ಗವ ಮಾಡಿ,
ಆವ ನರ ನಡೆಸುವನು–ಮುನ್ನಡೆವನು;
ಅವನು ಯಾತ್ರೆಯ ಪಾರಗಾಣುವನು–ಕೃಪೆಗೂಡಿ
ವಿಷ್ಣುವಿನ ಪರಮ ಪದವಂ ಪಡೆವನು.

೧೦

ಪಂಚಭೂತಗಳು ಪಂಚೇಂದ್ರಿಯಗಳಿಂ ಶ್ರೇಷ್ಠ,
ಮನವು ಶ್ರೇಷ್ಠವು ಪಂಚಭೂತಂಗಳಿಂ;
ಮನಸಿನಿಂದಲು ಮತ್ತೆ ಬುದ್ಧಿ ಎನಿತೋ ಶ್ರೇಷ್ಠ;
ಬುದ್ಧಿಯಿಂ ಶ್ರೇಷ್ಠ ಮಹದಾತ್ಮ ನಿಜದಿಂ

೧೧

ಮಹದಾತ್ಮಗಿಂತಲವ್ಯಕ್ತಮದು ಶ್ರೇಷ್ಠಮೆನೆ,
ಶ್ರೇಷ್ಠನವ್ಯಕ್ತದಿಂ ಪರಮಪುರುಷಂ;
ಪರಮ ಪುರುಷನಿಗಿಂತ ಮಿಗಿಲೆಂಬುದಿಲ್ಲ ನೆನೆ
ಅದೆ ಕೊನೆಯುಮದೆ ಪರಾಗತಿ ನಿಶ್ಚಯಂ.

೧೨

ಸರ್ವ ಭೂತಗಳಲ್ಲಿ ಗೂಢನಾಗಿರುತಿರುವ
ಆತ್ಮನೀತಂ ಬೆಳಗುವಾತನಲ್ಲ;
ಸೂಕ್ಷ್ಮದರ್ಶಿಗಳಿಂಗೆ-ಏಕಾಗ್ರವಾಗಿರುವ
ಸೂಕ್ಷ್ಮಬುದ್ಧಿಯ ಬಲದಿ ಕಾಣದಿಲ್ಲ.

೧೩

ಪ್ರಾಜ್ಞನೆನಿಸಿರ್ಪವಂ ಮಾತನ್ನು ಮನದಲ್ಲಿ
ಮನವನ್ನು ಜ್ಞಾನದಲಿ-ಮೇಣ್ ಜ್ಞಾನವಂ
ಮಹದಾತ್ಮನಲ್ಲಿ, ಮಹದಾತ್ಮನಂ ಶಾಂತಾತ್ಮ-
ನಲ್ಲಿ ಸೇರಿಸಿ ಸಂಯಮವ ಸಾಧಿಪಂ

೧೪

ಏಳಿರೆಚ್ಚರಗೊಳಿರಿ; ಶ್ರೇಷ್ಠರಂ ಸೇರುತಲಿ
ತಿಳಿದುಕೊಳ್ಳಿರಿ ನೆಲೆಯನಾತ್ಮನಿರವಂ;
ಹರಿತ ಕತ್ತಿಯ ಧಾರೆಯಂತೆ ತುಳಿಯುವ ದಾರಿ
ಕಷ್ಟವೆಂಬರು ಬಲ್ಲವರು ಗಮ್ಯವಂ.

೧೫

ಕೇಳದಿಹ, ಕಾಣದಿಹ, ಮುಟ್ಟದಿಹ, ಮೂಸದಿಹ,
ಸವಿಯದಿಹ, ಸವೆಯದಿಹ, ತುದಿ ಮೊದಲಿರದಿಹ,
ಹಿರಿದರಿಂದಾಚೆಗಿಹ, ಚಲಿಸದಿಹ ಬ್ರಹ್ಮನನು
ತಿಳಿದವನು ಮೃತ್ಯುಮುಖದಿಂ ಮುಕ್ತನು.

೧೬

ಧರ್ಮನಿಂದಿಂತು ಬೋಧಿತವಿಊ ಸನಾತನಂ
ನಾಚಿಕೇತಾಖ್ಯಾನಮಂ ಪೇಳ್ವವಂ
ಕೇಳ್ವವಂ ಕೂಡ ಮೇಧಾವಿಯಾಗುವನವಂ
ಬ್ರಹ್ಮಲೋಕದಿ ಮಹಿಮೆಯಂ ತಾಳುವಂ

೧೭

ಅವನೀ ಪರಮಗೂಢವ ಶುದ್ಧಭಾವದಲಿ
ಕೇಳಿಪನೊ ಬ್ರಹ್ಮವಿದ್ಸಭೆಯಲ್ಲಿ, ಮೇಣು
ಶ್ರಾದ್ಧ ಕಾಲದಲಿ; ಆತಗನಂತ ಫಲವಹುದು
ಆತಂಗನಂತ ಫಲವಹುದು ತಾನು.

-ಕಯ್ಯಾರ ಕಿಞ್ಞಣ್ಣ ರೈ

# ಬೆಳಗು ಎಂದು






ಭಾಷಣ ಗೀಷಣ ಬಿಗಿದು
ಜಯಘೋಷಗಳ ಹಾಡಿ
ಹಳೆಯ ಭರವಸೆಗೊಂದು ಹೊಸ ಬಣ್ಣ ಕೊಟ್ಟು
ಒಮ್ಮೆ ಮಾಡಿದ್ದನ್ನೇ ಇಪ್ಪತ್ತೈದು ವರ್ಷ ಏಾದಿ
ಪ್ರಗತಿ ಎಂದದಕೆ ಕರೆದು
ಗಳಿಸಿದವರಾಸ್ತಿ ಗಿಟ್ಟಿಸಿಕೊಂಡು
ಹಾರ ತುರಾಯಿ ಹಾಕಿಸಿಕೊಂಡು
ಬೆನ್ನು ತಟ್ಟಿಸಿಕೊಂಡು
ಓಡಾಡುವ ಬಣ್ಣ ಬಣ್ಣದ ಹುಂಜಗಳೇ......!

ಈ ನಮ್ಮ ಮನೆಯ ಕಾರಾಂಧಕಾರದಲಿ
ಬೆಲೆ ಏರಿಕೆಯ ಕನಸು ನಿತ್ಯವೂ ಕಂಡು
ಘಾಬರಿಯಾಗಿ ಬಡಿದಾಡಿಕೊಂಡು
ಓದು ಕಲಿಯಲು ಬಯಸಿ
ನೌಕರಿ ಪಡೆದು ಮೈಗಿಷ್ಟು ಬಟ್ಟೆಯುತೊಟ್ಟು
ಸಮಾನತೆಯ ಪ್ರಸಾದ ಹಂಚಿಕೊಂಡು
ಇನ್ನೂ ಆಗದ್ದನ್ನು ಈಗಾದರೂ ಮಾಡಿಸಿಕೊಂಡು-
ಬಿಡಬೇಕೆಂದು ಕುಳಿತಿದ್ದೇನೆ
..................ಬೆಳಗು ಆಗುವದೆಂದು?

--ಸುಂದರ ನಾಡಕರ್ಣಿ




೧

ಬೆಳಕು ಕತ್ತಲೆಗೆ ಧಿಕ್ಕಿಯ ಹೊಡೆಯಲು
ಕತ್ತಲೆ ಕೆನ್ನೆಯು ಕೆಂಪಾಗೆ
ಅನಂತ ನೀಲದ ಹಿನ್ನೆಲೆಯಲ್ಲಿ
ಕೆಂಪು ಸಾಂತ ಹಳದಿಗೆ ತಿರುಗೆ

೨

ಹಳದಿ ಹೊನ್ನ ಪ್ರಭೆಯಾಗಿ ಮಾರ್ಪಡಲು
ಹಿರಣ್ಯವರ್ಣದ ರವಿ ತೂಗೆ
ಸಪ್ತವರ್ಣಗಳ ಸವೇಗ ತಿರುವಿಗೆ
ಥಳಥಳ ಬಿಳಿ ಶುಭ್ರತೆ ಬೆಳಗೆ

೩

ಬಗೆಯೂ ಬೆಳಗಿತು ಜಗವೂ ಬೆಳಗಿತು
ಬೆಳಕೂ ಬೆಳಗಿತು ಚಿದ್ಘನದಿ
ಹಿರಣ್ಮಯೇನ ಪಾತ್ರೆಯಿಂದ ಅಕೊ
ಸತ್ಯಧರ್ಮ ರವಿ ಮೂಡಣದಿ

೪

ಹಗಲು ಮೂಡಿ, ಬರೆ ದಿಗಿಲು ಕತ್ತಲೆಗೆ
ಕತ್ತಲೆ ಬೆಳಕಲಿ ಕರಗಿತ್ತು
ಜಡದೊಡನೆಯೆ ತಾ ಒಡನಾಡುವ ಜಗ-
-ದೊಡವೆಯ ನೆರಳಳಲಿನೆಲೆಸಿತ್ತು

೫

ನಿಶಾ-ಉಷಾ-ಅರುಣಾದಿತ್ಯರ ಬಗೆ
ಚೌಕೋನವದಿಂತು
ಚಿತ್ತದಿ ಮೂಡಿ-ಮನದಲಿ ನುಡಿದಿತು
"ಸರ್ವೇ ಸುಖಿನಃ ಸಂತು"

— ಶ್ರೀದೇವದತ್ತ

# ಒಳತೋಟಿ

೧

ನಾ,
ಕರಗಿ ನೀರಾಗಿ ಉಗಿಯಾಗಿ
ಊರ್ಧ್ವಮುಖಿಯಾಗಿ ಸಾಗಿ
ಆಗಸದ ಕರಿ, ಬಿಳಿ, ನೀಲ-
ಮೋಡಗಳ ತೆಕ್ಕೆಯಲಿ
ಓಡಾಡಿ ಓಡಾಡಿ ಮತ್ತೆ
ಆ ಕಸಿವಿಸಿಯಲ್ಲಿ ಗಾಸಿಯಾಗಿ
ಬೆವೆತು ನೊಂತು ನೀರಾಗಿ
ತುಂತುರ ತುಂತರವಾಗಿ ಸರಿದು
ಇಳೆಯ ಮೈಯೊಳಗೆ
ಹನಿಹನಿಯಾಗಿ ಇಳಿದು
ಇಂಗ ಬೇಕೆಂದಿದ್ದೇನೆ.

೨

ಮನುಷ್ಯತ್ವದ
ಚರ್ಮವ ಸುಲಿದೊಗೆದು
ಎದೆಯನ್ನೆಲ್ಲ ಅಗಿದಗಿದು
ಹುದುಗಿದ್ದ ಹೃದಯ
ಕಿತ್ತೆಸೆದು; ಆ ಬಕಾರದಲಿ
ಸುಣ್ಣದ ಭಟ್ಟಿಯನೆ
ಒಟ್ಟ, ಗಚ್ಚು ಗಾರಿಯು
ಮೆತ್ತಿ; ಸಮಾಧಿ ಕಟ್ಟ
ಅದರ ಮೇಲೆ ಶೀರ್ಷಾಸನ ಹಾಕಿ
ನಿಲ್ಲ ಬಯಸುತ್ತೇನೆ.

೩

ಬಿರಿವ ಸ್ನಾಯುಗಳನು
ನಿನ್ನ ಮಾಂಸದ ಮುದ್ದೆಗೆ
ಬಿಗಿದು, ಹೆಡಮುರಿಗೆ ಸುತ್ತಿ
ಎಳೆದು ತಂದು
ಕಾದು ಕೆಂಡವಾದ ಹಂಡೆಯೊಳಗೆ
ಎಸೆದು, ಅದರೊಳಗೆ
ನೀನು ಬೆಂದು ರಾಡಿಯಾಗಿ
ಹೊತ್ತಿ ಕರುಕಾಗಿ
ಕೆರವಿನಟ್ಟೆಗೆ ಅಂಟದ ಮಣ್ಣಿನಂತೆ
ಮೆತ್ತಿ ಹೋಗುವುದ
ನೋಡಬಯಸುತ್ತೇನೆ.

೪

ಮಹಾಶೂನ್ಯದಲಿ
ಸಣ್ಣ ಸೊನ್ನೆಯನಿರಿಸಿ
ನಿಸರ್ಗದುಡುಪಿನಲಿ ನಿಂದು
ನಲಿದಾಡಿ,
ನಿಂತ ನೀರಲ್ಲಿ ಕೆಸರಿನಲಿ
ಅನಂತತೆ ಕಂಡಂತೆ ಹೊರಳಾಡಿ
ಹಸಿರು ಕಂಡತ್ತ ನಾಯಿ ನಾಲಿಗೆ ಚಲ್ಲಿ
ಹುಯಲಿಟ್ಟು ಕಚಪಚನೆ ತುಳಿದಾಡಿ
ತುಯ್ತ ತುಡಿತಗಳನು ತಣಿಸಿಕೊಂಡು
ಪಶುವಿಗಿಂತಲು ಪಶುವಾಗಿ
ಪಾಷಂಡಿಯಾಗಿ
ಬದುಕ ಬಯಸುತ್ತೇನೆ.

-ಶ್ರೀನಿವಾಸ ಕುಲಕರ್ಣಿ






ಬರಲಿ ಬರಲಿ ಬರಲಿ ಬರಲಿ ದೀಪಾವಳಿ
ಇರಲಿ ಹೃದಯದಲ್ಲಿ ದೇವ ದೀಪಾವಳಿ॥

• • •

ಒಂದೆ ಎರಡೆ ಮೂರೆ ಎಷ್ಟಂತ ಹೇಳಲಿ
ಅನಂತಾನಂತ ಬಂದಿವೆ ದೀಪಾವಳಿ
ಮುಂದೆ ಮುಂದೆ ಹಲಹಲವು ಬರಲಿದೆ ಬಾಕಿ
ಕೊನೆ ಮೊದಲಿಲ್ಲದ ಈ ಹಬ್ಬದ ಹಾವಳಿ॥

• • •

ಜಗಬೆಳಗುವ ಜನ ಬೆಳಗುವ ಉದ್ದೇಶವೊ
ಎಣ್ಣೆ ಬತ್ತಿಗಳೊಂದಿಗೆ ವಿತ್ತದ ದಹನವೊ
ಸಿಹಿಯೂಟ ತಿನಿಸುಗಳ ಉಬ್ಬೊ...ಮಬ್ಬೋ
ನಿರುದ್ಯೋಗದ ನೆಪವೊ ತಿಳಿಯದಂತಾಗಿದೆ॥

• • •

ಸೂರ್ಯಚಂದ್ರ ಕೋಟಿ ಕೋಟಿ ನಕ್ಷತ್ರ ಬುಗ್ಗೆ
ಆ ದೇವನು ಹಚ್ಚಿಟ್ಟ ಚಿರ ದೀಪಾವಳಿ
ಆರದಮರ ಆರತಿಗಳ ಸಾಲು ಜ್ಯೋತಿಗೆ
ಸಮನೆಂತು ಜಗಜನರ ಕಿರಿಕಿರಿ ದೀಪಾವಳಿ

• • •

ಬ್ರಹ್ಮಾಂಡ ಬೆಳಗುವಂಥ ಬೆಳಕ ನೆಚ್ಚಿಹರು
ಪಿಂಡಾಂಡ ಬೆಳಗುವಂಥ ಬೆಳಕ ಮುಚ್ಚಿಹರು
ಮದ್ದು ಗುಂಡು ಬಾಣ ಪಟಾಕಿಗಳ ಸುಡುವರು
ಕಾಮ ಕ್ರೋಧಾದಿ ಸಿಡಿಮದ್ದುಗಳ ಸುಡರು॥

• • •

ಸಿಹಿಜೀವಿಯಾಗಿ ಸಿಹಿ ಅನುಭವ ನೀಡೆಲ್ಲರಿಗೆ
ಎಂಬ ಹಿರಿಪಾಠ ಪಠಿಪ ಜಾಣತನವಿಲ್ಲಿಲ್ಲ
ಸಿಹಿ ಅರ್ಥವರಿಯದಲೆ ಸಿಹಿ ಊಟ ಮಾಡಿ
ಕಹಿ ಅನಾರೋಗ್ಯವನು ತಂದುಕೊಳ್ಳುವರಲ್ಲ॥

• • •

ಸಿರಿಕೊಡು ಶ್ರೀಲಕ್ಷ್ಮಿ; ವಿದ್ಯೆ ನೀಡು ಶ್ರೀವಾಣಿ
ಎಂದು ಪೂಜೆಗೈದು ರಾತ್ರಿ ದೀಪ ಕಾಯುವದದೆ
ನೇಮ ಮರೆತು ಜೂಜು ಕುಡಿತ ಸ್ತ್ರೀಕೂಟದಿಬೆರೆವ
ಅನಾಚಾರಿಗಳಿಗೆಂತು ನೀಡ್ವರವರು ಸಿರಿ-ವಿದ್ಯೆ॥

• • •

ದೀಪಾವಳಿ ಪಾವಿತ್ರ್ಯಕೆ ಬಂದಿದ್ಯೆ ದಿವಾಳಿ
ಅಂತಿದಕೆ "ದಿವಾಳಿ" ಎಂಬುಪನಾಮವೈದಿದೆ
ಎನಿತು ಬಂದರೇನು ಈ ತೆರನೆ ದೀಪಾವಳಿ
ಅಳಿಯದು ಅಂತರ್ಯ ನಿಶಿಯು, ಮತ್ತದು ಇವ್ಯೆ॥

• • •

ಬಾಳ ಹಣತೆಯಲಿ ಭಕ್ತಿತೈಲವನೆರೆದು
ಸತ್ಯ ಶುದ್ಧ ನಡೆ ನುಡಿಗಳೆರಡು ಬತ್ತಿಗೆ
ದೇವ ಕೃಪಾಜ್ಯೋತಿ ಮುಟ್ಟೆ ಬೆಳಗುವದು
ಸುಧರ್ಮ ಪ್ರಕಾಶವು; ಅದು ನಿಜ ದೀಪಾವಳಿ॥

• • •

ವರುಷಕ್ಕೊಮ್ಮೆ ಬಂದು ಹೋಗಿ ಬರುವದೀ ಹಾಳು
ದೀಪಾವಳಿಯಿಂದೇನು ಲಾಭವು ಹೇಳಿ?
ದಿನ ದಿನವೂ ಚಣಚಣವೂ ಯಾವಾಗಲೂ
ಬೆಳಗಬೇಕು ಹೃದಯದಿ ದೇವ ದೀಪಾವಳಿ॥

— ಶ್ರೀ ಗುರುಸ್ವಾಮಿ ಕಲಕೇರಿ

# ನಮ್ಮ ಮನೆಗೂ ಬಂತು ನವ್ಯಕಾವ್ಯ

ಹದಿನೆಂಟು ನೊಳದುದ್ದ ಸೀರೆಯನು ಉಟ್ಟು
ಹಣೆಗಿಟ್ಟು ಹರವಾದ ಕುಂಕುಮದ ಬೊಟ್ಟು
ಮೈತುಂಬ ಆಭರಣ, ತಲೆತುಂಬ ಕೇದಗೆಯು
ಕೊರಳಲ್ಲಿ ಥಾಳೈಸೆ ಮಣಿಯ ಮಂಗಳಸೂತ್ರ;
ನಮ್ಮಜ್ಜಿ ಮನೆಗೆಲಸ ಮುಗಿಸಿ ಕುಳಿತಿರುವಾಗ
ಷಡ್ರಸದ-ನವರಸದ ಹಿರಿಮೆಗಳ ನೆನೆಯುತ್ತ
ಅತಿಥಿಗಳು ಮೃಷ್ಟಾನ್ನ ಭೋಜನವ ಭುಂಜಿಸಲು
ನಮ್ಮ ಮನೆಯಲಿ ಪ್ರೌಢಕಾವ್ಯ ವಾಚನವಿತ್ತು.

* * * *

ಆರುವೊಳದಾ ಸೀರೆ, ಕೈತುಂಬ ಬಳೆಗಳುಲಿ
ಆಭರಣ ಕಡಿಮೆ, ಕುಂಕುಮವು ಚಿಕ್ಕದಿದೆ
ಪುಟ್ಟ ಮಲ್ಲಿಗೆ ದಂಡೆ ಕೇಶದಲಿ ಮುಡಿದು
ನನ್ ತಾಯಿ ವೀಣೆಯನ್ನು ಕೈಯಲ್ಲಿ ಹಿಡಿಯುತ್ತ
ರಾಮಕತೆ-ಭಾಗವತ ಗಮಕದಿಂದುಲಿವಾಗ
ಮನೆಯಲ್ಲಿ ಷಟ್ಪದಿಯು ಝೇಂಕರಿಸುತಿತ್ತು

* * * *

ಐದು-ಮೊಳದಾ ಸೀರೆ, ಸ್ವಲ್ಪ ಆಂಗ್ಲ ಫ್ಯಾಶನ್ನು,
ಹೌದೊ ಅಲ್ಲೋ ಎಂಬ ಕುಂಕುಮದ ಬೊಟ್ಟು
ನಯವಾಗಿ ಹೆಣೆದಿರುವ ಹೊನ್ ತಾಳಿ ಕೊರಳಲ್ಲಿ
ತಾಂಬೂಲದಿಂ ಮಾವು ಚಿಗುರಾದ ತುಟಿಗಳಲಿ
ಸಂಗೀತ-ಆಲಾಪ ರಸಿಕತೆಯ ಸೊಲ್ಲಿನೀ
ನಸುನಗೆಯ ಬೀರುತ್ತ, ಕೆಲಸವುಯ ಬೋಧಿಸುತ
ಕ್ರೀಡಿಸುತ ವರ್ಣಿಸುತ ಶೃಂಗಾರ ರಸದೊಳಗೆ ತೋಯಿಸುತ
ಕಾಡಿಗೆಯ ತೀಡಿರುವ ನಯನದಲಿ ಸಾಯಿಸುತ
ನಲ್ಲನನು ಕಾಯಿಸುತ, ಮೋಹಿಸುತ, ಬೇಯಿಸುತ
ಈಕ್ಷಿಸುತ, ಸುಖದ ಸರಸಿನಲೊಮ್ಮೆ ತೇಲಿಸುತ,
ಮುಳುಗಿಸುತ, ಅಪ್ಪುತ್ತ, ತಪ್ಪುತ್ತ, ಮೈ ಕುಣಿಸುತ್ತ
ಜೀವ-ಸೆಲೆಯ ಬಟಾಬಯಲಾಗಿ ಹರಿಸುತ್ತ
ಗೆಜ್ಜೆ-ಪೈಜಣದೊಡನೆನನ್ನಾಕೆ ಕುಣಿಯುತ ಬರಲು
ನಮ್ಮ ಮನೆಗೂ ಬಂತು ಭಾವಗೀತ

* * * *

ತಲೆಗೆ ಬಾಬ್-ಕಟ್ಟು, ತುಟಿಗೆ ಲಿಪ್‌ಸ್ಟಿಕ್ಕು
ಮುಖಕೆ ಗಂಧದ ಹಿಟ್ಟು, 'ಕಾರಣೆಯ ಸಾರಣೆ'
ತನ್ನ ಗತ್ತಿನ ನೋಟ ಹೆರವರಿಗೆ ತಿಳಿಯದೊಲು
ಕಂಗಳಿಗೆ ಕಪ್ಪು-ಕನ್ನಡಕವನು ಧರಿಸುತ್ತ
ಮಿತಭಾಷಿಯಾದರೂ, ಹುಚ್ಚು-ಹೊಳೆ ಹರಿಸುತ್ತ
ಚಿಕ್ಕದಾದರು ಚೊಕ್ಕ ಸ್ಕರ್ಟು ಹಾಕಿದ ನೀರೆ,
'ಲಜ್ಜೆ ಬುರಕಾ ಯಾಕೆ ಅತ್ಮವೆ ಹರಕಿರಲು'?
ಎನ್ನುತ್ತ, ವಾಸ್ತವದ ಭಾಷೆ, ವಾಸ್ತವದ ರೀತಿ
ವಾಸ್ತವದ ನಡೆ, ಇದೇ ತನ್ನ ಅಸಲು ಕಸಬೆಂದು
ವಾಸ್ತವದ ಹೆಣ್ಣು, ಫ್ರಾಯಿಡನ ಮಂತ್ರದಂಡವನು
ತನ್ನ ವ್ಯಾನಿಟೀ-ಬ್ಯಾಗಿನೊಳಗಿಟ್ಟುಕೊಂಡು
ಕನಸಿನಲೇಕೆ? ನೆನಸಿನಲ್ಲೇ ಬೆನ್ನು ಬಿಡೆನೆಂದು
ಆಫೀಸಿನ ಹುಡುಗಿ "ವಿ ಸ್-" ಟಾಯ್ ಹಿಡಿದು ಉಲಿದಾಗೆ
ನಮ್ಮ ಮನೆಗೂ ಬಂತು "ನವ್ಯಕಾವ್ಯ"

— 'ಜೀವಿ' ಕುಲಕರ್ಣಿ



# ತೇನ ವಿನಾ –

ತೇನೆ ವಿನಾ ತೃಣಮಪಿ ನ ಚಲತಿ
ಏನು, ಒಪ್ಪುವದಿಲ್ಲ?
ನಿನ್ನ ಸಾಹಸಗಳನು ಕಣ್ಣಾರೆ ಕಂಡುಂಡು
ನಾ ದಣಿದು
ಬೆಕ್ಕಸನೆ ಬೆರಗಾಗಬೇಕೆಂಬೆ?
ಭಾಪು, ನಿಜ,
ಪರಶಿವನ ಮುಡಿಯಲಂಕರಿಸಿರುವ
ಚಂದಿರನ ಮೆಟ್ಟ,
ಮಂಗಳನ ಅಂಗಳದೊಳಾಡುವ
ಹಿರಿಮೆ ನಿನ್ನದೊ?
ಕಡಲಾಳ ಗರ್ಭದಲಿ ನೆಲೆ ನಿಂತು
ವನಧಿ ಸಂಪತ್ತನ್ನು ಸೂರೆಗೊಳುವಾಸೆ
ಹಿರಿಯಾಸೆ ನಿನ್ನದಾಗಿಹುದೆಂಬೆಯಾ?
ಪಂಚ ಭೂತಗಳಿಂದ ಚಲುಜಗದ ನಿರ್ಮಾಣ
ಅದು ಕೂಡ
ತೇನ ವಿನಾ ನ ಖಲು ಸಂಭವತಿ
ಇಂತಿದ್ದು ನಿನಗುಂಟು ನಿಜ ಸಾಹಸದ ಹೆಮ್ಮೆ
ಕರ್ಮಯೋಗಿಯು ನೀನು, ನಾನೊಪ್ಪಲೇ ಬೇಕು.
ನಿನ್ನ ಕುದುರೆಯು ನೀನು
ನೀರಿಗೊಯ್ದರು ಕೂಡ
ಆ ಹಯಕೆ ಹಸಿವೆ ನೀರಡಿಕೆಗಳ
ಕಾಂಕ್ಷೆಯನು ನೀಡುವಾ
ಶಕ್ತಿಯೆ ಒಳಗಿನಾತುಮ ಶಕ್ತಿ
ತೇನ ವಿನಾ ತೃಣಮಪಿ ನ ಚಲತಿ
ಮೀರಿ ಆ ಶಕ್ತಿಯನು
ತೃಣ ಕೂಡ ಚಲಿಸದು
ಎಲ್ಲಿಂದ ಬಂದೀತು ಜ್ಞಾನಕರ್ಮದ ಪೆರ್ಮೆ
ಆತನಾಶೀರ್ವಾದ ರಕ್ಷೆ ನಿನಗಿಲ್ಲದೊಡೆ?
ದೇವನಿತ್ತಿಹ ಕೊಡುಗೆ
ನಿನ್ನದೀ ಕುಶಲ ತನು
ಇಂಥ ಜೀವಂತ ಯಂತ್ರವ ಕಂಡು
ಮೂಕ ವಿಸ್ಮಿತನಾಗು!
ಕಿರುಬೆರಳನಾದರೂ ನೀನದಕೆ
ಜೋಡಿಸುವ ಶಕ್ತಿ ಹೊಂದಿರುವೆಯಾ?
ಏನಿದ್ದರೂ
ಬರಿಯ ಕಿತ್ತಾಟವೇ ನಿನ್ನ ಮುಂಗಾಟವೈ!
ಜೋಡಿಸುವ ಕೂಡಿಸುವ
ಸೇರಿಸುವ ಪೇರಿಸುವ
ಕಲೆ ನಿನ್ನ ವಶವಿಲ್ಲ. ತಾಂಡವದ ರುದ್ರ ನೀ
ಶಿವಂಕರನಾಗುವೆಯಾ?
ನಿನಗದಕೆ ಮನವಿಲ್ಲ.

ನಿನ್ನದೆಲ್ಲವು ಕೃತಕ, ನಿಜದ ಛಾಯೆಯು ಇಲ್ಲ
ಕೃತಕತಗೆ ಬೆಲೆಯುಂಟೆ?
ನೈಜಕ್ಕೆ ನೆಲೆಯುಂಟೆ?
ನಿನ್ನ ಸಂಕೇತವೊ ಕೆಂಪುತ್ರಿಕೋಣ!
ಮಾನವ ಕುಲಕೆ
ವರವೆಂದು ಬಂದಿರುವ ಹಿಡಿಶಾಪ
ನಾಶದಾ ಸಂಕೇತ ನಿನ್ನ ಗೆಯ್ಮೆಯ ಫಲವು.
ತೊಡೆದು ಹಾಕುವ ಶಕ್ತಿ ಮಾತ್ರ ನಿನಗಿಹುದು
ಪಡೆದು ನೀಡುವ ಶಕ್ತಿ ಎಂಬುದೇ ನಿನಗಿಲ್ಲ.
ಅದು ಮಾತ್ರ
ತೇನ ವಿನಾ ನಕದಾಪಿ ಸಾಧ್ಯಂ
ಚಂದಿರನ ಕೆಣಕಿರುವೆ
ಮಂಗಳನ ಮುಂದಿರುವೆ
ಪಂಚಭೂತಗಳನ್ನು ಬಿಡದೆ ನಾ ಗೆದ್ದಿರುವೆ
ಎಂದೆಂಬ ಹೆಮ್ಮೆ ನಿನಗಿದ್ದರೂ ಮುಂದೇನು?
ನಿನ್ನ ನಳಿಕೆಯ ಶಿಶುಗೆ
ಜೀವ ನೀಡಲು ಬೇಕು
ಆತ ದಯಪಾಲಿಸುವ ವೀರ್ಯಬಿಂದುವೆ
ಹೊರತು, ನಿನಗಿಲ್ಲ ಆ ಸಿದ್ಧಿ.
ಒಂದೆ ಮಾತಿದು ಸಾಕು
ನಿನ್ನ ಸೀಮೆಯ ನೀನು ತಿಳಿದು ಮುಂದಡಿಯಿಡಲು
ಒಂದು ಪಿಳ್ಳೆಯ ಕೂಡ ಸೃಜಿಸಲಾಗದ ನೀನು
ಎಂತಾಗ ಬಲ್ಲೆಯೊ ಜಗನಿಯಾಮಕಶಕ್ತಿ?
ಇಂತರಿವು ಮೂಡದಿರೆ ನಿನಗೆ ದೊರೆವುದೆ ಮುಕ್ತಿ?
ಅಂತರಂಗದಲೇಕೆ ಮೂಡದಿದೆ ಅಣುಭಕ್ತಿ?
ಅಂತೆಯೆ ಫಲಿಸದಿದೆ ನಿನ್ನದೆನ್ನುವ ಯುಕ್ತಿ!
ನಿನ್ನ ಗೆಯ್ಮೆಯ ಫಲವು
ಬರಿದೆ ಒಣ ಕಲಮಲವು
ಆತನಂತಃಕರಣವೆಲ್ಲ
ಸಿಹಿಸಿಹಿ ಜಲವು.
ಬಿಡು ಛಲವ, ಹಿಡಿ ನೇಮ ಕೆಡಕು ನೆನಗೇಕೆಂಬ,
ಆತನಾರ್ಕೆಯಲಿ ಮಾನವನೆ ನಾನೆಂಬ
ಭಾವ ಬಲಿಯಲಿ ಮತ್ತೆ.
ಆತನೈಸಿರಿಯುಂಬ
ನೀ ನೀಡು
ನೆರೆಯುವರ ಕರೆದು ಕೈತುಂಬ
ನಾಕವೇ ಇಳಿದೀತು ನೋಡೆ ಸಿರಿಕಣ್ತುಂಬ
ಇದನೆಲ್ಲ ಬಿಟ್ಟು ನೀನಾಗದಿರು ಬರಿಹುಂಬ
ಇಷ್ಟರಿತರೇ ಸಾಕು,
ಹಾಕು ತಿಪ್ಪರಲಾಗ
ತೇನ ವಿನಾ ತೃಣಮಪಿ ನ ಚಲತಿ

–ದ. ಲ. ಕೆರೂರ



ಅವನು ಅಂದದ್ದು ನೆನಪಿದೆ; ಮುಖ ಮಾತ್ರ
ಗಾಳಿ ಇಲ್ಲದ ಕಡೆ ದಿಕ್ಕುಗಳ ನಿಟ್ಟುಸುವುದು
ಕಣ್ಣು ಗುಹೆಯೊಳಗೆ ಮಿಡುಕುವ ಕತ್ತಲ ಭಯ
ಬೆಳಕು ಬಡಿದುಕೊಳ್ಳುತ್ತಿರುವ ಇರುಳಿನ ಹೃದಯ

ಅವನ ಹೆಸರು ನೆನಪಿಲ್ಲ, ಪಾರದರ್ಶಕ ಒಡಲಿಗೆ
ಹಿಂತಲ್ಲೆ ನೆಲೆ, ಬಟ್ಟ ಬಯಲೆ.
ಇಲ್ಲಿ ಅವನೆಂಬುದಿತ್ತೊ, ಇಲ್ಲವೋ
ನೆನಪು ಮಾತ್ರ ನನ್ನ ಬದುಕಿನಲಿ ದಿಕ್ಕು ತಪ್ಪಿದ ಹಾದಿ.

ಇದು ಹೀಗೆ ಅನ್ನಿಸಿರಲಿಲ್ಲ ಮೊದಲು ನಾನವನ
ಪ್ರೀತಿಸಿದಾಗ, ಇನ್ನೂ ನಾನು ನಾನಾಗಿದ್ದಾಗ,
ಸೇರಿಸಿಕೊಂಡ ನನ್ನ ನನಾಮುತ್ತು ತನ್ನೆದೆಯೊಳಗೆ.
ಪ್ರಿಯುವೆ, ಇನ್ನು ನಾನೆಂಬುದೂ ಇಲ್ಲ, ನೀನೆಂಬುದೂ
ಇಲ್ಲ, ಇರುವದೆಲ್ಲ ಬಹುವಚನ ಕಡೆದುಕೊಂಡ ನಾವು.
ನನ್ನೊಡಲು ನಡುಗಿತ್ತು ಮೊದಲು, ಕೊನೆಗೆ ಅವನಲ್ಲಿ ಕರಗಿತ್ತು.

ಆತ ವಿದೇಹಿ.

ನನಗೆ ಬಗೆಹರಿಯಲಿಲ್ಲ, ನಾನು ಸೋತೆನೆ ಅಥವ
ಗೆದ್ದೆನೆ, ಅವನು ತೆರೆದ ಎದೆಯಗಲ ತಿಳಿದಿಲ್ಲ
ಶಾಮು ತಾರೆಗಳ ನಡುವೆ ಪೊರೆಕಳಚಿ ಬೆಚ್ಚಿರುವ ಕತ್ತಲು.
ಅವನ ಅವಕಾಶದಲಿ ಹಿಗ್ಗಿದರೂ ಸ್ಫೋಟಗೊಳ್ಳದ ಅಹಮಿಕೆಯು
ಕತ್ತರಿಸುತ್ತೆ, ದ್ವಂದ್ವ ಉತ್ತರಿಸುತ್ತೆ, ಪ್ರಶ್ನೆ ಉಳಿಯುತ್ತೆ.

ಅದೇನೆ ನಾನು ಅವನಲ್ಲಿ ನನ್ನ ತನ ಕಳೆದುಕೊಂಡೆ
ಪರಿಧಿ ದಾಟದ ಸೊನ್ನೆ, ಬಯಲು ಬಯಲಲ್ಲಿ ಮಗ್ನ?
ನಾನು ನಿಮಗ್ನ ಅವನಲ್ಲಿ ಕಳೆದು ಹೋದ ನನ್ನತನದಲ್ಲಿ.
ಇನ್ನೂ, ಅವನು ಇದ್ದದ್ದೆ ಇಲ್ಲ ಎಂದೂ ತನ್ನತನದಲ್ಲಿ.
ನಿಂತೆ : ಬರೇ ನೆನಪಾಗಿ, ಮರೆಯಲಾಗದ ದುಃಸ್ವಪ್ನ.

ನಾನು ದೇಹ.

-ಜಯಸುದರ್ಶನ

## ಹೆಸರಿಟ್ಟರು

ಮೊನ್ನೆ ಹೆಸರಿಟ್ಟರೆಮ್ಮವರು
ಹದಿನಾರರ ಹರೆಯದ ಕುಡಿ-
ಮೀಸೆಯೊಡೆವ ಕೂಸಿಂಗೆ
ಸಕ್ಕರೆಯನೇ ಹಂಚಿ
ಹೂಗಳನೇ ತೂರಿ
ಹಬ್ಬವ ಮಾಡಿ ಹೆಸರಿಟ್ಟರು
ತಲೆಯನ್ನು ಬಾಲವೆಂದು ಕರೆದವರು
ಇನ್ನು ಮುಂದೆ ತಲೆಯನ್ನು ತಲೆಯೆಂದೇ ಕರೆಯುತ್ತಾರೆ
ಅಹಹ ಕನ್ನಡ ತಾಯೆ ನಿನ್ನ ದೃಷ್ಟಿಕೆಣೆಯುಂಟೆ?
ತಲೆ ಬಾಲಗಳ ಭೇದ ಅದೆಷ್ಟು ಬೇಗ ಅರಿವಾಯ್ತು ನಿನ್ನ ಮಕ್ಕಳಿಗೆ
ಅವರ ಅಗಾಧ ಪಾಂಡಿತ್ಯಕ್ಕೆ
ಅಪಾರ ಜ್ಞಾನಕ್ಕೆ
ಉಘೇ ಉಘೇ
ಉಘೇ ಉಘೇ

-ಜಿನದತ್ತ ದೇಸಾಯಿ



ನನ್ನ ಐದೂ ಜನ ಅಳಿಯಂದಿರೂ ಹೊರದೇಶದಲ್ಲಿದ್ದಾರೆ. ಸಧ್ಯಯಾರೂ ಈ ದೀಪಾವಳಿಗೆ ಬರೋ ಸಂಭವವೇ ಇಲ್ಲ.



ನಮ್ಮೆಜಮಾನ್ರು ಈ ದೀಪಾವಳಿಗೆ ಮೂರು ಹೊಸಸೀರೆ ತಂದಿದ್ದಾರೆ ಕಣೇ ಅದಕ್ಕೇ ಮೂರನ್ನೂ ಒಟ್ಟಿಗೇ ಉಟ್ಕೊಂಡೆ.



# ದೀಪಾವಳಿ ವಿವಿಧ ರೂಪಾವಳಿ

ನಿನ್ನ ವಿಳಾಸಕ್ಕೆ ಯಾವ ಶುಭಾಶಯ ಪತ್ರಗಳೂ ಬಂದಿಲ್ವೇ...? ಇದರಲ್ಲೇ ಯಾವುದನ್ನಾದ್ರೂ ತೆಗೆದಿಟ್ಟುಕೋ...




ಚಿತ್ರರಂಗದಲ್ಲಿ ನೀವು ವರ್ಷ ವರ್ಷವೂ ಹೇಗೆ ಇಳಿಮುಖರಾಗುತ್ತಿದ್ದೀರಿ ಅನ್ನೋದನ್ನೇ ನಾಲ್ಕುಮಾತ್ನಲ್ಲಿ ಹೇಳಿ ಸಾಕು. ದೀಪಾವಳಿ ಸಂಚಿಕೆಯಲ್ಲಿ ಪ್ರಕಟಿಸುತ್ತೇವೆ.




ಹಿಡಿಕೊಂಡು ಹೋಗೋದಕ್ಕೆ ಪಕ್ಕದ ಮನೆಯವರ್‍ಯಾರೂ ಬಂದೇಯಿಲ್ಲ.
ಈ ಸಲ ದೀಪಾವಳಿ ಸಂಚಿಕೆಗಳನ್ನು ನಮ್ಮ ಮನೆಗೆ ತರಿಸಿಲ್ಲ
ಕೆ.ಆರ್. ಸ್ವಾಮಿ


ತಗೋ ನಿನಗೆ ನಾಲ್ಕುಸೀರೆ, ಪಾಪ್ಪಿಗೆ ಎರಡು, ಸುಬ್ಬುಗೆ ಜೊತೆ ಪ್ಯಾಂಟು ಷರಟು, ಲಚ್ಚಿಗೆ ಎರಡು ಲಂಗ, ಪುಟ್ಟನಿಗೆ ಒಂದು ಅಂಗಿ ಚಡ್ಡಿ, ತಂದಿದೀನಿ. ನಾನು ಮುಂದಿನ ದೀಪಾವಳಿಗೆ ತಗೋತೀನಿ.


ನಿನಗೆ ಈ ವರ್ಷದ ಪಟಾಕಿಗಳು ಬೇಕೋ, ಹೋದವರ್ಷದ್ದೋ ಅಥ್ವಾ ಮೂರು ವರ್ಷದ ಹಿಂದಿನದು ಬೇಕೋ ?


ಎಲ್ಲರ ಮನೆಯ ದೀಪಾವಳಿ ಭಕ್ಷ್ಯ ತಿಂದೂ, ತಿಂದೂ ನಂಗೆ ಅಜೀರ್ಣವಾಗ್ಬಿಟ್ಟಿದೆ ಡಾಕ್ಟ್ರೇ.

ನಿರಭ್ರ ಆಕಾಶದಲ್ಲಿ ತನ್ನನ್ನು ಬಿಟ್ಟರೆ ಬೇರಾವ ಮೋಡಗಳೂ ಇಲ್ಲ. ತಾನೇ ತಾನು .... ಥೂ ಬೇಜಾರು, ಆಂ....ಅಲ್ಲಿ ಇನ್ನೊಂದು ಮೋಡ ಬರುತ್ತಿದೆ.... ಬಳಿ ಸಾರಿ ನಿಲ್ಲುತ್ತಿದೆ.... ಮತ್ತೆ ಗಾಳಿ ಬೀಸುತ್ತಿದೆ. ಆ ಮೋಡವೂ ಚದುರಿ ಹೋಗುತ್ತಿದೆ.... ಮತ್ತೆ ತಾನೇ ತಾನು– ಒಂಟಿ ಮೋಡ.........

—ಸಿ. ಎನ್. ಮುಕ್ತಾ



ಒಂಟಿತನ ನಿಮಿಷ ನಿಮಿಷಕ್ಕೆ ತ್ರಿವಿಕ್ರಮನಾಗಿ ಬೆಳೆದು ನಿಲ್ಲುತ್ತಿದೆ. ಭೂತಾಕಾರವಾಗಿ ಮುಂದೆ-ಮುಂದೆ ಬರುತ್ತಿದೆ. ಅದರ ಎತ್ತರ ಬೆಳೆದಂತೆ ನಾನು ಸಣ್ಣಸಣ್ಣದಾಗಿ ಕರಗಿಯೇ ಹೋಗುತ್ತೇನೇನೋ ಎನ್ನಿಸುತ್ತಿದೆ.

ಥೂ ಈ ಒಂಟಿತನ... ಇದಕ್ಕಂಟಿ ಬಂದ ಬೇಸರ... ಇದನ್ನು ಕತ್ತರಿಸಿ ಹಾಕಬೇಕು. ಮಿಕ್ಕ ಅನೇಕರಂತೆ ನಾನೂ ಕಿಲಕಿಲ ನಗಬೇಕು. ಕುಲುಕಾಡಬೇಕು... ಕಾರಣವಿಲ್ಲದೆ ಎಲ್ಲರೂ ನನ್ನತ್ತ ತಿರುಗಿ ನೋಡುವಂತೆ ಮಾಡಬೇಕು... ಬೇಕು, ಬೇಕು... ಎಲ್ಲ ಬೇಕು... ಎಲ್ಲದಕ್ಕಿಂತ ಹೆಚ್ಚಾಗಿ ಯಾರಾದರೂ ಜೊತೆ ಬೇಕು...

ಮನಸ್ಸು ತಡೆಬಡೆಯಿಲ್ಲದೆ ಯೋಚಿಸುತ್ತದೆ. ಆ ಯೋಚನೆಯಲ್ಲೇ ತನ್ಮಯತೆಯನ್ನು ಕಂಡುಕೊಳ್ಳಲು ಯತ್ನಿಸುತ್ತದೆ... ಆದರೆ ಅಷ್ಟರಲ್ಲಿ ಕೇಳುತ್ತದೆ ಅತ್ತೆಯ ಕೂಗು, ಜೊತೆಗೇ ಕೆಮ್ಮು:

"ಕಾವೇರೀ ಎಲ್ಲಿ ಹಾಳಾಗೋದ್ಯೇ. ಒಂದು ಲೋಟ ನೀರು ತಂದು ಕೊಡೇ..."

ಹೂಂ... ನೀರು ಕೊಟ್ಟು ಬಂದುದಾಯ್ತು. ಭೂತಕಾಲದೊಂದಿಗೆ ನನ್ನನ್ನು ಬಂಧಿಸಿರುವ ಸೂತ್ರ-ಅಹಿತಕರ ಸೂತ್ರ-ಇದ್ದೊಂದೇ, ಅತ್ತೆ ಮತ್ತು ಅವಳ ಕೆಮ್ಮು... ಓಹ್!

ತಂದೆ ತಾಯಿ ಚಿಕ್ಕಂದಿನಲ್ಲೇ ತೀರಿಕೊಂಡರು. ಶ್ರೀಮಂತ ಯುವಕನೊಂದಿಗೆ ನನ್ನ ಮದುವೆ ಗೊತ್ತಾದಾಗ ಒಮ್ಮೆಲೇ ಭಾಗ್ಯದ ಬಾಗಿಲು ತೆರೆಯಿತೆಂದುಕೊಂಡೆ. ಬಾಗಿಲೇನೋ ತೆರೆಯಿತು. ಆದರೆ ಆ ಬಾಗಿಲು ತೆರೆದ ರಭಸಕ್ಕೆ ಒಳಗಿದ್ದ ವ್ಯಕ್ತಿಯೇ ಹಾರಿಹೋಯಿತು. ತಾನು ಹಾರಿಹೋಗುವುದಕ್ಕೆ ಮುಂಚೆ ಆ ವ್ಯಕ್ತಿ ನನಗೆಂದು ಬಿಟ್ಟು ಹೋದದ್ದು ಈ ದೊಡ್ಡ ಮನೆ ಮತ್ತು ಅತ್ತೆ ಎನಿಸಿಕೊಂಡ ಈ ಮುದುಕಿ...

ಬೆಳಗ್ಗೆಯೆದ್ದು ಕಾಫಿ ಮಾಡುತ್ತೇನೆ, ಸ್ನಾನ ಮಾಡುತ್ತೇನೆ, ಅಡಿಗೆ ಮಾಡುತ್ತೇನೆ. ಕೆಲವೊಮ್ಮೆ ಅಲಂಕಾರವನ್ನೂ ಮಾಡಿಕೊಳ್ಳುತ್ತೇನೆ. ಕನ್ನಡಿಯ ಮುಂದೆ ನಿಂತು ನನ್ನ ಮುಖವನ್ನು ನಾನೇ ನೋಡಿಕೊಂಡಾಗ ಎಲ್ಲರೂ ಮೆಚ್ಚುವ ಆ ಕಣ್ಣುಗಳು ನನ್ನನ್ನು ನೋಡಿ ನಗುತ್ತವೆ. ಒಂದು ಕ್ಷಣ ನನ್ನನ್ನು ನಾನೇ ಮರೆಯುತ್ತೇನೆ. ಆ ಕಣ್ಣುಗಳನ್ನು ನೋಡುತ್ತಾ, ಮೈಮರೆತು ನಿಂತೇ ಇರೋಣ ಎನ್ನುತ್ತದೆ ಮನಸ್ಸು. ಅಷ್ಟರಲ್ಲಿ ಅತ್ತೆಯ ಕೆಮ್ಮು ನನ್ನನ್ನು ಬಡಿದೆಬ್ಬಿಸುತ್ತದೆ. ಕಲ್ಪನೆಯ ಲೋಕದಿಂದ ವಾಸ್ತವ ಲೋಕಕ್ಕೇ ಎಳೆದು ತರುತ್ತದೆ. ನಗುವ ಕಣ್ಣುಗಳಲ್ಲಿ ಬೇಸರ ಮೂಡುತ್ತದೆ. ಒಮ್ಮೆಲೇ ಈ ಮುಖಕ್ಕೆಲ್ಲಾ ಮಸಿ ಬಳಿದುಕೊಂಡು, ತಲೆ ಕೆದರಿಕೊಂಡು ರಸ್ತೆಯಲ್ಲಿ ಓಡಿಹೋಗಬೇಕು ಎನ್ನಿಸುತ್ತದೆ.

ಮಧ್ಯಾಹ್ನವಂತೂ ಈ ಕಿಟಕಿಯೇ ನನ್ನ ಜೊತೆಗಾರ. ಕೆಲವೊಮ್ಮೆ ಕೆಲಸಕ್ಕೆ ಬಾರದ ಕಥೆ ಕಾದಂಬರಿಗಳನ್ನು ಓದಿ ಹೊತ್ತನ್ನು ತಳ್ಳುವುದೂ ಉಂಟು. ಹೆಚ್ಚು ಸಮಯ ಆಕಾಶದಲ್ಲಿ ದಿಕ್ಕೆಟ್ಟು ತೇಲುವ ಒಂಟಿ ಮೋಡವನ್ನು ಹಿಂಬಾಲಿಸುವುದೇ ನನ್ನ ಕಣ್ಣಿನ ಕೆಲಸ. ಆ ಮೋಡವನ್ನು ನೋಡುತ್ತಾ, ವ್ಯರ್ಥವಾದ ಒಂದಕ್ಕೊಂದು ಸಂಬಂಧವಿಲ್ಲದ ಕಲ್ಪನೆಯ ರಾಜ್ಯದಲ್ಲಿ ಓಡಾಡುವುದೇ ಮನಸ್ಸಿನ ಕೆಲಸ. ಒಮ್ಮೊಮ್ಮೆ ಅಂದುಕೊಳ್ಳುತ್ತೇನೆ... ನಾನ್ಯಾಕೆ ಯಾವುದಾದರೂ ನೌಕರಿ ಹುಡುಕಬಾರದು... ಯಾವುದಾದರೂ ಸ್ಕೂಲು, ಬ್ಯಾಂಕು, ಆಫೀಸು... ಹ್ಞಾಂ... ಫ್ಯಾಕ್ಟರಿಯಲ್ಲಿ ಕೆಲಸ ಸಿಕ್ಕಿಬಿಟ್ಟರಂತೂ ತಂಟೆಯೇ ಇಲ್ಲ. ಬೆಳಗ್ಗೆ ಎದ್ದ ಕೂಡಲೇ ಮನೆ ಬಿಟ್ಟು ಹೊರಟುಬಿಟ್ಟರೆ ರಾತ್ರಿಯಾಗುವ ಹೊತ್ತಿಗೆ ಮನೆಗೆ ಬರಬಹುದು. ಕೈ ತುಂಬಾ ಹಣವೂ ಬರುತ್ತದೆ. ಮರುಕ್ಷಣ ಬುದ್ಧಿ ಸವಾಲು ಹಾಕುತ್ತದೆ: ಈ ಹಣ ಯಾರಿಗಾಗಿ? ಏತಕ್ಕಾಗಿ? ಈ ಮನೆ ಇಷ್ಟು ದೊಡ್ಡ ಮನೆ! ಮಹಡಿಯ ಮೇಲೆ ನಮ್ಮ ವಾಸ. ಕೆಳಗಿನ ಮನೆಗೆ ಬರುವ ಬಾಡಿಗೆಯೇ ನಮ್ಮಿಬ್ಬರ ಜೀವನಕ್ಕೆ ಸಾಕು. ಮೇಲಿನ ಮನೆಯೂ ದೊಡ್ಡದಾಗುತ್ತದೆಂದು, ಅಲ್ಲಿ ಮೆಟ್ಟಿಲಿಗೆ ಹತ್ತಿರವಾಗಿದ್ದ ರೂಮನ್ನು ಬಾಡಿಗೆಗೆ ಕೊಟ್ಟಾಗಿದೆ. ಇಷ್ಟೇ ಅಲ್ಲದೆ ಬೆಳಗಿನಿಂದ ಸಂಜೆಯವರೆಗೆ ನಾನು ಮನೆ ಬಿಟ್ಟು ಹೊರಟುಹೋದರೆ ನನ್ನ ಭೂತಕಾಲದ ನೆನಪಿನಂತೆ ಗಂಟುಬಿದ್ದಿರುವ ಈ ಮುದುಕಿಯನ್ನು ನೋಡಿಕೊಳ್ಳುವರ್‍ಯಾರು? ಸದಾ ಕೆಮ್ಮುತ್ತಿರುವುದಕ್ಕೆ ಶಕ್ತಿ ಬರುವ ಹಾಗೆ ಮಧ್ಯೆ ಮಧ್ಯೆ ನೀರು ಒದಗಿಸುವವರ್‍ಯಾರು... ಅದೂ ಅಲ್ಲದೆ ನಾನು ಯಾರಿಗಾಗಿ ಸಂಪಾದಿಸಬೇಕು? ಯಾಕೆ ಸಂಪಾದಿಸಬೇಕು?

ಮತ್ತೆ ಒಡೆಯುತ್ತದೆ ಕಲ್ಪನೆಯ ಕನಸು ಆಕಾಶದಲ್ಲಿ ತೇಲುತ್ತಿರುವ ಒಂಟಿ ಮೋಡದ ಹಾಗೆ ನಿಮಿಷಕ್ಕೊಂದು ರೂಪತಾಳುತ್ತದೆ. ಮನಸ್ಸು-ದೊಡ್ಡ ಸಮಾಜ ಸುಧಾರಕಿ ಆದ ಹಾಗೆ, ಪತ್ರಿಕೆಯಲ್ಲೆಲ್ಲಾ ತನ್ನ ಫೋಟೋ ಅಚ್ಚಾದ ಹಾಗೆ, ತಾನೊಬ್ಬ ರಾಜಕಾರಣಿ ಆದ ಹಾಗೆ, ಜನನಾಯಕಿ ಆದ ಹಾಗೆ- ಹೀಗೇ ಅದೇ ಅದೇ ಕಲ್ಪನೆಗಳು. ಅಗೆದಷ್ಟೂ ಉಳಿದೇ ಇರುವ ಚ್ಯೂಯಿಂಗ್ ಗಮ್‌ನಂತೆ...

ಆದರೆ ಆ ಕನಸಿನಲ್ಲೂ ಮುಳುಗಿ ಮೈಮರೆಯುವುದಕ್ಕೆ ಅವಕಾಶವಿಲ್ಲದಂತೆ ಎಚ್ಚರಿಸುತ್ತದೆ ಅತ್ತೆಯ ಕೆಮ್ಮು...

ಕೆಲವು ದಿನಗಳ ಹಿಂದೆ ನನ್ನ ಈ ಒಂಟಿತನ ದೂರವಾಗುತ್ತಿದೆ ಎನ್ನಿಸಿತ್ತು. ಈ ಕಲ್ಪನೆಯ ರಾಜ್ಯದಿಂದ ಕೆಳಗಿಳಿದು ಎಲ್ಲರಂತೆ ಸಾಮಾನ್ಯ ಮನುಷ್ಯಳಾಗುತ್ತಿದ್ದೇನೆ ಎಂದುಕೊಂಡೆ... ಅಕ್ಕ ಪಕ್ಕದವರೊಡನೆ ಮಾತನಾಡುವುದರಲ್ಲಿ, ಕೆಳಗಿನ ಮನೆಯ ಹುಡುಗರ ಜೊತೆ ಆಟವಾಡುವುದರಲ್ಲಿ, ರುಚಿ ರುಚಿಯಾಗಿ ಅಡಿಗೆ ಮಾಡುವುದರಲ್ಲಿ, ಕಡೆಗೆ ಅತ್ತೆಯ ಸೇವೆ ಮಾಡುವುದರಲ್ಲೂ ಎಲ್ಲಿಲ್ಲದ ಉತ್ಸಾಹ ಮೂಡಿತ್ತು. ನಿರುದ್ದೇಶವಾಗಿ ನೋಡುತ್ತಿದ್ದ ದೃಷ್ಟಿಗೆ ಗುರಿ ಸಿಕ್ಕಿತ್ತು.

ಮಹಡಿಯ ಮೇಲಿನ ರೂಮು ಖಾಲಿಯಾದಾಗ ವಿಚಾರಿಸಿಕೊಂಡು ಬಂದಿದ್ದ ಮಾಧವ. ಅವನನ್ನು ನೋಡಿದ ಅತ್ತೆ ಗೊಣಗಿದ್ದಳು.

"ಇದೇನೇ ಇತ್ತಾಗೆ ಗೃಹಸ್ಥನೂ ಅಲ್ಲ, ಇತ್ತಾಗೆ ವಿದ್ಯಾರ್ಥಿನೂ ಅಲ್ಲ. ಎಡವಟ್ಟಿನ ವಯಸ್ಸಿನೋನು. ಇವನಿಗೆ ರೂಮು ಬಾಡಿಗೆಗೆ ಕೊಡೋದೇನೇ?"

ಆದರೆ ಅವನಿಗೆ ಬಾಡಿಗೆಗೆ ಕೊಡದಿರುವುದಕ್ಕೆ ನನಗೆ ಯಾವ ಕಾರಣವೂ ಕಂಡು ಬರಲಿಲ್ಲ. ನನ್ನ ಮಟ್ಟಿನ ಕಣ್ಣಿಗೆ ಹುಡುಗ, ಯುವಕ, ಮುದುಕರೆಲ್ಲರೂ ಒಂದೇ. ಮಾಧವನೋ ಉಮಾಮಾಧವನೋ ಯಾರಾದರೇನು?

ಒಂದು ದಿನ ಬೆಳಿಗ್ಗೆ ಏಳುತ್ತಿದ್ದಂತೆ ಅತ್ತೆ ಹೇಳಿದಳು:

"ಕಾವೇರೀ, ಯಾಕೋ ಆ ರೂಮಿನ ಹುಡುಗ ರಾತ್ರಿಯೆಲ್ಲಾ ನರಳ್ತಾ ಇದ್ದಹಾಗಿತ್ತು ಕಣೇ, ಪಾಪ! ಸ್ವಲ್ಪ ನೋಡೇ!"

ಈ ಮುದುಕಿಗೊಂದು ರಾತ್ರಿಯೆಲ್ಲಾ ನಿದ್ದೆಯಿಲ್ಲ.. ಹೂಂ... ಅವಳದೇನು! ತನ್ನ ಸ್ಥಿತಿಯೂ ಅದೇ ತಾನೇ. ನಿದ್ದೆ-ಎಚ್ಚರಗಳ ಸಮ್ಮಿಶ್ರಣದಲ್ಲಿ ರಾತ್ರಿ ಹಗಲಿಗಿಂತ ತುಂಬಾ ದೀರ್ಘ ಎನಿಸಿದ್ದು ಎಷ್ಟೋ ದಿನ. ರಾತ್ರಿ ಯಾರೋ ನರಳಿದ್ದು ನನಗೂ ಕೇಳಿಸಿತ್ತು. ಆದರೆ ಮಾಡುವುದೇನು? ನನ್ನ ಮೌನವನ್ನು ಕಂಡು ಅತ್ತೆಯೇ ಮಾತು ಮುಂದುವರಿಸಿದಳು:

"ನೋಡೇ, ಬೆಳಗ್ಗೆ ಕಾಫಿಗೂ ಹೋಗಿಲ್ಲಾ ಅಂತ ಕಾಣುತ್ತೆ ಆತ. ಒಂದು ಲೋಟ ಕಾಫಿನಾದ್ರೂ ತೊಗೊಂಡು ಹೋಗಿ ಕೊಡೇ..."

ನಾನು ಅನುಮಾನಿಸುತ್ತಲೇ ಹೋಗಿ ಬಾಗಿಲ ತಟ್ಟಿದೆ. ಹಲವಾರು ಸಲ ಬಾಗಿಲು ತಟ್ಟಿದ ಮೇಲೆ ಆ ಮನುಷ್ಯ ತುಂಬಾ ಕಷ್ಟಪಟ್ಟು ಬಾಗಿಲು ತೆರೆದ. ಅವನ ಮುಖ ನೋಡಿ ನಾನು ಬೆಚ್ಚಿದೆ. ಜ್ವರದಿಂದ ಕಣ್ಣುಗಳು ಕೆಂಡವಾಗಿದ್ದವು. ನಿಲ್ಲಲೂ ಆಗದೆ ತೂರಾಡುತ್ತಿದ್ದ. ನನ್ನನ್ನು ನೋಡಿ ಅವನಿಗೂ ಆಶ್ಚರ್ಯವಾಯಿತು. ನಾನೇ ಕೇಳಿದೆ:

"ಜ್ವರ ಬಂದಿದೆಯೇನು?"

"ಹೌದು. ನಿನ್ನೆ ಸಂಜೆಯಿಂದ ಜ್ವರ ಇತ್ತೂಂತ ಕಾಣುತ್ತೆ. ರಾತ್ರಿಯ ಹೊತ್ತಿಗೆ ತುಂಬಾ ಜಾಸ್ತಿ ಆಗಿಬಿಡ್ತು. ಈಗ ಕಣ್ಣು ಬಿಡೋದಕ್ಕೂ ಆಗ್ತಿಲ್ಲ..."

"ನೀವು ಮಲಕೊಳ್ಳಿ. ಡಾಕ್ಟರಿಗೆ ಹೇಳಿ ಕಳುಹಿಸಲೇನು?"

"ಏನು ಬೇಡ. ಫ್ಲೂ ಅಂತ ಕಾಣುತ್ತೆ. ಪಿಲ್ಸ್ ಇದೆ. ತೊಗೊಳ್ತೀನಿ."

"ತಾಳಿ, ಕಾಫಿ ತರ್‍ತೀನಿ."

ಕಾಫಿ ಕೊಟ್ಟಾಯ್ತು. ಬರೀ ಪಿಲ್ಸಿಗೆ ಜ್ವರ ಬಗ್ಗದಿದ್ದಾಗ ಡಾಕ್ಟರನ್ನೂ ಕರೆತಂದಾಯ್ತು. ಹೊಟೆಲಿಗೆ ಹೋಗುವ ಸ್ಥಿತಿಯಲ್ಲಿಲ್ಲದ್ದರಿಂದ ಮನೆಯಲ್ಲಿ ಗಂಜಿ ಮಾಡಿಕೊಟ್ಟದ್ದೂ ಆಯ್ತು. ಪರಿಣಾಮ! ಈ ಔಷಧ ಉಪಚಾರಗಳಲ್ಲಿ ನನ್ನ ಅವನ ಪರಿಚಯ ಗಾಢವಾಯಿತು. ಗಾಢವಾದಂತೆ ಇದುವರೆಗೆ ಬರೀ ಬೂದುಬಣ್ಣವಾಗಿ ಕಾಣುತ್ತಿದ್ದ ಪ್ರಪಂಚಕ್ಕೆ ಬಗೆಬಗೆಯ ಬಣ್ಣ ಬರಲಾರಂಭಿಸಿತು.

ಅದೆಷ್ಟು ಚೆನ್ನಾಗಿ ಮಾತನಾಡುತ್ತಿದ್ದ ಮಾಧವ. ಆ ಮಾತು ಕೇಳುತ್ತಿದ್ದರೆ ಎಲ್ಲ ಮರೆತು ಹೋಗುತ್ತಿತ್ತು.... ಅತ್ತೆ, ಅವಳ ಕೆಮ್ಮು... ಈ ಒಂಟಿತನ, ಬೇಸರ ಎಲ್ಲ ದೂರ ಸರಿದು ಹೋಗುತ್ತಿದ್ದವು. ಮನಸ್ಸಿನ ಪರದೆಯ ಮೇಲೆ ರಂಗುರಂಗಿನ ಚಿತ್ರ ಮೂಡುತ್ತಿದ್ದವು. ಉತ್ಸಾಹದ ಚಿಲುಮೆ ಚಿಮ್ಮುತ್ತಿತ್ತು.... ಮಾತೇ ಬಾರದಹಾಗಿದ್ದ ನಾನೂ ಎಷ್ಟೊಂದು ಮಾತು ಕಲಿತುಬಿಟ್ಟೆ... ಅವನ ಸಹವಾಸದಲ್ಲಿ. ಎಷ್ಟೊಂದು ಓದಿದೆ, ಇಲ್ಲದ ನೆವ ತೆಗೆದು ಅವನೊಂದಿಗೆ ಎಷ್ಟು ಅಲೆದೆ. ಒಂದು ದಿನ ಮಾಧವ ಹೇಳಿದ್ದ:

"ನಿಮ್ಮ ಕಣ್ಣನ್ನು ನೋಡಿದ್ರೆ ಎಲ್ಲಾ ಮರೆತು ಹೋಗುತ್ತೆ ಕಾವೇರಿ. ಆ ಕಣ್ಣುಗಳನ್ನೇ ನೋಡ್ತಾ ಕೂತು ಬಿಡೋಣಾ ಅನ್ನಿಸುತ್ತೆ... ಅಬ್ಬಾ! ಎಷ್ಟು ಸುಂದರ! ಎಷ್ಟು ವಿಶಾಲ, ಎಷ್ಟು ಆಳ..."

ಅವನ ಮಾತನ್ನು ಕೇಳಿ ನನ್ನ ಮೈ ಬಿಸಿಯೇರಿತ್ತು.

ಆ ಕಣ್ಣುಗಳನ್ನು ನಾನು ಕನ್ನಡಿಯಲ್ಲಿ ಎಷ್ಟು ಬಾರಿ ನೋಡಿಕೊಂಡಿರಲಿಲ್ಲ. ಮಾಧವನ ಬಾಯಿಂದ ಆ ಮೆಚ್ಚುಗೆಯ ನುಡಿ ಕೇಳಿದ ಮೇಲೆ ನಾನು ಕನ್ನಡಿಯ ಮುಂದೆ ನಿಲ್ಲುವುದು ಹೆಚ್ಚಾಯಿತು.

ನಮ್ಮಿಬ್ಬರ ಸಲಿಗೆ ಬೆಳೆದಂತೆ ಅಕ್ಕ ಪಕ್ಕದವರ ಗುಸು ಗುಸು ನನಗೆ ಕೇಳಿಸುವಂತೆಯೇ ಆರಂಭವಾಯಿತು. ಅದೇ ವಿಚಾರ ಮಾಧವನಿಗೆ ಹೇಳಿದಾಗ, ಅವನೆಂದ:

"ಬಿಡು ಕಾವೇರಿ, ಅವೆಲ್ಲಾ ಯಾವ ಲೆಕ್ಕ?"

"ಹಾಗೆಂದರೇನು? ನೀವು ಗಂಡಸರು... ಆದರೆ ಹೆಣ್ಣ ಪಾಡು..."

"ನಿಮಗಿಲ್ಲಿ ಬೇಸರವಾಗಿದರೆ ಒಂದು ಕೆಲಸ ಮಾಡೋಣವೇನು?"– ಅವನ ಧ್ವನಿಯಲ್ಲಿ ತುಂಟ ತನವಿತ್ತು.

"ಏನು?"

"ನಾವಿಬ್ಬರೂ ಇಲ್ಲಿಂದ ಹೊರಟು ಹೋದರೆ?"

"ಅದು ಹೇಳುವಷ್ಟು ಸುಲಭ ಅಂದುಕೊಂಡಿರಾ?"

ಈಗವನ ಮುಖ ಗಂಭೀರವಾಯಿತು:

'ಯಾಕೆ ಕಾವೇರಿ? ನನ್ನ ಮಾತಿನಲ್ಲಿ ನಂಬಿಕೆಯಿಲ್ಲ ವೇನು? ನೀವೊಪ್ಪುವುದಾದರೆ ನಿಮಗಾಗಿ ನಾನು ಏನು ಬೇಕಾದರೂ ಮಾಡಬಲ್ಲೆ."

ಓಹ್! ಎಷ್ಟು ಹಾಯೆನಿಸಿತ್ತು ನನಗೆ. ನನ್ನ ಮನಸ್ಸಿಗೂ ಒಂದು ಬಲವಾದ ಆಸರೆ ಇದೆ. ನಾನೂ ಬೇಕೆಂದಾಗ ಮಿಕ್ಕೆಲರಂತೆ ಆ ಆಸರೆಯನ್ನು ಬಲವಾಗಿ ತಬ್ಬಿಕೊಳ್ಳಬಲ್ಲೆ... ನಾನವನನ್ನು ನಂಬಿದೆ. ಅವನಿಗಾಗಿ ಏನು ಬೇಕಾದರೂ ಮಾಡಲು, ಏನು ಬೇಕಾದರೂ ಬಿಡಲು ಸಿದ್ಧಳಾದೆ. ನಿರ್ಧಾರ ಕೈಗೊಳ್ಳುವುದೇ ತಡ. ಅವನು ನನ್ನವನಾಗುತ್ತಾನೆ, ಅದಕ್ಕೆ ಆತುರವೇಕೆ?...

...ಮಾಧವ ತನ ವಿಚಾರವನ್ನೆಲ್ಲಾ ಹೇಳಿಕೊಳ್ಳು ತ್ತಿದ್ದ... ಮನೆ ತುಂಬಾ ಮಕ್ಕಳಿದ್ದ ದೊಡ್ಡ ಸಂಸಾರ ಅವರದು... ಅವರಲ್ಲಿ ಇವನೇ ದೊಡ್ಡ ಮಗ...ತಂದೆ ತಾಯಿಗಳ ಪ್ರೇಮದಪುತ್ರ... ಸಾಕಷ್ಟು ಜಮೀನಿದೆ–ಮೊದಲಿನಿಂದ ಮಾಧವನಿಗೆ ಸೋದರಿಕೆ ಸಂಬಂಧ ತಂದುಕೊಳುವ ಆಸೆ ತಾಯಿಗೆ... ಹುಡುಗಿ ಚೆನ್ನಾಗಿಲ್ಲವೆಂದು ಮಾಧವನಿಗೆ ಇಷ್ಟವಿಲ್ಲ. ಇತ್ಯಾದಿ... ಇತ್ಯಾದಿ...

"ಇದುವರೆಗೂ ತಾಯಿಯ ಮಾತನು ನಡೆಸುವುದಕ್ಕಾದರೂ ಹೂ ಅನ್ನೋಣ ಅಂದು ಕೊಳ್ಳುತ್ತಿದೆ ಕಾವೇರಿ. ಆದರೆ ಈಗ... ನಿಮ್ಮನು ನೋಡಿದ ಮೇಲೆ ಅವಳು ಇನ್ನಷ್ಟು ಕುರೂಪಿಯಾಗಿ ಕಾಣುತ್ತಿದ್ದಾಳೆ... ಉಹುಂ... ಈ ಜನ್ಮದಲ್ಲಿ ಬೇರೆ ಯಾರನ್ನು ನಾನು ಹೆಂಡತಿ ಅನ್ನುವ ದೃಷ್ಟಿಯಿಂದ ನೋಡಲಾರೆ ಕಾವೇರಿ. ಮದುವೆಯೇ ಆಗದಿದ್ದರೂ ಸರಿ... ನೀವೇ, ನೀವೊಬ್ಬರೇ ನನ್ನ ಪಾಲಿಗೆ ಹೆಣ್ಣು..."

ನಾನು ಉಬ್ಬಿಹೋಗಿದ್ದೆ. ಮಂಜುಗಟ್ಟಿದ್ದ ನನ್ನ ಹೃದಯದಲ್ಲಿ ಕಾವು ಏರಿ ನಾನೂ ನಿಜವಾದ ಕಾವೇರಿಯಾಗಿದ್ದೆ.

ಒಮ್ಮೊಮ್ಮೆ ಅತ್ತೆಯೂ ಗೊಣಗುತ್ತಿದ್ದುದುಂಟು:

"ನಿನ್ನದ್ಯಾಕೋ ಅತಿಯಾಯಿತಲ್ಲೇ ಕಾವೇರಿ. ಸದಾ ಆ ಹುಡುಗನ ಮುಂದೆ ನಿನದೇನು ಕೆಲಸವೇ. ನೋಡಿದವರು ಏನಂದುಕೊಂಡಾರೆಂಬ ನಾಚಿಕೆಯೂ ನಿನಗಿಲ್ಲವಲ್ಲ..."

ನಾಚಿಕೆ!... ಅತ್ತೆಯ ಮಾತು ಕೇಳಿ ನನಗೆ ನಗು ಬಂದಿತ್ತು. ನಾಚಿಕೆಯೇ! ನನ ದೇವರ ಮುಂದೆ ನನಗೆ ನಾಚಿಕೆಯೇ!

ಮಾಧವ ಒಂದು ತಿಂಗಳ ರಜಾ ಹಾಕಿ ಊರಿಗೆ ಹೊರಟಾಗ ನನ್ನ ಮನಸ್ಸಿನಲ್ಲಿ ಎಲ್ಲಿಲ್ಲದ ತಳಮಳ. ಅವನೇ ನನಗೆ ಸಮಾಧಾನ ಮಾಡಿದ:

"ನನಗೂ ಅಷ್ಟೊಂದು ದಿನ ನಿಮ್ಮನು ನೋಡದಿರುವುದಕ್ಕೆ ಸಾಧ್ಯವಿಲ್ಲ ಕಾವೇರಿ. ಎಂಟೇ ದಿನಕ್ಕೆ ಓಡಿ ಬರುತ್ತೇನೆ. ನೋಡುತ್ತಿರಿ..."

"ಆಂ?... ಕಾಗದ ಬರೆಯುತ್ತೀರಿ ತಾನೇ?"

ಊರಿಗೆ ಹೋದ ಮಾಧವ ಮೂರುವಾರದಲ್ಲೇ ಹಿಂತಿರುಗಿ ಬಂದದ್ದೂ ನಿಜವೇ.

ಅವನನ್ನು ನೋಡಿ ನಾನು ಉದ್ಗಾರವೆತ್ತಿದೆ.

"ಅಬ್ಬಾ! ನಿಮ್ಮ ರಜ ಮುಗಿಯುವುದೇ ಇಲ್ಲವೇನೋ ಅನ್ನಿಸಿಬಿಟ್ಟಿತ್ತಪ್ಪ. ಸಧ್ಯ! ಬಂದಿರಲ್ಲ... ಇನ್ನು ಮತ್ತೆ ಊರಿಗೆ ಹೋಗುವ ಮಾತೆತ್ತಬೇಡಿ..."

"ಇನು ಹದಿನೈದು ದಿನ ರಜ ಮುಂದುವರಿಸುವುದಕ್ಕೆ ಬಂದೆ ಕಾವೇರಿ. ಆ ಮೇಲೆ ಖಂಡಿತ ಎಲ್ಲಿಗೂ ಹೋಗುವುದಿಲ್ಲ... ಮದುವೆಯ ಗಲಾಟೆ ಮುಗಿದ ಕೂಡಲೇ ನಿಮ್ಮ ಮುಂದೆ ಹಾಜರ್!..."

"ಮದುವೆ! ಯಾರ ಮದುವೆ!"

"ಇನ್ಯಾರ ಮದುವೆ ಕಾವೇರಿ. ನನ್ನದೇ ಮದುವೆ.




ಅಮ್ಮ ನಾನು ಒಲ್ಲದ ಆ ಹುಡುಗಿಯನ್ನೇ ಮದುವೆಯಾಗಲು ಒಪ್ಪಿಸಿಯೇ ಬಿಟ್ಟಳು. ಅದಕ್ಕೇ... ಕೆಲವು ಸಾಮಾನುಗಳನ್ನು ತೆಗೆದುಕೊಂಡು ಹೋಗಲು ಬಂದೆ.."

ಮಾಧವ ಎಷ್ಟು ನಿರ್ವಿಕಾರಚಿತ್ತದಿಂದ ಹೇಳುತ್ತಿದ್ದ ಆ ಮಾತುಗಳನ್ನು–ಯಾವ ಏರುಪೇರೂ ಇಲ್ಲದೆ-ಎದುರಿಗಿದ್ದ ನನ್ನೊಳಗೆ ಏಳುತ್ತಿದ್ದ ಜ್ವಾಲಾಮುಖಿಯ ಅರಿವೇ ಇಲ್ಲದಂತೆ ತನ್ನ ಮಾತನ್ನೇ ಮುಂದುವರಿಸಿದ್ದ. ನಾನು ಬಿಟ್ಟ ಕಣ್ಣು ಬಿಟ್ಟಂತೆ ಅವನನ್ನೇ ನೋಡುತ್ತಿದ್ದೆ... ಇವನೇನು ತಮಾಷೆ ಮಾಡುತ್ತಿಲ್ಲವಷ್ಟೆ ಎಂದು ನನ್ನ ಮನಸ್ಸು ಇನ್ನೂ ಆಸೆ ಪಡುತ್ತಲೇ ಇತ್ತು ಒಮ್ಮೆಲೇ ನನತ್ತ ನೋಡಿ ಅವನು ಹೇಳಿದ:

"ಓ ಕಾವೇರಿ. ನಾನವತ್ತೇ ಹೇಳಲಿಲ್ಲವೇ? ದಯವಿಟ್ಟು ನೀವು ಹಾಗೆ ನನ್ನನ್ನು ನೋಡಬೇಡಿ. ಆ ಕಣ್ಣುಗಳ ಆಳದಲ್ಲಿ ನಾನು ಮುಳುಗಿ ಹೋಗುತ್ತೇನೆ. ನನ್ನನು ನಾನೇ ಮರೆತು ಹೋಗುತ್ತೇನೆ........"

ಎಷ್ಟು ಸಹಜವಾಗಿ ಹೇಳುತ್ತಿದ್ದ ಈ ಮಾತುಗಳನ್ನ! ಅಥವಾ ಅವನ ಈ ಮಾತಿಗೆ, ಅವನ ಮಿಕ್ಕ ಎಲ್ಲ ಮಾತುಗಳಿಗೆ ಅರ್ಥವೇ ಇಲ್ಲವೋ! ಹೌದು, ಅದೇ ನಿಜ... ಬರೀ ಮಾತುಗಳು, ಅರ್ಥವಿಲ್ಲದ, ಸತ್ವವಿಲ್ಲದ ಮಾತುಗಳು! ಹೌದು ತಾನದಕ್ಕೆ ವಿಪರೀತ ಅರ್ಥಕೊಟ್ಟೆ, ವಿಪರೀತ ಬೆಲೆ ಕೊಟ್ಟೆ. ಮಾತುಗಳು ಹಾಗಿರಲಿ, ಅವನ ನಡತೆ, ಆ ಸ್ಪರ್ಶ, ಅಪ್ಪುಗೆ... ಉಹುಂ ಯಾವುದಕ್ಕೂ ಅರ್ಥವಿಲ್ಲ... ಇಲ್ಲದಿದ್ದರೆ ತನ್ನ ಮದುವೆಯ ಸುದಿಯನ್ನು ಮುಂಚಿತವಾಗಿ ತಿಳಿಸುವ ಪ್ರಯತ್ನವನ್ನೂ ಮಾಡದೆ ಎದುರಿಗೆ ನಿಂತು ಹೀಗೆ ನನ್ನ ಹೃದಯಕ್ಕೆ ಬರೆ ಕೊಡುತ್ತಿರಲಿಲ್ಲ. ತುದಿ ನಾಲಿಗೆಯ ಅವನ ಮಾತುಗಳ ಮೇಲೆ ಭರವಸೆಯಿಟ್ಟು ನನ್ನ ಮನಸ್ಸಿಗೆ ನಾನೇ ಪೆಟ್ಟುಕೊಟ್ಟೆ... ನಂಬಿಕೆ ಬೆಳೆದು ಬೆಳೆದು ಮರದ ಬೇರು ಬಲಿತು ನನ್ನ ಹೃದಯವನ್ನಿಂದು ಭೇದಿಸುತ್ತಿದೆ.ಆದರೆ ಅದರಲ್ಲಿ ಅವನ ತಪ್ಪಿಲ್ಲ... ಅವನ ತಪ್ಪು ಏನೂ ಇಲ್ಲ.. ಯಾಕೆಂದರೆ ಅರ್ಥವಿಲ್ಲದೆ, ಇದಿರಿಗಿರುವವರ ಮೇಲೆ ತನ್ನ ಮಾತಿನ ಪರಿಣಾಮದ ಅರಿವಿಲ್ಲದೆ ಮಾತನಾಡುವುದು ಅವನ ಸ್ವಭಾವ!...

ನನ್ನ ದೀರ್ಘ ಮೌನ ಅವನನ್ನು ಎಚ್ಚರಿಸಿರಬೇಕು. ಅವನು ನನ್ನ ಹತ್ತಿರ ಬಂದ. ನನ್ನ ಕೈ ಹಿಡಿದು ಮೃದುವಾಗಿ ಹೇಳಿದ:

'ಬೇಸರವಾಯಿತೇ ಕಾವೇರಿ. ನಾನೇನು ಮಾಡಲಿ ಹೇಳಿ. ತಾಯಿಯ ಮಾತನ್ನು ಮೀರುವುದು ನನಗೆ ಸಾಧ್ಯವೇ ಇರಲಿಲ್ಲ... ಇಷ್ಟಕ್ಕೂ ಮದುವೆಯಾದ ಮಾತ್ರಕ್ಕೆ ನಾನು ನಿಮ್ಮಿಂದ ದೂರವಾಗುತ್ತೇನೆಂದು ಯೋಚಿಸಬೇಡಿ ಕಾವೇರಿ... ಬೇರೆ ಮನೆ ನೋಡುವ ಯೋಚನೆ ಕೂಡ ನನಗಿಲ್ಲ; ಇನ್ನು ಹದಿನೈದೇ ದಿನಕ್ಕೆ ನಿಮ್ಮ ಹತ್ತಿರ ಹಾರಿ ಬರುತ್ತೇನೆ."

ನನ್ನನು ಹಿಡಿದಿದ್ದ ಕೈ ಉರಿಯುತ್ತಿರುವ ಸೌದೆಯಂತೆ ಭಾಸವಾಯಿತು. ಅವನ ಮಾತುಗಳಿಂದ ಕೆಟ್ಟ ವಾಸನೆ ಬಂದಂತಾಯಿತು. ನನ್ನ ತಲೆ ಒಮ್ಮೆಲೇ ಬಿಸಿಯೇರಿತು. ನಾನು ಅವನ ಕೈ ಕೊಡವಿದೆ. ಹುಚ್ಚಿಯಂತೆ ಒದರಿದೆ:

"ಥೂ ಪಾಪಿ! ವಂಚಕ! ಇಲ್ಲಿಂದ ಹೊರಟು ಹೋಗು. ಇನ್ನು ಈ ಮನೆಗೆ ಕಾಲಿಡುವ ಯೋಚನೆ ಬೇಡ."

ಮಾಧವ ಹೊರಟು ಹೋದ. ಮತ್ತೆ ಬರದಂತೆ ಹೊರಟು ಹೋದ. ನನ್ನ ಮನಸ್ಸಿನಲ್ಲಿ ತಿರಸ್ಕಾರದ, ಜಿಗುಪ್ಸೆಯ ಉರಿ ಎದ್ದಿತು. ನನ್ನ ಮೇಲೆ, ಅವನ ಮೇಲೆ ಇಡೀ ಜಗತ್ತಿನ ಮೇಲೆ ತಿರಸ್ಕಾರ...! ನನ್ನ ಅವನ ಬಂಧನದ ಸೂತ್ರ ಅಷ್ಟು ಸಡಿಲವಾಗಿತ್ತೇ! ಎಂಥ ಹಸಿ ಗೋಡೆಯ ಮೇಲೆ ಮಹಡಿಯ ಮನೆ ಕಟ್ಟುವ ಕಪಾಟಿಕೆ ಹೂಡಿದ್ದೆ ನಾನು! ಓಹ್! ಎಲ್ಲಾ ಭ್ರಮೆ!

ನನ್ನನ್ನು ಆವರಿಸಿದ ಮಾಯೆಯನ್ನು ಕೊಡವಿಕೊಂಡೆ. ಸಮಯವನ್ನೇ ಕಾದಿದ್ದಂತೆ ಮೊದಲಿದ್ದ ಒಂಟಿತನ ಓಡಿ ಬಂದು ನನ್ನನ್ನಪ್ಪಿತು. ಈಗ ನಾನು ಹಿಂದಿನಂತೆಯೇ ಕಾವಿಳಿದ ಕಾವೇರಿ.... ಆಕಾಶದಲ್ಲಿ ಗುರಿಯಿಲ್ಲದೆ ತೇಲುತ್ತಿರುವ ಒಂಟಿಮೋಡ... ಈ ಒಂಟಿತನ ನಿಮಿಷ ನಿಮಿಷಕ್ಕೆ ತ್ರಿವಿಕ್ರಮನಾಗಿ ಬೆಳೆದು ನಿಲ್ಲುತ್ತದೆ. ಅದರ ಎತ್ತರ ಬೆಳೆದಂತೆ ನಾನು ಕುಬ್ಜಳಾಗಿ, ಸಣ್ಣದಾಗಿ ಕರಗಿಯೇ ಹೋಗುತ್ತೇನೇನೋ ಎನಿಸುತ್ತದೆ.... ಈ ಒಂಟಿತನ ಭೂತವಾಗಿ ನನ್ನನ್ನು ನುಂಗಲು ಮುಂದೆ ಮುಂದೆ ಬರುತ್ತಲೇ ಇದೆ...






**ತಾಯಿ ಮಮತೆ ಇಲ್ಲದೇ ಬೆಳೆದ ಪರಮೇಶ್ವರಯ್ಯ ಮನೆಯಲ್ಲಿ ತುಂಬ ಬಿಗಿಯನ್ನು, ಕಟ್ಟುನಿಟ್ಟನ್ನು ಜಾರಿಯಲ್ಲಿ ತಂದುದಲ್ಲದೇ ಪತ್ನಿಯನ್ನು, ಮಕ್ಕಳನ್ನು ನಿಯಂತ್ರಿಸಿದ. ಅದರ ಪರಿಣಾಮವಾಗಿ ಅವನು ಯಾವಾಗಲೂ ಅಸುಖಿಯಾಗಿರುತ್ತಿದ್ದ. ಆದರೂ ತನ್ನದೇ ಸರಿ ಯೆಂದುಕೊಂಡ. ಕೊನೆಗೊಮ್ಮೆ ಅವನ ಮುದ್ದು ಸೊಸೆ ಅವನಿಗೆ ಪಾಠ ಕಲಿಸಿದಳು. ಜೀವನದಲ್ಲಿ ಪ್ರೇಮ ಮತ್ತು ಮಮತೆ ಅವಶ್ಯಕವೆಂಬುದನ್ನು ತೋರಿದಳು. ಹೊಸಗಾಳಿಯಲ್ಲಿ ಅವರೆಲ್ಲ ಬದುಕುವಂತೆ ಮಾಡಿದಳು.**

## ದೃಶ್ಯ ೧

**[ಶ್ರೀಮಂತರ ಸುಸಜ್ಜಿತ ಮನೆ. ಅದಕ್ಕೆ ತಕ್ಕಂತೆ ಒಪ್ಪ ಓರಣ-- ರೇಡಿಯೋದಲ್ಲಿ ಸಂಗೀತ...... ಪೇಪರಿನ ಹುಡುಗನ ಕೈಯಿಂದ ಪೇಪರು ತಕ್ಕೊಳ್ಳುತ್ತ ಮನೆಯ ಯಜಮಾನ ಪರಮೇಶ್ವರಯ್ಯ ತುಂಬಿದ ಧನಿಯಲ್ಲಿ ಕರೆಯುತ್ತಾನೆ. ]**

**ಪರಮೇಶ್ವರಯ್ಯ–** ಏನು ಶಿವಣ್ಣಾ?... ಇತ್ತೀಚೆಗೆ ನೀನು ಕಣ್ಣಿಗೆ ಬೀಳೋದೆ ಕಷ್ಟವಾಗಿದೆಯಲ್ಲ? ನಿನಗೇನು ಅಂಥ ಕೆಲಸ ಈಗ? ಪೆನ್‌ಶನ್‌ದಾರ್ ಹೇಗಿ ಬೇಕು? ತಿಂದು ಕೊಬ್ಬಿದ, ಅದೇನೋ ಹೇಳ್ತಾರಲ್ಲ...ಹಾಗಿರಬೇಕು! ಆದರೆ ನೀನು ಮೊದಲಿನಿಗಿಂತ್ಲೂ ಭಾರಿ ಅಪರೂಪದ ವಸ್ತುವಾಗಿ ಬಿಟ್ಟಿದ್ದೀ? [ಇಬ್ಬರೂ ನಗುತ್ತಾರೆ] ಬಾ ಒಳಕ್ಕೆ ಬಾ. ನನಗೂ ಮಾತಾಡುವ ಜೊತೆ, ಯಾರೂ ಇಲ್ದೆ, ಬೇಜಾರು ಬಂದು ಬಿಟ್ಟಿದೆ. ಹೊಟ್ಟೆ ತುಂಬಾ ಮಾತಾಡಬೇಕಾಗಿದೆ. ಬಾ... ಒಳಕ್ಕೆ ಬಾ ಶಿವಣ್ಣಾ.

**ಶಿವಣ್ಣ–** [ಒಳಕ್ಕೆ ಬಂದು ಕೂತುಕೊಳ್ಳುವಂತೆ ನಗುತ್ತ] ಅಲ್ಲ ಪರಮೇಶ್ವ–ರಯ್ಯ... ನಿನಗೇನು ? ಹೆಸರಿಗೆ ತಕ್ಕಂತೆ ಪರಮೇಶ್ವರನೇ ನೀನು! ನಿಮ್ಮ ಮನೆಯ ಸುಖ–ಶಾಂತಿ, ನನ್ನ ಜೀವನದಲ್ಲಿ ಯೋಚಿಸುವುದೂ ಕನಸಿನ ಮಾತು. ತುಂಬಿದ ಮನೆ! ನೀನಿಟ್ಟ ಗೆರೆಯನ್ನು ದಾಟದ ಪತ್ನಿ! ಹೇಳಿದಂತೆ ಕೇಳುವ ದುಡಿಯುವ ಗಂಡು ಮಕ್ಕಳು! ನಿಮ್ಮೆದುರು ತಲೆಯೆತ್ತಿ ನಿಲ್ಲಲೂ ಹೆದರುವ ಸೊಸೆಯಂದಿರು! ಮನುಷ್ಯ ಇದಕ್ಕೂ ಹೆಚ್ಚು ಏನು ಅಪೇಕ್ಷಿಸುತ್ತಾನೆ ಹೇಳು ? ಈ ಭಾಗ್ಯ ನೀನು ಪಡೆದಿದ್ದೀ ಪರಮೇಶರಯ್ಯ... ನಿನ್ನನ್ನು ಕಂಡರೇ ನನಗೊಂದು ಬಗೆಯ ಸಮಾಧಾನ... ಈಗಿನ ರಾಜಕಾರಣ... ದಿನದಿನಕ್ಕೆ ಏರುತ್ತಿರುವ ಬೆಲೆಗಳಿಂದಾಗಿ ಮನಸ್ಸಿನ ಸ್ವಾಸ್ಥ್ಯವೂ ಕೆಟ್ಟುಹೋಗುತ್ತಿದೆ... ಅದಕ್ಕಾಗಿ ಈ ದಿನ ತಪ್ಪಿಸಿಕೊಂಡೇ ಇಲ್ಲಿಗೆ ಬಂದು ಬಿಟ್ಟೆ.

**ಪರಮೇಶ್ವರಯ್ಯ–** [ನಗುತ್ತ] ನಿನಗೇನು ಅಂಥ ಜವಾಬ್ದಾರಿ ಕೆಲಸ ಮನೆಯಲ್ಲಿ ? ಮಧೂ– ರಾಘೂ ಮನೆಯ ಭಾರ ಹೊತ್ತಿದ್ದಾರೆ... ಮಗಳು ಗಂಡನ ಮನೆಗೆ ಹೋಗಿದ್ದಾಳೆ.

**ಶಿವಣ್ಣ–** ಛೆ... ಛೆ... ನೀನು ತಪ್ಪಿದ್ದೂ ಅಲ್ಲೇ ಪರಮೇಶ್ವರಯ್ಯ... ಮೊದಲ್ ಎಲ್ಲಿದಕ್ಕೂ ಆಫೀಸು ಎಂದು ಜಾರಿಕೊಳ್ಳುತ್ತಿದ್ದೆ. ಕೈಯಲ್ಲಿ ಕಾಸೂ ಅಲ್ಪ ಸ್ವಲ್ಪ ಓಡಾಡುತ್ತಿತ್ತು... ಆದ್ರೂ ಆಗಿನಿಂದಲೂ ನನ್ನ ಮಾತೆಲ್ಲ ಬಾಯಲ್ಲೇ ಕರಗಿ ಹೋಗುತ್ತಿತ್ತು... [ನಗುತ್ತ] ನಿನಗೆ ನನ್ನ ಮನೆಯ ವಿಷಯ ಹೊಸತಲ್ಲ ಬಿಡು... ನನ್ನವಳ ಬಾಯಿಗೆ ಮೊದಲ ದಿನವೇ ಸೋತು ಹೋಗಿದ್ದೆ— ಹೇಗೋ ನಡೆದಿತ್ತು ಸಂಸಾರ ರಥ! ಈಗ ಪೆನ್‌ಷನ್ ಆದದ್ದೇ ಆದದ್ದು—

**ಪರಮೇಶ್ವರಯ್ಯ–** ಅಂಥದ್ದೇನಾಗಿದೆ ಶಿವಣ್ಣ? ನೀನು ಸುಮ್ಮನೆ ಇಲ್ಲದ ಯೋಚನೆ...

**ಶಿವಣ್ಣ–** [ತೀರ ಸೋತ ಧನಿಯಲ್ಲಿ] ಇಲ್ಲ ಪರಮೇಶ್ವರಯ್ಯ— ನನ್ನ ಗತಿ ಯಾರಿಗೂ ಬರಬಾರದು... ಮಧೂ— ರಾಘೂ ನಾನು ಇದ್ದೇನೆಯೋ? ಸತ್ತಿದ್ದೇನೆಯೋ ? ಕೇಳೋದಿಲ್ಲ. ಸೊಸೆಯಂದಿರಿಗೆ— ನಾನೊಬ್ಬ ಮಕ್ಕಳನ್ನು ಆಡಿಸುವ ಕೆಲಸದ ಆಳಾಗಿದ್ದೇನೆ— ಇನ್ನು ಇವಳಿಗೋ... ನಾಲಗೆ ತುರಿಸಿದಾಗಲೆಲ್ಲ... ಚುಚ್ಚಿ ಆಡಲು ಒಬ್ಬ ಮನುಷ್ಯ ಬೇಕಲ್ಲ ? ಇತ್ತ ಕೈಯಲ್ಲಿ ಹಣವೂ ಇಲ್ಲ... ಮಾನವೂ ಇಲ್ಲದಂತಾಗಿದೆ ಪರಮೇಶ್ವರಯ್ಯ ನನ್ನ ಸ್ಥಿತಿ!

[ಇಷ್ಟರಲ್ಲಿ ಪರಮೇಶ್ವರಯ್ಯನವರ ಹಿರಿಯ ಮಗ ಗೋಪು ಬರ್ತಾನೆ...]

**ಗೋಪಾಲ :** ಅಪ್ಪಯ್ಯ ಕಾಫಿ–ತಿಂಡಿ ಕಳುಹಿಸಲೇ? ಶಿವಮಾವಯ್ಯ ಬಾರದೆ ಎಷ್ಟೋ ಕಾಲವಾಯ್ತು...ಏನು ಊರಲ್ಲಿ ಇರಲಿಲ್ವೆ ನೀವು? ನನಗೋ ಆಫೀಸಿನ ಗಡಿಬಿಡಿ... ಗಂಟೆ ಆಗಲೇ ಹತ್ತಾಗಿ ಬಿಟ್ಟಿದೆ. ನಾನು ಹೊರಡಬೇಕು—

**ಶಿವಣ್ಣ –** (ನಗುತ್ತಾ)ಹೋಗಪ್ಪಾ ಗೋಪು ಹೋಗು ಆಫೀಸಿಗೆ ಹೋಗುವಾಗ ಎಷ್ಟು ಗಡಿಬಿಡಿ ಎನ್ನೋದು ನನಗೆ ಹೇಳ್ತೀಯಾ? ಅನುಭವಿಸಿ ಅದರಲ್ಲೆ ಹಣ್ಣಾಗಿದ್ದೇನೆ. ನಿನ್ನದು ಸ್ನಾನ–ಊಟ ಆಗಿದೆಯಲ್ವೆ? ಹೊರಡು....ತಡಮಾಡಬೇಡ... ನನಗೆ ಇಲ್ಲಿ ದಿನವೂ ಬರುವ ಆಸೆ... ಆದ್ರೆ... ಸಮಯ ಸಿಗೋದು ಕಷ್ಟವಾಗಿದೆ... ಈ ರಗಳೆ ನಿನ್ನ ತಲೆಗೆ ಬೇಡ! ನೀನು ಹೋಗು... ನನಗೆ–ನಿನ್ನಪ್ಪಯ್ಯಗೆ ಇದು ಜನ್ಮಕ್ಕೆ ಅಂಟಿಕೊಂಡನಂಟು!

[ಇಲ್ಲಿಕೊ ನಗುತ್ತಾರೆ... ಅಷ್ಟರಲ್ಲಿ ಕಾಫಿ-ತಿಂಡಿ ಬರುತ್ತದೆ... ಪರಮೇಶ್ವ ರಯ್ಯ ಗಂಟಲು ಸರಿಪಡಿಸಿಕೊಂಡು]

**ಪರಮೇಶ್ವರಯ್ಯ**– ಹೂ... ತೆಕ್ಕೊಳ್ಳಿ... ಶಿವಣ್ಣಾ... ಬಿಸಿಬಿಸಿ ದೋಸೆ, ಉದ್ದಿನ ಚಟ್ನಿ–ತಂಬ ರುಚಿಯಾಗಿದೆ... ಮೊದಲು ಬಾಯಲ್ಲಿ ಹಾಕಿಕೊ... ಹಾಗೆ ಮಾತೂ ಜೊತೆಯಾಗಿ ಬರಲಿ... ಅಂದ್ರೆ ಅದಕ್ಕೊಂದು ಸ್ವಾರಸ್ಯ ಅಲ್ವೆ ಶಿವಣ್ಣಾ...?

**ಶಿವಣ್ಣ**– (ನಗುತ್ತ) ನೀನು ಹೇಳಿದ್ದು ನಿಜ ಅಣ್ಣ. ದೋಸೆಗೆ ಇದು ಸರಿಯಾದ ಚಟ್ನಿ... ಕಾಫೀನೂ ಹಾಗೆ ಸ್ಟ್ರಾಂಗ್ ಆಗಿ ಗಂಟಲು ಇಳಿಯುತ್ತಿದ್ದರೆ ಒಂದು ಕ್ಷಣ ಈ ಪ್ರಪಂಚಾನೇ ಮರೆಯುವಷ್ಟು ತನ್ಮಯತೆ ಬಂದು ಬಿಡುತ್ತದೆ. ಇದೆಲ್ಲ... ಈ ಮನೆಯ ಸುಖದಿಂದ... ಇಂಥ ಶಾಂತಿ ಸಿಗುತ್ತದೆ ಪರಮೇಶ್ವರಯ್ಯಾ... ಎಷ್ಟು ಮಾಡಿದರೇನು? ಎಷ್ಟು ತಿಂದರೇನು? ಮನುಷ್ಯನಿಗೆ... ಮೊದಲು ಬೇಕು ಸಮಾಧಾನ! ತೃಪ್ತಿ! ಇಲ್ಲಿ ನೋಡು... ನಿಮ್ಮ ಮನೆಯಲ್ಲೂ ಮೊಮ್ಮಕ್ಕಳಿದ್ದಾರೆ. (ಒಳಗಿನಿಂದ ಮಗುವಿನ ಅಳು ಮೆಲ್ಲನೆ ಕೇಳುತ್ತದೆ) ಆದ್ರೆ... ಹೊರಗೆ ಬಂದವರೆದುರು ಗಲಾಟೆ ಮಾಡಿ– ತಂಟೆ ತಕರಾರು ಮಾಡಿದ್ದು ನಾನಂತೂ ಕಂಡಿಲ್ಲ! ಅದೇ ನಮ್ಮ ಮನೆಯ ಅವಸ್ಥೆ ನೋಡಿದ್ರೆ, ನೀನೇನು ಹೇಳ್ತೀಯೋ ಪರಮೇಶ್ವರಯ್ಯಾ... ಅದೊಂದು ಸಂತೆ! ಆ ಮೊಮ್ಮಕ್ಕಳು ನನ್ನ ಮೈ ಕೈಯನ್ನು ಮರದ ಕೊಂಬೆಯನ್ನಾಗಿ ಮಾಡಿ— ಮಂಗನಾಟ ಆಡ್ತಾರೆ... ಅವರಿಗೆ ನಾನೇ ಹೆದರಬೇಕಾಗಿದೆ..." (ಇಬ್ಬರೂ ಒಂದೇ ಬಾರಿಗೆ ನಗುತ್ತಾರೆ..) ಮನೆಯಲ್ಲಿ ಸುಖಪಡುವ ಭಾಗ್ಯ ನಾನು ಪಡೆದು ಬಂದಿಲ್ಲ. ನಿಮ್ಮಂಥವರನ್ನು ಕಂಡು ನಾನು ಸಂತೋಷಪಡುತ್ತೇನೆ...

**ಪರಮೇಶ್ವರಯ್ಯ**– ಛೆ... ಛೆ... ಎಂಥ ಮಾತು ಶಿವಣ್ಣಾ ನಿನ್ನದು? ಎಲ್ಲ ನಮ್ಮ ಕೈಯಲ್ಲಿ ಇದೆ... ಮನಸ್ಸಿದ್ರೆ ಮನುಷ್ಯ ಬೇಕಾದ್ದು ಮಾಡಬಹುದು. ಮೊದಲು ನೀನು ನಿನ್ನ ಮನಸ್ಸನ್ನ ಸಡಿಲು ಬಿಟ್ಟೆ... ಈಗ ಅದೇ ತಲೆ ತಿನ್ನುತ್ತಿದೆ, ನೋಡು... ಕುದುರೆ ಎಷ್ಟು ಒಳ್ಳೆಯದು... ಚಲಾಕು ಇದ್ರೇನಾಯಿತು? ಅದನ್ನು ಹಾಗೇ ಓಡಲು ಬಿಟ್ಟರೆ.... ಅದು ನಾಲ್ಕು ದಿನಕ್ಕೆ ಕಂಡಾಬಟ್ಟೆ ಓಡಿ... ದಾರಿ ತಪ್ಪೋದು ಖಂಡಿತ... ನನ್ನ ಮಾತು ನೀ ಒಪ್ಪುತ್ತೀಯಲ್ಲ ಶಿವಣ್ಣಾ?

**ಶಿವಣ್ಣ**– (ನಗುತ್ತ) ಇಂಥ ಮಾತನ್ನು ಒಪ್ಪದಿದ್ದವನು ಮೂರ್ಖ... ನೀನು ಹೇಳಿದ್ದು ನೂರಕ್ಕೆ ನೂರು ಸತ್ಯ!"

**ಪರಮೇಶ್ವರಯ್ಯ**– ಕುದುರೆಗೆ ಯಾವಾಗ್ಲೂ ಕಡಿವಾಣ ಇರಲೇಬೇಕು! ಸಂಸಾರ ಹಾಗೆ.... ಹೆಣ್ಣು ಈ ಕಡಿವಾಣದ ಹಿಡಿತದಲ್ಲಿದ್ರೆ.... ಸಂಸಾರದಲ್ಲಿ ಸುಖ ಸಮಾಧಾನ ತಾನಾಗಿಯೇ ಬರ್ತದೆ, ಇಲ್ಲ ಇದ್ರೆ ಮನೆಯೆನ್ನೋದು ಕುರುಕ್ಷೇತ್ರ!

**ಶಿವಣ್ಣ**– ತುಟಿ ಬಿಚ್ಚಿನ್ನದೆ... ನನ್ನ ತಪ್ಪು ಒಪ್ಪಿಕೊಳ್ಳಬೇಕಾಗಿದೆ ನಾನು... ನನ್ನವಳು... ತಾನೂ ಕಡಿವಾಣ ಹಾಕಿಕೊಳ್ಳಲು ಬಿಡದೆ... ಈಗ ಬಂದಿರೊ ಸೊಸೆಯಂದಿರೂ ಅವಳೊಡನೆ ಕೂಡಿಕೊಂಡು ಬಿಟ್ಟಿದಾರೆ... ಪರಮೇಶ್ವರಯ್ಯಾ ನನ್ನದು ಕೆಲಸ ಮಾಡುತಿದ್ದಾಗ ಒಂದು ಹೆಜ್ಜೆ ಮುಂದಿತ್ತು... ನನ್ನ ಹಣ ನನ್ನ ಕೈಯಲ್ಲಿಟ್ಟುಕೊಂಡು–ಉಳಿದ ಹಣ ಮನೆ ಖರ್ಚಿಗಾಗಿ ಅವಳ ಕೈಯಲ್ಲಿ ಕೊಟ್ಟು ಬಿಡುತ್ತಿದ್ದೆ... ಆದ್ರೆ... ನನ್ನ ಮಕ್ಕಳಿಬ್ಬರೂ ಸಂಬಳ ಬಂದ ಸಂಜೆ ಹೆಂಡಂದಿರ ಕೈಯಲ್ಲಿರಿಸಿ–ತಮ್ಮ ಪಾಕೆಟ್ ಮನಿಗಾಗಿ ತಮ್ಮ ಕೈ ಅವರ ಮುಂದೆ ಚಾಚುತ್ತಾರೆ.

**ಪರಮೇಶ್ವರಯ್ಯ**– (ಅನುಕಂಪ ತೋರುವ ಧ್ವನಿಯಲ್ಲಿ) ಪಾಪ! ನೀನೂ ಸಂಸಾರದ ರಥ ನಡೆಸಲಾರದೆ ತಪ್ಪಿದಿ... ನಿನ್ನ ಮಕ್ಕಳೂ ಅದೇ ದಾರಿಯಲ್ಲಿ ನಡೆದು ಅವರೂ ತಪ್ಪಿದರು... ನಾನು ಮನೆಯಲ್ಲಿ ಈ ದರ್ಪ, ಈ ಕ್ರಮ ಇಡಬೇಕಾದ್ರೆ... ಎಷ್ಟು ಕಷ್ಟಪಟ್ಟಿದ್ದೇನೆ ಗೊತ್ತೆ ಶಿವಣ್ಣ...? ನನ್ನ ಬಗ್ಗಿಸಲು ಮಣಿಸಲು ಇವಳು ಇವಳ ಮಕ್ಕಳು ಆಕಾಶ ಪಾತಾಳ ಒಂದು ಮಾಡಿದರು... ಆದ್ರೆ ನಾನು...ಇವರಪ್ಪ ಬಂದ್ರೂ, ಹಿಡಿದ ಪಟ್ಟು ಬಿಡಲಿಲ್ಲ! ನನ್ನ ಈ ಮೀಸೆ ಎಂದೂ ಕೆಳಗೆ ಮಾಡಲಿಲ್ಲ! ಹಿಂದಿನ ದಿನಗಳ ನನ್ನ ಅನುಭವ...ಅದೊಂದು ದೊಡ್ಡ ಕಥೆ...ನಾನೇನೂ ಸ್ವಲ್ಪ ಕಷ್ಟ ಪಡಲಿಲ್ಲ...ಈ ಮನೆಯ ಶಿಸ್ತಿಗಾಗಿ... ಈಗ ನಾಲ್ಕು ತಿಂಗಳ ಹಿಂದೆ...ನನ್ನ ಚಿಕ್ಕ ಮಗ ಮನೋಹರನಿಗೆ ಕಲಿತ ಹುಡುಗಿಯನ್ನು ಮನೆಗೆ ತಂದಿದ್ದೇನೆ...ಮನೆಯಲ್ಲಿ ಎಲ್ಲರೂ ಕೂಡಿ ಗುಜುಗುಜು ಮಾತಾಡಿದ್ದು ನನ್ನ ಕಿವಿ ಕೇಳಿಸಿಕೊಂಡಿದೆ... "ಇನ್ನು ನೋಡೋಣ ಇವರ



ಹಟ-ದರ್ಪ! ಅವಳು B. A. ಮುಗಿಸಿದ ಹುಡುಗಿ...ಎಲ್ಲಿ ಕೇಳ್ತಾಳೆ ಇವರ ಕೋಪ-ಆರ್ಭಟ. ನಮಗೆ ಮಾಡಿದ್ದೂ ಇವಳೇ ಕಕ್ಕಿಸುತ್ತಾಳೆ?" ಇದು ಅವರ ಗುಜುಗುಜು ಮಾತು! ಆದ್ರೆ ಶಿವಣ್ಣ...ನೀನು ಇದೇ ಊರಲ್ಲಿ ಇದ್ದೀಯಲ್ಲ? ನೋಡು ಈ ಜನ್ಮದಲಿ ನಾನು ಇದೇ ಹಟ-ದರ್ಪದಲ್ಲೇ ಇರೋವನು! ನನ್ನೆಲ್ಲ ಕೆಲಸ ಅವಳೇ ಮಾಡಬೇಕು! ಸೊಸೆಯುಂದಿರು ನನ್ನ ಕೋಣೆಗೂ ಕಾಲಿಡ ಬಾರದು. ನಾನು ಹಾಕಿದ ಗೆರೆ ನನ್ನ ಮಕ್ಕಳೇ ಈ ವರೆಗೂ ದಾಟಿಲ್ಲ! ಇವಳ ಬೆನ್ನುಬಾಗಿದೆ! ಆದ್ರೂ ನನ್ನೆದುರು ನಿಂತು ಏನು? ಎಂದು ಕೇಳಿಲ್ಲಾ ಎಂದ್ರೆ ನೀನು ನಂಬುತ್ತೀಯಾ ಶಿವಣ್ಣಾ? ಇರಲಿ...ಇದೆಲ್ಲಾ ಪುರಾಣ. ಹೇಗೂ ಹೊಟ್ಟೆ ತುಂಬಿ ಬಿಟ್ಟಿದೆ. ನಾಲ್ಕು ಹೆಜ್ಜೆ ವಾಕಿಂಗ್ ಮಾಡಿಕೊಂಡು ಬರೋಣವೇ?

**ಶಿವಣ್ಣ** – ಹೇಗೂ ಬಲೆಯಿಂದ ಪಾರಾಗಿ ಬಂದಿದ್ದೇನೆ...ಹೊಟ್ಟೆಯ ಚಿಂತೆಯೂ ಇಲ್ಲ...ಅಲ್ಲಿ ಹೋದ ಮೇಲೆ...ಮತ್ತೆ ಮಕ್ಕಳಿಗೆ ಆಟದ ವಸ್ತುವಾಗೋದು ಇದ್ದೇ ಇದೆ... ನಡೆ ...ಸುಖವಾಗಿ ತಿರುಗಾಡಿ ಬರೋಣ...ಕೆಲ ಮಟ್ಟಿಗಾದ್ರೂ...ಬೇಸರ ಮರೆತು ನಿನ್ನ ಹಾಗೆ ನಾನೂ ಒಬ್ಬ ಗಂಡಸು ಎಂದು ತಲೆ ಎತ್ತಿ ತಿರುಗುತ್ತೇನೆ... [ಇಬ್ಬರೂ ನಗುತ್ತ ಹೊರಕ್ಕೆ ಹೊರಡುತ್ತಾರೆ. ಒಂದೆರಡು ನಿಮಿಷಕ್ಕೆ ಮನೆಯಲ್ಲಿ ಮಕ್ಕಳ ನಗು...ಹೆಂಗಸರ ಗುಜುಗುಜು, ಮಾತಿನ ಹರಟೆ...ಹಾಡಿನ ಪಿಸು ಧನಿ ಕೇಳ ಬರುತ್ತದೆ.]



# ದೃಶ್ಯ ೨

(ಪರಮೇಶ್ವರಯ್ಯನ ಮನೆ.)

**ಸಾವಿತ್ರಮ್ಮ** – ಸುಶೀ...ಏ ಶಕೂ ನಿಮ್ಮದಿನ್ನೂ ಹೊರಟು ಆಗಿಲ್ವೆ? ಲಕ್ಷ್ಮಮ್ಮ ಕರೆದು ಹೋಗಿ ಆಗಲೇ ಒಂದು ಘಂಟೆಯಾಗಿ ಹೋಗಿದೆ...ಬೇಗ ಬೇಗ ಹೋಗಿ ಬಂದರಾಗದೇ? ಶಾಂತೂ ಎಲ್ಲಿ? ಅವಳದು ಆಗಿದೆಯೇ?

**ಸುಶೀಲಾ**– ನಮ್ಮದೆಲ್ಲ ಆಗಿದೆ...ಲಕ್ಷ್ಮಮ್ಮ ನಿಮ್ಮನ್ನು ಕರೆದುಕೊಂಡು ಬರಲೇ ಬೇಕೆಂದು ನನ್ನೊಡನೆ ಹೇಳಿ ಹೋಗಿದ್ದಾರೆ. ಅರಶಿನ-ಕುಂಕುಮಕ್ಕೆ ಎರಡು ನಿಮಿಷ...ಆ ನಂತರ ನೀವು ಬಂದು ಬಿಡಿ...ಅಲ್ಲಿಯ ವರೆಗೆ ನಾವಿರುತ್ತೇವೆ ಮನೆಯಲ್ಲಿ. ನೀವು ಹೋಗಿ ಬನ್ನಿ ಅತ್ತೆ...

**ಸಾವಿತ್ರಮ್ಮ** – ಬೇಡಮ್ಮ ಸುಶೀ ಬೇಡ...ನೀವು ಹೋಗಿ ಬಂದ್ರೆ...ನಾನೂ ಬಂದಂತೆ. ಅಲ್ಲಿ ಹೋಗಿ ನಿಲ್ಲೋದಕ್ಕೆ ಇವರು ಕರೆದ್ರೆ?

**ಶಕುಂತಲಾ**– ನಿಮ್ಮ ಮಗ ಮಾವನ ಹತ್ತಿರವೇ ಇದ್ದಾರೆ...ಡಾಕ್ಟರು...ಮಾತಾಡುತ್ತಿದ್ದಾರೆ. ಶಿವಣ್ಣ ಮಾವಯ್ಯ ಎದುರು ಇದ್ದಾಗ...ಅವರಿಗೆ ಪ್ರಪಂಚದಲ್ಲಿ ಇನ್ಯಾರು ಬೇಕು? ಬಂದುಬಿಡಿಯತ್ತೆ...ಮುತ್ತೈದೆಯರು ಸೇರಿಕೊಂಡು ಸಂಭ್ರಮ ಪಡುತ್ತಿರುವಾಗ...

**ಶಾಂತೂ**– [ಒತ್ತಾಯದ ಧನಿಯಲ್ಲಿ] ನೀವೂ ಬಂದು ಬಿಡಿಯತ್ತೆ. ಆ ಮನೆ ನನಗಿನ್ನೂ ಹೊಸದು ನೀವು ಬಂದರೇನೇ ನಾನು ಹೋಗುವಳು...ಇಲ್ಲದಿದ್ರೆ...ನಾನೂ ಇಲ್ಲೇ ಇರ್ತೇನೆ. ತಕ್ಕೊಳ್ಳಿ ಈ ಜರಿ ಸೀರೆ...ರವಕೆ...ಹೊರಟುಬಿಡಿ...ಎರಡು ನಿಮಿಷದಲ್ಲಿ ಹೋಗಿ ಬರೋಣ...

**ಸಾವಿತ್ರಮ್ಮ** - ನೀನೊಂದು ಮೊಂಡು ಹುಡುಗಿ...ಅಲ್ಲಿ ಹೋಗೋದು...ಅಷ್ಟರಲ್ಲಿ ಇವರು ಕರೆಯೋದು ಮತ್ತೆ ಇಲ್ಲದ ಕೋಪಕ್ಕೆ ಕಾರಣವಾಗುವದು. ನೀನು ಕೇಳ ಬೇಕಲ್ಲ...ಇದೋ ಹೊರಟೆ...

**ಸುಶೀಲಾ** – (ಸಂತಸದಿಂದ) ಅಂತೂ ಅತ್ತೆಯನು ಹೊರಡಿಸಿದ್ದು ಒಳ್ಳೆಯದಾಯಿತು. ಪಾಪ...ಒಂದು ಒಳ್ಳೆಯ ಸೀರೆಯುಟ್ಟು ಹೊರಗೆ ಬಂದದ್ದೇ ಇಲ್ಲ ಅವರು...ಸದಾ ಮನೆಯೊಳಗೆ...ಪಂಜರದ ಗಿಣಿಯಂತೆ...ಶಕೂ, ನೀನು ಶಾಂತೂ ಅತ್ತೆಯೊಂದಿಗೆ ಲಕ್ಷ್ಮಮ್ಮನ ಮನೆಗೆ ಹೋಗಿ ಬನ್ನಿ... ನೀವು ಇಲ್ಲಿಗೆ ಬಂದ ನಂತರ ನಾನು ಹೋಗಿ ಅರಸಿನ ತಕ್ಕೊಂಡು ಬರ್ತೇನೆ...ಮಾವ ಕರೆದರೆ ಹೇಳಲು ಇಲ್ಲಿ ಬೇಕಲ್ಲ?

**ಸಾವಿತ್ರಮ್ಮ** – (ಗಡಿಬಿಡಿಯ ಧನಿಯಲ್ಲಿ) ಈ ಜರಿ ಸೀರೆ ಉಟ್ಟುಬಿಟ್ಟೆ, ಬಾ...ಶಾಂತೂ...ಶಕೂ... ಎರಡು ನಿಮಿಷದಲ್ಲಿ ಮತ್ತೆ ಬರಬೇಕಲ್ಲ?

**ಶಾಂತೂ**– (ನಗುತ್ತ) ಅತ್ತೆ ಈ ಹೂ ಇಟ್ಟುಕೊಳ್ಳಿ...ನಿಮ್ಮನ್ನ ಈಗ ಮಾವಯ್ಯ ಕಂಡ್ರೆ...!

**ಸಾವಿತ್ರಮ್ಮ** – ಹುಚ್ಚು ಹುಡುಗಿ...ನನ್ನ ಅವರು ಕಂಡ್ರೆ... ಮೊದಲು ಈ ಸೀರೆ ಬಿಚ್ಚಿಡಲು ಹೇಳಿ....ಎಲ್ಲಿ ಸವಾರಿ? ಒಳಕ್ಕೆ ನಡೆ ಎಂದು ಗುಡುಗಿದ್ರೆ... ಆಗ ನಿನಗೆ...

**ಶಕುಂತಲಾ**– ಬನ್ನಿಯತ್ತೆ.... ಇವಳ ಮಾತು ಕೇಳುತ್ತ ನಿಂತರೆ ಹಗಲು ಹೋಗಿ ಕತ್ತಲು ಬರುತ್ತದೆ.... ಬನ್ನಿ....ಹೋಗಿ ಬರೋಣ. ಮಾವಯ್ಯ ಮಾತಿನ ಮಂಟಪ ಹೊಕ್ಕಂತೆ ಕಾಣುತ್ತದೆ...ನಗು ಹರಟೆ ಜೋರಾಗಿದೆ...

[ ಹೊರಕ್ಕೆ ಹೋದ ಹೆಜ್ಜೆಯ ಸದ್ದುಗಳು...ಸಂಗೀತದ ಒನ್ನೆಲೆ...ಲಕ್ಷ್ಮಮ್ಮನ ಮನೆಯಲ್ಲಿ ಸಂಭ್ರಮದ ನಗು...ಮಾತು ಕೇಳುತ್ತದೆ... ]

**ಲಕ್ಷ್ಮಮ್ಮ** – ಓ...ಬನ್ನಿ ಸಾವಿತ್ರಮ್ಮ....ನೀವು ಬಂದದ್ದು ನನಗೆ ಎಲ್ಲಕ್ಕೂ ಹೆಚ್ಚಿನ ಸಂತೋಷ...ಬರ್ತೀರೋ ಇಲ್ಲವೋ ಎನ್ನುವ ಅನುಮಾನದಲ್ಲೇ ಇದ್ದೆ... ಶಕೂ....ಶಾಂತೂ ನೀವು ಬಂದುದಕ್ಕೆ ನಮಗೆ ಸಂತೋಷ ಇಲ್ಲ ಎಂದ್ಕೊಳ್ಳಬೇಡಿ ಮತ್ತೆ! ಸುಶೀಲಾ ಬರಲಿಲ್ಲವೆ?

**ಶಕೂ**- ಅಕ್ಕ ಮನೆಯಲ್ಲಿ ಇರ್ತೇನೆ ಎಂದು ಹೇಳಿದಕ್ಕೆ ಅತ್ತೆ ಬಂದದ್ದು.... ಇಲ್ಲದಿದ್ರೆ....ಇವರೆಲ್ಲಿ ಮನೆಯಿಂದ ಹೊರಗೆ ಕಾಲಿಡತಿದ್ರು?

**ಲಕ್ಷ್ಮಮ್ಮ** – ಅವರು ಎಲ್ಲೂ ಹೋಗೋವರಲ್ಲ....ಅದಕ್ಕೆ ಅವರು ಇಲ್ಲಿ ಬಂದದ್ದು ನಮ್ಮ ಭಾಗ್ಯ ಎಂದುಕೊಂಡೆ.

[ ಒಳಗಡೆ ನಗು...ಹಾಸ್ಯ...ಸಂಗೀತ... ]

**ಸಾವಿತ್ರಮ್ಮ–** ಲಕ್ಷ್ಮಮ್ಮ.. ಅರಶಿನ ಕುಂಕುಮ ತಕ್ಕೊಂಡಾಯಿತು.... ನಾನಿನ್ನು ಬರ್ತೇನೆ. ಶಕೂ....ಶಾಂತೂ ಸ್ವಲ್ಪ ಹೊತ್ತು ಇಲ್ಲಿರಲಿ....ಸುಶೀಲಾನ ಕಳುಹಿಸಿ ಕೊಡ್ತೇನೆ....

**ಲಕ್ಷ್ಮಮ್ಮ–** ಸ್ವಲ್ಪ ತಿಂಡಿ ಕಾಫಿ ತಿಂದು ವಿರಾಮದಲ್ಲಿ ನಾಲ್ಕು ಮಾತಾಡುವಾ ಎಂದುಕೊಂಡೆ....ಮಗಳ ಬಾಣಂತನ ಮುಗಿಯಿತು. ಇನ್ನು ನಾನೂ ಊರು ಸೇರ ಬೇಕಲ್ಲ? ನಿಮ್ಮನ್ನ ಮಾತನ್ನಾಡಿಸಬೇಕೆಂದರೆ ಅಡಿಗೆ ಕೋಣೆ....ನಿಮ್ಮವರ ಕೋಣೆ ಬಿಟ್ಟು ಹೊರಗೆ ಬಂದದ್ದು ನಾನು ಕಂಡೇ ಇಲ್ಲ.... ಹೇಗೂ ಬಂದಿದ್ದೀರಿ.... ಅವಸರ ಬೇಡ ಸಾವಿತ್ರಮ್ಮ....

**ಶಕುಂತಲಾ–** ಮನೆಯಲ್ಲಿ ಅಕ್ಕ ಇದ್ದಾಳೆ.... ಮಾವ ಕರೆದಿದ್ರೆ.... ಅವರು ಇಲ್ಲಿಗೆ ಓಡಿ ಬರುತಿದ್ರು.... ನೀವು ಸ್ವಲ್ಪ ಹೊತ್ತು ಹರಟೆ ಹೊಡೀರಿ ಅತ್ತೆ.... ಶಾಂತೂ ಇಲ್ಲೇ ಇರಲಿ.... ನಾನು ಹೋಗ್ತೇನೆ.... ಮಾವ ನಿಮ್ಮ ಹೆಸರು ಕರೆದ ಕ್ಷಣ ನಾನು ಬಂದು ಹೇಳ್ತೇನೆ....

**ಸಾವಿತ್ರಮ್ಮ–** (ಅನುಮಾನದ ಧನಿಯಲ್ಲಿ) ಕದ್ರೂ.... ಅವರು ಕರೆದಾಗ ನಾನು ಇಲ್ಲದಿದ್ರೆ.... ಮತ್ತೆ ರಾದ್ಧಾಂತ!

**ಲಕ್ಷ್ಮಮ್ಮ–** ಹೇಳಿದ್ದು ಕೇಳಿದ್ದೆ.... ಆದ್ರೆ ನಂಬಿರಲಿಲ್ಲ.... ಅಲ್ಲ ಸಾವಿತ್ರಮ್ಮ ಅದ್ಯಾಕೆ ಅಷ್ಟು ಭಯ ನಿಮಗೆ?

**ಶಾಂತೂ–** ನಮ್ಮತ್ತೆಗೆ ಮಾವಯ್ಯನ್ನ ಕಂಡಾಗ ಹುಲಿ ಕಂಡಂತಾಗುತ್ತದೋ ಏನೋ! ನನಗೂ ಅದೇ ಸಂಶಯ...

**ಲಕ್ಷ್ಮಮ್ಮ–** ಈ ಪ್ರಾಯದಲ್ಲೂ ಇಷ್ಟು ಹೆದರುತ್ತೀರಾ ಸಾವಿತ್ರಮ್ಮ?

**ಸಾವಿತ್ರಮ್ಮ–** (ದುಃಖ ಬೆರೆತ ನಗುವಿನಲ್ಲಿ) ನನ್ನ ಗರ್ಭಕ್ಕೆ ಅಂಟಿಕೊಂಡಿದೆ ಆ ಭಯ! ನನ ಜನ್ಮ ಹೋಗೋದೂ ಆ ಭಯದಲ್ಲೇ. ಹತ್ತುವರ್ಷದ ಪ್ರಾಯ ದಲ್ಲಿ ಅವರ ಕಣ್ಣುಗಳನ್ನು ಕಂಡು ಹೆದರಿದ ನಾನು ಈಗಲೂ ಅದೇ....

**ಲಕ್ಷ್ಮಮ್ಮ–** (ಅಚ್ಚರಿಯಲ್ಲಿ) ಅಂದ್ರೆ.... ಅವರು ನಿಮ್ಮನ್ನ ಪ್ರೀತಿ ಮಾಡಲ್ ಇಲ್ವೆ?

**ಸಾವಿತ್ರಮ್ಮ–** (ನಗುತ್ತ) ಪ್ರೀತಿ ಮಾಡಿದ್ದಾರೆ.... ಆದರೆ ಅವರ ಹಟ-ಕೋಪ ದಲ್ಲಿ ನಾನು ನನನ್ನೇ ಕಳೆದುಕೊಂಡಿದ್ದೇನೆ. ಬೇಡ.... ಲಕ್ಷ್ಮಮ್ಮ ಬೇಡ... ಆ ಮಾತೇ ಬೇಡ!

**ಲಕ್ಷ್ಮಮ್ಮ–** ನಾನೂ ಕೇಳಿದ್ದೇನೆ.... ನಿಮ್ಮವರ ದರ್ಪ–ಸಿಟ್ಟಿನ ವಿಷಯ–ಎಲ್ಲಕ್ಕೂ ನೀವೇ ಆಗಬೇಕಂತೆ....ಮನೆಯಲ್ಲಿ ಹೆಗಲೆತ್ತರ ಮಕ್ಕಳಿದ್ದೂ.... ಎಲ್ಲ ಕೆಲ ನೀವೇ ಮಾಡಬೇಕು....ಅವರ ಮಾತೇ ನಡೆಯಬೇಕಂತೆ.... ಆದಕ್ಕಾಗಿ ನಿಮ್ಮ ಮಕ್ಕಳು ಬೇಸರಗೊಂಡು ಊರು ಬಿಟ್ಟು ಇಲ್ಲಿಗೆ ಬಂದು ಬಿಟ್ಟರಂತೆ....

**ಸಾವಿತ್ರಮ್ಮ –** ಅದೆಲ್ಲ ದೊಡ್ಡ ಪುರಾಣ...ನೆನಪಾದ್ರೆ ಈಗಲೂ ಹೊಟ್ಟೆಯಲ್ಲಿ ಕರುಳು ಕೊಯ್ದಂತಾಗುತ್ತದೆ. ಮನೆಯಲ್ಲಿ ಬೇಕಾದಷ್ಟು ಧವಸ ಧಾನ್ಯ... ಕೈಯಲ್ಲಿ ಹಣ...ತೋಟದಲ್ಲಿ ತುಂಬಿ ನಿಂತಿದ್ದ ಅಡಿಕೆ ಮರಗಳು–ಆದ್ರೆ ಇವರ ಕೋಪ...ಹಟಕ್ಕೆ–ನನ್ನ ಮಕ್ಕಳು ಹೆದರಿ ಬಿಟ್ಟವು...ಒಂದು ದಿನ ಲಕ್ಷ್ಮಮ್ಮ ಹೀಗಾಯಿತು....

[Flash Back]

**ಪರಮೇಶ್ವರಯ್ಯ –** ಏನೇ ಎಲ್ಲಿದ್ದಾನೆ ರಾಮು? ತೋಟಕ್ಕೆ ಯಾಕೆ ಕಳುಹಿಸಿಲ್ಲ? ಹೊತ್ತು ಎಷ್ಟಾಯಿತೆಂದು ನೋಡಿದ್ದೀಯಾ? ಅವನ್ನ ಹುಡುಗಿಯ ಹಾಗೆ ಮನೆಯಲ್ಲಿ ಸಾಕಿ ಮುಂದೇನು ಮಾಡಬೇಕೆಂದಿದ್ದೀಯಾ? ಈ ಕಳ ಬುದ್ಧಿ, ಯಾಕೆ ಕಳುಹಿಸುತ್ತಿ? ನಾಳೆ ಕೈಗೆ ಕೋಳ ಹಾಕಿ ಎಳೆದುಕೊಂಡು ಹೋಗುವಾಗ...ನಿನ್ನ ಮಗ ಎನ್ನಲು ನಾಚಿಕೆಯಾಗೋದಿಲ್ವೆ? ಎಲ್ಲಿದ್ದಾನೆ ಅಕ್ಕ? ನೀರು ಹಾಕಲು ಮೈಗಳ್ಳತನ ಬೇರೆ...

**ಸಾವಿತ್ರಮ್ಮ –** (ಹೆದರಿಕೊಂಡು) ಅವನಿಗೆ ರಾತ್ರಿಯೆಲ್ಲ ಜ್ವರ...ಮೈ ಕಾದು ಕೆಂಡವಾಗಿತ್ತು...ಈಗ ಸ್ವಲ್ಪ...ನಿದ್ದೆ ಬಂದಂತಿದೆ...

**ಪರಮೇಶ್ವರಯ್ಯ –** ಮತ್ತೆ ಸುಳ್ಳಿನ ಕಂತೆ ಬಿಚ್ಚುತ್ತೀಯಾ ನನ್ನ ಹತ್ತಿರ; ಎಲ್ಲಿದ್ದಾನೆ ಅವನು? ಎಲ್ಲಿ...ಒಳಗೆ ಮಲಗಿದ್ದಾನೆಯೇ?

[ಒಳಗೆ ಹೋದ ಸದ್ದು...ಎರಡು ನಿಮಿಷಕ್ಕೆ]

**ರಾಮೂ –** ಅಮ್ಮ...ಅಮ್ಮ...ಸತ್ತೆ...ಅಯ್ಯೊಯ್ಯೊ...ಅಪ್ಪಯ್ಯ

**ಸಾವಿತ್ರಮ್ಮ –** ದಮ್ಮಯ್ಯ ರಾಮೂನ್ನ ಬಿಟ್ಟು ಬಿಡಿ. ಅವನ್ನ ಹೊಡೆಯಬೇಡಿ. ಜ್ವರದ ಹುಡುಗ ಕಂಗಾಲಾಗಿದೆ...ಬೆಳಿಗ್ಗೆ ಹೋಗ್ತೇನೆ ಎಂದ...ಮೈ ಕಾದು ಕೆಂಡ ವಾಗಿದೆ. ಎದ್ದು ನಿಂತ್ರೆ ನಡುಗುತ್ತಿದ್ದ...ನಾನೇ ಅವನನ್ನ ಮಲಗಿಸಿದ್ದೆ...

**ಪರಮೇಶ್ವರಯ್ಯ –** (ಉಕ್ಕೇರಿ ಬಂದ ಸಿಟ್ಟಿನಲ್ಲಿ) ನಾನೇನು ಯಮ ಎಂತ ತಿಳಿದಿಯಾ? ಮೈ ಸ್ವಲ್ಪ ಬಿಸಿಯಾದ್ರೆ...ಮುಸುಕು ಹಾಕಿ ಮಲಗಿಸಿ ಬಿಟ್ಟಿಯಾ ನೀನು? ಮೊದಲು ನಿನ್ನ ಹೊಡೆಯಬೇಕು.

[ತಲೆಗೆ ಕುಟ್ಟಿದ ಸದ್ದು...ಸಾವಿತ್ರಮ್ಮ ಕಿರುಚಿಕೊಳ್ಳುತ್ತಾಳೆ]

**ಸಾವಿತ್ರಮ್ಮ –** ಅಯ್ಯೊಯ್ಯೊ ನನ್ನ ತಲೆ...ರಾಮೂ ನಾನು ಸಾಯಬೇಕಪ್ಪಾ!

[ಮತ್ತೆ ಲಕ್ಷ್ಮಮ್ಮನ ಮನೆ]

**ಸಾವಿತ್ರಮ್ಮ –** ಇದು ನೋಡಿ ಲಕ್ಷ್ಮಮ್ಮ...ಕೈಯಲ್ಲಿದ್ದ ಬೆತ್ತದ ಬೆಳ್ಳಿಯ ಹಿಡಿ ಯಿಂದ ತಲೆ ಕುಟ್ಟಿದ ಗಾಯ ಇನ್ನೂ ಅಚ್ಚೊತ್ತಿ ನಿಂತಿದೆ...ಎರಡು ತಿಂಗಳು ತಲೆಗೆ ಹಣಿಗೆ ಮುಟ್ಟಿಸಲು ಆಗಲಿಲ್ಲ...

**ಶಾಂತೂ –** (ನೊಂದ ಧನಿಯಲ್ಲಿ) ಇಷ್ಟು ನೋವಾದಾಗ ಎಚ್ಚರ ತಪ್ಪಿರಲಿಲ್ವೆ ಅತ್ತೆ?

**ಸಾವಿತ್ರಮ್ಮ –** ಇದಕ್ಕೂ ಹೆಚ್ಚಿನ ಪೆಟ್ಟು ನಾನು ತಿಂದಿರುವಾಗ ಇದು ಏನು ಮಹಾ? ಲಕ್ಷಮ್ಮಾ...ಮದುವೆಯಾದ ಮೇಲೆ ಇವರು ಎಂದು ನಾನು ಕಂಡವಳಲ್ಲ...ಮೂರು ಮಕ್ಕಳು ನನ್ನ ಪಾಲಿಗೆ ಮೂರು ಕುತ್ತುಗಳೇ! ಹೆತ್ತ ಹದಿಮೂರು ದಿನಕ್ಕೇ ಮತ್ತೆ ಎದ್ದು ಅವರಿಗೆ ಬಡಿಸಬೇಕು. ಈ ಮಕ್ಕಳನ್ನು ಬೆಳೆಸಿ ದೊಡ್ಡದು ಮಾಡಬೇಕಾದರೆ ನಾನು...ನಾನು..(ಬಿಕ್ಕಳಿಸಿದ ಸದ್ದು)

**ಲಕ್ಷ್ಮಮ್ಮ –** ಕಣ್ಣೀರು ಹಾಕಬೇಡಿ ಸಾವಿತ್ರಮ್ಮ...ದೊಡ್ಡ ಜೀವ ನಿಮ್ಮದು...ಈಗ ನೋಡಿ...ನಿಮ್ಮ ಮನೆಯ ಸೌಭಾಗ್ಯ...ಮೂರು ಮುತ್ತಿನಂಥ ಗಂಡು ಮಕ್ಕಳು... ಕೈ ತುಂಬ ಸಂಪಾದಿಸಿ ತರ್ತಾರೆ...ಮನೆ ತುಂಬಿದ್ದಾರೆ ಬಂಗಾರದಂತ ಮೂರು ಸೊಸೆಯಂದಿರು...

**ಸಾವಿತ್ರಮ್ಮ –** ಅದೆಲ್ಲ ನಿಜ ಲಕ್ಷಮ್ಮ...ಆದ್ರೆ...(ಮತ್ತೆ ಬಿಕ್ಕುತ್ತಾಳೆ)

**ಲಕ್ಷ್ಮಮ್ಮ –** (ಸಹಾನುಭೂತಿಯಲ್ಲಿ) ಒಳ್ಳೆಯ ಸಮಯಕ್ಕೆ ಕರೆದು ನಿಮನ್ನು ಕಣ್ಣೀರು ಸುರಿಸುವಂತೆ ಮಾಡಿಬಿಟ್ಟೆ...ನೀವು ಅಳಬಾರದು ಸಾವಿತ್ರಮ್ಮ...

**ಸಾವಿತ್ರಮ್ಮ–** ಬಹಳ ವರ್ಷಗಳ ಮೇಲೆ ಏಕೋ ಮನಸ್ಸು ಬಿಚ್ಚಿ ಮಾತಾಡಿ ಬಿಟ್ಟೆ...ಎದೆಯಲ್ಲಿ ಹಿಡಿದಿಟ್ಟ ದುಃಖ ಕಣ್ಣೀರಲ್ಲಿ ಹರಿದು ಹೋಗಲಿ ಲಕ್ಷ್ಮಮ್ಮ... ಈ ಮೂರು ಮಕ್ಕಳನ್ನೂ ನಾವು ಎಲ್ಲ ತಾಯಂದಿರಂತೆ ಲಲ್ಲೆ...ಮುದ್ದು ಮಾಡಿ ಪ್ರೀತಿ ಮಾಡಲೇ ಇಲ್ಲ...ಇವರ ಭಯದಿಂದ ಅವುಗಳೂ ಗಂಟಲು ಸಡಿಲುಬಿಟ್ಟು ನನ್ನ ಸೆರಗು ಹಿಡಿದು ಅಮ್ಮಾ ಎಂದು ಕರೆಯಲು ಹೆದರಿಕೊಂಡಿದ್ದವು...ಅದು ಕೊಡು–ಇದು ಕೊಡು ಎಂದು ಎಲ್ಲ ಮಕ್ಕಳು ಹಟ ಮಾಡಿದಂತೆ ಇವರಾರೂ ಹಟ ಮಾಡಲೇ ಇಲ್ಲ! ಒಂದು ದಿನ ಊಟಕ್ಕೆ ಕೂತಾಗ ಹೇಳಿ ಬಿಟ್ರು... ನಾಳೆಯಿಂದ ರಾಮೂ–ಗೋಪೂನ ಸ್ಕೂಲಿಗೆ ಕಳುಹಿಸಬೇಡ...ಅಡಿಕೆ ತೋಟಕ್ಕೆ ಕಳುಹಿಸಿಬಿಡು...ಓದಿ ಸಂಪಾದಿಸುವುದು ಇವರು ಅಷ್ಟರಲ್ಲೇ ಇದೆ...ತೋಟ ಕ್ಕಾದ್ರೂ ದುಡಿದರೆ...ನಾಳೆ ಕೂತಲ್ಲೇ ಸಂಸಾರ ನಡೆಸಬಹುದು...ನನಗೆ ಈ ಮಾತು ಕೇಳಿ ಉಸಿರೇ ನಿಂತಂತಾಯಿತು...

**ಲಕ್ಷ್ಮಮ್ಮ–** (ಅನುಕಂಪದಲ್ಲಿ) ಅಲ್ವೆ ಮತ್ತೆ? ಎಳೆಮಕ್ಕಳು ಸ್ಕೂಲು ಬಿಡೋ ದಂದರೆ? ಕೂಲಿಗಳಂತೆ ಅಡಿಕೆ ತೋಟಕ್ಕೆ ನೀರು ಹಾಕೋದು...ಛೆ...ಛೆ... ಎಂಥ ಮಾತಿದು ?

**ಸಾವಿತ್ರಮ್ಮ–** ಗಂಡು ಹುಡುಗರು ಓದು ಬಿಟ್ಟು ಕೂಲಿಗಳಂತೆ ತೋಟದಲ್ಲಿ ಸೇರಿಸೋದು ಹ್ಯಾಗೆ? ರಾತ್ರಿಯೆಲ್ಲ ಯೋಚನೆ ಮಾಡಿದೆ...ಮಕ್ಕಳಿಬ್ರೂ ಸ್ಕೂಲು ಬಿಟ್ಟು ತೋಟಕ್ಕೆ ಹೋದ್ರು...

**ಲಕ್ಷ್ಮಮ್ಮ–** ಛೆ...ಛೆ...ಏನನ್ನಾಯ? ಓದು ಬಿಟ್ಟರೆ?

**ಸಾವಿತ್ರಮ್ಮ–** ಮಾತಾಡಲು ನಾಲಗೆ ಏಳದಿದ್ದರೂ ಹೊಟ್ಟೆಯಲ್ಲಿ ಬೆಂಕಿ ಇಟ್ಟ ಸಂಕಟ...ಕೊನೆಗೆ ಒಂದು ನಿರ್ಧಾರಕ್ಕೆ ಬಂದೆ. —ಇವರು ಬೇಕಾದ್ರೆ...ನನ್ನ ಕೊಂದು ಹಾಕಲಿ...ನನ್ನ ಮಕ್ಕಳು ಓದಬೇಕು...ಓದಿ ಕೈತುಂಬ ಸಂಪಾದಿಸಿ... ಸಂಸಾರದಲ್ಲಿ ಸುಖ ಪಡಬೇಕು...ಎಂದು ಹಟ ಬಂತು ಲಕ್ಷ್ಮಮ್ಮ!

**ಲಕ್ಷ್ಮಮ್ಮ–** (ಗಾಬರಿಗೊಂಡು) ಮತ್ತೆ! ?

**ಸಾವಿತ್ರಮ್ಮ–** ನನ್ನಣ್ಣ ಮುಂಬಯಿಲಿದ್ದ. ಅವನಿಗೆ ರಾಮೂನಿಂದ ಇಲ್ಲಿಯ ಎಲ್ಲ ವಿಷಯ ತಿಳಿಸಿ ಕಾಗದ ಬರೆಸಿದೆ...ಕೂಡಲೇ ಅವನಿಂದ ಉತ್ತರ ಬಂತು... ಮಕ್ಕಳಿಲ್ಲದ ಅವನು ನನ್ನೆರಡು ಮಕ್ಕಳನ್ನೂ ತನ್ನಲ್ಲಿ ಇರಿಸಿಕೊಂಡು ಓದು ಮುಂದುವರಿಸುವುದಾಗಿ ಬರೆದ....ಆದರೆ ಇಲ್ಲಿಂದ ಹುಡುಗರನು ಕಳುಹಿಸುವುದು ಹೇಗೆ? ನನ ಜ್ಜಿ ನನಗೆಂದು ಕೊಟ್ಟಿದ್ದ ಚಿನ್ನದ ಎಂಟೆಳೆ ಚಕ್ರಸರ ಗುಟ್ಟಾಗಿ ಮಾರಿ ಮಕ್ಕಳನ್ನು ದೂರದ ಈ ಊರಿಗೆ ಮನಸ್ಸು ಕಲ್ಲುಮಾಡಿ ಕಳುಹಿಸಿ ಕೊಟ್ಟೆ!

**ಲಕ್ಷ್ಮಮ್ಮ–** ಮತ್ತೇ... ನಿಮ್ಮ ಯಜಮಾನರು?

**ಸಾವಿತ್ರಮ್ಮ–** ಅದೇ ಬಂದ ದುಃಖ... ಮಕ್ಕಳು ದಿನದಂತೆ ಅಡಿಕೆ ತೋಟಕ್ಕೆ ಬರಲಿಲ್ಲ... ಅರ್ಧಗಂಟೆಗೆ ಅವರೇ ಮನೆಗೆ ಬಂದುಬಿಟ್ರು.

**ಲಕ್ಷ್ಮಮ್ಮ–** ಹಾಗಾದರೆ ನಿಮ್ಮನ್ನು...

**ಸಾವಿತ್ರಮ್ಮ–** ನನ್ನ ಕೇಳಿದ್ರು ಮಕ್ಕಳೆಲ್ಲಿ ಎಂದು. ನನಗೊತ್ತಿಲ್ಲಾ ಎಂದೆ. ಸತ್ಯ ಹೇಳು ಎಲ್ಲಿದ್ದಾರೆ ಮಕ್ಕಳು? ಮತ್ತೆ ಸ್ಕೂಲಿಗೆ ಕಳಿಸಿದಿಯಾ ಎಂದ್ರು. ನಾನು ಕಳಿಸಿಲ್ಲಾ ಎಂದೆ. ಸಿಟ್ಟಿನಲ್ಲಿ ಕುದಿಯುತ್ತಲೇ ಹೋಗುತ್ತ ಅಂದ್ರು ಎಲ್ಲಿ ಹೋಗ್ತಾರೆ? ಜಾತ್ರೆಗೇನಾದ್ರೂ ಹೋಗಿರಬೇಕು. ಬರಲಿ ಕಾಲು ಮುರಿದುಬಿಡ್ತೇನೆ. ಈ ವಿಷಯ ಎಷ್ಟು ದಿನ ಮುಚ್ಚಿಡಲು ಬಂದೀತು ಲಕ್ಷ್ಮಮ್ಮ? ನಾಲ್ಕು ದಿನಕ್ಕೆ ಅವರಿಗೆ ಖಂಡಿತ ತಿಳಿದುಹೋಯಿತು. ಮಕ್ಕಳು ಈ ಊರಲ್ಲಿಲ್ಲ. ಅದಕ್ಕೆಲ್ಲ ನಾನೇ ಮೂಲ ಕಾರಣ ಎಂದು. ಆ ರಾತ್ರಿ ನನ್ನ ದನ ಬಡಿಯುವಂತೆ ಬಡಿದರು. ಅಂದು ಒದ್ದು ನೆಲಕ್ಕೆ ದೂಡಿದ್ದು ಇನ್ನೂ ಸರಿಯಾಗಿ ನಿಲ್ಲಲು ಸೊಂಟದ ನೋವು ಬಿಟ್ಟಿಲ್ಲ. ಮೈಯ ಎಲುಬೆಲ್ಲ ಮುರಿಯುವಂತೆ ಹೊಡೆದ್ರು.

**ಶಾಂತೂ–** ಅತ್ತೆ ಎಷ್ಟು ನೋವು ಅನುಭವಿಸಿದಿರಲ್ಲಾ ನೀವು? ಇವರ ಕಾಟದಿಂದ ಪಾರಾಗಲು ತೌರಿಗೆ ನಾಲ್ಕು ದಿನ ಹೋಗಬೇಕಿತ್ತು?

**ಸಾವಿತ್ರಮ್ಮ–** ಅವರಲ್ಲಿದ್ದ ಸಿಟ್ಟು ಒಂದು ಬಿಟ್ಟರೆ ಬೇರೆ ಯಾವ ಕಾರಣಕ್ಕಾಗಿ ಅವರನ್ನು ಬಿಟ್ಟು ಹೋಗಲಿ ಮಗು? ನಾನಿಲ್ಲದ ಅವರಿಗೆ ಒಂದು ಕ್ಷಣ ಆಗದು ಊಟಕ್ಕೆ ನಾನು ಬಡಿಸದಿದ್ರೆ ಅವರು ಊಟ ಮಾಡಿದ್ದೂ ಇಲ್ಲ. ಅಂಥ ಕೆಟ್ಟ ಸಿಟ್ಟು–ಹಟ. ಒಂದೊಂದು ಬಾರಿ ಅವರನ್ನು ರಾಕ್ಷಸನಂತೆ ಮಾಡುತ್ತದೆ.

**ಶಾಂತೂ–** ಏನೇ ಇರಲಿ ಅತ್ತೆ ನೀವು ಮಹಾ ಕೆಲಸ ಮಾಡಿದಿರಿ .... ಮಕ್ಕಳ ಓದು ಮತ್ತೆ ಮುಂದುವರಿಸಿದ ವೀರಮಾತೆ ನೀವು .... ಇಲ್ಲದಿದ್ರೆ.... ಭಾವಂದಿರಿಬ್ಬರೂ ....ಈಗ ಊರಲ್ಲಿ ಅಡಿಕೆ ತೋಟಕ್ಕೆನೀರು ಹಾಕುವುದನ್ನೇ ಮಾಡಬೇಕಾಗುತ್ತಿತ್ತಲ್ಲ?

**ಲಕ್ಷ್ಮಮ್ಮ–** ಭಾವಂದಿರಿಬ್ಬರೇ ಏಕೆ .... ಅವರ ಚಿಕ್ಕ ತಮ್ಮ .... ನಿನ್ನ ಗಂಡನೂ ಅದನ್ನೇ ಮಾಡಬೇಕಿತ್ತು!

[ ಎಲ್ಲರೂ ನಗುತ್ತಾರೆ ]

**ಸಾವಿತ್ರಮ್ಮ–** ಅಂತೂ ಮಕ್ಕಳು ಓದಿ ಬುದ್ಧಿವಂತರಾದರು .... ವಿಷಯ ತಿಳಿದ ಮೇಲೆ ಇವರು ಸಂತೋಷಪಟ್ಟು ನನಗೆ ತಿಳಿಸದೇ ತಪ್ಪದೆ ಹಣ ಕಳಿಸುತ್ತಿದ್ದರಂತೆ... ಆದರೆ ... ಕಾಗದ ಮಾತ್ರ ಎಂದೂ ಬರೆಯಲೇ ಇಲ ....

**ಲಕ್ಷ್ಮಮ್ಮ–** ಮತ್ತೆ ಇಲ್ಲಿ ಬರಲು ಒಪ್ಪಿದ್ದೂ ತುಂಬಾ ಆಶ್ಚರ್ಯ?

**ಸಾವಿತ್ರಮ್ಮ–** ಅವರದು ಎಲ್ಲದಕ್ಕೂ ಶರ್ತುಗಳು .... ಮನೆಗೆ ಫರ್ನಿಚರ್.... ಪಾತ್ರೆ ಮೊದಲು ಮಾಡಿಕೊಂಡು ಎಲ ಸಿದ್ಧಪಡಿಸಿ–ನಮ್ಮನ್ನ ಇಲ್ಲಿಗೆ ಕರೆಯಲು ಬಂದರೆ....ಇವರದು ಒಂದೇ ಮಾತು! ನನ್ನ ಸ್ನೇಹಿತರ ಇಬ್ಬರು ಮಕ್ಕಳಿದ್ದಾರೆ... ಅವರನ್ನು ನೀವಿಬ್ಬರೂ ಮದುವೆಗೆ ಒಪ್ಪಿಕೊಂಡರೆ .... ನಾನು ಇದೋ ಸಿದ್ಧ ಎಂದರು...

**ಲಕ್ಷ್ಮಮ್ಮ–** ಅಂದ್ರೆ ಅಲ್ಲೂ ಇವರದೇ ಹಟವೇ ?

**ಸಾವಿತ್ರಮ್ಮ–** (ಅಭಿಮಾನದ ಧನಿಯಲ್ಲಿ) ನನ್ನ ಮಕ್ಕಳು ಬಂಗಾರದಂಥ ಗುಣದ ವರು–ನಮ್ಮನ್ನ ಸುಖವಾಗಿ ನೋಡಿಕೊಳ್ಳುವ ಆಶೆ. ತಂದೆಯ ಮಾತಿಗೆ ಸೈಗುಟ್ಟಿ ಸುಶೀಲಾ–ಶಕುಂತಲೆಯನ್ನ ಈ ಮನೆ ತುಂಬಿಸಿಕೊಂಡದ್ದು.

**ಲಕ್ಷ್ಮಮ್ಮ–** ಹಾಗಾದ್ರೆ ಈ ಸೊಸೆಯಂದಿರಲ್ಲಿ ಹೇಳತೀರದಷ್ಟು ಪ್ರೀತಿ ಇರಬೇಕಲ್ಲ ಸಾವಿತ್ರಮ್ಮ?

**ಸಾವಿತ್ರಮ್ಮ–** ಅವರಿಗೆ ಪ್ರೀತಿ ಎಲ್ಲರ ಮೇಲೂ ಇದೆ. ಆದ್ರೆ ನೋಡಿ ಲಕ್ಷ್ಮಮ್ಮ ಕೊಂಡಾಟ...ಆಟ...ಇದು ಅವರ ಕೋಶದಲ್ಲೇ ಇಲ್ಲ. ಸುಶೀ ಶಕೂ ಅವರಿಗೆ ಸ್ನಾನಕ್ಕೆ ನೀರು, ಊಟಕ್ಕೆ ಬಡಿಸಿ ಗೊತ್ತಿಲ್ಲ. ಮಾವಯ್ಯ ಅಂದ್ರೆ ಅಷ್ಟು ದೂರ ಓಡುತ್ತಾರೆ.

**ಲಕ್ಷ್ಮಮ್ಮ–** ಅವರಿಗೆ ಮಾವಯ್ಯ ಎಂದ್ರೆ ಹುಲಿ ಕಂಡಷ್ಟೇ ಭಯ ಎನ್ನುವುದನ್ನು ನಾನೂ ಕಂಡುಕೊಂಡಿದ್ದೇನೆ. ಈ ಶಾಂತೂಗೆ ಇನ್ನೂ ಇಲ್ಲಿಯ ಯಾವ ಕ್ರಮವೂ ಗೊತ್ತಿದ್ದಂತೆ ಕಾಣೋದಿಲ್ಲ.

[ ಅಷ್ಟರಲ್ಲಿ ಸುಶೀಲಾ ಧಾವಿಸಿ ಬರುತ್ತಾಳೆ ]

**ಸುಶೀ–** ಅತ್ತೆ ಬೇಗ ಬನ್ನಿ, ಎಲ್ಲಿ ಹಾಳಾಗಿ ಹೋದ್ನು? ಎಂದ್ರು. ಆ ಕಿರುಚಾಟಕ್ಕೆ ಇಲ್ಲಿಗೆ ಓಡಿ ಬಂದೆ. ಬೇಗ ಬನ್ನಿ. ಮತ್ತೆ ಇಲ್ಲದ ತೊಂದರೆ. ನಾನೇ ನಿಮ್ಮನ್ನು ಬೈಸಿದ ಹಾಗಾಗುತ್ತದೆ. ಬನ್ನಿ.

**ಶಾಂತೂ–** ಅತ್ತೆ ಅಷ್ಟು ಗಡಿಬಿಡಿಯಲ್ಲಿ ನೀವು ಓಡಬೇಡಿ. ಮತ್ತೆ ಕಾಲು ಜಾರೀತು. ನಿಲ್ಲಿ ನಾನೂ ಬಂದೆ. ನಿಲ್ಲಿಯತ್ತೆ. ಪಾಪ ಆಗಲೇ ಹೋಗಿ ಆಯಿತು ಈ ಪ್ರಾಯದಲ್ಲೂ ಇಷ್ಟೊಂದು ಕರ್ತವ್ಯಪ್ರಜ್ಞೆಯೇ ?

## ದೃಶ್ಯ ೩

[ ಶಾಂತೂ ಭಾವನ ಮಕ್ಕಳೊಂದಿಗೆ ಆಟ ಆಡ್ತಾಳೆ... ನಗು ಕೇಕೆ... ]

**ಸುಶೀಲಾ–** ಶಾಂತೂ... ಮನೋಹರ ಕರೆಯುತ್ತಾನೆ... ಟೈ ಸಿಕ್ಕಿಲ್ಲ ಅಂತ ಕಾಣ್ತದೆ... ಈ ಮಕ್ಕಳ ಕೈಯಲ್ಲಿ ಸಿಕ್ಕು ಬಿದ್ದು ಗಂಡನ್ನ ಮರೆತು ಬಿಟ್ಟಂತೆ ಕಾಣ್ತದೆ... ಬೇಗ ಹೋಗಿ ಹುಡುಕಿ ಕೊಡು... ಹೋಗು ಮತ್ತೆ!

**ಶಾಂತೂ–** [ನಗುತ್ತ] ಮಕ್ಕಳ ಜೊತೆ ಆಟ ಆಡೋವಾಗ ಎಷ್ಟು ಸುಖ ಸಿಗುತ್ತದೆಂದು ನಿಮಗೇನು ಗೊತ್ತಕ್ಕಾ? ಬೆಳಿಗ್ಗೆಯಿಂದ ಸಂಜೆಯವರೆಗೆ ಅಡಿಗೆ—ಅಡಿಗೆ ಎಂದು ಒಳಗೇ ಇದ್ದು ಜಡಿ... ಈ ಮಕ್ಕಳು ಯಾರೊಟ್ಟಿಗೆ ಆಡಬೇಕು ಹೇಳಿ ? ಈಗ ಅಲ್ಲಿಗೇ ಹೋಗ್ತೇನೆ...

**ಶಾಂತೂ–** [ಒಳಗೆ ಬಂದು ಮೆಲು ಮಾತಿನಲ್ಲಿ] ನನ್ನ ಕರೆದಿರಂತೆ ?

**ಮನೋಹರ–** [ಹುಸಿ ಮುನಿಸಿನಿಂದ] ನಾನೆಲ್ಲಿ ಕರೆದಿದ್ದೇನೆ ? ಹೋಗು ಮಕ್ಕಳ ಜೊತೆಯಲ್ಲಿ ಸುಖ ಸಿಗುತ್ತದೆ... ಅವರೊಡನೆ ಆಡು ಹೋಗು... ಮತ್ತೆ!

**ಶಾಂತೂ–** [ಬಿಯ್ಯಾರದಿಂದ] ಹೋಗ ನೀವು... ನೀವು ಕರೆದಿದ್ದೀರೆಂದು ಸುಶೀಲಕ್ಕ ಹೇಳಿದ್ರು... ಯಾಕೆ ಕರೆದದ್ದು ?

**ಮನೋಹರ–** [ಸ್ವಲ್ಪ ಸಿಟ್ಟಿನಲ್ಲಿ] ನಾನು ನಿನ್ನ ಕರೆಯಬೇಕೆ? ಆಫೀಸಿಗೆ ಹೋಗುವಾಗ ನೀನೇ ಎಲ್ಲ ತಯಾರಿ ಮಾಡಿ ಕಳಸೋದಿಲ್ವೆ? ಇವೊತ್ತು ನಿನಗೆ ಮಕ್ಕಳೊಂದಿಗೆ ಈ ಹೊತ್ತಿನಲ್ಲೇ ಆಡುವ ಮನಸ್ಸಾಗಿದೆ! ತಪ್ಪು ನನದೇ! ನಿನಗೆ ಇಷ್ಟು ಸಲಿಗೆ ಕೊಡಬಾರದಿತ್ತು.... ನಮ್ಮ ಅಪ್ಪಯ್ಯ ನೋಡು... ಈಗಲೂ... ಈ ಪ್ರಾಯದಲ್ಲೂ... ಏನೇ ಎಂದು ಕರೆದ್ರೆ ನಮ್ಮಮ್ಮ ತನ್ನದುರು ಗುಡ್ಡ ಇದ್ರೂ ಹಾರಿ ಓಡಿ ಬರ್ತ್ತಾಳೆ!

**ಶಾಂತೂ–** [ಅಣಕಿಸುವ ದನಿಯಲ್ಲಿ] ಓಹೋ... ಗುಡ್ಡ ಇದ್ರೂ... ಹಾರಿ ಬರ್ತ್ತಾರಂತೆ... ಅತ್ತೆಯವರ ಜೀವ ಎಂದೋ ಸತ್ತು ಹೋಗಿದೆ. ಇಲ್ಲಿರೋದು ದೇಹ ಮಾತ್ರ... ಈ ಪ್ರಾಯದಲ್ಲಿ... ಅವರು ಪಡೋ ಕಷ್ಟ ನೋಡಿದ್ರೆ... ನನಗೆ ಅಳು ಬರುತ್ತದೆ... [ಧನಿ ನಡಗುತ್ತದೆ...] ನೀವು ಮೂರು ಜನ ಮಕ್ಳು ಗುಂಡು ಕಲ್ಲಿನ ಹಾಗೆ ಇದ್ದೀರಿ... ಇನ್ನೂ ನಿಮಗೆ ನಿಮ್ಮಮ್ಮನ ಸೆರ ಬಿಡಿಸಲಿಕ್ಕಾಗೋದಿಲ್ವೆ! ಎಳೆ ಹುಡುಗಿಯ ಹಾಗೆ ಮಾವಯ್ಯನ ಎಲ್ಲ ಕೆಲಸ ಅವರೇ ಮಾಡಬೇಕೆಂದರೆ ?

**ಮನೋಹರ–** [ನೊಂದ ದನಿಯಲ್ಲಿ] ಶಾಂತೂ ನೀನಿನ್ನೂ ಈಗ ಬಂದಿದ್ದೀಯ... ಈ ಮನೆಗೆ... ನಾವು ಇದರಲ್ಲಿ ತೀರ ಸೋತು ಹೋಗಿದ್ದೇವೆ. ಯಾವುದಕ್ಕೂ ಈ ಮನೆಯಲ್ಲಿ ಕೊರತೆ ಇಲ್ಲ! ಅಮ್ಮಗೆ ಸಹಾಯವಮಾಡಲು ಹೋದರೆ... ಅಪ್ಪಯ್ಯನ ಕೆಲಸ ತಾನೇ ಮಾಡಬೇಕೆನ್ನುವ ಇಚ್ಛೆ ಅವಳಿಗೂ ಇದೆ....

**ಶಾಂತೂ–** ಇಚ್ಛೆಯಂತೆ... ಇಚ್ಛೆ... ಮಾವಯ್ಯನ ಪ್ರೀತಿ ಇದೆ ಅದು ನಿಜ... ಆದ್ರೆ... ಈ ಜೀವಕ್ಕೆ ವಿಶ್ರಾಂತಿ ಬೇಡವೇ ? ಏಳೆಂಟು ದಿನಗಳಿಂದ ನಾನೂ ನೋಡ್ತೇನೆ.... ಮಾವಯ್ಯ ಕಾಯಿಲೆಯಿಂದ ಮಲಗಿ... ಅತ್ತೆ ಇಡೀ ದಿನ ರಾತ್ರಿ ಕಣ್ಣಿಗೆ ಕಣ್ಣು ಹಚ್ಚಿಲ್ಲವಂತೆ.... ಮೊನ್ನೆ ಸುಶೀಲಕ್ಕ ಹೇಳಿದ್ರು—ಕಾಲು ಒತ್ತಿ ಒತ್ತಿ ಅವರ ಮೈಯೆಲ್ಲ ನುಗ್ಗಾಗಿದೆ. ಎಲ್ಲ ಕೆಲಸಕ್ಕೂ ಅವರೇ ಓಡಾಡಬೇಕು... ಯಾಕೆ ನೀವೆಲ ಅವರ ಮಕ್ಕಳಲ್ವೇ ? ನಿಮ್ಮ ಹಿಂದೆ... ನಾವು ಮೂರು ಜನ ಸೊಸೆಯಂದಿರು ಕೈಕಟ್ಟಿ ನಿಂತಿಲ್ಲವೇ ? ನಾವು ಹೊರಗಿನವರೇ ?

**ಮನೋಹರ–** (ಸಮಾಧಾನಪಡಿಸುವ ಧನಿಯಲ್ಲಿ) ನಿಜ ಶಾಂತೂ. ನಾನು ರಾಮಣ್ಣ-ಗೋಪಣ್ಣ ಅದನ್ನೇ ದಿನಾಲು ಯೋಚಿಸುತ್ತೇವೆ. ನೀನೇ ನೋಡು ನಮಗೆ ಎಲ್ಲಿಗಾದರೂ ಸಿನೇಮಾ-ತಿರುಗಾಟಕ್ಕೆ ಹೋಗಲು ಅಪ್ಪಯ್ಯ ಅಡ್ಡಿ ಮಾಡಿದ್ದಾರೆಯೇ? ಆದರೆ ಅಮ್ಮನ ವಿಷಯದಲ್ಲಿ ಅವರದು ಮೊದಲಿನಿಂದಲೂ ಇದೇ



ಹಟ- ನನ್ನ ಬೆನು ನೋಡು- ಇದು ಅಪ್ಪಯ್ಯನ ನಾಗಬೆತ್ತದ ಪ್ರತಾಪ! ಆಣಂದಿರಿಗ ಇದು ಪ್ರಸಾದ ಸಿಕ್ಕಿದೆ.

**ಶಾಂತೂ–** ಛಿ ಛಿ ನನಗೇಕೋ ತುಂಬಾ ನೋವಾಗಿದೆ. ಈ ಮನೆಯಲ್ಲಿ ಎಲ್ಲವೂ ಇದೆ ಆದರೆ ಅತ್ತೆಯ ಜೀವಕ್ಕೆ ಸಮಾಧಾನ ಬೇಕು ಅಲ್ಲಿಯ ವರೆಗೆ ನನ್ನ ಮನಸ್ಸಿಗೆ ನೆಮ್ಮದಿ ಇಲ್ಲ. ನಾನೇ ಮಾವಯ್ಯನ ಕೆಲಸಕ್ಕೆ...

**ಮನೋಹರ-** (ನಗುತ್ತ) ಹಾ ಹಾ ನನ್ನ ಮುದು ಶಾಂತೂ- ಅದೊಂದು ಕೆಲಸ ಮಾತ್ರ ಮಾಡಬೇಡ! ನೀನು ಈ ಜನ್ಮದಲ್ಲಿ ಈ ಹುಲಿಯನ್ನು ಪಳಗಿಸಲು ಸಾಧ್ಯವಿಲ್ಲ. ನೀನು ಹೆಚ್ಚು ಮಾಡಿದರೆ ಅದರ ಬಿಸಿ ಅಮ್ಮಗೆ...ಜಾಗ್ರತ ನನಗೆ ಹೊತ್ತಾಯಿತು. ಎಲ್ಲಿ ನನ್ನ ಪಾನ್?

**ಶಾಂತಾ–** (ಗಡಬಿಡಿಯಲ್ಲಿ) ಓ! ಮರೆತೇ ಹೋಗಿತ್ತು, ನಿನ್ನೆ ಚಮನ ಹಾಕೋದಿಕ್ಕೆ ಮರೆತರೆ ರಾತ್ರಿ ನಿದ್ದೆಯಲ್ಲೂ ನನ ಕಣಕಿದ್ದೀರಿ. ಅದಕ್ಕ ನೆನಪಿನಿಂದ ವೀಡಾಕ್ಕೆ ಸಲ್ಪ ಹೆಚ್ಚಾಗಿಯೇ ಚಮನ ಹಾಕಿ ಮಾಡಿದೇನೆ ತಕ್ಕೊಳ್ಳಿ... [ಇಬ್ಬರೂ ನಗುತ್ತಾರೆ]

[ ರೇಡಿಯೋದಲ್ಲಿ ವಾದ್ಯ ಸಂಗೀತ...ಕೇರಮ್ ಆಟದ ಕಾಯಿಗಳ ಸದ್ದು . ನಗು... ನಡುನಡುವೆ ಮಾತು-ವಾದ್ಯ ಸಂಗೀತ ಮುಕ್ತಾಯಗೊಳ್ಳುತ್ತದೆ. ]

**ಸುಶೀಲಾ–** ಶಕೂ ಈ ಬಾರಿ ಕೀನನ್ನ ನೀನೆ ತಗೊಂಡು ಬಿಡೇ. ಇಲ್ಲದಿದ್ರೆ ಈ ಶಾಂತೂ ಹದ್ದಿನಂತೆ ಹಾರಿಸಿ ಬಿಡ್ತಾಳೆ...ಅವಳಿಗೆ ಕೇರಮ್ ಆಟ ಎಂದ್ರೆ... ನೀರು ಕುಡಿದಷ್ಟು ಸುಲಭ!

**ಶಕೂ–** [ಅಸಹಾಯಕ ಧನಿಯಲ್ಲಿ] ಏನು ಮಾಡಲಕ್ಕಾ...? ಈ ಕ್ವೀನ್ ಇದ್ದಾಳಲಾ...ಇವಳಿಗೂ ಶಾಂತೂನಲ್ಲಿ ಎಲ್ಲಿಲ್ಲದ ಪ್ರೀತಿ...ನೋಡಿ ಹೋಗಿ ಅವಳ ಮಡಿಲಲ್ಲಿ ಕೂತ ಹಾಗೆ ಅಲ್ಲೇ ಹೋಗಿಬಿಟ್ಟಿದೆ...ಅವಳು ಸ್ಟ್ರೈಕರ ಮುಟ್ಟಿದ್ರೆ ಸಾಕು...ಕ್ವೀನ್...ಅವಳ ಜೇಬಿನಲ್ಲಿ!

**ಶಾಂತೂ -** (ನಗುತ್ತ) ನೀವಿಬ್ರೂ...ಜಾದೂ ಮಂತ್ರ ಮಾಡಿದ್ರೂ...ಕ್ವೀನ್ ಮಾತ್ರ ನನವಳೇ...ನೋಡಿ...ಒಂದೇ ಕ್ಷಣ...(ಸ್ಟ್ರೈಕರಿನ ಸದ್ದು...ಕ್ವೀನ್ ತನಗೆ ದೊರಕಿದಕ್ಕೆ ಶಾಂತೂ ಚಪ್ಪಾಳೆ ತಟ್ಟಿ ನಗುತ್ತಾಳೆ.) ಅಕ್ಕಾ...ಈ ಆಟದಲ್ಲಿ ನಮ್ಮ ಮನೆಯಲ್ಲಿ ಎಲ್ಲರನ್ನೂ ಸೋಲಿಸುತ್ತಿದ್ದೆ. ಆದ್ರೆ...ನನಗೆ ನಿಮ್ಮಂತೆ ಚದುರಂಗ ಆಡೋದಕ್ಕೆ ಬರೋದಿಲ್ಲ...

**ಶಕೂ –** (ಅವಸರದಲ್ಲಿ) ಒಳಗೆ ಮಾವಯ್ಯ ಜೋರಾಗಿ ಮಾತಾಡಿದಂತೆ ಕೇಳಿಸೋದಿಲ್ವೆ? ಸುಶೀಲಕ್ಕಾ...ನನಗೆ ಅತ್ತೆಯವರನ್ನು ಕಂಡಾಗಲೆಲ್ಲ...ಒಂದೇ ಯೋಚನೆ ಬರ್ತದೆ...ಈ ಅತ್ತೆಗೆ ಸಿಟ್ಟೇಕೆ ಬರೋದಿಲ್ಲ? ಏಳಲಿಕ್ಕಾಗದಿದ್ರೂ... ಮತ್ತೂ ಮಾಡುತ್ತಾರಲ್ಲ? ಶಾಂತೂಗೆ ಇದೇ ಯೋಚನೆ ಇದ್ದಂತೆ ಕಾಣುತ್ತದೆ..

**ಸುಶೀಲಾ -** (ಬೇಸರದ ಧನಿಯಲ್ಲಿ) ಇದರಲ್ಲಿ ತಲೆ ಹಾಕಿ ತಲೆ ಬಿಸಿಯಾಗುತ್ತದೇ ವಿನಹ...ಇದಕ್ಕೆ ಪರಿಹಾರವಿಲ್ಲ. ನಾನು ಈ ಮನೆಗೆ ಸೊಸೆಯಾಗಿ ಬಂದು ಎರಡು ಮಕ್ಕಳ ತಾಯಿಯಾದೆ. ಆದ್ರೆ ಒಂದು ದಿನ ಮಾವಯ್ಯಗೆ ಒಂದೇ ಒಂದು ಲೋಟ ನೀರು ಕೊಟ್ಟಿಲ್ಲ! ನನಗೆ ಅವರ ಧ್ವನಿ...ಅವರನ್ನ ಕಂಡ್ರೆ... ಒಂದು ತರಹದ ಭಯ.

**ಶಾಂತೂ -** ಸುಶೀಲಕ್ಕಾ...ನೀವು ತಪ್ಪಿದ್ರೂ ಇಲ್ಲೇ...ಮಾವಯ್ಯ ಅಂದ್ರೆ ಹುಲಿಯೋ? ನೀವಾಗಿ ನಿಂತು ಅವರ ಕೆಲಸ ಮಾಡಬೇಕು...ಅಂದ್ರೆ...ಒಂದೆರಡು ದಿನಗಳಲ್ಲಿ ನಿಮ್ಮೊಡನೆಯೂ ನಗಬಹುದಲ್ಲ!

**ಶಕೂ -** ನಗಬೇಡು ಶಾಂತಾ... ಒಂದು ಸಲವಾದರೂ ನಮ್ಮ ಹೆಸರು ಕರೆದಿದ್ರೆ... ಸಾಕಾಗಿತ್ತು...ಒಂದು ದಿನ ನಾನೂ...ನಿನ್ನಂತೆ ಉತ್ಸಾಹದಲ್ಲಿ...ಈ ಮನೆಗೆ ಬಂದ ಹೊಸತರಲ್ಲಿ...ಮಾವಯ್ಯಗೆ ಬೆಳಿಗ್ಗಿನ ಕಾಫಿ ತಯಾರಿಸಿ...ಅವರಿಂದ ಶಾಭಾಸ್ ಎನಿಸಿಕೊಳ್ಳಲು ಅವರ ಕೋಣೆಯಲ್ಲಿ ಕಾಲಿಟ್ಟೆ...

**ಶಾಂತೂ-** [ತೀರ ಸೋತ ಧನಿಯಲ್ಲಿ] ಅವರನು ಕಂಡೇ ಹೆದರಿ ಹಿಂತಿರುಗಿ ಬಂದಿರಬೇಕು...

**ಸುಶೀಲಾ-** ಊಹೂಂ...ಹಾಗಾಗಲಿಲ್ಲ...ನಾನು ಕೋಣೆಯೊಳಕ್ಕೆ ಕಾಲಿಟ್ಟ ಕ್ಷಣ ಒಂದು ಬಾರಿ ಅವರ ಕಣ್ಣು ನೋಡಿಯೇ ಹೆದರಿ ನಡುಗಿದೆ. ಅದೇ ಕ್ಷಣ ಮಾತು ಬಂತು...ಯಾಕೆ...ಅವಳು ಸತ್ತಿದ್ದಾಳೆಯೇ?...ನೋಡು...ಶಕೂ...ಮುಂದಿಟ್ಟ ಕಾಲು ಹಿಂದಕ್ಕಿಟ್ಟು ಒಳಕ್ಕೆ ಓಡಿ ಬಿಟ್ಟೆ...ಅತ್ತೆ ಕಾಫಿ ಲೋಟ ತಕ್ಕೊಂಡು ಹೋದವರು...ಒಂದು ನಿಮಿಷಕ್ಕೇ ಅತ್ತೆ ಚೀರಿದ್ದು ಕೇಳಿ ಓಡಿ ಬಂದು ಕಿಟಕಿಯಲ್ಲಿ ನೋಡಿದೆ...

**ಶಾಂತೂ-** [ಗಾಬರಿಯಲ್ಲಿ] ಸುಶೀಲಕ್ಕ... ಏನಾಗಿತ್ತು?

**ಸುಶೀಲಾ-** [ಬಿಕ್ಕಳಿಸುತ್ತ] ಬಿಸಿ ಬಿಸಿ ಹೊಗೆಯಾಡುವ ಕಾಫಿ ಅತ್ತೆಯ ಮುಖದ ಮೇಲೆ ಚೆಲ್ಲಿತು! ಅತ್ತೆ ಥರಥರ ನಡುಗುತ್ತಿದ್ದರು...ಆ ದಿನದಿಂದ ನಾವೆಂದೂ... ಅಲ್ಲಿಗೆ ಹೋಗುವ ಮನಸು ಮಾಡಲಿಲ್ಲ. ಹೃದಯವಿಲ್ಲದ ಮಾವಯ್ಯನ ಬಗ್ಗೆ ನನಗೆ ಆಸಕ್ತಿಯೂ ಇಲ್ಲ.

**ಶಾಂತೂ-** ಎರಡು ದಿನಗಳಿಂದ ನಾನೂ ಅದನ್ನೇ ಯೋಚಿಸುತ್ತಿದ್ದೇನೆ. ನಮ್ಮ ಸೈಕಾಲಜಿಯಲ್ಲಿ...ಪ್ರತಿಯೊಬ್ಬ ಮನುಷ್ಯನ ಮನಸ್ಸಿಗೂ ಒಂದೊಂದು ಕಥೆ ಇದೆ...ಎಂದು ಓದಿದ್ದೇನೆ. ಒಂದೇ ಬಾರಿಗೆ ಮಾವಯ್ಯಗೆ ಹೃದಯವಿಲ್ಲ ಎಂದು ಹೇಳಲು ಬಾರದು...ಅವರಿಗೆ ನಮ್ಮಂಥ ಹೆಣ್ಣು ಮಕ್ಕಳು ಇದಿದ್ದರೆ...ಅವರಿಷ್ಟು ಒರಟಾಗಿ ಇರಲು ಸಾಧ್ಯವೇ ಇರಲಿಲ್ಲ...ಅವರ ಬೈಗಳಿಗೆ ಹೆದರಿ ದೂರವಿರಬಾರದು...

**ಶಕೂ-** [ಗಾಬರಿಯಲ್ಲಿ] ಶಾಂತೂ ನೀನು ಮಾತ್ರ ಆ ಪ್ರಯೋಗಕ್ಕೆ ಸಿದ್ಧಳಾಗಬೇಡ...ಗಿಡವಾಗಿ ಬಗ್ಗದ್ದು ಇದದ್ದು ಮರವಾಗಿ ಬಗ್ಗೀತೇ? ಏನಾದರೂ ಆಗಲಿ... ಹಾಗೆ... ಇನ್ನು ಮಾವಯ್ಯ ಬದಲಾಗೋದು... ಒಂದೇ ದಿನ!

**ಶಾಂತೂ-** ಆಟ ಬಿಟ್ಟು - ನಾವು ಮಾತಿಗೇ ನಿಂತ ಹಾಗೆ ಕಾಣ್ತದೆ.. ಅಕ್ಕಾ.... ಈ ಆಟದಲ್ಲಿ ನಾನು ಗೆದ್ದೆ... ಈಗ ಇನ್ನೊಂದು ಆಟ ಆಡೋಣವೇ?

[ ಎಲ್ಲರೂ ನಗುತ್ತಾರೆ- ಮತ್ತೆ ಕಾಯಿಗಳ ಸದ್ದು... ಸ್ಟ್ರೈಕರಿನ ಓಡಾಟ ಪ್ರಾರಂಭವಾಗುತ್ತದೆ.]

## ದೃಶ್ಯ ೪

[ಪರಮೇಶ್ವರಯ್ಯನ ಕೋಣೆ ಸೂಜಿ ಬಿದ್ದರೂ ಸದ್ದು ಕೇಳುವಷ್ಟು ನಿಶ್ಶಬ್ದವಾಗಿದೆ...ಭಗವದ್ಗೀತೆಯ ಶ್ಲೋಕ ಕಿವಿಗೆ ಕೇಳಿಸುತ್ತದೆ. ಬಾಗಿಲು ತೆರೆದ ಸದ್ದು]

**ಪರಮೇಶ್ವರಯ್ಯ-** ಯಾರು? ಯಾರದು?

**ಶಾಂತೂ-** [ಹೆದರಿದ ಧ್ವನಿ] ನಾನು ಬೇರೆ ಯಾರೂ, ಅಲ್ಲ... ಮಾವಯ್ಯ ನಾನು. ನೀವು ಮಲಗಿಕೊಳ್ಳಿ... ಏಳಬೇಡಿ!

**ಪರಮೇಶ್ವರಯ್ಯ-** [ರೋಷಗೊಂಡ ಧ್ವನಿಯಲ್ಲಿ] ಇಲ್ಲಿಗೆ ಬರೋದಕ್ಕೆ ಯಾರು ಹೇಳಿದ್ದು? ಯಾಕೆ ಬಂದದ್ದು?

**ಶಾಂತೂ-** ಬಿಸಿ ನೀರು....

**ಪರಮೇಶ್ವರಯ್ಯ-** ನಾನೂ ಅದನ್ನೇ ಕೇಳಿದ್ದು... ಇಲ್ಲಿಗೆ ಬಂದದು ಯಾಕೆ?

**ಶಾಂತೂ-** [ತಡೆತಡೆದು] ಮುಖ ತೊಳೆಯಲು ಬಿಸಿನೀರು ಬೇಕಲ್ಲ?

**ಪರಮೇಶ್ವರಯ್ಯ-** (ಸಿಟ್ಟುಗೊಂಡು ಕಿರುಚಿಕೊಳ್ಳುತ್ತ) ಏನೇ ಎಲ್ಲಿ ಸತ್ತಿದ್ದಿ? ಕಿವೀನೂ ಕಿವುಡಾಗಿದೆಯೇ?

[ಸ್ವಲ್ಪ ಸಮಯ ನಿಶ್ಶಬ್ದ]

**ಪರಮೇಶ್ವರಯ್ಯ-** ನೀನು ಯಾಕೆ ನಿಂತದು? ಇಲ್ಲಿಂದ ಹೋಗಿ ಬಿಡು... ಅವಳನ್ನೇ ಕಳುಹಿಸು... ನನಗೆ ಬಿಸಿನೀರು ಈಗ ಬೇಡ... ಅವಳು ಬರಲಿ...ನಂತರ ಬಿಸಿನೀರು...

**ಶಾಂತೂ-** (ದುಃಖ ತುಂಬಿದ ಧನಿಯಲ್ಲಿ) ಅತ್ತೆ....

**ಪರಮೇಶ್ವರಯ್ಯ-** (ಕಿರುಚಿಕೊಳ್ಳುತ್ತ) ನಿನ್ನ ಅತ್ತೆ.... ಕಿವಿ ಕೇಳದ ಅವಳನ್ನೇ ಇಲ್ಲಿ ಕಳುಹಿಸು...,

**ಶಾಂತೂ-** (ಮೆಲ್ಲನೆ) ಮಾವಯ್ಯ.... ಅತ್ತೆ ಇಲ್ಲಿಗೆ ಬರುವಂತಿಲ್ಲ!

**ಪರಮೇಶ್ವರಯ್ಯ-** (ತಾಳ್ಮೆ ಕಳೆದು ಕೊಂಡವರಂತೆ) ಯಾಕೆ ಕಾಲು ಮುರಿದು ಹೋಗಿದೆಯೇ ಅವಳದು? ನೀನು ನಿನ್ನ ಪಾಡಿಗೆ ಇಲ್ಲಿಂದ ಹೊರಟುಹೋಗು!

**ಶಾಂತೂ-** (ತೀರ ಸೋತ ಧನಿಯಲ್ಲಿ) ಅತ್ತೆ ಬಚ್ಚಲಿನಿಂದ ಬರುವಾಗ.... ಕಾಲು ಜಾರಿಬಿದ್ದು... ಕಾಲು ಉಳುಕಿ... ಬಾತುಕೊಂಡಿದೆ. ನರಳುತ್ತ ಮಲಗಿದಲ್ಲೇ ನಿಮಗೆ ಬಿಸಿನೀರು ಕೊಡಲು ಹೇಳಿದ್ರು. ಅದಕ್ಕೇ ನಾನು ತಂದದ್ದು:

**ಪರಮೇಶ್ವರಯ್ಯ-** (ಬೆಚ್ಚಿ ಬಿದ್ದವರಂತೆ) ಏನು? ಏನೆಂದೆ? ಅವಳಿಗೆ ಏನಾಗಿದೆ?

**ಶಾಂತೂ-** ಕಾಲು ಜಾರಿ ಉಳುಕಿ ಹೋಗಿ ಬಾತುಕೊಂಡಿದೆ. ನರಳುತ್ತ ಮಲಗಿದಲ್ಲೇ ಇದ್ದಾರೆ.

[ಪರಮೇಶ್ವರಯ್ಯನವರು ನಿಧಿದಾದ ನಿಟ್ಟುಸಿರಿಡುತ್ತ... ರಾಮ ರಾಮಾ... ಇದೇನು ನಾನು ಕೇಳುತ್ತಿರೋದು ಎಂದು ಪಿಸುಗುಟ್ಟಿ...]

**ಪರಮೇಶ್ವರಯ್ಯ-** ರಾಮು–ಗೋಪೂಗೆ ಗೊತ್ತಿದೆಯೇ?

**ಶಾಂತೂ-** ಅವರೇ ಡಾಕ್ಟರನ್ನ ಕರೆತಂದು ತೋರಿಸಿದ್ದು. ಮಲಗಿದಲ್ಲಿ ಏಳೆಂಟು ದಿನಗಳು ಇರಬೇಕಂತೆ. ಅವರಿಗೆ ಒಂದು ಹೆಜ್ಜೆ ಇಡಲು ಸಾಧ್ಯವಿಲ್ಲ.

**ಪರಮೇಶ್ವರಯ್ಯ-** (ಸೋತ ಧನಿಯಲ್ಲಿ) ಅವಳಿಗೆ ಯಾವಾಗ್ಲೂ ಗಡಿಬಿಡಿ ಕಾಲು ನೋವು ಮಾಡಿಕೊಂಡು ಮೂಲೆ ಸೇರಿದ್ಲು, ಛೆ ಛೆ ಇದೇನಾಯಿತು? ಬಿಸಿನೀರಿಟ್ಟು ನೀನು ಹೋಗು (ನೀರಿಟ್ಟ ಸದ್ದು)

**ಶಾಂತೂ-** ಕಾಫಿ ತರಲೇ?

**ಪರಮೇಶ್ವರಯ್ಯ-** (ಅಸಹನೆಯಿಂದ) ಈಗೇನೂ ಬೇಡ. ನನ್ನಷ್ಟಕ್ಕೆ ನನಗಿರಬೇಕಾಗಿದೆ. ನೀನು ಹೋಗೆಂದಿಲ್ಲವೇ?

[ಪರಮೇಶ್ವರಯ್ಯ ಮುಖ ತೊಳೆದು ಗುಳುಗುಳು ಮಾಡಿದ ಸದ್ದು... ಜೊತೆಗೆ ಮಂತ್ರ ಪಠಣ...]

**ಶಾಂತೂ-** ಟವೆಲ್ಲು ತಕ್ಕೊಳ್ಳಿ. ನೀವು ಏಳಬಾರದಂತೆ. ನೋಡಿಕೊಳ್ಳಲು ಅತ್ತೆ ಮತ್ತೆ ಕಳುಹಿಸಿದ್ರು. ಕಾಫೀನೂ ಕೊಟ್ಟು ಬಾ ಎಂದು

**ಪರಮೇಶ್ವರಯ್ಯ-** ಬೇಸರದಲ್ಲಿ ಟವೆಲ್ಲು ನಾನೇ ತಕ್ಕೊಳ್ಳುತ್ತೇನೆ ಕಾಫಿ ಇಟ್ಟು ಹೋಗು ಮತೆ ಮತ್ತೆ ಇಲ್ಲಿಗೆ ಬಂದು ತಲೆ ಹರಟೆ ಬೇಡ.

[ಶಾಂತೂ ಹೂಂಗುಟ್ಟಿ ಇಲ್ಲಿಂದ ಹೋಗುತ್ತಾಳೆ]

**ಪರಮೇಶ್ವರಯ್ಯ-** (ತಮ್ಮಲೇ ಅಂದುಕೊಳ್ಳುತ್ತಾರೆ) ಇವಳಿಗೆ ಏನಾಯಿತು? ಈ ಪ್ರಾಯದಲ್ಲಿ ಕಾಲಿನ ಕೀಲು ತಪ್ಪಿದರೆ ಅದು ಗುಣವಾಗೋದು ಕಷ್ಟ! ಇವಳು ಹಾಸಿಗೆ ಹಿಡಿದರೆ ಇಲ್ಲಿ ಮಲಗಿದ ನನ್ನ ಗತಿ? ಥೂ ಕಾಫಿಗೆ ಸಕ್ಕರೆ ಹಾಕಿಯೇ ಇಲ್ಲ. ಅವಳು ತಂದ್ರೆ ಎಲ್ಲ ಬರೋಬರಿ. ಹೆಚ್ಚಿಲ್ಲ ಕಡಿಮೆ ಇಲ್ಲ! ಈ ಬಣ್ಣದ ಚಿಟ್ಟೆಗಳಿಗೆ ಏನು ಮಾಡಲು ಬರುತ್ತದೆ? ಬರಿಯ ಮಾತು ಹಟ ಸಿನೇಮಾ. ಯಾರಲ್ಲಿ? ಸಕ್ಕರೆ ಬೇಕಿತ್ತು.

**ಶಾಂತಾ-** (ಓಡಿ ಬಂದವಳಂತೆ) ಸಕ್ಕರೆ ಕಡಿಮೆ ಎಂದಿರಾ? ಸಾಕೇ?

**ಪರಮೇಶ್ವರಯ್ಯ-** ಸಾಕು ಸಾಕು ಅವಳು ಹೇಗಿದ್ದಾಳೆ?

**ಶಾಂತೂ-** (ನೊಂದುಕೊಂಡವಳಂತೆ) ಏನೂ ಗುಣವಿಲ್ಲ. ಕಾಲು ತೀರ ಬಾತುಕೊಂಡಿದೆ. ನರಳುತ್ತಿದ್ದಾರೆ. ನಿಮ್ಮ ಬೆನ್ನಿಗೆ ಎಣ್ಣೆ ಹಾಕಿ ತಿಕ್ಕಬೇಕಿತ್ತು ಎಂದ್ರು ಅತ್ತೆ ಅದಕ್ಕೆ...

**ಪರಮೇಶ್ವರಯ್ಯ-** ಬೇಡ ಯಾವುದೂ ಬೇಡ. ನೀನು ಇಲ್ಲಿಂದ ಹೋಗು ನನ್ನಷ್ಟಕ್ಕೆ ನನಗಿರಲು ಬಿಟ್ಟು ಬಿಡು. ಕಾಫಿ ತಣ್ಣಗೆ ಹಿಮವಾಗಿದೆ. ಒಂದು ದಿನಕ್ಕೆ ಈ ಅವಸ್ಥೆ ಪಡಬೇಕಾಗಿದೆ ನನ್ನ ಕರ್ಮ!

(ಹಿನ್ನೆಲೆ ಸಂಗೀತ ಲಘುವಾಗಿ ಗಾಳಿಯಲ್ಲಿ ಹರಡಿಕೊಳ್ಳುತ್ತ ಒಳಗೆ ಅಡಿಗೆ ಕೋಣೆಯಲ್ಲಿ)

**ಸುಶೀಲಾ -** ಶಾಂತೂ ಏನಿದು ನಿನ್ನ ಹುಚ್ಚು? ನಿನ್ನ ಶ್ರಮ ಏನೂ ಪ್ರಯೋಜನವಿಲ್ಲದ್ದು ಎಂದು ನಾನೂ-ಶಕೂ ಎಷ್ಟು ತಿಳಿಸಿ ಹೇಳಿಲ್ಲ? ಮಾವಯ್ಯನ ಒಂದೊಂದು ಮಾತೂ ಎದೆಗೆ ತಾಕುವಂತಿದೆ. ನೀನು ಮೊನ್ನೆ ಕಣ್ಣೀರು ಸುರಿಸಿದ್ದು ಕಂಡಾಗಲೇ ಹೇಳಬೇಕೆಂದಿದ್ದೆ. ಈ ಕೆಲಸದಲ್ಲಿ ಕೈ ಹಾಕಬೇಡ. ಅವರ ಸ್ವಭಾವ ಬದಲಾಗೋದು ಸಾಧ್ಯವಿಲ್ಲ. ಉಪವಾಸ ಇದ್ದರೂ ಅವರು ನಮ್ಮನ್ನ ಅಲ್ಲಿಗೆ ಬರಲು ಬಿಡರು.

**ಶಾಂತೂ —** ನೀನು ಸುಮ್ಮನಿರಕ್ಕಾ. ನನಗಿನ್ನು ಎರಡು ದಿನಗಳ ಅವಧಿ ಕೊಡು. ಅವರ ಸಿಟ್ಟು ಬೇಸರದ ಮಾತಿಗೆ ನಾನೇನೂ ನೊಂದುಕೊಂಡಿಲ್ಲ... ಹಿರಿಯ ಜೀವ ಏನಾದರೂ ಆಡಿದ್ರೆ ನಾನೇಕೆ ಮುದುಡಿಕೊಳ್ಳಲಿ? ನನ್ನ ಅಪ್ಪಯ್ಯ ಇದ್ದ ಹಾಗೆ. ಕಾಯಿಲೆಯಲ್ಲಿ ಅಶಕ್ತಗೊಂಡ ದೇಹ–ಮನಸ್ಸು ಎರಡೂ ರೊಚ್ಚಿಗೇಳುತ್ತದೆ. ನಾವು ಸಹಿಸಲೇ ಬೇಕು. ಆದರೂ ಈಗ ಎರಡು ದಿನಗಳಲ್ಲಿ ಮಾವಯ್ಯ ಸ್ವಲ್ಪ ಮೆತ್ತಗಾದಂತಿದೆ!

**ಸುಶೀಲಾ -** ಹಾಗಲ್ಲ ಶಾಂತೂ...ಅವರನ್ನ ಕಂಡಾಗ ನಿನಗೆ ಭಯ?

**ಶಾಂತೂ -** ಅಕ್ಕಾ ಒಂದೆರಡು ದಿನ ನಾನೂ ಜೀವ ಕೈಯಲ್ಲಿ ಹಿಡಿದೇ ಕೋಣೆಯಲ್ಲಿ ಕಾಲಿರಿಸಿದ್ದೆ. ಆ ಧನಿಗೆ ನನ್ನೆದೆ ಕಂಪಿಸಿತ್ತು. ಆದ್ರೆ ನನ ಹಟ ಮಾವಯ್ಯನ ಕೋಣೆಯಲ್ಲಿ ನನ್ನ ಹೆಜ್ಜೆ ಓಡಾಡಿಸುವಂತೆ ಮಾಡಿದೆ ಮಾವಯ್ಯ ಕರೆದಂತಾಗಿಲ್ವೆ?

[ಹಿನ್ನೆಲೆಯ ಸಂಗೀತ ಹಗುರಾಗಿ ಕೇಳುತ್ತದೆ]

**ಶಾಂತೂ -** ನನ್ನ ಕರೆದಿರಾ ಮಾವಯ್ಯ?

**ಪರಮೇಶ್ವರಯ್ಯ -** (ತಡೆಯಲಾರದೆ) ಯಾಕೆ ಗೋಪೂ ರಾಮು ಇನ್ನೂ ಆಫೀಸಿನಿಂದ ಬಂದಿಲ್ವೆ? ಮನೋಹರ?

**ಶಾಂತೂ -** ಇಲ್ಲ ಅವರೆಲ್ಲ ಬರೋದಕ್ಕೆ ಒಂದೆರಡು ಗಂಟೆಗಳಾದರೂ ಬೇಕು... ಏನಾದ್ರೂ ಬೇಕಿತ್ತೇ?

**ಪರಮೇಶ್ವರಯ್ಯ -** ಮತ್ತೆ ನೀನೇ ಬಂದೆಯಾ? ತಲೆ ಸಿಡಿದು ಬೀಳುವಷ್ಟು ನೋವು...ಅವಳಿದ್ರೆ...ಒತ್ತುತ್ತಿದ್ದಳು.

**ಶಾಂತೂ—** [ಧೈರ್ಯ ಮಾಡಿ] ಮಾವಯ್ಯ ನಾನು ಒತ್ತಲೆ? ನಮ್ಮ ಮನೆಯಲ್ಲಿ ಅಪ್ಪಯ್ಯಗೆ ತಲೆಸಿಡಿತವಿದ್ದಾಗ...ನಾನೇ ಒತ್ತಬೇಕು...ನನ್ನ ಕೈಗುಣ ತುಂಬ ಒಳ್ಳೆಯದಂತೆ... [ನಗುತ್ತಾಳೆ]

**ಪರಮೇಶ್ವರಯ್ಯ—** [ಅಸಹಾಯಕತೆಯಲ್ಲಿ] ನಿನ್ನೆ ರಾತ್ರಿಯಿಂದಲೂ ನನ್ನ ಜೀವ ತೆಗೆಯುವಷ್ಟು ತಲೆಸಿಡಿತ! ಅವಳಿಗೆ ಎಲ್ಲ ನರ ಹಿಡಿಯಬೇಕೆಂದು ಗೊತ್ತು ...ಸ್ವಲ್ಪ ಒತ್ತು. ಈ ನೋವಿನಿಂದ ಪಾರಾಗಬೇಕಾಗಿದೆ...ನನಗೆ...

[ಶಾಂತೂ ಮಾವಯ್ಯನ ತಲೆ ಒತ್ತುತ್ತಾಳೆ......]

**ಪರಮೇಶ್ವರಯ್ಯ—** ಅವಳಿಗೆ ಎಲ್ಲಿ ಯಾವ ನರ ಹಿಡಿಯಬೇಕೆಂದು ಗೊತ್ತು ಹಾ...ಸ್ವಲ್ಪ ಅಲ್ಲೇ ಒತ್ತಿ ಬಿಡು. ನಿನ ಕೈಗೂ ಒತ್ತುವ ಕಲೆ ಗೊತ್ತಿದೆ ಎಂದ ಹಾಗಾಯಿತು. ಅಬ್ಬಾ ಎಂಥ ನೋವಿತ್ತು. ಈಗಷ್ಟೋ ಗುಣ... ನಿನ್ನ ಹೆಸರು..?

**ಶಾಂತೂ**— [ನಗುತ್ತ] ನನ್ನ ಹೆಸರೂ ಮರೆತುಬಿಟ್ಟಿರಾ? ಶಾಂತೂ...

**ಪರಮೇಶ್ವರಯ್ಯ**— ಈ ಪ್ರಾಯದಲ್ಲಿ ನನಗೆ ಯಾರ ಹೆಸರೂ ನೆನಪಿಲ್ಲ... ರಾಮೂನ್ನ...ಗೋಪೂ ಎಂದು ಬೈದದ್ದು ಎಷ್ಟೋ ಬಾರಿ... (ನಗುತ್ತ) ಓ... ಎಂಥ ಹಿತವಾದ ಗಾಳಿ! ಸಕಿ ಎಂದು ದಿನವೂ ಗಂಟಲು ಒಡೆಯುವಂತೆ ಕೂಗಿಕೊಂಡರೂ...ಗಾಳಿ ಗಂಧವಿರಲಿಲ್ಲ... ಎಲ್ಲಿಂದ ಬಂತು ಈ ಹಿತವಾದ ಗಾಳಿ?

**ಶಾಂತೂ**— ಕಿಟಕಿಗಳನ್ನು ಮುಚ್ಚಿ ಎಷ್ಟು ಕಾಲವಾಗಿತ್ತೊ? ಧೂಳು ಮುಚ್ಚಿ ಗಾಳಿ ಬೆಳಕು ಇಲ್ಲದಂತಾಗಿತ್ತು. ಕಿಟಕಿ ತೆರೆದಿಟ್ಟೆ. ಗಾಳಿ ತೂರಿ ಬಂತು... ನೀವುಸ್ವಲ್ಪ ಮಾವಯ್ಯಾ ನನ ಕೈ ಹಿಡಿದು ಈಸಿಛೇರಿನಲ್ಲಿ ಒಂದು ನಿಮಿಷ ಕೂತ್ರೆ.. ಬೆಡ್‌ಶೀಟ್ ಬದಲಾಯಿಸಿ ಬಿಡ್ತೇನೆ. ತುಂಬ ಕೊಳೆಯಾಗಿದೆ...

**ಪರಮೇಶ್ವರಯ್ಯ**— ನಗುತ್ತ) ನಿನ್ನ ಮಾತು ಕೇಳಬೇಕು ಎಂತ ಕಾಣ್ತದೆ ಶಾಂತೂ. ಸರಿ ಬಾಮ್ಮಾ. ನಾನು ಏಳ್ತೇನೆ ಅಬಾ ಎಂಥ ಅಶಕ್ತಿ? ಕಾಲು ಒಂದು ಹೆಜ್ಜೆ ಇಡಲು ಹಿಂದುಮುಂದು ನೋಡ್ತದಲ್ಲ? ಏನು ಬೆಳಕು? ಈ ಗಾಳಿ? ನನ ಹಾಸಿಗೆಗೆ ಹೊಸ ಬೆಡ್‌ಶೀಟ್?

**ಶಾಂತೂ** - ಇದರಲ್ಲಿಯ ಡಿಝಾಯಿನ್ ನಾನೇ ಮಾಡಿದ್ದು... ನಿಮ್ಮ ಹಾಸಿಗೆಗೆ ಹಾಕಬೇಕೆಂದು ಬಹಳ ದಿನಗಳ ಆಸೆ ಇತ್ತು... ನನ ಕೈ ಹಿಡಿದು ಮೆಲ್ಲಕೆ ಬನ್ನಿ... ಇದಿಷ್ಟು ಮದ್ದು ಕುಡಿದು ಬಿಟ್ರೆ... ನೀವು ಇನ್ನೆರಡು ದಿನಗಳಲ್ಲಿ ಸಂಪೂರ್ಣ ಗುಣಹೊಂದುತ್ತೀರಿ ಮಾವಯ್ಯ...

**ಪರಮೇಶ್ವರಯ್ಯ** - (ನಗುತ್ತ) ಕೊಟ್ಟು ಬಿಡಮ್ಮ..., ನಿನ್ನ ಕೈಯಲ್ಲಿ ಮದ್ದು ಕುಡಿದು ಹುಶಾರಾಗಿ ಈ ಹಾಸಿಗೆ ಬಿಟ್ಟೆದ್ದರೆ ಸಾಕಾಗಿದೆ... ಅವಳು ಹೇಗಿದ್ದಾಳೊ? ಮೊದಲೇ ಎಲುಬು-ಚರ್ಮ.. ಈಗ ಗುಬ್ಬಚ್ಚಿಯಾಗಿರಬೇಕು....

**ಶಾಂತೂ** - (ಅನುಮಾನದ ಧ್ವನಿಯಲ್ಲಿ) ಮಾವಯ್ಯ... ಒಂದು ಮಾತು ಕೇಳಲೇ?

**ಪರಮೇಶ್ವರಯ್ಯ** - ಕೇಳು ಮಗೂ... ಯಾವ ಮಾತು?

**ಶಾಂತೂ** - ನೀವು... ಅತ್ತೇನ ಪ್ರೀತಿ ಮಾಡಲೇ ಇಲ್ಲೆ?

**ಪರಮೇಶ್ವರಯ್ಯ** - (ಗಟ್ಟಿಯಾಗಿ ನಗುತ್ತ) ನನ ಬದುಕಿನಲ್ಲಿ ಇದ್ದದ್ದು ಅವಳೊಬ್ಬಳೇ... ಶಾಂತೂ.. ಚಿಕ್ಕಂದಿಂದ ತಾಯನ್ನ ಕಳೆದುಕೊಂಡು— ಮಲತಾಯಿಯ ಕಷ್ಟಕ್ಕೆ ತಡೆಯಲಾರದೆ ಮನೆಬಿಟ್ಟು ಓಡಿಹೋಗಿ... ಜಗತ್ತಿನಲ್ಲಿ ಎಲ್ಲರಿಂದಲೂ ದೂಡಲ್ಪಟ್ಟಾಗ—ನಿನ್ನತ್ತೆಯ ಕೈ ಹಿಡಿದದ್ದು... ಆನಂತರ ತಂದೆಯ ಆಸ್ತಿ ನನ ಕೈಸೇರಿ ಹಣದ ಕೊರತೆ ಇಲ್ಲವಾಗಿದ್ದರೂ ಇತರಿಂದಲೂ ಪ್ರೀತಿಗೆ ವಂಚಿತನಾಗಿ ಎಲ್ಲರ ಸಿಟ್ಟನ್ನೂ ಅವಳ ಮೇಲೆ ತೋರಿಸಿದೆ. ಆದರೆ ಅವಳಿಲ್ಲದೆ ನನಗೆ ಒಂದು ದಿನವೂ ಇರಲೂ ಬಾರದಾಗಿತ್ತು, ನಾನು ಪ್ರೀತಿ ಕಂಡದ್ದು ಅವಳೆದೆಯಲ್ಲಿ. ನಿನ್ನಂಥ ಮಗಳು ನನಗಿದ್ದರೆ ಇಷ್ಟು ಒರಟಾಗಿ ಇರುತ್ತಿರಲಿಲ್ಲವೇನೋ? ನನ್ನಲ್ಲಿದ್ದ ಅತೃಪ್ತಿ ನಿನಿಂದ ದೂರವಾಯಿತು.

**ಶಾಂತೂ** - ಮಲಗಿದಲ್ಲೇ ನಿಮಗೂ ಬೇಸರ ಬಂದಿರಬೇಕು. ನನಪ್ಪಗೆ ನಾನು ಭಾರತ ಓದಿದ್ರೆ ತುಂಬ ಪ್ರೀತಿ. ನಿಮಗೂ ಭಾರತ ಓದಲೇ?

**ಪರಮೇಶ್ವರಯ್ಯ**— ನನಗೂ ಒಂದಿಷ್ಟು ಓದಿ ಹೇಳು. ಒಂದು ಮಾತು ಮಗು. ನಿನ್ನತ್ತೆಯನ್ನ ಮೆಲ್ಲನೆ ಕೈಹಿಡಿದು ಇಲ್ಲಿ ಕರೆತಂದು ಬಿಡು. ಈಸಿಛೇರಿನಲ್ಲಿ ಕೂತು ಅವಳೂ ಕೇಳಬಹುದಲ್ಲ?

**ಶಾಂತೂ**— (ನಗುತ್ತ) ಪ್ರಯತ್ನಮಾಡಿ ಅತ್ತೇನ್ನ ಇಲ್ಲಿಗೆ ಕರೆತಂದು ಬಿಡ್ತೇನೆ ಮಾವಯ್ಯ.ಈಗ ಬಂದೆ.

[ ನಿಧಾನವಾಗಿ ವಾದ್ಯ ಸಂಗೀತ ಕೇಳುತ್ತದೆ ]

**ಶಾಂತೂ**— (ಗಡಿಬಿಡಿಯಲ್ಲಿ) ಅಕ್ಕಾ ನನ್ನ ಗುರಿ ಮುಟ್ಟಿದ್ದೇನೆ. ಈಗ ಕೊನೆಯ ಘಟ್ಟ! ಅದು ಆದ್ರೆ ನಾವೆಲ್ಲ ಗೆದ್ದಂತೆ.

[ ಎಲ್ಲರೂ ನಗುತ್ತಾರೆ ]

**ಸಾವಿತ್ರಮ್ಮ**— ಏನಮ್ಮಾ? ಏಳೆಂಟು ದಿನಗಳಿಂದ ನನ್ನ ಕೂರಿಸಿ ಗಿಣಿ ಸಾಕಿದಂತೆ ಸಾಕಿಬಿಟ್ಟೆ. ಆದ್ರೆ ಅವರಿಗೆಷ್ಟು ತೊಂದರೆ ಇದರಿಂದ? ನೀನು ಬೈಸಿಕೊಂಡು ಕಣ್ಣೀರು ಹಾಕಿದ್ದು ಕಂಡಾಗ ನನ್ನ ಹೊಟ್ಟೆಯಲ್ಲಿ ಎಂಥ ಕಸಿವಿಸಿಯಾಯಿತು ಗೊತ್ತೆ? ನನಗೆ ಅಲ್ಲಿಗೆ ಹೋಗಲೇಬೇಕು. ನನಗಿಲ್ಲಿ ಹಾಯಾಗಿ ಕೂತುಕೊಳ್ಳಲೂ ಆಗದು. ಅವರ...

**ಶಾಂತೂ**— ಅತ್ತೆ ಗಡಿಬಿಡಿ ಮಾಡಬೇಡಿ. ನಿಮ್ಮನ್ನ ಅಲ್ಲಿ ಕರೆದುಕೊಂಡು ಹೋಗಲೆಂದೇ ಬಂದಿದ್ದೇನೆ. ಏಳಿ ಆದ್ರೆ ಒಂದು ಮಾತು. ಕಾಲು ಕುಂಟಿಸುತ್ತ ಅಲ್ಲಿಗೆ ನೀವು ಬರಬೇಕು. ನಾನು ಗೆದ್ದದ್ದೂ ನಿಮ್ಮ ಕಾಲುನೋವಿನ ನೆಪದಿಂದ. ಅದನ್ನು ನೀವು ಉಳಿಸಬೇಕು. ಹಾಂ ಹಾಗೆ ಕಾಲು ಕುಂಟಿಸಿರಿ. ಸ್ವಲ್ಪ ನರಳುತ್ತ ಇರಬೇಕು ಮತ್ತೆ!

**ಸಾವಿತ್ರಮ್ಮ**- (ನಗುತ್ತ ) ನೀನು ಏನೇನು ಹೇಳ್ತೀಯೋ ಹಾಗೇ ಕೇಳಬೇಕಲ್ಲ ಮತ್ತೆ? ನನ್ನಮ್ಮನಾಗಿ ನೀನು ಹುಟ್ಟಿ ಬಂದಿದ್ದಿ! ಇಲ್ಲದಿದ್ರೆ ಹುಲಿಯಂಥ ಅವರನ್ನ !

**ಶಾಂತೂ**- ಇಂಥ ಹೊಗಳಿಕೆಯ ಮಾತು ಬೇಡತ್ತೆ. ಬನ್ನಿ ನನ್ನ ಹೆಗಲ ಮೇಲೆ ಒಂದು ಕೈ, ಇನ್ನೊಂದು ಕೈ ಸುಶೀಲಕ್ಕನ ಹೆಗಲಿಗೆ! ಹಾಗೆ ನರಳಬೇಕು...ಕುಂಟುವುದನ್ನು ಮರೆಯಬೇಡಿ...

**ಶಕೂ**- ಏನು ನಾಟಕ ಮಾಡಿಸುತ್ತೀಯಾ ಶಾಂತೂ? ಅತ್ತೆ ಆ ಕೋಣೆಯಲ್ಲಿ ಕಾಲಿಟ್ಟ ಕ್ಷಣ ಹೆದರಿ...ನಿಜ ಹೇಳಿ ಬಿಟ್ರೆ?

**ಶಾಂತೂ**- [ಗಾಬರಿ ಧನಿಯಲ್ಲಿ] ಅಕ್ಕನ ಮಾತು ನಿಜವೇ ಅತ್ತೇ?

**ಸಾವಿತ್ರಮ್ಮ**- ಇಲ್ಲ...ಶಾಂತೂ...ನೀನಿಷ್ಟು ಶ್ರಮ ವಹಿಸಿ ಮಾಡಿದ ಮಹಾ ಕೆಲಸ...ನಾನು ಹಾಳು ಮಾಡ್ತೇನೆಯೇ? ನಡೆ...ಹೋಗೋಣ..

[ ಪರಮೇಶ್ವರಯ್ಯನ ಕೋಣೆ ... ]

**ಪರಮೇಶ್ವರಯ್ಯ**- ಏನು? ಏನಿದು ಸಂಭ್ರಮ? ಆಚೆ-ಈಚೆ ಸೊಸೆಯಂದಿರ ಮೇಲೆ ಕೈಹಾಕಿ ಬರುತ್ತೀಯಲ್ಲ? ಮಲಗಿದಲ್ಲೇ ಆರೈಕೆ ಮಾಡಿಸಿಕೊಂಡು ಮತ್ತೆ ಯೌವನ ಬಂದ ಹಾಗೆ ಕಾಣ್ತದೆ... [ನಗುತ್ತ]...ಆದ್ರೆ...ನೀನಿನ್ನು ಕೊಬ್ಬಿ ಕೂತಿರೋದು ಬೇಡ! ನೀನಿಲ್ಲದಿದ್ರೂ ನಡೆಯುತ್ತದೆ ನನಗೆ! ಶಾಂತೂ ಏನು ಚುರುಕಿನ ಹುಡುಗಿ! ಪಾರಜದಂತೆ ಓಡಾಡಿ ಕೆಲಸ ಮಾಡುವ ಚಂದ ನೋಡಬೇಕು... ಇವಳ ಜೊತೆಯಲ್ಲಿ ಈಗೀಗ ಸುಶೀ...ಶಕೂ ನನ್ನ ನೋಡಿಕೊಳ್ಳುತ್ತಿದ್ದಾರೆ..ನನಗೆ ಯಾವುದಕ್ಕೂ ತೊಂದರೆ ಆಗಿಲ್ಲ...ಅಲ್ಲಿ ಕೂತು ಕೇಳು...ನಿನ್ನ ಸೊಸೆ..ಭಾರತ ಓದುತ್ತಾಳೆ...ಕೇಳು...ನಿನ್ನ ಕಾಲು ನೋವೂ ಮರೆತು ಹೋಗ್ತದೆ...ಮನಸ್ಸು ಹಗುರಾಗುತ್ತದೆ...ಈಗ ಓದ್ತೀಯಾ ಮಗೂ?

**ಶಾಂತೂ**- ಓದು ಎಂದರೆ ಈಗ ಸಿದ್ಧ! ಮೊದಲನೆಯ ಅಧ್ಯಾಯದಿಂದಲೇ ಪ್ರಾರಂಭಮಾಡುತ್ತೇನೆ..

( ಅಷ್ಟರಲ್ಲಿ ಹೊರಗಿನಿಂದ ಶಿವಣ್ಣ ಬರ್ತಾರೆ )

**ಶಿವಣ್ಣ** - (ಸಂತೋಷದಿಂದ) ಓಹೋ..ಹೋ ..ಇದೇನು? ನಾನು ಈ ಕಣ್ಣಿಂದ ನೋಡುತ್ತಿರೋದು ನಿಜ ಅಲ್ವೆ? ಅಥವಾ ಭ್ರಮೆಯೇ?

**ಪರಮೇಶ್ವರಯ್ಯ**- [ನಗುತ್ತ] ಬಾರಯ್ಯಾ... ಬಾ... ನೀನು ಕಣ್ಣಿಂದ ಈಗ ನೋಡುತ್ತಿರುವುದು ಭ್ರಮೆಯಲ್ಲ! ಇದು ಸತ್ಯ! ನನ್ನ ಮಹಾರಾಣಿ ಈಸಿಛೇರಿನಲ್ಲಿ ನನ್ನೆದುರಿನಲ್ಲೇ ಕುಳಿತಿದ್ದಾಳೆ ಕಾಲು ಮುರಿದುಕೊಂಡು!... ಅಲ್ಲಿ ಕೂತದ್ದು ನನ್ನ ಮುದ್ದಿನ ಸೊಸೆ ಶಾಂತೂ! ಮನೋಹರನ ಹೆಂಡತಿ.... ಬಾಗಿಲ ಬಳಿಯಲ್ಲಿ ಕೂತದ್ದು.... ಸುಶೀ.... ಶಕೂ.... ನನ್ನ ಸ್ನೇಹಿತನ ಮಕ್ಕಳು... ನಾನೇ ಈ ಮನೆಗೆ ಸೊಸೆಯಾಗಿ ತಂದದ್ದು!

**ಶಿವಣ್ಣ** - [ಕೆಣಕುವ ಧನಿಯಲ್ಲಿ] ನಿನ್ನಂತಹ ಹುಲಿ ಎದುರು ?

**ಪರಮೇಶ್ವರಯ್ಯ**- [ನಗುತ್ತ] ಹುಲಿಯನ್ನು ಇಲಿ ಮಾಡಿ ಬಿಟ್ಲು ಶಾಂತೂ.. ನಾನು ಕಾಯಿಲೆಯಲ್ಲಿ ಹಾಸಿಗೆ ಹಿಡಿದೆ.... ಅದೇ ಸಮಯಕ್ಕೆ ಇವಳು ಕಾಲು ಜಾರಿ ಬಿದ್ದು ನೆಲ ಹಿಡಿದಳು.... ಈ ಹುಲಿಯ ಆರೈಕೆ ಶಾಂತೂ ಮುಗಿಸಿ.... ಇಲಿ ಮಾಡಿ ಬಿಟ್ಟಳು.... ಶಿವಣ್ಣಾ .... ಏನು ಚಲಾಕು.... ಎಂಥ ಒಳ್ಳೆಯ ಕೈಗುಣ... ತಲೆ ಒತ್ತಿದ್ರೆ.... ಸಿಡಿಯುತ್ತಿದ್ದ ತಲೆ ನೋವು ತಟ್ಟನೆ ನಿಂತು ಬಿಟ್ತು... ಈ ಕೋಣೆಯಲ್ಲಿ ತುಂಬಿದ್ದ ಕಸ.... ಕತ್ತಲೆ....

**ಸಾವಿತ್ರಮ್ಮ** - ಇನ್ನೊಬ್ಬರು ಈ ಕೋಣೆಯೊಳಕ್ಕೆ ಕಾಲಿಡಬಾರದು.... ನಾನು ಎಷ್ಟು ಕಸ ತೆಗೆಯಬಹುದು ? ಕಿಟಕಿ ತೆಗೆಯಲು ಒಂದು ದಿನ ಬಿಟ್ಟಿರಲಿಲ್ಲ.

**ಪರಮೇಶ್ವರಯ್ಯ** - ಕತ್ತಲೆ ಕೋಣೆ ಬೆಳಕಾಗಿದೆ ಶಿವಣ್ಣಾ.... ಅಲ್ಲಿ ನೋಡು ಹೂಗೊಂಚಲು ತುಂಬಿದ ಹೂದಾನಿ! ಈ ಹುಡುಗಿ ಏನು ಪವಾಡ ಮಾಡಿದಳೋ.... ಈ ಮಾತು ನನ್ನನ್ನು ನಾನು ಕೇಳಿಕೊಳ್ಳುತ್ತಿದ್ದೇನೆ, ಈ ಕೋಣೆಯಲ್ಲಿ ಇಂಥ ಗಾಳಿ ಬೀಸಿ ಬಂದಿರಲಿಲ್ಲ....

[ ಎಲ್ಲರೂ ನಗುತ್ತ ]

**ಶಿವಣ್ಣ** - ಪರಮೇಶ್ವರಯ್ಯಾ, ನಿನ್ನ ಮನೆಯಲ್ಲಿ ಯಾವುದಕ್ಕೂ ಕಡಿಮೆ ಇರಲಿಲ್ಲ. ಈ ಮನೆಗೆ ಚಿನ್ನದ ಕಳಸವಿಟ್ಟಂತಾಯಿತು. ಶಾಂತೂ ಸಿಜವಾಗ್ಲೂ ಶಾಂತಿ ತಂದಳು, ಇನ್ನು ಅವಳು ಭಾರತ ಓದಲಿ. ನನ್ನ ಕಿವಿಗೂ ಕೇಳುವ ಪುಣ್ಯ ಬರಲಿ. ಓದಮ್ಮಾ ಶಾಂತೂ...

**ಪರಮೇಶ್ವರಯ್ಯ** - (ಗಡಿಬಿಡಿಯಲ್ಲಿ) ಶಾಂತೂ ಒಂದು ನಿಮಿಷ ತಡೆಯಮ್ಮಾ. ಸುಶೀ ಶಕೂ, ಇಲ್ಲಿಗೇ ಶರಬತ್ತಿಗಾಗಿ ಬೇಕಾಗುವ ನೀರು-ಸಕ್ಕರೆ-ಮತ್ತೇನೋ ಇದೆಯಲ್ಲ ಎಲಕ್ಕಿ, ನಿಂಬೆ ಹಣ್ಣು ಇಲ್ಲೇ ತಂದುಬಿಡಿ. ನಿಮ್ಮತ್ತೆಯ ಕೈಯ ಶರಬತ್ತಿನ ರುಚಿ ನೋಡಿ. ಅಂಥ ಶರಬತ್ತು ಯಾರಿಗೂ ಮಾಡಲು ಸಾಧ್ಯವಿಲ್ಲ. ಅವಳ ಕೈಯಲ್ಲಿ ಏನು ಮಾಡಿದರೂ ಅದಕ್ಕೊಂದು ಪ್ರತ್ಯೇಕ ರುಚಿ! ಅವಳ ಕೈಗುಣವೇ ಹಾಗೆ!

**ಶಾಂತೂ** - (ನಗುತ್ತ) ನೋಡಿದಿರಾ ಶಿವಣ್ಣ ಮಾವಾ-? ಅತ್ತೆಯವರ ಕೈಯಿಂದ ಏನಾದರೂ ಮಾಡಿಸಿ ತಮ್ಮ ಬಾಯಿ ಸಿಹಿ ಮಾಡಿಕೊಳ್ಳದಿದ್ರೆ ಮಾವಯ್ಯಾಗೆ ಎಲ್ಲಿ ಸಮಾಧಾನ? ಈ ಹೊಗಳಿಕೆ ಈ ಮಾತುಗಳೆಲ್ಲ ಅವರ ಕೈಯಲ್ಲಿ ತಯಾರಾಗುವ ಶರಬತ್ತಿಗಾಗಿ ! ಅಲ್ಲದೆ ಅತ್ತೆ ಸುಮ್ಮನೆ ಕೂತಿರಬಾರದಲ್ಲ? ಮಾವಯ್ಯಗೆ ತನ್ನವಳು ಕೊಡುತ್ತಿರುವ ನೀರಲ್ಲೂ ಅಮೃತದ ರುಚಿ-ಅಲ್ವೆ ಮಾವಾ?

[ಎಲ್ಲರೂ ಒಟ್ಟಾಗಿ ನಕ್ಕಾಗ...ಪರಮೇಶ್ವರಯ್ಯ ಕಣ್ಣರಳಿಸಿಕೊಂಡಂತಿರಲು...]

**ಪರಮೇಶ್ವರಯ್ಯ** - ಛೆ ಛೆ ಹಾಗೇನಿಲ್ಲ ಶರಬತ್ತು ಸವಿಗೋಸ್ಕರ ನಿಗೆಯೇನಿ ನಿಮಗೂ ಉಂಟಲ್ಲ? ರುಚಿ ನೋಡಿ ಮತ್ತೆ ಹೇಳಿ.

**ಶಿವಣ್ಣ** - ಇನ್ನು ಪರಮೇಶ್ವರಯ್ಯ, ಅತ್ತಿಗೆಯುನ ಯಾಕೆ ಗೋಳು ಹೊಯ್ಕೊಳ್ಳುತ್ತೀ? ಇದ್ದಾರಲ್ಲ ಮೂರು ಚಿನ್ನದ ಗೊಂಬೆಯಂತಿದ್ದ ಸೊಸೆಯಂದಿರು, ನಿಜ ಹೇಳಲೇ ಪರಮೇಶ್ವರ ನಿನ್ನ ದರ್ಪ ಹಟಕ್ಕೆ ಇವ್ರು ಹೃದಯಗಳನ್ನು ಗೆದ್ದಿದೀರಿ. ನಿಮ್ಮ ಮೇಲಿರುವ ಇವರ ಪ್ರೀತಿ-ಶ್ರದ್ಧೆ ಕಂಡು ನನ್ನ ಕಣ್ಣುಗಳು ತುಂಬಿಕೊಂಡಿವೆ. ಪುಣ್ಯವಂತ ನೀವು ಪರಮೇಶ್ವರಯ್ಯ ಪುಣ್ಯವಂತ.

**ರಾಮು** - ಏನು ಮನೆಯ ಜನರೆಲ್ಲ ಇಲ್ಲಿ? ಅದೂ ಈ ಕೋಣೆಯಲ್ಲಿ? ಅಪ್ಪಾ ನೀನು?

**ಶಿವಣ್ಣ** - [ನಗುತ್ತ] ಬಾ ರಾಮು...ನೀನು ಕಡಿಮೆಯಾಗಿದ್ದಿ. ನೋಡು..ಕಣ್ಣುಗಳು ನಂಬೋದಿಲ್ವೆ? ಶಾಂತೂ ಮಾಡಿದ ಪವಾಡ! ನಿನ್ನಪ್ಪನ ಹೃದಯದ ಬಾಗಿಲು ತೆರದು ಮೆಲ್ಲನೆ ಒಳಗೆ ನುಸುಳಿ ಬಿಟ್ಟು..ಪ್ರೀತಿಯ ಮಹಾಪೂರ ಹರಿಸಿ ಬಿಟ್ಟಿದ್ದಾಳೆ!

**ರಾಮು**- ನಿಜವೇ ಶಾಂತೂ?

**ಶಾಂತೂ** - [ನಗುತ್ತ] ನಾನಲ್ಲ ಭಾವಾ! ಅತ್ತೆಯವರ ಕುಂಟ ಕಾಲು ಪವಾಡ ಮಾಡಿದ್ದು. ಕೇಳಿ ಬೇಕಾದ್ರೆ ನಿಮ್ಮ ತಾಯನ್ನ!

( ಎಲ್ಲರೂ ನಗುತ್ತಾರೆ ... ಹಿನ್ನೆಲೆ ಸಂಗೀತ ಕೇಳಿ ಬರುತ್ತದೆ. )

[ ಲೇಖಿಕೆಯರ ಪೂರ್ವ ಅನುಮತಿ ಇಲ್ಲದೆ ಯಾರೂ ಅಭಿನಯಿಸಕೂಡದು ]

ಫೋಟೊ ತೆಗೆಸಿಕೊಳ್ಳುವದೆಂದರೆ ಪ್ರಸಿದ್ಧಿಯ ಬಯಕೆಯ ಬೇರೊಂದು ಮುಖ. ಈ "ಫೋಟೊ ಪ್ರಸಿದ್ಧಿ"ಗೆ ವಯಸ್ಸು, ಜಾತಿ, ಲಿಂಗ, ಸ್ಥಾನಮಾನಗಳೇನೂ ಅಡ್ಡಿಯಾಗವು.

—ಪ್ರಾ| ಜಿ. ಡಿ. ನಾಡಕರ್ಣಿ

"ಸ್ಟೆಡಿ, ಸ್ಟಡೀ"–ಫೋಟೋಗ್ರಾಫರ್ ಕೂಗಿದ. ಆದರೆ ಅಷ್ಟರಲ್ಲಿಯೇ ನನ್ನಾಕೆ ಕೈ ಮೇಲೆತ್ತಿ ಕುರ್ಚಿ ಬಿಟ್ಟು ಮೇಲೆ ಎದ್ದೇ ಬಿಟ್ಟಳು!

"ಯಾಕ್ರೀ ಮೇಲಕ್ಕೆದ್ದು ಬಿಟ್ರಿ? ಒಂದು ಸೆಕೆಂಡಿನಲ್ಲಿ ಕ್ಲಿಕ್ ಮಾಡಿ ಬಿಡುತ್ತಿದ್ದೆ. ಏನಾಯ್ತು?" ಎಂದು ಬೇಸರದಿಂದ ಕೇಳಿದ ಫೋಟೋಗ್ರಾಫರ್.

ಅಷ್ಟರಲ್ಲಿ ಲಲಿತಾ ಛಟ್ ಛಟ್ ಎಂದು ಎರಡು ಸಲ ಸೀತಳು. ಕರವಸ್ತ್ರದಿಂದ ಮೂಗೊರಸಿಕೊಳ್ಳುತ್ತ– "ನೀವು ಫೋಟೋ ತೆಗೆಯೋ ಹೊತ್ತಿಗೇ ಈ ಹಾಳು ಸೀನು ಬರಬೇಕೇ? ವಿಪರೀತ ನೆಗಡಿ" ಎಂದಳವಳು.

ಇದನ್ನು ಕಂಡು ನನಗೆ ನಗು ಬಂತು. ಆದರೆ ಫೋಟೋಗ್ರಾಫರ್ ಬೇಸತ್ತಿದ್ದ, ಕೆರಳಿದ್ದ.

"ಇನ್ನಾದರೂ ಮೊದಲಿನ ಪೋಜದಲ್ಲಿ ಕೂಡುತ್ತೀರೋ ಒಂದು ನಿಮಿಷ?" ಎಂದವನು ಪ್ರಶ್ನಿಸಿದ.

ಮತ್ತೆ ನನ್ನಾಕೆ ತನ್ನ ವ್ಯಾನಿಟಿ ಬ್ಯಾಗಿನಿಂದ ಚಿಕ್ಕ ಕನ್ನಡಿ ತೆಗೆದು ನೋಡಿಕೊಂಡು, ಮುಖಕ್ಕೆ ಸ್ವಲ್ಪ ಪೌಡರ್ ಮತ್ತೆ ಹಚ್ಚಿಕೊಂಡು ಸೋಫಾದ ಮೇಲೆ ನನ್ನ ಹತ್ತಿರ ಮುಗುಳ ಗುತ್ತ ಬಂದು ಕುಳಿತಳು.

"ನೀವು ಹಾಗೆ ಬಾಗಿ ಕೂಡಬೇಡಿ; ಸ್ವಲ್ಪ ಎದೆ ಸೆಟೆಸಿಕೊಂಡು ಕುಳಿತುಕೊಳ್ಳಿ" ನನಗೆ ಆದೇಶವಿತ್ತ ಫೋಟೋಗ್ರಾಫರ್.

ನನ್ನಾಕೆಯ ಎದುರು ನಾನು ಅದ್ಹೇಗೆ ಎದೆ ಸೆಟೆಸಿಕೊಂಡು ಕೂಡಲಿ?" ಎಂದು ನಾನು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತ ಶಕ್ಯವಿದ್ದಷ್ಟು ನೀಟಾಗಿ ಕುಳಿತೆ.

"ನೀವು ಹಾಗೆ ಹಲ್ಲು ಕಾಣುವಂತೆ ನಗಬೇಡಿ; ಬರಿ ಮುಗುಳ್ನಗೆ ಮಾತ್ರ ಇರಲಿ" ಎಂದು ನನ್ನ ಮಡದಿಗೆ ಅವನು ಕೊನೆಯ ಆದೇಶವಿತ್ತು ಕೊನೆಯ ಸಲ "ಸ್ಟೆಡಿ ಪ್ಲೀಜ್" ಎಂದು ಹೇಳಿ ಕಿಕ್ ಮಾಡಿದ.

ಅಂತೂ ಫೋಟೋದ ಕಾರ್ಯಕ್ರಮ ಒಮ್ಮೆ ಮುಗಿಯಿತೆಂದು ನಾನು ದೀರ್ಘ ನಿಟ್ಟುಸಿರು ಬಿಟ್ಟೆ. ನನ್ನ ಎದೆಯ ಮೇಲಿನ ದೊಡ್ಡ ಭಾರವಿಳಿದಂತಾಗಿತ್ತು. ನನ್ನ ಮದುವೆಯಾಗಿ ಒಂದು ವರ್ಷವಾಗಿತ್ತು. ಈ ಪ್ರಥಮ ವಾರ್ಷಿಕೋತ್ಸವದ ಸವಿ ನೆನಪಿಗಾಗಿ ಫೋಟೋ ತೆಗೆಸಲೇಬೇಕೆಂಬುದು ಅವಳ ಒತ್ತಾಯವಾಗಿತ್ತು. ಅದರಂತೆ ಈ ಕಾರ್ಯಕ್ರಮ ನಡೆಯಿತು.

ಮುಂದೆ ಎರಡು ವರ್ಷಗಳನಂತರ ನಮ್ಮ ಪ್ರಥಮ ಕುಮಾರ ಕಂಠೀರವನ ಫೋಟೋ ತೆಗೆಸುವ ಕಾರ್ಯಕ್ರಮ. ಅದಕ್ಕಾಗಿ ಅವನಿಗೆ ಯಾವ ಡ್ರೆಸ್ ಹಾಕಬೇಕು ಎಂಬ ಬಗ್ಗೆ ಬಹಳ ವಾಗ್ವಾದ ನಡೆಯಿತು ನಮ್ಮಿಬ್ಬರಲ್ಲಿ. ಈ ವಾದದಲ್ಲಿ(ಉಳಿದ ಎಲ್ಲಾ ವಿಷಯಗಳಲ್ಲಿಯಂತೆ) ಗೆದ್ದವಳು ಮನೆಯೊಡತಿಯೇ ಎಂಬುದನ್ನು ತಮಗೆ ಬೇರೆ ಹೇಳಬೇಕಾಗಿಲ್ಲವಷ್ಟೆ! ಮುಂದೆ ಕೆಲವೇ ದಿನಗಳಲ್ಲಿ ರಂಗಣ್ಣ–ನನ ಹೆಂಡತಿಯ ತಮ್ಮ–ದೀವಳಿಗೆಯ ರಜೆಗಾಗಿ ಬಂದ. ಆಗ ಅವಳ ಉತ್ಸಾಹ ಹೇಳ ತೀರದು ಅವನಿಗೆ ರಾಜೋಪಚಾರದ ಅಳಿಯತನವೇ ನಡೆಯಿತು ನನಗೆ ಒಳಗೊಳಗೇ ಅಸಮಾಧಾನ, ಸಿಟ್ಟು ಉಕ್ಕಿ ಬರುತ್ತಿದ್ದರೂ ನಿರ್ವಾಹವಿಲ್ಲದೆ ಎಲ್ಲವನ್ನೂ ನುಂಗಿಕೊಂಡು ಸುಮ್ಮನಿರಬೇಕಾಯಿತು. ಸದಾ ಪತ್ತೇದಾರಿ ಕಾದಂಬರಿ ಓದುವುದು, ಸಿನೇಮಾ ನೋಡುವುದು, ಸಿಗರೇಟು ಸೇದುವುದು ಇತ್ಯಾದಿ ಅನೇಕ ಚಟಗಳೊಂದಿಗೆ ಕೆಮರಾದಿಂದ ಫೋಟೋ ತೆಗೆಯುವ ಅತಿ ಖರ್ಚಿನ Hobby ಯನ್ನೂ ಅವನಿಟ್ಟುಕೊಂಡಿದ್ದ.

"ಅದು ಅವನ ಪ್ರೀತಿಯ ವಿಷಯ. ಫೋಟೋ ಎಷ್ಟು ಚೆನ್ನಾಗಿ ತಗೀತಾನ್ರೀ! ಮೇಲಾಗಿ ಅದರ ಖರ್ಚು ನಿಮ್ಮ ಮೇಲೇನೂ ಬೀಳುವುದಿಲ್ಲವಲ್ಲ!" ಎಂದು ನನಗೆ ಸಿಡುಕಿನಿಂದ ನುಡಿದಿದ್ದಳಾಕೆ.

ಸರಿ, ಅವನ ಕಲೆಯ ಪ್ರಯೋಗವೆಲ್ಲ ನಮ್ಮ ಚಿರಂಜೀವನ ಮೇಲೆ ನಡೆಯಿತು. ನಮ್ಮ ರಮೇಶನನ್ನು ಕೂಡಿಸಿ, ನಿಲ್ಲಿಸಿ, ಮಲಗಿಸಿ, ಸೈಕಲ್ ಹತ್ತಿಸಿ ಫೋಟೋ ತೆಗೆಯುವುದು ಸುರುವಾಯಿತು.

ಕೂಸನ್ನು ನಿಮ್ಮ ಹೆಗಲ ಮೇಲೆ ಕೂಡಿಸಿಕೊಂಡು ಫೋಟೋ ತೆಗೆಸಿಕೊಂಡರೆ ಎಷ್ಟು ಚಂದ!" ಎಂದಳಾಕೆ.

ಈಗಾಗಲೇ ಸುಮಾರು ೩೦–೪೦ ಫೋಟೋ ತೆಗೆದಾಗಿತ್ತು. ಕೆಮರಾ ರಂಗಣ್ಣನದಾಗಿದ್ದರೂ ರೀಲಿನ ಖರ್ಚು ಹಾಗೂ ಡೆವಲಪ್ ಮಾಡಿಸುವ ಖರ್ಚು ನನ್ನ ಮೇಲೆಯೇ ಬಿದ್ದಿತ್ತು. ಅಲ್ಲದೆ ಅಂದು ನನಗೆ ಗೋಣು ಉಳುಕು ಬೇರೆ ಹಿಡಿದಿತ್ತು. ನಾನೆಷ್ಟು ಬೇಡವೆಂದರೂ ಕೇಳದೆ, ನನ್ನ ಹೆಗಲ ಮೇಲೆ ಆಸೀನನಾದ ನನ್ನ ಚಿರಂಜೀವನ ಫೋಟೋದ ಕಾರ್ಯಕ್ರಮ ನಡೆದೇ ಹೋಯಿತು! ನನ ಶ್ಯಾಲಕ ತೆಗೆದ ಎಷ್ಟೋ ಫೋಟೋಗಳಲ್ಲಿ ಅನೇಕ out-of Focus ಆಗಿದ್ದವು. ಇನ್ನು ಕೆಲವುಗಳಲ್ಲಿ ಬೆಳಕು ಹೆಚ್ಚಾಗಿ ಬಿಟ್ಟು ಫೋಟೋ ಯಾರದು ಎಂಬುದೇ ತಿಳಿಯುವಂತಿರಲಿಲ್ಲ! "ಅದು Modern art" ಎಂದು ನನ ಹೆಂಡತಿಯ ತಮ್ಮ ಸಮರ್ಥನೆ ಮಾಡಿಕೊಂಡ. ಒಂದು ದೊಡ್ಡ ಅಲ್ಬಮ್ ತಂದು ತಾನು ತೆಗೆದ ನನ್ನ ಚಿರಂಜೀವನ ಫೋಟೋಗಳನ್ನೆಲ್ಲ ಒತ್ತಟ್ಟಿಗೆ ಕೂಡಿಸಿಟ್ಟ. ನಾನೆಷ್ಟು ಬೇಡವೆಂದರೂ ಕೇಳದೆ ನನ್ನನ್ನು ಹಾಗೂ ಆಕೆಯನ್ನು ಜೊತೆಗೆ ನಿಲ್ಲಿಸಿ ಅನೇಕ ರೀಲುಗಳನ್ನು ಹಾಳು ಮಾಡಿದ! ಅವನು ಮನೆಯಲ್ಲಿಲ್ಲದಾಗ ಅವನು ಹಿಂದೆ ತೆಗೆದ ಫೋಟೋಗಳ ಅಲ್ಬಮನ್ನು ನೋಡುವ ಅವಕಾಶ ನನಗೆ ದೊರೆಯಿತು. ಅವನ "ಕಲಾಕೃತಿ"ಗಳನ್ನು ಒಂದೊಂದಾಗಿ ನೋಡುತ್ತ ಹೋದರೆ ಅವನ ಫ್ರೆಂಡ್ಸ ಎಂದರೆ ಲೇಡಿ ಫ್ರೆಂಡ್ಸಗಳ ಚಿತ್ರಗಳೇ ಹೆಚ್ಚು. ಅದರಲ್ಲಿಯೂ ಪಿಕ್‌ನಿಕ್‌ಗೆ ಹೋದಾಗಿನ ಚಿತ್ರಗಳೇ ಅಧಿಕ. ಅಲ್ಲಿ ಉಪಾಹಾರ ತೆಗೆದುಕೊಳ್ಳುವಾಗಿನ ಚಿತ್ರಗಳು, ನದಿಯಲ್ಲಿ ಈಸಾಡುವಾಗಿನ ಚಿತ್ರ, ಮಿನಿ ಸ್ಕರ್ಟದ ಲಲನೆಯರ ಚಿತ್ರಗಳು ಹಲವು. ಹೀಗೆಯೇ ಅನೇಕ ಚಿತ್ರಗಳಿದ್ದವು. ನನ ಶ್ಯಾಲಕನ ಶೃಂಗಾರದ ಅಭಿರುಚಿ ಅವುಗಳಲ್ಲಿ ಚೆನ್ನಾಗಿ ವ್ಯಕ್ತವಾಗುತ್ತಿತ್ತು.





ಹಿಂದುಗಡೆ ಅವನು ತಂದ ಕೆಮರಾ ಕೂಡ ಅವನ ಸ್ವಂತ ದ್ದಲ್ಲವೆಂದೂ, ಯಾವನೋ ಒಬ್ಬ ಮಿತ್ರನ ಹತ್ತಿರ ಕೆಲವು ದಿನಗಳ ಮಟ್ಟಿಗೆ ಕಡ ತಂದದ್ದೆಂದೂ ತಿಳಿದು ಬಂತು.

ಮೊನ್ನೆ ಮಧ್ಯಾಹ್ನ ನಮ್ಮ ಎದುರು ಮನೆಯ ರಾಮರಾಯರು ನಮ್ಮ ಮನೆಗೆ ಬಂದರು. ಚಹಾಪಾನ ಮುಗಿದು ಕ್ಷೇಮ ಸಮಾಚಾರದ ಮಾತು ಮುಗಿದ ಮೇಲೆ ಅವರು ಸಣ್ಣ ಧ್ವನಿಯಲ್ಲಿ–

"ನಿಮ್ಮ ಮನೆಗೆ ಬಂದಿದ್ದಾರಲ್ಲ? ಅವರು ನಿಮಗೇ ನಾಗಬೇಕು?" ಎಂದರು. ಅವರ ಮುಖಭಾವವನ್ನು ಕಂಡು ಸ್ವಲ್ಪ ಬೆದರಿದ ನಾನು ಉಗುಳ್ನುಂಗುತ್ತ

"ಏಕೆ? ಅವನು ರಮೇಶ–ನನ್ನ ಹೆಂಡತಿಯ ತಮ್ಮ" ಎಂದೆ.

"ಓಹೋ! ಅವರಿಗೆ ನೀವು ಸ್ವಲ್ಪ ಬುದ್ಧಿ ಹೇಳಿ. ನಿನ್ನೆ ನಮ್ಮ ಸರಲಾ ಎರೆದುಕೊಂಡು ಮಾಳಿಗೆಯ ಮೇಲೆ ನಿಂತು ಕೂದಲು ಒಣಗಿಸಿಕೊಳ್ಳುತ್ತಿದ್ದಳು. ಆಗ ನಿಮ್ಮ ರಮೇಶ ನಿಮ್ಮ ಮಾಳಿಗೆಯ ಮೇಲೆ ನಿಂತು ಕೆಮರಾದಿಂದ ಫೋಟೋ ತೆಕ್ಕೊಂಡ."

ನನ್ನ ಮುಖ ಕೆಂಪಾಯಿತು. ರಮೇಶನಿಗೆ ಎಚ್ಚರಿಕೆ ಕೊಟ್ಟು, ಬುದ್ಧಿಯ ಮಾತು ಹೇಳುವುದಾಗಿ ಭರವಸೆ ಕೊಟ್ಟು ರಾಮರಾಯರನ್ನು ಬೀಳ್ಕೊಟ್ಟೆ.

"ನೋಡಿದೇನೇ ನಿನ್ನ ತಮ್ಮನ ಸಾಹಸ?" ಎಂದು ಅವಳನ್ನು ಕರೆದೆ.

"ಮತ್ತೇನಾಯಿತು?" ಎನ್ನುತ್ತ ಸಿಡುಕಿನಿಂದಲೇ ಅವಳು ಒಳಗಿನಿಂದ ಬಂದಳು.

ಇದೀಗ ರಾಮರಾಯರು ಹೇಳಿದ ವಿಷಯ ಅವಳಿಗೆ ತಿಳಿಸಿದೆ.

"ರಾಮರಾಯರ ಹೆಂಡತಿ ಸೀತಾಬಾಯಿಗೆ ಹೊಟ್ಟೇಕಿಚ್ಚು ಬಹಳ. ಯಾರ ಬಗ್ಗೆಯೂ ಸಹನೆ ಇಲ್ಲ. ಅದಕ್ಕೆ ಇಲ್ಲದ ಸಲ್ಲದ ಮಾತು ಹುಟ್ಟಿಸಿಕೊಂಡು ತನ ಗಂಡನಿಗೆ ಹೇಳಿರಬೇಕು." ಎಂದಳಾಕೆ.

"ಹಾಂಗಲ್ಲ; ರಾಮರಾಯರು ಸ್ವತಃ ನೋಡಿದ್ದರಂತೆ. ಅವರೇ ಹೇಳಿದರು."

"ಛೇ! ನಮ್ಮ ರಂಗಣ್ಣ ಅಂಥವನಲ್ಲ. ಅಲ್ಲದೆ ಅವನ ರಜಾನೂ ಮುಗಿಯಲಿಕ್ಕೆ ಬಂತು. ಒಂದೆರಡು ದಿನಗಳಲ್ಲಿಯೇ ಹೋಗಿ ಬಿಡ್ತಾನಲ್ಲ! ಆಗಲಾದರೂ ನಿಮಗೆ ಸಮಾಧಾನ ಆಗ್ತದಲ್ಲ" ಎಂದಾಗ ಅವಳ ಕಣ್ಣಲ್ಲಿ ಭಾಗೀರಥಿ ಪ್ರತ್ಯಕ್ಷಳಾದಳು. ಆಗ ನಾನು ವಿಷಯ ಅಲ್ಲಿಗೇ ಬಿಡಲೇಬೇಕಾಯ್ತು. ರಂಗಣ್ಣನಿಗೆ ತರುಣ ವಯಸ್ಸು. ಮೇಲೆ ಶೃಂಗಾರದ ಸ್ವಭಾವ. ಇಂಥವನ ಕೈಯಲ್ಲಿ ಕೆಮರಾ ಇದ್ದುಬಿಟ್ಟರೆ ಯಾವ ಪ್ರಸಂಗದಲ್ಲಿ ಕ್ಲಿಕ್ ಅನ್ನಿಸಬೇಕು, ಬಿಡಬೇಕು ಎಂಬುದರ ವಿವೇಕ ಉಳಿಯುವುದು ಕಠಿಣ ಎಂಬ ವಿಚಾರವೂ ನನ್ನಲ್ಲಿ ಉದಯಿಸದೆ ಹೋಗಲಿಲ್ಲ.

ಒಬ್ಬ ವ್ಯಕ್ತಿ ಫೋಟೋ ತೆಗೆಸಿಕೊಳ್ಳುವ ಪ್ರಸಂಗಗಳು ಅವನ ಜೀವನದ ರೈಲು ಪ್ರಯಾಣದಲ್ಲಿಯ ಕೆಲವು ಮಹತ್ವದ ನಿಲ್ದಾಣಗಳಿದ್ದಂತೆ; ಅಥವಾ ಇವು ಸಂಸ್ಕಾರಗಳಿದ್ದಂತೆ. ಹುಟ್ಟಿನಿಂದ ಹಿಡಿದು (ಜಾತಕರ್ಮ) ಸಾವಿನ ವರೆಗೆ (ಅಂತ್ಯ ಸಂಸ್ಕಾರ) ನಮ್ಮ ಪೂರ್ವಜರು ಷೋಡಶ ಸಂಸ್ಕಾರಗಳನ್ನು ಹೇಳಿದ್ದಾರೆ. ಹಾಗೆಯೇ ಫೋಟೋಗಳೂ ಆಧುನಿಕ ಯುಗದ ಸಂಸ್ಕಾರಗಳೆಂದು ಹೇಳಿದರೆ ತಪ್ಪಿಲ್ಲ. ಕೂಸು ಸಣ್ಣದಿದ್ದಾಗ ಒಂದೆರಡಾದರೂ ಫೋಟೋ ಆಗಲೇ ಬೇಕಲ್ಲವೆ? ಆ ಮೇಲೆ ಜಾವಳ ಚಂಡಿಕೆ ಇತ್ಯಾದಿ ಸಂಸ್ಕಾರವನ್ನು ಹೊಂದುವಂಥ ಶಾಲಾ ಬಾಲಕನ ಅವಸ್ಥೆಯಲ್ಲಿ. ನಂತರ ಉಪನಯನ ಸಂಸ್ಕಾರಕ್ಕೆ ಹೋಲಿಕೆಯಿರುವ ಕಾಲೇಜ್ ವಿದ್ಯಾರ್ಥಿಯಾಗಿರುವಾಗ ಮತ್ತೆ ಫೋಟೋ. ಆ ಮೇಲೆ ಪರೀಕ್ಷೆ ಪಾಸಾಗಿ ಕನ್ವೊಕೇಷನ್‌ನಲ್ಲಿ ಡಿಗ್ರಿ ಪಡೆದಾಗ, ನಂತರ ಮದುವೆಯ ಶುಭ ಪ್ರಸಂಗದಲ್ಲಿಯ ಫೋಟೋಗಳು, ಮುಂದೆ ಗೃಹಸ್ಥ ಜೀವನದ ಪ್ರಾರಂಭದಲ್ಲಿ ಫೋಟೋ; ಆ ಮೇಲೆ ಮೊದಲನೆಯ ಮಗುವಿನ ತಂದೆಯಾಗಿ ಮಗುವಿನೊಂದಿಗೆ ಮುಂದೆ ಐದಾರು ಮಕ್ಕಳು ಸೊಸೆಯರು ಹಾಗೂ ಭಾರ್ಯೆಯ ಜೊತೆಗಿನ ಫ್ಯಾಮಿಲಿ–ಫೋಟೋ! ನಂತರ ನೌಕರಿಯಿಂದ ನಿವೃತ್ತನಾದಾಗ ಆಫೀಸಿನ ಮಿತ್ರರು ಬೀಳ್ಕೊಡುವಾಗಿನ ಭಾವಚಿತ್ರ (ಇದು ವಾನಪ್ರಸ್ಥಾಶ್ರಮದ ಪಾಸ್‌ಪೋರ್ಟ್!) ಕೊನೆಗೆ "ಶ್ರೀಮಾನ್...ರವರು ಹೃದಯ ವಿಕಾರದಿಂದ ವೈಕುಂಠ/ಕೈಲಾಸವಾಸಿಗಳಾದರೆಂದು ತಿಳಿಸಲು ವಿಷಾದವಾಗುತ್ತದೆ" ಎಂಬ ಸುದ್ದಿಯೊಡನೆ ದಿನಪತ್ರಿಕೆಯಲ್ಲಿ ಪ್ರಕಟವಾಗಬಹುದಾದ ಭಾವಚಿತ್ರ, ಇದೇ ಅಂತ್ಯ ಸಂಸ್ಕಾರಕ್ಕೆ ಸಂವಾದಿಯಾದ ಕೊನೆಯ ಚಿತ್ರ.

ಈ ಫೋಟೋ ತೆಗೆಸಿಕೊಳ್ಳುವ ಹುಚ್ಚು ಕೆಲವರಲ್ಲಿ ಅತಿಯಾಗಿರುತ್ತದೆ. ಬೇರೆ ಬೇರೆ ಡ್ರೆಸ್ ಹಾಕಿಕೊಂಡು, ಗಡ್ಡ ಹಚ್ಚಿಕೊಂಡು, ಟೆನ್ನಿಸ್ ರ್‍ಯಾಕೆಟ್ ಹಿಡಿದುಕೊಂಡು ಹೀಗೆ ಬೇರೆ ಬೇರೆ ರೀತಿಯಲ್ಲಿ ಕೆಲವರಿಗೆ ತಮ್ಮ ಫೋಟೋ ಬೇಕು. ಕೆಲವರು ಗೋಡೆಯ ತುಂಬಾ ತಮ್ಮದೇ ಫೋಟೋ (ಬೇರೆ ಬೇರೆ ಪೋಜುಗಳಲ್ಲಿ ತೆಗೆಸಿಕೊಂಡದ್ದು) ಹಾಕಿ ಬಿಟ್ಟಿರುತ್ತಾರೆ. ಪ್ರಸಿದ್ಧಿಯ ಬಯಕೆಯ ಇನ್ನೊಂದು ರೂಪವಿದು ಎನ್ನಬಹುದು. ಈ "ಫೋಟೋ ಪ್ರಸಿದ್ಧಿ"ಗೆ ವಯಸ್ಸು, ಲಿಂಗ, ಸ್ಥಾನ ಮಾನಗಳು ಅಡ್ಡಿ ಬರುವುದಿಲ್ಲ. ಕಾಲೇಜಿನ ಒಂದು ಸಂಘದ ಕಾರ್ಯದರ್ಶಿಯಿಂದ ಹಿಡಿದು ರಾಜ್ಯದ ಅತ್ಯಂತ ದೊಡ್ಡ ಹುದ್ದೆಯಲ್ಲಿರುವ ಅಧಿಕಾರಿಯ ವರೆಗೆ ಈ ವ್ಯಾಮೋಹದ ವ್ಯಾಪ್ತಿ ಇದೆ. ಕಾಲೇಜಿನಲ್ಲಿಯ ಸಂಘದ ಕಾರ್ಯದರ್ಶಿ ತಾನು ಮುಖ್ಯ ಅತಿಥಿಗೆ ಮಾಲಾರ್ಪಣೆ ಮಾಡುವಾಗ ಫೋಟೋ ತೆಗೆಯಲು ಫೋಟೋಗ್ರಾಫರನಿಗೆ ಹೇಳಿಟ್ಟಿರುತ್ತಾನೆ. ಮಾಲಾರ್ಪಣೆ ಮಾಡಿಸಿಕೊಳ್ಳುವ ಅತಿಥಿ ಮೊದಲೇ ಯಾರಿಗೂ ಹೇಳಿಟ್ಟಿರದಿದ್ದರೂ ಆ ವೇಳೆಗೆ ಫೋಟೋ ತೆಗೆದುಕೊಳ್ಳದಿದ್ದರೆ ಅವನಿಗೆ ಅತಿಶಯ ನಿರಾಶೆ ಆಗುವುದರಲ್ಲಿ ಸಂಶಯವಿಲ್ಲ. ಸಮಾರಂಭದ ಮುಖ್ಯ ಅತಿಥಿ ಭಾಷಣದಲ್ಲಿ ತಾನು ಒಳ್ಳೆಯ "ಜೋಕ್" ಮಾಡಿದಾಗ ಕೆಮರಾದ ಕ್ಲಿಕ್ ನಿರೀಕ್ಷಿಸುತ್ತಲೇ ಇರುತ್ತಾನೆ. ತನ್ನ ಭಾಷಣ ನಡೆದಾಗ ಎರಡು ಮೂರಾದರೂ ಫ್ಲ್ಯಾಶ್ ಲಾಯಿಟ್ ಫೋಟೋ ಆಗದಿದ್ದರೆ ಮತ್ತು, ಭಾಷಣದ ಕೊನೆಗೆ ಗ್ರೂಪ್ ಫೋಟೋ ಆಗದೆ ಹೋದರೆ ಯಾವ ಅತಿಥಿಗೂ ಅಂದು ರಾತ್ರಿ ಬಹುಶಃ ನಿದ್ದೆ ಹತ್ತಲಿಕ್ಕಿಲ್ಲವೆಂದು ತೋರುತ್ತದೆ. ತಾನು ಭಾಷಣ ಮಾಡುತ್ತಿರು

ವಾಗಿನ ಫೋಟೋ ದಿನ ಪತ್ರಿಕೆಯಲ್ಲಿ ವರದಿಯೊಂದಿಗೆ ಪ್ರಕಟವಾದಾಗ ತಾನೇ ಅದನ್ನು ನೋಡುವಾಗ ಅವನಿಗೆ ಎಷ್ಟು ಹಿಗ್ಗು! "ಸಮಾರಂಭದಲ್ಲಿ ನಿಮ್ಮ ಫೋಟೋ ಒಂದನ್ನೂ ತೆಗೆಯುವುದು ಸಾಧ್ಯವಿಲ್ಲ" ಎಂದು ಮೊದಲೇ ಸಭೆಯ ಸಂಚಾಲಕರು ಒಂದು ವೇಳೆ ಮುಖ್ಯ ಅತಿಥಿಗೆ ಖಂಡಿತವಾಗಿ ತಿಳಿಸಿದರೆ, ಸಭೆಗೆ ಭಾಷಣ ಮಾಡಲು ಯಾವ ಅತಿಥಿಯೂ ಬರಲು ಒಪ್ಪುವುದೇ ಇಲ್ಲವೆಂದು ನನ್ನ ಭಾವನೆ.

ಜನರು ಮನೆಯಲ್ಲಿ ಹಾಕುವ ಫೋಟೋಗಳಿಂದ ಅವರ ಅಭಿರುಚಿ, ಸಂಸ್ಕೃತಿಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದು. ಹಳೆಯ ಸಂಪ್ರದಾಯದ ದೊಡ್ಡ ಮನೆಗೆ ನೀವು ಹೋದರೆ ಅಲ್ಲಿ ರಾಜಾ ರವಿವರ್ಮನ ವಿಷ್ಣು, ಲಕ್ಷ್ಮಿ, ಸರಸ್ವತಿ ಮೊದಲಾದ ದೇವತೆಗಳ ದೊಡ್ಡ ಚಿತ್ರಗಳನ್ನು ಕಾಣಬಹುದು. ಮತ್ತೊಂದು ಗೋಡೆಯ ಮೇಲೆ ಸದ್ಯದ ಯಜಮಾನರ ಅಜ್ಜ–ಅಜ್ಜಿ. ತಂದೆ–ತಾಯಿ ಇವರ ಚಿತ್ರಗಳು ಕಂಗೊಳಿಸುವುವು. ಅಂಥ ಹುವೆಯಲ್ಲಿ ಮನೆತನಸ್ಥ, ಗೌರವಸ್ಥ ಕುಟುಂಬ ವಾಸವಾಗಿದೆ ಎಂದು ತಿಳಿಯಬಹುದು. ಬಾಡಿಗೆಯ ಚಿಕ್ಕ ಮನೆಯಲ್ಲಿ ವಾಸಿಸುವವರು ಚಿಕ್ಕ ಫೋಟೋ ಹಾಕಿರುವರು; ವ್ಯಾಪಾರಸ್ಥರು ಅಂಗಡಿಯಲ್ಲಿ ಕೇವಲ ಲಾಭದ ದೃಷ್ಟಿಯಿಂದ, ದೇವರ ಫೋಟೋ ಹಾಕಿರುತ್ತಾನೆ. ಆದರೆ ಹೆಚ್ಚು ಮೋಜಿನ ಚಿತ್ರ ನಾವು ಕಾಣುವುದು ಕಾಲೇಜ್ ವಿದ್ಯಾರ್ಥಿಯ ಹಾಸ್ಟೆಲ್ ರೂಮಿನಲ್ಲಿ. ಜನಪ್ರಿಯ ಸಿನೇಮಾ ತಾರೆಯರ ವಿವಿಧ ಭಂಗಿಯಲ್ಲಿಯ ಭಾವಚಿತ್ರಗಳು ಅಲ್ಲಿ ಕೋಣೆಯ ತುಂಬಾ ಕಂಡುಬರುತ್ತವೆ. ಸಿನೇಮಾ ನೋಡಿ, ನೋಡಿ ಅದರ ಬಗ್ಗೆ ಮಾತಾಡಿ, ಅಂಥ ವಿದ್ಯಾರ್ಥಿಯ ಮನಸ್ಸು ಆ ತಾರೆಯರಿಗೆ ಮಾರು ಹೋಗಿ ಬಿಟ್ಟಿರುತ್ತದೆ. ಕುಳಿತರೆ, ನಿಂತರೆ, ಮಲಗಿದರೆ, ನಿದ್ರೆಯಲ್ಲಿ ಕೂಡ ಆ ಶೃಂಗಾರದ ಅರೆ ನಗ್ನ ತಾರೆಯರ ಚಿತ್ರಗಳು ಮನಸ್ಸಿನಲ್ಲಿ ವ್ಯಾಪಿಸಿ ಬಿಟ್ಟಿರುವಂತೆ ಅವನ ಕೋಣೆಯ ಗೋಡೆಗಳನ್ನು ವ್ಯಾಪಿಸಿರುತ್ತವೆ! ಕ್ಯಾಲೆಂಡರುಗಳಲ್ಲಿ ಕೂಡ ಅಂಥವೇ ಅರೆ ನಗ್ನ ಮುಕ್ಕಾಲು ಪಾಲು ನಗ್ನ–ಚಿತ್ರಗಳು! ಕೆಲವು ವಿದ್ಯಾರ್ಥಿಗಳ ಆಲ್ಬಮ್ಮಿನಲ್ಲಿ, ನೋಟುಬುಕ್ಕಿನಲ್ಲಿ, ಪರ್ಸದಲ್ಲಿ ಉಂಗುರದಲ್ಲಿ ಕೂಡ. ಎಲ್ಲೆಡೆಗೂ ಈ ತಾರೆಯರ ಚಿತ್ರಗಳೇ ಚಿತ್ರಗಳು!





ಒಬ್ಬ ವ್ಯಕ್ತಿಯು ಮೆಚ್ಚಿಕೊಳ್ಳುವ ಫೋಟೋಗಳಿಗೂ ಅವನ ವಯಸ್ಸಿಗೂ ನಿಕಟ ಸಂಬಂಧವಿದೆ. ಏಳೆಂಟು ವರ್ಷದ ಬಾಲಕ ಕಡಿ ಪೆಟ್ಟಿಗೆಯ ಮೇಲಿನ ಇಣಚಿ, ಗಿಳಿ, ಒಂಟೆ ಮೊದಲಾದ ಚಿತ್ರ ಮೆಚ್ಚುತ್ತಾನೆ; ಅದೇ ಬಾಲಕ ಹೈಸ್ಕೂಲಿಗೆ ಹೋದಾಗ ಕ್ರಿಕೆಟ್‌ಪಟುಗಳ ಚಿತ್ರ ಕಲೆ ಹಾಕುತ್ತಾನೆ; ಅವನೇ ಮುಂದೆ ಚಿಗುರು ಮೀಸೆಯ ಯುವಕನಾಗಿ ಕಾಲೇಜ್ ಸೇರಿದಾಗ ಸಿನೇಮಾ ತಾರೆಯರ ಭಾವಚಿತ್ರಕ್ಕೆ ಮಾರು ಹೋಗುತ್ತಾನೆ. ಮದುವೆಯಾಗಿ, ಸಂಸಾರ ತಾಪತ್ರಯಗಳನ್ನು ಅನುಭವಿಸಹತ್ತಿದನೆಂದರೆ ರಾಘವೇಂದ್ರ ಸ್ವಾಮಿ, ಸಾಯಿಬಾಬಾ ಅವರ ಫೋಟೋಗಳಿಗೆ ಮೊರೆ ಹೋಗುತ್ತಾನೆ. ವೃದ್ಧಾಪ್ಯದಲ್ಲಿ ಅವನಿಗೆ ಮಧ್ವಾಚಾರ್ಯ, ಶಂಕರಾಚಾರ್ಯ, ವಿವೇಕಾನಂದ ಮೊದಲಾದವರ ಭಾವ ಚಿತ್ರಗಳಲ್ಲಿ ಆಸಕ್ತಿ ಹೆಚ್ಚಾಗುತ್ತದೆ. ಹೀಗೆ ಓರ್ವ ವ್ಯಕ್ತಿ ಮೆಚ್ಚುವ ಫೋಟೋಗಳು ಅವನ ಜೀವನದ ವಿವಿಧ ಹಂತಗಳನ್ನು ಚಿತ್ರಿಸುತ್ತವೆ ಎಂದರೆ ತಪ್ಪಲ್ಲ.

ಒಬ್ಬ ಶ್ರೀಮಂತರ ಮನೆಗೆ ನಾನು ಹೋದಾಗ ಅವರು ತಮ್ಮ ಕುರ್ಚಿಯ ಮೇಲುಗಡೆಗೆ ಮಹಾತ್ಮಾ ಗಾಂಧೀಜಿಯ ಫೋಟೋ ಹಾಕಿದ್ದರು. ಖಾದೀಧಾರಿಯಾಗಿದ್ದ ಅವರು ದೇಶದ ಪ್ರಗತಿಯ ಬಗೆಗೆ ನನ್ನೊಡನೆ ಮಾತಾಡಿದರು. "ಅವರೊಬ್ಬ ದೊಡ್ಡ ದೇಶ ಭಕ್ತರು ಅಲ್ಲವೆ?" ಎಂದು ನಾನು ನನ್ನ ಮಿತ್ರನನ್ನು ಕೇಳಿದಾಗ ಅವನು ಬಿದ್ದು ಬಿದ್ದು ನಕ್ಕು–"ಅವರು ಅಬಕಾರಿ ಕಂಟ್ರಾಕ್ಟರರು; ಕಳ್ಳಪೇಟೆಯ ಕದೀಮರು" ಎಂದ. ಅದಕ್ಕೆಂದೇ ಬಹಶಃ ಆ ಫೋಟೋದಲ್ಲಿಯ ಗಾಂಧೀಜಿ ನಗುತ್ತಿದ್ದರು ಎಂದು ಕಾಣುತ್ತದೆ.!

ಮೊನ್ನೆ ನಮ್ಮ ಮಿತ್ರನೊಬ್ಬನ ಮನೆಗೆ ಹೋದಾಗ ಅವನು ದೊಡ್ಡದೊಂದು ಫೋಟೋ ಗೋಡೆಗೆ ನೇತು ಹಾಕಲು ತೊಡಗಿದ್ದ. "ಯಾರದಯಾ ಫೋಟೋ?" ಎಂದು ಕೇಳಿದೆ. "ಮತ್ತೆ ಯಾರದು? ನನ್ನ ತಂದೆಯವರದು. ಚಿಕ್ಕ ಫೋಟೋ ಇತ್ತು; ಎನ್‌ಲಾರ್ಜ್ ಮಾಡಿಸಿ ಹಾಕುತ್ತಿದ್ದೇನೆ" ಎಂದನು ಅವನು. ಫೋಟೋ ನೇತು ಹಾಕಿ, ನಂತರ ದೊಡ್ಡದೊಂದು ಹೂಮಾಲೆ ಹಾಕಿ ಅವನು ಕೈ ಮುಗಿದ. ಉಕ್ಕಿಬರುತ್ತಿದ್ದ ನಗೆ ತಡೆದುಕೊಳ್ಳಬೇಕಾದರೆ ನನಗೆ ಸಾಕುಬೇಕಾಗಿ ಹೋಯಿತು. ಏಕೆಂದರೆ ತಂದೆ ಜೀವಿಸಿದಾಗ ಇವನು ದಿನಾಲು ಜಗಳಾಡುತ್ತಿದ್ದ; ತನ್ನ ಮದುವೆಯಾದೊಡನೆ ಮುದುಕ ತಂದೆಯೊಬ್ಬನನ್ನೇ ಬಿಟ್ಟು ಮನೆ ಬಿಟ್ಟು ಹೊರ ಬಿದ್ದಿದ್ದ! ತಂದೆ ಯಾರ ಉಪಚಾರವೂ ಇಲ್ಲದ್ದರಿಂದ ಅನಾಥನಾಗಿ, ಕೊರಗಿ, ಕೊರಗಿ, ದುಃಖದಿಂದ ನಿಧನ ಹೊಂದಿದ್ದ!!

ಇನ್ನು ಕೆಲವರು ತಮ್ಮ ಮನೆಯ ಡ್ರಾಯಿಂಗ್ ರೂಮಿನಲ್ಲಿ ಒಂದು ರಾಜಕೀಯ ಪಕ್ಷದ ನಾಯಕರ ದೊಡ್ಡ ಫೋಟೋಗಳನ್ನು ಭವ್ಯವಾಗಿ ಹಾಕಿರುತ್ತಾರೆ. ಮುಂದೆ ಕೆಲವು ದಿನಗಳಲ್ಲಿಯೇ ಚುನಾವಣೆಯ ಪರಿಣಾಮವಾಗಿ ಸದ್ಯದ ಪಕ್ಷವು ಸೋತು, ಬೇರೆ ರಾಜಕೀಯ ಪಕ್ಷವು ಅಧಿಕಾರಕ್ಕೆ ಬರುತ್ತದೆ. ಆಗ ಇವರ ಮನೆಯಲ್ಲಿ "ಟ್ರಾನ್ಸ್‌ಫರ್ ಸೀನ್!" ರಾತ್ರಿ ಕಳೆದು ಬೆಳಗಾಗುವುದರೊಳಗಾಗಿ ಮೊದಲಿನ ಪಕ್ಷದ ನಾಯಕರ ಫೋಟೋಗಳೆಲ್ಲ ಮಾಯವಾಗಿ ಅವುಗಳ ಸ್ಥಾನದಲ್ಲಿ ಅಧಿಕಾರಾರೂಢ ಹೊಸ ಪಕ್ಷದ ನಾಯಕರು ರಾರಾಜಿಸಲು ಪ್ರಾರಂಭಿಸುತ್ತಾರೆ! ಯಶಸ್ವಿ ಜೀವನದ ಗುಟ್ಟು ಇದೇ ಅಲ್ಲವೆ?

ಅಂತೂ ಮನೆಯಲ್ಲಿ ಹಾಕುವ ನಿರ್ಜೀವ ಫೋಟೋಗಳು ಹೇಳುವ ಕಥೆ ಸ್ವಾರಸ್ಯಕರ ಅಲ್ಲವೆ?



# ಗರ್ವ

## ಸರಿತಾ ಕುಸುಮಾಕರ ದೇಸಾಯಿ

ಅಂದು ಸಹ ಬೆಂಗಳೂರ್-ಗುಂತಕಲ್ ಪ್ಯಾಸೆಂಜರ್‌ದಲ್ಲಿ ಯಥಾರೀತಿ ವಿಪರೀತ ಗದ್ದಲ; ಗಜಿಬಿಜಿ; ಕೇವಲ ಮೂರನೇ ದರ್ಜೆ ಡಬ್ಬಗಳಿದ್ದುದರಿಂದ ಹೆಚು ಹಣ ತೆತ್ತು ಆರಾಮ ಪ್ರವಾಸ ಬಯಸುವವರಿಗೂ ಅವಕಾಶವಿರದೇ ನೂಕು ನುಗ್ಗಲು ಪ್ರಯಾಣವೇ ಗತಿಯಾಗಿತ್ತು! ಅಂದು ಈ ತರಹದ ಪರಿಸ್ಥಿತಿ ಗಣೇಶನ ಪಾಲಿಗೂ ಕಾದಿತ್ತು! ತನಗೊದಗಿದ ಗತಿಯನ್ನು ಮನದಲ್ಲೇ ಶಪಿಸಿಕೊಳ್ಳುತ್ತ ಗಣೇಶ ಕೊನೆಯ ಕಂಪಾರ್ಟ್‌ಮೆಂಟಿನ ಮೂಲೆಯಲ್ಲಿ ಕುಳಿತು ಆ ತಿಂಗಳ 'ಇಂಪ್ರಿಂಟ್'ನ ಪುಟಗಳನು ತಿರುವುತ್ತಿದ್ದ.

ಗಾಡಿ ಮಂದಗತಿಯಲ್ಲಿ ಚಲಿಸಲು ಉಪಕ್ರಮಿಸುತ್ತಿದ್ದಂತೆ ಒಬ್ಬ ಗೃಹಸ್ಥ ಧಾವಿಸುತ್ತ ಒಂದು ಪ್ಲಾಟಫಾರಂ ಮೇಲೇ ನಿಂತು ಕಿಟಕಿಯಲ್ಲಿ ಕೈ ಬಡಿದು ಉಸುರಿದ– "ರೀ...ಮಿಸ್ಟರ್ ಕ್ಷಮಿಸಿ...ತೊಂದರೆ ಕೊಡ್ತಿದೀನಿ...ಅಗೋ ಅಲ್ಲಿ ಒಳಗೆ ನಿಮ್ಮ ಕಂಪಾರ್ಟಮೆಂಟಿಗೆ ಹತ್ತುತ್ತಿದಾರಲ್ಲ ಅವಳು ನಮ್ಮ ವೈಫ್. ಅವರನ್ನು ಕೊಂಚ ಗುಂತಕಲ್‌ನಲ್ಲಿ ಜನತಾಕ್ಕೆ ಕೂಡಿಸಬೇಕು...ನೀವು ಗುಂತಕಲ್ ವರೆಗೆ ಹೋಗ್ತೀರಿ ತಾನೆ?" ಗಣೇಶ ತಬ್ಬಿಬ್ಬಾಗಿ ಒಳಗೆ ಧಾವಿಸುವ ಆ ಯುವತಿಯನ್ನು ಒಮ್ಮೆ ಮಾತ್ರ ತಿರುಗಿ ನೋಡಿ ಗೃಹಸ್ಥನೆಡೆಗೆ ತಿರುಗಿ ಹೇಳಿದ— "ಆಗ಼್ಿ...ಪರವಾಗಿಲ್ಲ...ನಾನು ಬಳ್ಳಾರಿಗೆ ಹೋಗ್ತಾ ಇದೀನಿ... ಜನತಾಕೆ ಕೂಡಿಸುವೆ...ನನ ಗಾಡಿಗೆ ತುಂಬ ಸಮಯವಿರುತ್ತೆ" ಎನ್ನುತ್ತ ಆಶ್ವಾಸನೆ ಕೊಡುತ್ತಿದಂತೆ ಗಾಡಿ ಚಲಿಸುವ ಗತಿ ತೀವ್ರವಾಗಿ ಅವನ ಚಿತ್ರ ಮಸಕಾಗಿ ಬೆಂಗಳೂರ ಸ್ಟೇಶನ್ ದೂರವಾಗುತ್ತಿದ್ದಂತೆ ಆ ಮಹಿಳೆ ಗದ್ದಲದಲ್ಲೇ ಸ್ಥಳ ಮಾಡಿಕೊಳುತ್ತ ತನ ಚಿಕ್ಕ ಸೂಟಕೇಸ್, ಬುಟ್ಟಿಯನ್ನು ಹೊಂದಿಸಿಟ್ಟುಕೊಳ್ಳುತ್ತ ಆ ಬದಿಯ ಕಿಟಕಿಯ ತುದಿಗೆ ಕೊಂಚ ಸ್ಥಳ ಮಾಡಿಕೊಂಡು ಕುಳಿತುಕೊಂಡದನ್ನು ಕಂಡ ಗಣೇಶ. ಆದರೆ ಅವಳ ಮುಖವಾಗಲಿ, ಅವಳ ನಿಂತ ನಿಲುವು ಆಗಲಿ, ಕುಳಿತ ರೀತಿಯಾಗಲಿ ಸ್ಪಷ್ಟವಾಗಿ ಕಾಣದಷ್ಟು ಜನ ಜಂಗುಳಿಯಲ್ಲಿ ಅವಳಿಗೆ "ಜನತಾಕೆ ನಾನು ಕೂಡಿಸುವೆ. ನೀವು ಚಿಂತೆ ಬಿಡಿ" ಎಂಬ ಆಶ್ವಾಸನೆ ಕೊಡುವ ಅವಕಾಶ ಅವನಿಗೆ ಒದಗಲೇ ಇಲ್ಲ! ಇಂಪ್ರಿಂಟ್‌ನಲ್ಲಿ ಕಥೆ ಓದುವದರಲ್ಲಿ ಮಗ್ನನಾದ. ಏಕೋ ಅವಳನ್ನು ಮತ್ತೊಮ್ಮೆ ನೋಡಬೇಕು ಎನಿಸಿ ಅವನು ಪುಸ್ತಕ ಮುಚ್ಚಿ ತಲೆ ಎತ್ತಿದಾಗ ಅವಳ ಮುಖ ಕಾಣಿಸಲೇ ಇಲ್ಲ. ಆದರೆ ಅವಳ ಪಕ್ಕಕ್ಕೆ ಕುಳಿತ ಹಳ್ಳಿಯ ಹೆಣ್ಣು ಮಗಳೊಬ್ಬಳು ತಾನು ಜಗಿದ ಹೊಗೆಸೊಪ್ಪು ಉಗುಳಲು ಅವಳ ಮೇಲೆ ಬಗ್ಗಿ ಕಿಟಕಿ ಕಡೆಗೆ ವಾಲುವ ಅವಳ ಪಾರ್ಶ್ವ ಮಾತ್ರ ಕಾಣಸಿಕ್ಕಿತು! ಹೊಗೆಸೊಪ್ಪು ಉಗುಳಿ ಸರಿಯಾಗಿ ಕುಳಿತುಕೊಳ್ಳಬೇಕೆನ್ನುವಷ್ಟರಲ್ಲೇ ಪಕ್ಕದವಳು ಅವಳ ಮತ್ತಷ್ಟು ಸ್ಥಳ ಆಕ್ರಮಿಸಿ ತನ್ನ ಗಂಟನ್ನೂ ಮೇಲೆ ಹೇರಿಕೊಂಡು ಇರುಕಲ ಮಾಡಿದಾಗ ಆ ಇಬ್ಬರಲ್ಲಿ ಒಂದು ವಾಗ್ಯುದ್ಧವೇ ಸಾಗಿದಾಗ ಗಣೇಶ ಮಾತಿಲ್ಲದೇ ದೃಶ್ಯ ವೀಕ್ಷಿಸತೊಡಗಿದ್ದ!

ದೊಡ್ಡಬಳ್ಳಾಪುರ ತಲುಪಿದಾಗ ಕಂಪಾರ್ಟಮೆಂಟ್‌ನಲ್ಲಿ ಒಂದು ತರಹದ ಶಾಂತತೆ ನೆಲೆಸಿತ್ತು. ಹತ್ತಿರ ಹತ್ತಿರವಿದ್ದ ಊರುಗಳಿಗೆ ಇಳಿಯುವವರು ತಲುಪುವ ಸ್ಥಳ ಬಂತಲ್ಲ ಎಂಬ ಸಮಾಧಾನ ತಾಳಿದರೆ– ದೀರ್ಘ ಪ್ರಯಾಣ ಮಾಡುವವರಿಗೆ ಕೊಂಚ ದಾರಿ ಸವೆಯಿತಲ್ಲ ಎಂಬ ಸಮಾಧಾನ! ಒಂದು ತರಹದ ಸಮಾಧಾನವೆನಿಸಿ ಗಣೇಶ ಮುಖವೆತ್ತಿ ಅವಳನ್ನೇ ಉದ್ದೇಶಿಸಿ ಕೇಳಿದ– "ತಾವು ಎಲ್ಲಿಗೆ ಹೋಗ್ಬೇಕು?" ಅವಳೂ ಈಗ ನಿರಾತಂಕವಾಗಿ ಕುಳಿತಿದ್ದು 'ಸೊಲ್ಲಾಪುರಕ್ಕೆ' ಎಂದ ಉತ್ತರಿಸಿದಳು. ಗಣೇಶ ಅವಳನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದ! ಅವಳೇನೋ 'ಅಪ್ಸರೆ'ಯಂತಹ ಚಲುವೆಯಲ್ಲದಿದ್ದರೂ ಅದೆಷ್ಟು ಕಳೆ ಅವಳ ಮುಖದಲ್ಲಿ! ಎಂತಹ ಆಕರ್ಷಕ ನಿಲುವು! ಅವಳು ಉಟ್ಟಿದ್ದ ತಿಳಿ ಗುಲಾಬಿ ಸೀರೆ ಅವಳಿಗೆ ತುಂಬಾ ಒಪ್ಪಿದೆ ಎನಿಸಿತವನಿಗೆ! ತಾನು ಹಾಗೆ ನೋಡುತ್ತಿರುವುದು ಅವಳಿಗೆ ಅಸಭ್ಯತನವೆನಿಸಲಿಕ್ಕಿಲ್ಲವೆ ಎಂಬ ಸನ್ನಿವೇಶಕ್ಕೆ ಮಣಿದು ತಕ್ಷಣ ಅವನು ತನ್ನ ನೋಟ ಕಿತ್ತಿ ಪುಸ್ತಕದತ್ತ ಹೊರಳಿಸಿದ. ಆದರೂ ತುಂಟ ರಸಿಕ ಮನಸ್ಸು ಅವಳ ಮುಖ ದಿಟ್ಟಿಸಲು ಪ್ರೇರೇಪಿಸುತ್ತಿತ್ತು.

ಅಷ್ಟರಲ್ಲೇ ಕಾಲೇಜ್ ಸಹಪಾಠಿ, ಆತ್ಮೀಯ ಮಿತ್ರ ಅನಂತ ಅವನಿದ್ದ ಕಂಪಾರ್ಟ್‌ಮೆಂಟಿನಲ್ಲೇ ನುಗ್ಗಿದಾಗ ಮಿತ್ರನಿಗಾಗಿ ಸ್ಥಳ ಮಾಡಿಕೊಡುತ್ತ ಗಣೇಶ ಅವನ ಆಕಸ್ಮಿಕ ಭೆಟ್ಟಿಗೆ ಸಂತಸ ಸೂಚಕ ನಗೆ ನಕ್ಕಾಗ ಅನಂತ ಅವನ ಪಕ್ಕಕ್ಕೆ ಕುಳಿತುಕೊಳುತ್ತ "ಇದೇನು ನಿಮ್ಮಂತಹ ಸಾಹೇಬ್ರು ಈ ಗಾಂಧಿ ಕ್ಲಾಸಿನ ಡಬ್ಬಿಯಲ್ಲಿ" ಎಂದು ಗೇಲಿ ಮಾಡಿದಾಗ ಗಣೇಶ ಅವಳ ಕಡೆಗೆ ನೋಡುತ್ತ ಹೇಳಿದ–

"ಇವತ್ತು ನನ್ನ ಫಜೀತಿ ಏನು ಕೇಳ್ತೀಯಾ..... ಕಾರ್ ಫೇಲಾಯ್ತು... ಅಟೋರಿಕ್ಷಾ ಸಹ ಸ್ಟ್ರೈಕ್ ಇತ್ತಲ್ಲ... 'ಇವತ್ತೇ ಹೊರಟು ಬಾ' ಅಂತ ತಂದೆಯವರ ಟೆಲಿಗ್ರಾಂ ಬೇರೆ... ಮತ್ತೇನು ಮಾಡ್ಲಿ... ಈ ಗಾಡೀನೇ ಹಿಡಿದೆ." ಅವಳು ಮ್ಯಾಗಝಿನ್ ಸರಿಸಿ ತನ್ನ ಹೇಳಿಕೆ ಆಲಿಸಿದಂತೆ ಭಾಸವಾಗಿ ಅವನಿಗೆ ಒಂದು ತರಹದ ಹುರುಪು ಬಂತು. "ತನ್ನ ಬಳಿ ಕಾರು ಇದೆ" ಎಂಬ ಅಂಶ ಅವಳು ಗ್ರಹಿಸಿದಳು ತಾನೆ?... "ಹಾ... ಸರಿ ಮತ್ತೇನಯ್ಯ ಸುದ್ದಿ ಆದಿರಲಿ... ನಿನ್ನ ನೋಡಿ ಎರಡು ವರ್ಷ ಆಯ್ತು. ಈ ಎರಡು ವರ್ಷದಲ್ಲಿ ಮತ್ತೇನಾದ್ರೂ ಪ್ರಗತಿ... ಅದು ಸರಿ. ನಿಮ್ಮ ತಂದೆ ಕುಶಲ ತಾನೆ?" ಗಡಿಬಿಡಿಯಲ್ಲಿ ಪ್ರಶ್ನೆ ಕೇಳುವುದು, ತಾನೇ ಉತ್ತರ ಊಹಿಸುವುದು. ಅನಂತನ ಅವಸರ ಅಡಾಉಡಿಯ ಸ್ವಭಾವ ಗಣೇಶನಿಗೆ ಹೊಸದೇನಲ್ಲ!

'ಟೆಲಿಗ್ರಾಂ... ಅಂದೆ... ಅದ್ಕೆ ಕೇಳ್ದೆ' ಎಂದು ಅವನೆಂದಾಗ "ಹಾಗೇನೂ ವಿಶೇಷವಿಲ್ಲ... ವ್ಯಾಪಾರದಲ್ಲಿ ಕೊಂಚ ಏರು ಪೇರಾದ್ರೂ ನಾನು ತಮ್ಮ ಹತ್ತಿರಾನೇ ಬೇಕು ಅವರಿಗೆ" ಎಂದ ಗಣೇಶ.

'ಅಲ್ಲಯ್ಯ...ನಮ್ಮ ಮೂರ್ತಿ ಇರಲಿಲ್ವೆ... ಮೊನ್ನೆ ಅವನು ..ಬೆಂಗಳೂರಿನಲ್ಲಿ ಸಿಕ್ಕಿದ್ದ...ಈಗ ಅವನು "ಡೆಪ್ಯುಟಿ ಕಮಿಶನರ್ ಅಂತೆ...ನೀನ ದಿಲ್ಲಿ...ಮುಂಬಯಿ, ಯು ಎನ್. ಓ. ಇಂಗ್ಲೆಂಡ್‌ನಲ್ಲಿ ಇರ್ತೀಯೋ ಏನೋ ಎಂದು ಊಹಿಸಿದ್ದೆವು...ನಿನ್ನ ಕರಿಯರ್ ಏನು.. ನಿನ್ನ ಮೇಧಾವಿತನ, ನಿನ್ನ ವ್ಯಕ್ತಿತ್ವ ಎಲ್ಲ ಮಣ್ಣುಗೂಡಿಸಿ ಸುಡುಗಾಡು ಬಳ್ಳಾರೀಲಿ ಏನು ಇದೇಂತ ಹೀಗೆ ತಕ್ಕಡಿ ಹಿಡಿಯೋಕ್ಕೆ ಬಂದು ಬಿದ್ದೆ...ಇದು ಮಾತ್ರ ನನಗೆ ಎಳ್ಳಷ್ಟೂ ಹಿಡಿಸಲಿಲ್ಲ ಬಿಡು" ಎಂದು ಅನಂತ ಅಲ್ಲಗಳೆದಾಗ ಗಣೇಶ ದೂರ ಕಿಟಕಿಯತ್ತ ನೆಟ್ಟ ದೃಷ್ಟಿಯಿಂದ ನೋಡುತ್ತ "ಅದೆಲ್ಲ ಅವರವರ ಅದೃಷ್ಟ ಕಣೋ" ಎಂದಾಗ ಗಟ್ಟಿಯಾಗಿ ಸಿಡುಕುತ್ತ ಅನಂತ ಉಸುರಿದ– "ನಮ್ಮಂತಹವರು ಅದೃಷ್ಟ ಅಂತ ಮಿಡುಕುತ್ತ ಕೂತ್ಕೋಬೇಕು...ನಿನಗೇನಯ ಧಾಡಿಯಾಗಿತ್ತು...ನಿನ್ನ ವಿದ್ಯೆ ಬುದ್ಧಿ ಜಾಣ್ಮೆ ಎಲ್ಲ ಎಲ್ಲಿ ಹೋಗಿತ್ತಪ್ಪ...ಕಾಲೇಜ್‌ನಲ್ಲಿ ಎಲ್ಲರ ಕಣ್ಮಣಿಯಾಗಿ ಮೆರೆದೋನು. ಏನೇನೋ ಸಾಧಿಸಿ ಜೀವನದಲ್ಲಿ ಹೆಚ್ಚಿನ ಪ್ರಗತಿ ಕಾಣ್ತೀಯಾ ಎಂದು ಕನಸು ಕಂಡಿದ್ದ ನಮಗೆ ನಿರಾಶೆ ಮಾಡಿಬಿಟ್ಟೆ. ಆ ಸುಡುಗಾಡು ಮೂರ್ತಿಯ ದೈವ ನೋಡಾ. ನಿಜವಾಗಿ ಇದು ತುಂಬಾ ಅನ್ಯಾಯ ಕಣಯ್ಯ! ಆದ್ರೂ ಪರವಾಗಿಲ್ಲ... ಇಂಪ್ರಿಂಟ್‌ನಂತಹವುದನು ಓದುವಷ್ಟು ಉಳಿಸಿಕೊಂಡಿದೀಯಾ" ಮಾತು ಮುಗಿಸುವ ಧೋರಣೆಯಲ್ಲಿ ಗಣೇಶ ಹೇಳಿದ: "ನಾನು ಈಗ ಆಗ಼್ೇ ಹೇಳಿದ್ನಲ್ಲ ಅದೆಲ್ಲ ಅವರವರ ದೈವ ಅಂತ...ಇರ್ಲಿ ಬಿಡು ನಾನೇನು ಜೀವನದಲ್ಲಿ ಅಸಂತೃಪ್ತಿ ಪಡುತ್ತಿಲ್ಲ.. ಈಗ ನನಗೇನು ಕಮ್ಮಿ ಇಲ್ಲ... ಆದರೂ ಈ ಮಟ್ಟಕ್ಕೆ ಬಂದು ಮುಟ್ಟಬೇಕಾದ್ರೆ ಕೊಂಚ ವರುಷ ಹಿಡೀತು ಬಿಡು...ತಂದೆಯವರಿಗೂ ವಯಸ್ಸಾಗುತ್ತ ಬಂತು...ಮನೆ, ಮನೆತನ ಜವಾಬ್ದಾರಿ ಹೊರಲು ನಾನು ಬರುವುದು ಅತ್ಯವಶ್ಯವಿತ್ತು."

ಒಂಟಿಯಾಗಿ ಪ್ರಯಾಣ ಮಾಡುತ್ತಿದ್ದ ಆ ಸ್ತ್ರೀಯ ಚೆಲುವಿಕೆಗೆ ಮನಸೋತು, ಅವಳಿಗೊಂದು ಚಿಕ್ಕ "ಉಡುಗೊರೆ"ಯನ್ನು ಆತ ಕೊಡಬಯಸಿದ. ಆ "ಉಡುಗೊರೆ"ಯನ್ನು ಅವಳು ಮೌನದಿಂದ ನಿರಾಕರಿಸಿ, "ನೀವು ತೋರಿದ ಗೌರವಕ್ಕೆ ತುಂಬಾ ಥ್ಯಾಂಕ್ಸ್" ಎಂದು ನುಡಿದು ತನ್ನ ಪ್ರಯಾಣ ಮುಂದುವರೆಸಿದಳು.........



ವಿವರಣೆ ಕೊಡುತ್ತ, ಗಣೇಶ ಅವಳ ಕಡೆಗೆ ನೋಡಿ ಅವಳ ನೋಟವೂ ಬೆರೆತಾಗ ಒಂದೇ ಕ್ಷಣ ಏನೋ ವಿಚಿತ್ರ ಅನುಭವವೆನಿಸಿತವನಿಗೆ. ಅವಳ ನೋಟದಲ್ಲಿ ತನ್ನ ಬಗ್ಗೆ ಕುತೂಹಲ ಬೆರೆತ ಅಭಿಮಾನದ ಭಾವ ಅಡಗಿತ್ತೆಂಬ ಅಂಶ ಹೊಳೆದು ಒಂದು ಸಂತಸ ಲಹರಿ ಮೂಡಿ ಬಂದಿತವನಲ್ಲಿ!

ಅನಂತನ ಅನಂತ ಹರಟೆ ಸಾಗಿಯೇ ಇತ್ತು. ಅವನಿಗೆ ಸಮಯಾಸಮಯ ಪ್ರಜ್ಞೆ ಗೊತ್ತಿಲ್ಲ...ಅಪ್ರಾಸಂಗಿಕವಾದರೂ ಮನಸ್ಸಿಗೆ ಬಂದ ಕೂಡಲೇ ಮಾತು ಬಾಯಿಗೆ ಬಂದೇ ಬಿಡಬೇಕು ಅದು ಅವನ ಸ್ವಭಾವ. ಅನಂತ ತಟ್ಟನೇ ಕೇಳಿದ—

"ಅಲ್ಲಯ್ಯ...ಆ ಹುಡುಗಿ ನಿನ್ನ ಬೆನ್ನು ಹತ್ತಿತ್ತಲ್ಲ...ಅವಳ ಜೊತೆಗೆ ನಿನ್ನ ಲಗ್ನ ಯಾಕೆ ಆಗ್ಲಿಲ್ಲ... ಅಲ್ಲ..ಅವಳು ಈಗ ನಮ್ಮ ಲಡ್ಡೂ ಗೋಪಾಲ ಹೆಂಡ್ತಿ ಅಂತೆ".

"ಇರ್ಲಿ ಬಿಡಯ್ಯ...ಒಳ್ಳೇ ಹಳೇ ಪುರಾಣ ಬಿಚ್ತೀಯಾ ಕಾಲೇಜ್ ಜೀವನ ಮುಗಿದು ಹತ್ತು ವರ್ಷ ಆಯ್ತು." ಮೆಲು ನಗುತ್ತ ಗಣೇಶ ಮತ್ತೆ ಅವಳತ್ತ ಲಕ್ಷ್ಯ ಹರಿಸಿದಾಗ ಅವಳೂ ಮೆಲುನಗುತ್ತ ನೆಪ ಮಾತ್ರಕ್ಕೆ ಪುಸ್ತಕದ ಪುಟ ತಿರುವುತ್ತಿರುವುದನ್ನು ಗಮನಿಸಿದ. ಅನಂತ ಸುಮ್ಮನೇ ಇದ್ದರೆ ತಾನೆ?

"ನಿನಗೇನು...ಸರಿ ಸಾಟಿಯೇ ಆ ಗೋಪಾಲ...ನೀನು ಕಪ್ಪು ಇದ್ದರೂ ನಿನ್ನ ಮುಖದ ಕಳೆ ಅವನ ಉಂಗುಷ್ಟಕ್ಕೂ ಇಲ್ಲ...ನಿನ್ನ ನಿಲುವು...ನಿನ್ನ ಸ್ವಭಾವ..."

"ಹಾ...ಹಾ...ಇರ್ಲಿ ಬಿಡಯ್ಯ" ಭುಜ ತಟ್ಟುತ್ತ ಗಣೇಶ ತಡೆದಾಗ ಅನಂತನಿಗೆ ಈಗ ಎದುರು ಸೀಟಿನಲ್ಲಿ ಮಹಿಳೆಯೊಬ್ಬಳು ತನ್ನ ಮಾತು ಕೇಳುತ್ತಿದ್ದಾಳೆಂದು ಹೊಳೆದು ಕೊಂಚ ತಬ್ಬಿಬ್ಬಾದ. ಅವನ ಅವಸ್ಥೆ ನೋಡಿ ಅವಳೂ ಅವನೂ ಇಬ್ಬರೂ ಒಟ್ಟಿಗೆ ನಕ್ಕಾಗ ಅನಂತನೂ ಮುಕ್ತ ಮನಸ್ಸಿನಿಂದ ಕೊಂಚ ಗಟ್ಟಿಯಾಗಿಯೇ ನಕ್ಕ!

"ಹೋಗ್ಲಿ ಬಿಡು..ಈಗ ವ್ಯಾಪಾರಾನಾದ್ರೂ ಹೇಗೆ ಸಾಗಿದೆ?" ಏನೋ ಹಳಿ ತಪ್ಪಿದ ಗಾಡಿ ಪುನಃ ಹಳಿಗೆ ಸಿಕ್ಕಂತೆ ಅನಂತ ಕೇಳಿದ.

"ನೋಡಯ್ಯ ಅದೂ ಒಂದು ಕತೇನೇ..ನಾನು ತಂದೆ ಕಡೆ ಆಸ್ತಿ, ತಾಯಿ ಆಸ್ತಿ ಎರಡೂ ಕೈ ಸೇರುತ್ತದೆ ಎಂದೇ ಅಲ್ವೇ ಈ ವ್ಯಾಪಾರ ಜಂಜಾಟಕೆ ಬಿದ್ದದ್ದು. ಆದ್ರೆ ಏನು ಕೇಳ್ತೀಯಾ..ತಂದೆ ಆಸ್ತಿ ಮಾತ್ರ ಉಳೀತು. ತಾಯಿ ಆಸ್ತಿಗಾಗಿ ಬರೀ ಕೋರ್ಟು ಕಛೇರಿ ವ್ಯಾಜ್ಯ ಇನೂ ಹಾಗೇ ಸಾಗಿದೆ. ಅದು ಸರಿ... ಹಣಕ್ಕೂ-ಸುಖಕ್ಕೂ ಏನಯ್ಯ ಸಂಬಂಧ! ಯಾವುದೇ ಸ್ಥಿತಿ ಇರಲಿ ಅದರಲ್ಲೇ ಸುಖ ಹುಟ್ಟಿಸಿಕೊಂಡ್ರೇ ಸುಖ ತಾನೆ?"

"ಅದೆಲ್ಲ ತತ್ವದ ಮಾತು. ಪುಸ್ತಕದಲ್ಲಿ ಬರೆಯೋಕೆ ಓದೋಕೆ ಮಾತ್ರ ನಿಜ ಬಿಡು...ಆದ್ರೆ ನೀನು ಏನೇ ಹೇಳು... ನೀನು ಹೇಗಿದ್ದೋನು ಏನೇನೋ ಆಗ್ಬೇಕಾದೋನು ಸಹ ಕೇವಲ ಇಷ್ಟೇ ಉಳಿದದ್ದು ನನಗಂತೂ ಕೆಟ್ಟನಿಸುತ್ತಿರುತ್ತದೆ ನೋಡು."

'ಹಿಂದುಪುರ'ದಲ್ಲಿ ಗಾಡಿ ನಿಂತಾಗ ಅನಂತ ಅಲ್ಲೇ ಇಳಿಯುವವನಿದ್ದು ಗಡಬಡಿಸಿ ಕೆಳಗಿಳಿದಾಗ ಗಣೇಶನೂ ಅವನನ್ನು ಬೀಳ್ಕೊಟ್ಟು ಬಿಸಿ ಬಿಸಿ ಕಾಫಿ ಹೀರಿ ಬಂದು ಸ್ವಸ್ಥಾನದಲ್ಲಿ ಕುಳಿತ. ಗಾಡಿ ಕದಲಿದಾಗ ಅವನಿಗೆ ಪಟ್ಟನೆ ನೆನಪಾಯ್ತು. ಪಾಪ... ಅವಳಿಗೆ ಸೌಜನ್ಯಕ್ಕಾದರೂ ತಾನು ಕಾಫಿ ತಂದು ಕೊಟ್ಟು ಕುಡಿ ಎಂದಿರಿ ಅನ್ನಬಾರದಿತ್ತೆ...ಹಸಿವೆ ಆಗಿರುತ್ತೊ ಏನೋ...ಏನಾದ್ರೂ ತಂದುಕೊಡಬಾರದಿತ್ತೆ ಎಂದು ಹಳಿದುಕೊಳ್ಳುತ್ತ ಅವಳಿಗೆ ಹೇಳಿದ—

"ರೀ ನಿಮಗೆ...ಕಾಫೀ ಗೀಫಿ ಬೇಕಾಗಿತ್ತೇನೋ... ಮುಂದಿನ ಸ್ಟೇಶನ್ನನಲ್ಲಿ ತಂದುಕೊಡ್ತೀನಿ..." ಎಂದಾಗ ಅವಳೂ 'ಪರವಾಗಿಲ್ಲ' ಎಂದುಮೆಲುನಕ್ಕು "ನಿಮ್ಮ ಮಿತ್ರ ಈ ಊರಲ್ಲೇ ಇಳಿದ್ರೇನು' ಎಂದಾಗ ಗಣೇಶ ಹೌದು ಅವನು ಇಲ್ಲೇ ಇಳಿದ ತುಂಬ ಗಡಿಬಿಡಿ" ಎಂದಾಗ ಇಬ್ಬರೂ ನಕ್ಕರು. ಕಂಪಾರ್ಟಮೆಂಟ್‌ನಲ್ಲಿ ಶಾಂತತೆ ನೆಲೆಸಿತ್ತು. ಆ ಪಕ್ಕಕ್ಕೆ ಒಂದಿಬ್ಬರು ಕುಳಿತಿದ್ದರಷ್ಟೇ...ಈಗ ಇವರಿಬ್ಬರೇ ಎದುರು ಬದಿರಾಗಿ ಕುಳಿತಿದ್ದರಿಂದ ನಿರಾತಂಕವಾಗಿ ಮಾತನಾಡಬಹುದಾದ ಅವಕಾಶ ಒದಗಿತ್ತು.

ಅವನು ತನ್ನನ್ನೆ ನೆಟ್ಟ ದೃಷ್ಟಿಯಿಂದ ನೋಡುತ್ತಿರುವುದನ್ನು ತಪ್ಪಿಸಲೋ ಎಂಬಂತೆ ಅವಳು ಮಾತಿಗೆ ಮೊದಲಿಟ್ಟಾಗ ಗಣೇಶ ತನ್ನನ್ನು ಸಂಬಾಳಿಸಿಕೊಳ್ಳುತ್ತ ಅವಳು ಕೇಳಿದ್ದು ಏನೆಂದು ತಿಳಿಯಲು 'ಏನಂದಿರಿ' ಎಂದ. 'ನಿಮ್ಮ ಮಿತ್ರ ಹೇಳ್ತಿದ್ರಲ್ಲ...ನೀವೂ ಅವರೂ ಒಟ್ಟಿಗೇ ಓದ್ತಿದ್ದಿರೇನೋ' ಎಂದು ಅವಳೆಂದಾಗ ಗಣೇಶ ಉತ್ಸಾಹ ಲವಲವಿಕೆಯಿಂದ ಸರಿಯಾಗಿ ಕುಳಿತುಕೊಳ್ಳುತ್ತ ಹೇಳಿದ— "ಹೌದು ನಾವಿಬ್ರೂ ಕ್ಲಾಸ್ ಮೇಟಾಗಿದ್ದೆವು. ನನ್ನ ಹೆಸರು ಗಣೇಶ ಅಂತ. ಬಳ್ಳಾರಿಯಲ್ಲಿ ಬಿಜಿನೆಸ್ ಮಾಡ್ತಿದೀನಿ...ನಿಮ್ಮವರೇನೊ ಜನತಾಕ್ಕೆ ಕೂಡಿಸಿ ಅಂತ ಹೇಳಿ ಹೋದ್ರು. ಬಹುಶಃ ಒಬ್ಬರೇ ಹೋಗ್ತಿರೋದು—"

"ಒಬ್ಬಳೇ ಹೋಗೋದು ಇದೇನು ಮೊದಲಲ್ಲ. ಆದ್ರೂ ನಮ್ಮವರು ಅಂತೆ ನಮ್ಮ ಗುರುತಿನ- ಪರಿಚಯದವರಿದ್ರೆ ಚೆನ್ನಾಗಿರುತ್ತೆ ಅಲ್ವೆ... ಕಳಿಸೋಕ್ಕೆ ಬಂದಿದ್ರಲ್ಲ... ಅವರೇ ನಮ್ಮ ಯಜಮಾನ್ರು. ಎಚ್. ಎಮ್. ಟಿ. ಯಲ್ಲಿ ಇಂಜಿನಿಯರ್ ಆಗಿದ್ದಾರೆ. 'ಶ್ರೀ ರಂಗನಾಥ್ ಅಂತ."

"ಓಹೋ... ನಿಮಗೆ ಜನತಾಕ್ಕೆ ಕೂಡಿಸ್ತೇನೆ... ನನ ಗಾಡಿಗೆ ತುಂಬ ಸಮಯವಿರುತ್ತೆ... ಅಂದ ಹಾಗೆ ನೀವು ಹೋಗ್ತಿರೋದು ಸೊಲ್ಲಾಪುರಕ್ಕೆ ಅಂದ್ರಲ್ಲ... ನಾಳೆ ಬೆಳಿಗ್ಗೆ ಹತ್ತು ಗಂಟೆಗೆ ಮುಟ್ತೀರೇನೋ."

"ಹೌದು ಸೊಲ್ಲಾಪುರದಲ್ಲಿ ನಮಣ್ಣನಿಗೆ ಕೆಲಸ. ಅಲ್ಲೇ ನಮ್ಮ ಬಳಗದವರಲ್ಲಿ ಮದುವೆ ಇದೆ. ಇವರಿಗೆ ರಜೆ ಸಿಕ್ಲಿಲ್ಲ... ಅದಕ್ಕೋಸ್ಕರ ನಾನೊಬ್ಬಳೇ ಹೋಗ್ತಿರೋದು... ನಾಳೆ ಮಧ್ಯಾಹ್ನ ಮದುವೆ... ತಿರುಗಿ ನಾಡಿದ್ದೇ ನಾನು ಹೊರಟು ಬಿಡಬೇಕು."

"ಅದೇ ಸರೀನ್ರಿ...ಇಲ್ಲದಿದ್ರೆ ಹಳೇ ಕಾಲದ ಹಾಗೆ ಮದುವೆ ಅಂದಕೂಡ್ಲೇ ಎಂಟು ದಿವಸ ಮೊದಲು ಬಂದು, ಮದುವೆ ಆದಮೇಲೆ ಎಂಟು ದಿವಸ ಇದ್ದು ಹೊರಡೋ ಕಾಲವೇ ಇದಲ್ಲ ಅಲ್ವೇ. ಅಂತೂ ನಮ್ಮ ಈ ಹಳೇ ಸಂಪ್ರದಾಯಗಳೆಲ್ಲ ಯಾವತ್ತು ಹೋಗುತ್ತೊ ಏನೋ" ಎನ್ನುತ್ತ ಗಣೇಶ ಗಾಡಿ ನಿಂತ ಅನುಭವವಾಗಿ ಕಿಟಕಿ ಹೊರಗೆ ತಲೆಹಾಕಿ ನೋಡಿ ತಟ್ಟನೆ ನುಡಿದ— "ನೋಡಿ ನಿಮಗೆ ಹಸಿವೆಯಾಗಿರ್ಬಹುದು... ಏನಾದ್ರೂ ತರ್ತೀನಿ ತಾಳಿ" ಎನುತ್ತ ಯಾವುದೋ ಚಿಕ್ಕ ಸ್ಟೇಶನ್‌ನಲ್ಲೇ ಇಳಿಯುತ್ತಿದ್ದಾಗಲೇ ಅವಳು ಸಂಕೋಚದಿಂದ 'ಬೇಡ ಬೇಡ' ಎನ್ನುವುದೂ ಕೇಳಿಸುತ್ತಲೇ ಇತ್ತು.

'ಯಾವುದೂ ತಾಜಾ ಇಲ್ಲ' ಎನ್ನುತ್ತ ಮಿಕ್ಚರ್ ಮತ್ತು ಸೇಬು ಮೋಸಂಬಿ ಹಣ್ಣುಗಳನ್ನು ಅವನು ತಂದಿತ್ತಾಗ ಅವಳು ಅವುಗಳನ್ನು ತೆಗೆದುಕೊಂಡು ತನ್ನ ತಿಂಡಿಯ ಬುಟ್ಟಿಯಿಂದ ಅವನಿಗೂ ತಿಂಡಿ ತೆಗೆದು ಕೊಟ್ಟಾಗ ಗಣೇಶ ನಗುತ್ತ— 'ನೋಡಿ ಇದೇ ಮಜಾ... ನಾನು ನೆಲ್ಲಿಕಾಯಿ ಕೊಟ್ಟು ಕುಂಬಳಕಾಯಿ ಪಡೆದ ಹಾಗಾಯ್ತು' ಎಂದಾಗ ಅವಳೂ ನಗೆ ಬೀರಿದಳು! ಆ ಕಡೆ ಸೀಟಿನಲ್ಲಿ ಕುಳಿತಿದ್ದ ಮುಸಲ್ಮಾನ್ ಸಹ-ಪ್ರಯಾಣಿಕನಿಗೂ ತನಗಿತ್ತ ತಿಂಡಿಯಲ್ಲ ಕೊಂಚ ಕೊಟ್ಟು ಅವನೊಡನೆ ಔಪಚಾರಿಕ ಮಾತನಾಡಿ ಬಂದು ಗಣೇಶ ಸ್ವಸ್ಥಾನದಲ್ಲಿ ಕುಳಿತ; ಈಗವಳು ತಿಂಡಿ ತಿಂದಾದ ಮೇಲೆ 'ಬುಟ್ಟಿ ಕಟ್ಟಿಟ್ಟು ಸಜ್ಜು ಗೊಳಿಸಿ ಸೀಟಿನಲ್ಲೇ ಮಲಗಿದ್ದಳು. ಕಂಪಾರ್ಟ್‌ಮೆಂಟ್‌ನಲ್ಲಿ ನೂಕು ನುಗ್ಗಲಿದ್ದಾಗ ಅವಳನ್ನು ನೋಡಬೇಕೆಂಬ ಚಪಲದಲ್ಲಿ ತೊಳಲಿದ್ದ. ಆದರೆ ಈಗ ಎದುರಿಗೇ ಆಕರ್ಷಕ ನಿಧಿ ಇರುವಾಗ ಕಣ್ಣಿದ್ದೂ ಕುರುಡನಂತೆ ಅವನ ಪಾಡಾಗಿತ್ತು! ಏನೋ ಒಂದು ತರಹದ ವಿವೇಕದೊಡಗೂಡಿದ ಅಧೀರತೆ ಅವನನ್ನು ಆವರಿಸಿತ್ತು. ತನ್ನ ಈ ತರಹದ ಮುಜುಗರ ಅವಳಿಗೆ ಅರ್ಥವಾಗಬಹುದೇ? ತನ್ನ ಈ ಹೇಡಿತನವನ್ನು ಹೆಣ್ಣು, ಅದೂ ಸುಂದರ ಹೆಣ್ಣು, ಎಂದಾದರೂ ಸಹಿಸಬಹುದೇ? ಎಂಬ ಭಾವನೆ ಬಲಗೊಂಡಾಗ ಅವನು ಅವಳೆಡೆಗೆ ತಿರುಗಿ ತದೇಕ ದೃಷ್ಟಿ ಬೀರಿದಾಗ ಆಶ್ಚರ್ಯವೆಂದರೆ ಅವಳೂ ಇತ್ತ ಹೊರಳಿ ಇವನನ್ನೇ ನೋಡುತ್ತಿದ್ದಳು... ಅರೆಕ್ಷಣ... ಅವಳು ತನ್ನನ್ನೇ ತಾನು ಸಂಬಾಳಿಸಿಕೊಂಡು ಅತ್ತ ತಿರುಗಿದಳು! ಕಿವಿಯಲ್ಲಿಯ ಓಲೆಗಳೊಡನೆ ಸರಿಸಮವೆಂಬಂತಹ ಆ ಹೊಳಪು ಹಲ್ಲುಗಳು, ನೀಟಾದ ಮೂಗು, ಆ ಕಪ್ಪು ಕಣ್ಣುಗಳು. ಗಣೇಶ ನೋಡುತ್ತಲೇ ಇದ್ದ. ಅವನು ನೋಡುತ್ತಿದ್ದಾನೆಯೋ ಎಂಬುದನ್ನು ಖಚಿತ ಪಡಿಸಿಕೊಳ್ಳಲೋ ಎಂಬಂತೆ ಅವಳೂ ಆಗಾಗ ತನೆಡೆಗೆ ನೋಡಿ ನೋಟ ವಿನಿಮಯವಾದಾಗ ಗಣೇಶ ರೋಮಾಂಚನಗೊಂಡು ಯಾವುದೋ ಸ್ವಪ್ನಮಯ ಸುಂದರ ಜಗತ್ತಿನಲ್ಲಿ ತೇಲಿ ಹೋಗುತ್ತಿರುವಂತೆ ಕುಳಿತಿದ್ದ.

ಅವಳು ತನ್ನ ತೋಳನ್ನೇ ದಿಂಬಾಗಿರಿಸಿಕೊಂಡು ಮಲಗಿದ್ದಳು. ಆ ದೊಡ್ಡ ದೊಡ್ಡ ಕಣ್ಣುಗಳನ್ನು ಮುಚ್ಚುವ ಪ್ರಯಾಸದಲ್ಲಿ ರೆಪ್ಪೆಗಳು ಕೆಲಸ ನಡೆಸಿದ್ದುವು. ಮಹಾರಾಜನ ಬಳಿ ನಿಂತು ಬೀಸುವ ಚಾಮರವನ್ನು ನೆನಪಿಗೆ ತರುವಂತಹ ಆ ದಟ್ಟ ಕೂದಲುಳ್ಳ ಕಪ್ಪು ರೆಪ್ಪೆಗಳನ್ನೇ ದಿಟ್ಟಿಸುತ್ತ ಗಣೇಶ ಅಂದುಕೊಂಡ— ಬ್ರಹ್ಮ ಇವಳನ್ನು ಸೃಷ್ಟಿಸುವಾಗ ತುಂಬ ಲಕ್ಷ್ಯಕೊಟ್ಟು ಮುತುವರ್ಜಿ ವಹಿಸಿ ಕಳೆ ತುಂಬಿದ್ದಾನೆ. ಆಕರ್ಷಣೆಯನ್ನೆಲ್ಲ ಆ ಕಣ್ಣುಗಳಲ್ಲಿ ತುಂಬಿದ್ದಾನೆ ಎಂದುಕೊಂಡ. ಅವಳಿಗೆ ತನ್ನಲ್ಲಿ ಒಂದು ತರಹದ ಸುಂದರತೆಯ ಅಂಶವಿದೆ ಎಂಬ ಬಗ್ಗೆ ಅಭಿಮಾನವಿದೆ, ಬಿಂಕವಿದೆ, ಬೆಡಗಿದೆ. ತಾನು ಚೆಲುವೆ ಎಂಬ ಆ ಪ್ರಜ್ಞೆಯಿಂದಾಗಿಯೇ ಅವಳು ಮತ್ತಷ್ಟು ಸುಂದರಿಯಾಗಿ ಕಾಣುತ್ತಾಳೆ ಎನಿಸಿತವನಿಗೆ. ಒಂದೇ ದೃಷ್ಟಿಯಿಂದ ತನ್ನನ್ನೇ ನೋಡುತ್ತಿರುವುದನ್ನು ಅವಳು ಗ್ರಹಿಸಿದಳೇನೋ? ತಕ್ಷಣ ಎದ್ದು ಕುಳಿತು ಕಿಟಕಿ ಕಡೆಗೆ ಮುಖ ತಿರುಗಿಸಿಕೊಂಡಾಗ ಏನಾದರೂ ಮಾತು ಆಡಲೇಬೇಕಲ್ಲ ಎಂದುಕೊಂಡು 'ನನ್ನ ಬಳಿ ಡನ್‌ಲೊಪಿಲ್ಲೊ ಇದೆ. ಬೇಕೆ?' ಎಂದಾಗ ಅವಳು ಅರೆಮುನಿಸೋ ಎಂಬಂತೆ 'ಬೇಡ ಬೇಡ' ಎಂದು ಕಟುವಾಗಿ ಹೇಳಿದಾಗ ಅವನು ಕೊಂಚ ನಿರಾಶೆ ತಾಳಿ ತೆಪ್ಪಗೆ ಕುಳಿತುಬಿಟ್ಟ!

ತಾನಿನ್ನು ಅವಳನ್ನು ಅಷ್ಟು ನೋಡಬಾರದು

ಅವಳು ತನ್ನ ಬಗೆ ದಿನು ಭಾವಿಸುತ್ತಾಳೋ... ಎಂದೆನಿಸಿ ಅವನೂ ಮೌನ ವಹಿಸಿ ಕಿಟಕಿ ಹೊರಗೆ ಮುಖ ಹಾಕಿದ! ಕೊಂಚ ಹೊತ್ತು ಮೌನ ಆವರಿಸಿತ್ತು. ಅವಳೇ ಕೇಳಿದಳು— ನನ್ನ ವಾಚ್ ನಿಂತು ಬಿಟ್ಟಿದೆ...ಟೈಂ ಎಷ್ಟಾಗಿದೆ...' 'ಎಂಟು ಗಂಟೆ ಆಗ್ತಾ ಇದೆ ಇನ್ನೇನು ಗುಂತಕಲ್ ಬರುತ್ತೆ' ಎಂದ. ಈ ಕಟುಸತ್ಯ ಅವನಿಗೆ ಬೇಸರವೆನ್ನಿಸಿತು... ಗುಂತಕಲ್ ಬಂದು ಬಿಡುತ್ತೆ...ಅವಳು ಮರೆಯಾಗಿ ಹೋಗಿಯೇ ಬಿಡ್ತಾಳೆ...ಈ ವಿಚಾರವೇ ಬೇಡವೆಂಬಷ್ಟು ಕಹಿ ಎನಿಸಿತು! ಈ ಬೇಸರ ಕಳೆದುಕೊಳ್ಳಲು ಅವಳೊಡನೆ ಮಾತನಾಡುತ್ತಲೇ ಇರಬೇಕು ಎಂಬ ತನ್ನ ಒಳ ಮನಸ್ಸಿನ ಕರೆಗೆ ಬಲತುಂಬಿ ಅವಳನ್ನು ಕೇಳಿದ- "ನಿಮಗೆ ನಿದ್ದೆ ಬರ್‍ತಾ ಇದೆಯಾ?"

"ಛೆ...ಇಲ್ಲವಲ್ಲ...ಯಾಕೋ ಜಾವಲಿ ನಾನು ಗಾಡಿಯಲ್ಲಿ ನಿದ್ದೆ ಮಾಡೋದು ತುಂಬಾ ಕಮ್ಮಿ" ಎಂದವಳು ಮರುನುಡಿದಾಗ ಅವನಿಗೆ ತನ್ನ ಮೇಲೆ ಅವಳಿಗೆ ಕೋಪವಿಲ್ಲವಲ್ಲ ಎಂಬ ಸಮಾಧಾನ ಮೂಡಿತು.

ಆ ಮಾತು ಈ ಮಾತು ಸಾಗಿತ್ತು...ಗಾಡಿ ಅನಂತಪುರ ಬಿಟ್ಟು ಕದಲಿದಾಗ ಮುಸಲ್ಮಾನ್ ಸಹ-ಪ್ರಯಾಣಿಕನೂ ಯಾವಾಗಲೋ ಇಳಿದು ಹೋದಾಗ ಗಣೇಶ ತಕ್ಷಣ ಕಂಪಾರ್ಟಮೆಂಟಿನ ಸುತ್ತೂ ಕಣ್ಣೋಡಿಸಿ 'ಅರೆ'! ಎಂದಾಗ ಕಂಪಾರ್ಟ್‌ಮೆಂಟಿನಲ್ಲಿ ಕೇವಲ ತಾವಿಬ್ಬರೇ ಉಳಿದವರು ಎಂಬರ್ಥದ ಅವನ 'ಅರೇ' ಎಂಬ ಅರೆ ಮಾತು ಅವಳು ಗಮನಿಸಿ ಕೊಂಚ ಅಳುಕಿದಳೇನೋ. ಏಕದಂ ಮೌನ ಆವರಿಸಿತು. ಗಣೇಶನೇ ಮೌನ ಮುರಿದು— "ಕಲ್ಲೂರು ದಾಟಿತು...ನೋಡಿ What is the use of this train to run from here-after ಎಂದಾಗ ಮೌನಗೌರಿಯಾಗಿಯೇ ಕುಳಿತಿದ್ದಳು. ಗಣೇಶನಿಗೀಗ ವಿಚಿತ್ರ ಮುಜುಗುರವೆನಿಸತೊಡಗಿತ್ತು.

ಗುಂತಕಲ್ ಬಂದು ಬಿಡುತ್ತೆ...ಅಷ್ಟರವರೆಗೆ ಮಾತನ್ನಾದರೂ ಆಡುತ್ತಿರಬಹುದಲ್ಲ ಎಂದು ಅವನೇ ಹರಟೆಗೆ ಮೊದಲಿಟ್ಟ. ಆಶ್ಚರ್ಯವೆಂದರೆ ಈಗವಳು ಮೊದಲಿನಂತೆ ನಿಸ್ಸಂಕೋಚವಾಗಿ ಮಾತನಾಡದೇ ಕೊಂಚ ಗಂಭೀರಳಾಗಿಯೇ ಕುಳಿತಿದ್ದರಿಂದ ಅವನಿಗೆ ಏನೂ ತೋಚದಂತಾಗಿತ್ತು. ಆದರೂ ಹೊರಗೆ ಚೆಲ್ಲಿದ ಬೆಳದಿಂಗಳು...ಎದುರಿಗೆ ಬೆಳದಿಂಗಳಂತೆ ಆಹ್ಲಾದವೆನಿಸುವ ಯುವತಿಯ ಸಹವಾಸದ ಈ ಅವಕಾಶ ತನ್ನ ಜೀವನದ ಅಮೃತ ಗಳಿಗೆ ಎನಿಸಿ ನಲಿವು ಮೂಡಿತ್ತವನಲ್ಲಿ!

ಈಗ ತಾವಿಬ್ಬರೂ ಪರಕೀಯರಲ್ಲ...ತಮ್ಮ ಪರಿಚಯ ತುಂಬ ದಿನಗಳಿಂದ ಇದೆ ಎಂಬಷ್ಟು ಸಲಿಗೆ. ಕೇವಲ ಪರಸ್ಪರ ನೋಟ ವಿನಿಮಯದಿಂದಲೇ ಈ ಮಟ್ಟಕ್ಕೆ ತಾವಿಬ್ಬರೂ ತಲುಪಿದ್ದು ಅವನ ಹೆಚ್ಚಿನ ಸಂತಸದ ನಾಂದಿಯಾಗಿತ್ತು! !

ಗುಂತಕಲ್ ಸಮೀಪಿಸುತ್ತಿದೆ...ಅವಳು ಹೊರಟೇ ಹೋಗ್ತಾಳೆ...ಈ ಏಕಾಂತ...ಈ ಸೊಬಗು...ಈ ಸಹ ಪ್ರಯಾಣ ಹೀಗೆ ಹೀಗೇ ಮುಗಿದು ಬಿಡಬೇಕೆ..? ಈ ಪರಿಚಯ-ಸ್ನೇಹ ಇಷ್ಟರಲ್ಲೇ ಕೊನೆಗೊಳ್ಳಬೇಕೆ? ಪ್ರಯಾಣದ ಸವಿ ಗುರುತು ಮನದಲಿ ಉಳಿಯಲು ತಾನು ಒಂದೇ ಒಂದು ಸಾರಿ ಈ ಮುದ್ದು ಮುಖಕ್ಕೆ ಒಂದೇ ಒಂದು ಸವಿ ಮುತ್ತಿಟ್ಟು ಬಿಟ್ಟರೆ- ಛೇ ಇದೆಂತಹ ವಿಚಾರ...ತನಗೇಕೆ ಹೀಗೆ ಎನಿಸುತ್ತಿದೆ...

ಆದರೂ, ಆದರೂ ಅವಳು ಮುತ್ತೊಮ್ಮೆ ತನ್ನೆಡೆಗೆ ನೋಡಿದಾಗ ಕೇಳಿ ಬಿಡಬೇಕು...ಕೇಳಿದರೆ ಏನೆಂದು ಕೊಳ್ತಾಳೆಯೋ ತಾನು ಮುಂದುವರಿದು ಮುತ್ತನಿಟ್ಟಲ್ಲಿ ಅವಳು ಪ್ರತಿಭಟಿಸಲಿಕ್ಕಿಲ್ಲವೇ...ಬಹುಶಃ ಚೈನ ಜಗ್ಗಿ ಜನ ನೆರೆದು...ಛೆ...ಛೆ...ಇದೆಲ್ಲ ಅವಮಾನ...' ತನ ಮಾನ ಸ್ಥಾನ ಎಲ್ಲ ಧೂಳಿನ ಪಾಲಾಗಬೇಕೆ? ಆದರೂ ಗಣೇಶ ಆ ಮುಖ ನೋಡುತ್ತ ನೋಡುತ್ತ ಯಾವುದೋ ಲೋಕದಲ್ಲಿ ಮುಳುಗಿದ್ದ....ತನಗೇಕೆ ಈ ಭಾವನೆ ಬರುತ್ತಿದೆ...ಎಂದು ಚಡಪಡಿಸತೊಡಗಿದ್ದ. 'ಸಲ್ಲದ ವಿಚಾರ' ಎಂದು ಮನದಿಂದ ದೂಡಲೂ ಸಾಧ್ಯವಾಗದೇ ಹೆಚ್ಚಿನ ಹುಚ್ಚು ಧೈರ್ಯ ವಹಿಸಲೂ ಸಾಧ್ಯವಾಗದೇ ತೊಳಲಾಡತೊಡಗಿದ್ದ. ಅವನ ವಿವೇಕ ಭಾವನೆಗಿಂತಲೂ ಅವನು ಕೊಚ್ಚಿ ತೇಲಿ ಹೋಗುತ್ತಿರುವ ಆ ಸೌಂದರ್ಯ ಲೋಕದ ಕರೆ ತುಂಬ ಅಪ್ಯಾಯಮಾನವೆನಿಸತೊಡಗಿತ್ತು. ತಾನೇಕೆ ಒಂದೇ ಒಂದು ಸಲ ಮುತ್ತನಿಟ್ಟು ನೀನು ತುಂಬ ಚಲುವೆ ಎಂದು ಪ್ರೇಮ ವ್ಯಕ್ತಪಡಿಸಬಾರದು? ಅವಳು ಒಂದು ವೇಳೆ ಅದನ್ನೇ ನಿರೀಕ್ಷಿಸಿ ತನ್ನಿಂದ ಅಪೇಕ್ಷಿಸಿದ್ದಲ್ಲಿ ತನ್ನ ಮನದಲ್ಲಿ ನನ್ನ ಬಗ್ಗೆ ಹೇಡಿ ಎಂದುಕೊಳ್ಳಲಿಕ್ಕಿಲ್ಲವೆ? ತಾನೇಕ ಹೇಡಿಯಾಗಬೇಕು?

ಆ ಮುದ್ದಿನಲ್ಲಿ ಕೇವಲ ನೀನು ಸುಂದರಿ, ನಿನ್ನ ಸೌಂದರ್ಯದ ಅರಿವು ನನಗಿದೆ, ಆದರ ಮೆಚ್ಚಿಕೆಯ ಕುರುಹು ಈ ಉಡುಗೊರೆ ಎಂಬುದನ್ನು ವ್ಯಕ್ತಗೊಳಿಸುವುದು ಅಷ್ಟೇ! ಅಷ್ಟೇ!! ಅವಳು ತನ್ನ ಈ ಉಡುಗೊರೆಯನ್ನು ಸ್ವೀಕರಿಸಿ ಸಂತಸಪಡುವಳೋ ಅಥವಾ...

ಗಣೇಶನನ್ನು ವಿಧ ವಿಧ ಭಾವನೆಗಳು ಕೆಣಕುತ್ತಿರುವಾಗಲೇ ಅವನು ಅವಳೆಡೆಗೆ ನೋಡುತ್ತ ಕೇಳಿದ- 'ನೀವು ಒಂದು ಮೋಪಾಸನ ಕತೆ ಓದಿರುವಿರಾ?' ಅವಳು "ಮೋಪಾಸನ ಎಷ್ಟೋ ಕತೆ ಓದಿರುವೆ...ನೀವು ಕೇಳುತ್ತಿರುವ ಕತೆ?" ಎಂದಳು.

ಗಣೇಶ ಧೈರ್ಯ ತಂದುಕೊಳ್ಳುತ್ತ, ಕೊಂಚ ರಸಿಕತೆ ಬೆರೆಸಿ ನುಡಿದ— "ಒಮ್ಮೆ ಒಬ್ಬ ಪ್ರಸಿದ್ಧ ದರೋಡೆಗಾರ ಒಬ್ಬ ಸುಂದರ ಸ್ತ್ರೀಯ ಅಂತಃಪುರದಲ್ಲಿ ಸ್ತ್ರೀ ವೇಷದಿಂದ ತಲೆ ಮರೆಸಿಕೊಂಡಿರುತ್ತಾನೆ. ಅವನಿಗೆ ಅವಳ ಏಕಾಂತವಾಸದಲ್ಲಿ ಸಹ ಸಂಚರಿಸಲು ಅನುಮತಿ ಇರುತ್ತೆ... ಎಷ್ಟೋ ದಿನಗಳ ನಂತರ ಆತ ದರೋಡೆಗಾರನೆಂದೂ, ಪುರುಷನೆಂದೂ ಅವನನ್ನು ಬಂಧಿಸಿ ಸೆಳೆದೊಯ್ಯಾಗ ಅವಳಿಗೆ ಏನೆನಿಸುತ್ತೆ ಗೊತ್ತೆ?"

"ಏನು ಎನಿಸುತ್ತೆ?" ಅವಳೂ ಉತ್ಸುಕತೆಯಿಂದ ಕೇಳಿದಾಗ ಗಣೇಶ ಕೊಂಚ ಅಳುಕುತ್ತಲೇ ಹೇಳಿದ- ಅವನು ಪುರುಷನಿದ್ದರೂ ತನ್ನ ಏಕಾಂತವಾಸದಲ್ಲಿ ಸಂಚರಿಸುತ್ತಿದ್ದರೂ, ತಾನು ಸುಂದರ ಸ್ತ್ರೀ ಇದ್ದರೂ ಒಮ್ಮೆ ಸಹ ಅವನು ತನನ್ನು...

ಅವನು ಪೂರ್ತಿ ಏನೂ ಹೇಳದಿದ್ದರೂ ಅವಳು ಮುಂದಿನ ವಾಕ್ಯ ಊಹಿಸಿ ಜೋರಾಗಿ ನಗತೊಡಗಿ ನಂತರ ತಕ್ಷಣ ಮೌನ ವಹಿಸಿದಾಗ ಗಣೇಶನೂ ಅವಳ ನಗೆಯಲ್ಲಿ ನಗೆ ಬೆರೆಸಿದ. ಕತೆ ಹೇಳಿ ಮುಗಿಸಿದಾಗ ಅವಳ ನಗೆಯಲ್ಲಿ ನಗೆಗೂಡಿಸಿದಾಗ ಅವನಿಗೆ ಏನೋ ಸುಳಿಹು ಸಿಕ್ಕಂತಾಗಿ ಅವಳ ಕಣ್ಣಿನ ಹೊಳಪು ಅರಳಿದ ತುಂಟ ನಗೆಗೆ ತನ್ನ ಭಾವನೆಯ ಪ್ರತಿಫಲನ ಅವಳ ಮುಖದಲ್ಲಿಯೂ ಫಲಿಸಿದಂತೆ ಅನುಭವವಾಗಿ ವಿವರ್ಣ ಮುಖ ಬೆಚ್ಚಗಾದ- ಕೆಂಪಗಾದ ಕಿವಿಗಳೊಡನೆ ಧಡ ಧಡ ಎಂಬ ಎದೆಯ ಬಡಿತದೊಡನೇ ಅಂತರಾಳದ ಆಶೆ ವ್ಯಕ್ತ ಪಡಿಸಲು ಶಬ್ದ ಹುಡುಕುವವನಂತೆ ತಡವರಿಸುತ್ತ ನೋಟ ಕಲೆತ ಕೂಡಲೇ ಮೆಲ್ಲನೆ ಉಸುರಿದ- "May I kiss you"

ಕೇಳಿಸಿಕೊಂಡ ಅವಳ ಆ ಮುಖದಲ್ಲಿ ಒಂದೇ ಕ್ಷಣ ನಸು ನಗೆಯು ಅಹ್ವಾನ ತತ್‌ಕ್ಷಣ ಅವಳ ಮುಖದಲ್ಲಿ ಕೋಪ-ಸಿಡುಕು ಭಾವನೆ ಎದ್ದು ಕಂಡಾಗ ಗಣೇಶ ಸಂಭ್ರಾಂತಿನಿಂದ ನೋಡುತ್ತಿದ್ದಂತೆಯೇ ಅವನ

ಟು ಗಳು ಅವನ ಮುಖಕ್ಕೇ! ರಾಚಿದಂತೆ 'ಖಾದರ ಪೇಟ್' ಎಂಬ ಗಟ್ಟಿ ಕೂಗಿಗೆ ಎಚ್ಚತ್ತು, ತಿರುಗಿದಾಗ 'ಧಡಲ್' ಎಂದು ಬಾಗಿಲು ನೂಕಿ ಟಿಕೇಟ್ ರಹಿತ ರೇಲ್ವೆ ಕಾರ್ಮಿಕರ ತಂಡವೇ ಅವನಿದ್ದ ಕಂಪಾರ್ಟ್‌ಮೆಂಟಿನಲ್ಲಿ ನುಗ್ಗಿದಾಗ ಗಣೇಶ ಧರೆಗಿಳಿದು ಹೋದ! ದಿಗ್ಮೂಢನಾಗಿ ಕುಳಿತುಬಿಟ್ಟ!! ಅವನು ಹಾಗೆ ಕೇಳಿದಾಗ ಅವಳ ಮುಖದಲ್ಲಿ ಅರಳಿದ ಅರೆಕ್ಷಣದ ಆ ಹೂ ನಗೆಯ ಸೊಬಗು, ಆ ಕೋಮಲ ಸ್ನಿಗ್ಧ ಭಾವನೆ ಮರುಕ್ಷಣವೇ ಆ ಭಾವನೆಯನ್ನು ಅಡಗಿಸಿದ ಮುನಿಸುಸೂಸುವ ಆ ಕಣ್ಣುಗಳು ಅವಳಿಗೆ ಎಲ್ಲ ವಿಚಿತ್ರವೆನಿಸಿ ಎಲ್ಲ ಪೆಚ್ಚುಪೆಚ್ಚಾಗಿತ್ತು! ಅವಳ ಭಾವನೆ ಏನಿರಬಹುದು ಎಂದು ಊಹಿಸಲು ಅವನು ಅಸಮರ್ಥನಾದ. ಯಾಕೆಂದರೆ ಈಗವಳು ಕಿಟಕಿಯತ್ತ ಮುಖ ತಿರುಗಿಸಿಕೊಂಡು ಕುಳಿತುಬಿಟ್ಟಿದ್ದಳು!

ಗಣೇಶ ವಿಲಿವಿಲಿ ಒದ್ದಾಡತೊಡಗಿದ್ದ. ನೀತಿ-ಅನೀತಿಯ ನಿಷ್ಕರ್ಷೆಗೂ ಮೀರಿದ ಯಾವುದೋ ಮಹತ್ಕಾರ್ಯವೆಸಗಲಾರದ ತನಗೆ ಇದು ಸೋಲೇ ಎಂದು ಒಮ್ಮೆ ಚಿಂತಿಸಿದರೆ ಛೆ...ಇದು ತನ್ನ ಗೆಲುವು ಎಂದು ಮಗದೊಮ್ಮೆ ಮನಸ್ಸು ಸಾರಿ ಹೇಳುತ್ತಿತ್ತು! ತಾನೇನೂ ತಪ್ಪು ಮಾಡಲಿಲ್ಲವಲ್ಲ ಎಂಬ ಸಮಾಧಾನದ ಜೊತೆಗೇ, ಛೆ ಖಾದರಪೇಟ ಇಷ್ಟು ಬೇಗ ಬರಬೇಕಾಗಿತ್ತೆ ಎಂಬ ಸಿಡಿಮಿಡಿ, ಬೇರೆ ಯಾರಾದ್ರೂ ತನ್ನ ಸ್ಥಳದಲ್ಲಿ ಇದ್ದಿದ್ದರೆ ಈ ಅಪರಾತ್ರಿ ಸುಂದರ ಸ್ತ್ರೀ ಜೊತೆಗೆ ಒಬ್ಬ ಪುರುಷ ಏಕಾಂತ ಪ್ರಯಾಣದಲ್ಲಿದ್ದರೆ ಏನು ಅನಾಹುತ ಆಗ್ತಿತ್ತೋ...ಆದರೆ... ಆದರೆ...ತಾನೇನೂ ಅಸಭ್ಯನಲ್ಲವಲ್ಲ...ಪಶುವಲ್ಲವಲ್ಲ... ವಿವೇಕದಿಂದಲೇ ತಾನು ಹಾಗೆ ಕೇಳಿದ್ದು ...ತನ್ನ ವಿವೇಕವೊ ಅವಿವೇಕವೊ ಚಾನ್ಸ್, ಅಂತೂ ಹೋಯ್ತು! ಅವಳು ತನ್ನ ಬಗ್ಗೆ ಏನು ಯೋಚಿಸುತ್ತಿರಬಹುದು! 'ಮೂರ್ಖ ಶಿಖಾಮಣಿ' ಅಂದುಕೊಳ್ತಾಳೆಯೋ ಅಥವಾ ಘಟಿಂಗ ಅಂದುಕೊಳ್ತಾಳೆಯೊ ಒಂದು ವೇಳೆ ತನಗೇನೂ ಅಸಭ್ಯತನವೆನಿಸದಿದ್ದಲ್ಲಿ ಇತ್ತ ತಿರುಗಿ ಯಾಕೆ ನೋಡಬಾರದು? ಏನಾದ್ರೂ ತಿಳಿದುಕೊಳ್ಳಲಿ...ತಾನೇನೂ ಅಂತಹ ಮಹಾಪರಾಧ ಮಾಡಿಲ್ಲವಲ್ಲ!! ಹಾ...ಹಾಗೆ ಕೇಳಿ ಮಾತ್ರ ತನ್ನ ಮನೋಭಾವನೆ ಮೊದಲು ಹೊರದೂಡಿದಂತಾಯ್ತು, ಅಷ್ಟೇ ತಾನೆ? ಆದರೇನು ತಪ್ಪು? ಅದೊಂದು ಪುರುಷಾರ್ಥಕ್ಕೆ ಸವಾಲು!

ಅವನು ತಾಕಲಾಟದಲ್ಲಿ ತೋಳಲಾಡುತ್ತಿದ್ದಾಗಲೇ ಅವಳು 'ಕೂಲಿ' ಎಂದು ಕೈಮಾಡಿ ಕರೆದ ಧ್ವನಿಗೆ ಅವನು ದಡಬಡಿಸಿ ಎದ್ದು ಅವಳ ಸಾಮಾನು ಇಳಿಸುವುದರಲ್ಲಿ ನೆರವಾದ... "ಆದರವಳು ಕೂಲಿಯವನಿಗೆ ಹೇಳಿದಳು..." "ಸೊಲ್ಲಾಪುರ ಟ್ರೈನ್ ಕೋ ಜಾನಾ ಹೈ ಚಲೋ" "ಜಲ್ದೀ ಕರೋ ಅಮ್ಮಾ... ಗಾಡೀ ಛುಟತೀ ಹೈ" ಎಂದು ಗಾಡಿಯವನೆಂದಾಗ ಭರ ಭರ ಅವಳು ನಡೆದಾಗ ಗಣೇಶನೂ ಅವಸರದಿಂದ ಅವಳನ್ನೇ ಹಿಂಬಾಲಿಸಿದ.

'ಜನತಾ' ಹತ್ತಿ ಅವಳು ಕುಳಿತಾದ ಮೇಲೆ ಅವನು ಚಿಂತಿಸುತ್ತಲೇ ಇದ್ದ...ಈ ತರಹವಾಗಿ ತಾನು ಬೀಳ್ಕೊಡಬೇಕಾಗಿತ್ತೆ...ಬಾಯಿತುಂಬ ಮಾತನಾಡುತ್ತಲಾದರೂ ಅವಳು ಬೀಳ್ಕೊಡಬಾರದೇ... ತಾನು ಹಾಗೆ ಕೇಳಿದ್ದು ಅನಾಗರೀಕ ಅಸಂಸ್ಕೃತ ಪಟ್ಟ ಕಟ್ಟಿ ಅವಳು ತನ್ನ ಬಗ್ಗೆ ಕುಪಿತಗೊಂಡಿರಬಹುದೇ...ಹೊರಗೆ ಪ್ಲಾಟ ಫಾರಂ ಮೇಲೆ ನಿಂತೇ ಇದ್ದ ತನ್ನನ್ನು ಅವಳು ಪರೀಕ್ಷಿಸುತ್ತ ನೋಡುತ್ತಿರುವಂತೆ ಭಾಸವಾಗಿ ಅವನು ಅವಳೆಡೆಗೆ ತಿರುಗಿದಾಗ ಅವಳು ಅವನ ಮನದಾಳದಲ್ಲಿ ಜರುಗಿದ ಮಥನವನ್ನು ಸೂಕ್ಷ್ಮವಾಗಿ ಗೊತ್ತುಹಿಡಿದವಳಂತೇ ಮೆಲುನಗೆಯ ಗಾಂಭೀರ್ಯದಿಂದಲೇ ವಂದಿಸುತ್ತ ಆತ್ಮೀಯ ಸ್ವರದಲ್ಲಿ ದೃಢವಾಗಿ, ಸ್ಫುಟವಾಗಿ ನುಡಿದಳು—

"ಇದು ನೋಡಿ ... ನಮಸ್ಕಾರ ... ಹೋಗಿ ಬರ್ತೀನಿ...ನೀವು ನನಗಿತ್ತ ಗೌರವಕ್ಕಾಗಿ...ತುಂಬಾ ಥ್ಯಾಂಕ್ಸ್." ಗಾಡಿ ಚಲಿಸಿತು. ತತ್ಕಾಲದ ಮುಂಚಿನ ದುಗುಡ ದುಮ್ಮಾನ ಬೇಸರ ಅಸಂತೋಷದ ಅಳುಕು ಭಾವನೆಗಳೆಲ್ಲ ಕೊಚ್ಚಿಕೊಂಡು ಹೋಗಿ ಹಗುರ ಮನದಿಂದ ಗಣೇಶ ಮುಂದಡಿಯಿಟ್ಟ!! ●



# ವರ್ಷ ಭವಿಷ್ಯ

ಜ್ಯೋತಿಷಿ :

**ಶ್ರೀ ಎನ್. ಕೆ. ಜೋಗಳೇಕರ**

ಜ್ಯೋತಿಷ್ಯ ಕಾರ್ಯಾಲಯಂ ಜವಳೀಪೇಟೆ
ಧಾರವಾಡ, -೧

ಫೋನ : ೪೭೪೪



**ವಿಕ್ರಮ ಸಂವತ್ ೨೦೨೯ ರ ಭವಿಷ್ಯ ಅರ್ಥಾತ್ ಶ್ರೀಮನ್ನೃಪಶಾಲಿವಾಹನ ಶಕೆ ೧೮೯೪ ನೆಯ ಪರಿಧಾವೀ ಸಂವತ್ಸರದ ಕಾರ್ತಿಕ ಶುದ್ಧ ಪ್ರತಿಪದೆಯಿಂದ ೧೮೯೫ ನೆಯ ಪ್ರಮಾದಿ ಸಂವತ್ಸರದ ಆಶ್ವಿನ ಬಹುಳ ಅಮಾವಾಸ್ಯೆಯ ವರೆಗಿನ ಅಂದರೆ ಕ್ರಿಸ್ತಶಕ ೧೯೭೨ ನವ್ಹೆಂಬರ ೭ ರಿಂದ ೧೯೭೩ರ ಅಕ್ಟೋಬರ್ ೨೬ ರ ವರೆಗಿನ ಅರ್ಥಾತ್ ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗಿನ ವರ್ಷ ಭವಿಷ್ಯ.**



## ಮೇಷ

**ಈ ವರ್ಷವು ಈ ರಾಶಿಯವರಿಗೆ ಅತ್ಯಂತ ಶುಭದಾಯಕವೂ ಸುಖಪ್ರದವೂ ಆಗಿದೆ ಯೆಂಬುದು ಸುನಿಶ್ಚಿತ.**

ವರ್ಷದ ಉತ್ತರಾರ್ಧದಲ್ಲಿ ಸಾಡೇಸಾತಿ ಈ ರಾಶಿಯನ್ನು ಬಿಡಲಿದ್ದಾನೆ. ಹಾಗು ಗುರು, ರಾಹುಗಳೀರ್ವರೂ ಶುಭದಾಯಕರಾಗಿದ್ದಾರೆ. ಅಂತೆಯೇ ನಿಮ್ಮ ಆರೋಗ್ಯ ವರ್ಷವಿಡೀ ಉತ್ತಮವಾಗಿರುವದಲ್ಲದೆ ಕಳೆದ ಕೆಲ ವರ್ಷಗಳಿಂದ ಅರ್ಧಕ್ಕೆ ನಿಂತಿದ್ದ ಕಾರ್ಯಗಳೆಲ್ಲ ಪೂರ್ತಿಯಾಗುವವು. ನಿರೀಕ್ಷಿಸಿದ ಮೂಲದಿಂದ ಧನಾಗಮನ. ದಿ. ೧೫-೧೨-೭೨ರಿಂದ ೧೫-೩-೭೩ ಇಲ್ಲವೆ ದಿ. ೧೫-೮-೭೩ರಿಂದ ೧೮-೧೦-೭೩ರ ಅವಧಿಯಲ್ಲಿ ಆಕಸ್ಮಿಕ ಧನಲಾಭದ ಯೋಗವುಂಟು. ಹೀಗಾಗಿ ಈ ವರುಷ ನಿಮ್ಮ ಆರ್ಥಿಕಸ್ಥಿತಿ ತುಂಬ ಸಮಾಧಾನಕರವಾಗಿದೆ.

ಈ ರಾಶಿಯ ನೌಕರವರ್ಗದವರಿಗೆ ನೌಕರಿಯಲ್ಲಿ ಸ್ಥಿರತೆಯುಂಟು. ದಿ. ೧೫-೧೨-೭೨ರಿಂದ ದಿ. ೧೫-೩-೭೩ರ ಅವಧಿಯಲ್ಲಿ ನಿಶ್ಚಿತವಾಗಿಯೂ ಬಡತಿ ದೊರೆವುದಲ್ಲದೆ, ಬದಲಿಯಾಗುವದಾದರೆ ದಿ. ೧೫-೧೨-೭೨ ರಿಂದ ೨೫-೧-೭೩ ಇಲ್ಲವೆ ೧೯೭೩ ಮೇ ಇಲ್ಲವೆ ಜೂನ ತಿಂಗಳಲ್ಲಿ ಅನುಕೂಲಕರ ಸ್ಥಳಕ್ಕೆಯೇ ಆಗುವದು. ದಿ. ೧೪-೧-೭೩ರಿಂದ ೧೫-೩-೭೩ ಇಲ್ಲವೆ ೧೫-೮-೭೩ ರಿಂದ ೧೮-೧೦-೭೩ರ ಅವಧಿಯೊಳಗೆ ಈ ರಾಶಿಯ ನಿರುದ್ಯೋಗಿ ಸುಶಿಕ್ಷಿತರಿಗೆ ನೌಕರಿ ದೊರೆಯಬಹುದಾಗಿದೆ. ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ ಪೂರ್ವಾರ್ಧದಲ್ಲಿ ದ್ವಿಗುಣ ಲಾಭವಾಗುತ್ತದೆ. ಸಟ್ಟಾ, ಕಮೀಶನ್ ಏಜಂಟ, ಠೋಕ ವ್ಯಾಪಾರಿಗಳು ಹಾಗು ದೊಡ್ಡ ಕೈಗಾರಿಕೋದ್ಯಮಿಗಳಿಗೆ ದಿ. ೨-೨-೭೩ ರಿಂದ ೧೫-೭-೭೩ರ ಅವಧಿ ಬಹು ಲಾಭದಾಯಕವಾಗಿದೆ. ಈ ರಾಶಿಯ ಕೃಷಿಕರಿಗೆ ಪೂರ್ವಾರ್ಧ ಶುಭದಾಯಕವಾದರೆ ಉತ್ತರಾರ್ಧ ಅಶುಭದಾಯಕವಾಗಿದೆ. ಈ ರಾಶಿಯ ಬುದ್ಧಿಜೀವಿ, ಕಲಾವಿದ, ಸಾಹಿತಿಗಳಿಗೆ ಪೂರ್ವಾರ್ಧ ಉತ್ತಮವಿದ್ದು, ಪ್ರಶಸ್ತಿ, ಮನ್ನಣೆಗಳು ದೊರೆಯುವವು; ಆದರೆ ಉತ್ತರಾರ್ಧ ತೀರ ಪ್ರತಿಕೂಲವಾಗಿದ್ದು, ತೀವ್ರ ಆರ್ಥಿಕ ಮುಗಟ್ಟನ್ನೆದುರಿಸಬೇಕಾಗುತ್ತದೆ.

ಈ ರಾಶಿಯ ವಧೂವರರ ಕಂಕಣಬಲ ಕೂಡಿಬಂದಿದ್ದು ದಿ. ೧೫-೧೨-೭೨ ರಿಂದ ೧೫-೭-೭೩ರ ಅವಧಿಯಲ್ಲಿ ವಿವಾಹ ಜರುಗುವದಲ್ಲದೆ ವೈವಾಹಿಕ ಜೀವನ ಆನಂದಮಯವಾಗಿರುವದು. ವಿವಾಹಿತರಿಗೂ ಈ ವರ್ಷ ಪ್ರೋತ್ಸಾಹದಾಯಕವಾಗಿದೆ. ದಿ.೧೫-೧೨-೭೨ ರಿಂದ ೧೫-೬-೭೩ರ ಅವಧಿಯಲ್ಲಿ ಸ್ವಂತದ ಮನೆ ಹೊಂದಬಹುದು, ಸ್ಥಾವರ ಆಸ್ತಿಯಲ್ಲಿ ಹೆಚ್ಚಳ, ವಾಹನ ಖರೀದಿಸುವ, ತೀರ್ಥಯಾತ್ರೆಯ ಸಂದರ್ಶನ, ವಿದೇಶ ಸಂಚಾರ ಮೊದಲಾದ ಮಹತ್ವದ ಘಟನೆಗಳು ಜರುಗಲಿವೆ.

ಈ ರಾಶಿಯ ಗರ್ಭವತಿಯರ ಹೆರಿಗೆ ವರ್ಷದ ಪೂರ್ವಾರ್ಧದಲ್ಲಾದರೆ ಗಂಡು ಮಗುವೇ ಜನಿಸುವದು, ಉತ್ತರಾರ್ಧದಲ್ಲಾದರೆ ಹೆಣ್ಣುಮಗುವಾಗುವದು ಉತ್ತರಾರ್ಧದಲ್ಲಿ ಪ್ರಸೂತಿ ತುಸು ಕಷ್ಟಕರವಾಗಲಿದೆ.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರುಷ ಅತ್ಯಂತ ಉತ್ತಮವಾಗಿದೆ. ಯಾವದೇ ಆತಂಕವಿಲ್ಲದೆ ಶಿಕ್ಷಣ ಮುಂದರಿಯುವದು. ದಿ. ೧೫-೧೨-೭೨ ರಿಂದ ೧೬-೩-೭೩ ಹಾಗು ೧೫-೬-೭೩ರಿಂದ ೧೫-೭-೭೩ರ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಲಿರುವ ವಿದ್ಯಾರ್ಥಿಗಳು ನಿಶ್ಚಿತವಾಗಿಯೂ ತೇರ್ಗಡೆಯಾಗುವರಲ್ಲದೇ ಉನ್ನತ ಶ್ರೇಣಿ ಪಡೆದು ಸುವರ್ಣ ಪದಕ, ವಿದ್ಯಾರ್ಥಿ ವೇತನ ಸಂಪಾದಿಸುವರು. ದಿ. ೧೫-೭-೭೩ ರಿಂದ ೧೫-೬-೭೩ರ ಅವಧಿಯಲ್ಲಿ ಪರೀಕ್ಷೆಗೆ ಕಟ್ಟಲಿರುವ ವಿದ್ಯಾರ್ಥಿಗಳು ತೇರ್ಗಡೆಯಾಗುವದು ಸಂಶಯ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಈ ವರ್ಷ ಅತ್ಯಂತ ಶುಭದಾಯಕವಿದೆ. ಚುನಾವಣೆಯಲ್ಲಿ ಜಯ ನಿಶ್ಚಿತ. ಸಂಘ ಸಂಸ್ಥೆಗಳ ಪದಾಧಿಕಾರ ಪಡೆಯುವರಲ್ಲದೆ ಮಾನ-ಸನ್ಮಾನಗಳನ್ನೂ ಪಡೆಯುತ್ತಾರೆ. ದಿ. ೧೫-೧೨-೭೨ರಿಂದ ೧೫-೩-೭೩ ಹಾಗು ೧೫-೫-೭೩ರಿಂದ ೧೫-೭-೭೩ರ ಅವಧಿಯಲ್ಲಿ ಜರಗುವ ಯಾವುದೇ ಚುನಾವಣೆಯಲ್ಲಿ ಸ್ಪರ್ಧಿಸಿದರೂ ಜಯ ನಿಶ್ಚಿತವೆಂದೇ ತಿಳಿಯಬೇಕು.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಗಳಲ್ಲಿ ಡಿಸೆಂಬರ್ ೭ ರಿಂದ ಎಪ್ರಿಲ್ ೧೨ರ ಅವಧಿಯಲ್ಲಿ ನಿರ್ಣಯವಾದರೆ ಖಂಡಿತವಾಗಿಯೂ ಯಶಸ್ಸು ಲಭಿಸುವದು.



## ವೃಷಭ

**ಈ ವರ್ಷವು ಈ ರಾಶಿಯವರಿಗೆ ಸಾಂಸಾರಿಕ ಸುಖಕ್ಕೆ ಸಾಧಾರಣವಿರುವದಾದರೂ ಉದ್ಯೋಗ ಧಂದೆಗಳಲ್ಲಿ ಆರ್ಥಿಕ ಉನ್ನತಿಗೆ ಹೆಚ್ಚು ಆಶಾದಾಯಕವಾಗಿದೆ ಎಂಬುದು ನಿಶ್ಚಿತ.**

ಜನವರಿ ೨೫ರಂದು ಬರುವ ಒಂಬತ್ತನೆಯ ಗುರುವಿನಿಂದಾಗಿ ಸಾಡೇಸಾತಿಯ ಅನಿಷ್ಟಫಲ ತುಸು ಕಡಿಮೆಯಾಗುವದು. ಕಳೆದ ವರ್ಷ ಉಂಟಾಗಿದ್ದ ಶಾರೀರಿಕ

ಹಿತೆಯ ಪ್ರಮಾಣ ಕಡಿಮೆಯಾದರೂ ದಿ. ೧೫-೧೨-೮೨ರಿಂದ ೨೫-೧-೮೩, ೧೨-೪-೮೩ರಿಂದ ೧೫-೭-೮೩ರ ಅವಧಿ ಮಾತ್ರ ವಿಶೇಷ ತೊಂದರೆದಾಯಕವಾಗಿದೆಯಲ್ಲದೆ ಅಪಘಾತದ ಭೀತಿಯೂ ಉಂಟು! ಜನವರಿ ೧೪ ರಿಂದ ಎಪ್ರಿಲ್ ೧೨, ಜುಲೈ ೧೫ ರಿಂದ ಅಗಸ್ಟ ೧೫ರ ಅವಧಿಯಲ್ಲಿ ಬರಬೇಕಾಗಿದ್ದ ಹಣ ಲಭಿಸುವದಲ್ಲದೆ ಆಕಸ್ಮಿಕ ಧನಲಾಭವೂ ಆಗಿ, ಆರ್ಥಿಕ ಸ್ಥಿತಿ ಸುಧಾರಿಸುವದು; ಆದರೆ ನವ್ಹೆಂಬರ್ ೭ ರಿಂದ ಜನವರಿ ೧೪, ಮೇ ೧೫ ರಿಂದ ಜುಲೈ ೧೫, ಅಗಸ್ಟ ೧೫ರಿಂದ ಅಕ್ಟೋಬರ್ ೧೮ರ ಅವಧಿಯಲ್ಲಿ ಮಾತ್ರ ವಿಪರೀತ ವೆಚ್ಚ, ಹಾಗು ಮನೆಯಲ್ಲೊಂದು ಮಂಗಳಕಾರ್ಯವೂ ಈ ಅವಧಿಯಲ್ಲೇ ಜರುಗುವದರಿಂದ ಹೊಸ ಸಾಲಕ್ಕೆ ಮೊರೆ ಹೋಗಬೇಕಾಗುವದು.

ಈ ರಾಶಿಯ ನೌಕರವರ್ಗದವರಿಗೆ ಜನವರಿ ೧೪ರಿಂದ ಎಪ್ರಿಲ್ ೧೨, ಜುಲೈ ೧೫ ರಿಂದ ಅಗಸ್ಟ ೧೫ರ ಅವಧಿಯಲ್ಲಿ ಬಡತಿ ದೊರೆತು ಇಚ್ಛಿತ ಸ್ಥಳಕೆ ಬದಲಿಯಾಗುವದು. ಹಾಗು ವರಿಷ್ಠರಿಂದ ಸಹಾಯ. ಸಹಕಾರಗಳು ಲಭಿಸುವವು. ಕಳೆದ ಕೆಲ ವರ್ಷಗಳಿಂದ ಉದ್ಯೋಗಕ್ಕಾಗಿ ಅಲೆದಾಡುತ್ತಿರುವ ಸುಶಿಕ್ಷಿತ ನಿರುದ್ಯೋಗಿಗಳಿಗೆ ೧೪-೧-೮೩ರಿಂದ ೧೫-೪-೮೩; ಜುಲೈ ೧೫ ರಿಂದ ಅಗಸ್ಟ ೧೫ರ ಅವಧಿಯಲ್ಲಿ ನಿಶ್ಚಿತವಾಗಿಯೂ ಉದ್ಯೋಗ ಲಭಿಸುವದು. ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ ಈ ವರ್ಷ ಪ್ರಗತಿದಾಯಕವಾಗಿದೆ. ಹೊಸ-ಹೊಸ ವ್ಯಾಪಾರಗಳನ್ನು ಪ್ರಾರಂಭಿಸುವ ಯೋಗವಿದ್ದು ವಿಶೇಷವಾಗಿ ಲಾಭವನ್ನೂ ಸಂಪಾದಿಸಬಲ್ಲರು. ಕಳೆದ ವರ್ಷ ಕುಂಠಿತವಾಗಿದ್ದ ಪಾಲುಗಾರಿಕೆಯ ವ್ಯಾಪಾರ ಮತ್ತೆ ಊರ್ಜಿತವಾಗಲಿದೆ. ಸಟ್ಟಾ, ಲಾಟರಿ, ಚಲಚಿತ್ರ ಉದ್ಯಮಿಗಳಿಗೆ ಮೇ ೧೪ರಿಂದ ಜನೆವರಿ ೧೫ರ ಅವಧಿ ಅತ್ಯಂತ ಲಾಭದಾಯಕವಾಗಿದೆ. ಬುದ್ಧಿಶಾಲಿ, ಸಾಹಿತಿ, ಕಲಾವಿದರುಗಳಿಗೆ ಈ ವರ್ಷ ಪ್ರೋತ್ಸಾಹದಾಯಕವಾಗಿದೆ.ಕೃಷಿಕರಿಗೂ ಕೂಡ ಪ್ರಗತಿದಾಯಕವಾಗಿದೆ. ಏಕತ್ರ ಕುಟುಂಬದಲ್ಲಿ ಉಂಟಾಗಿದ ತಪ್ಪು ತಿಳುವಳಿಕೆ ವರ್ಷದ ಪೂರ್ವಾರ್ಧದಲ್ಲಿ ದೂರವಾಗಿ ಸಾಮರಸ್ಯ ಉಂಟಾಗುವದಲ್ಲದೆ ಪರಸ್ಪರರು ಹೆಚ್ಚು ಪ್ರೀತಿ-ವಿಶ್ವಾಸಗಳಿಂದಿರುತ್ತಾರೆ.

ಈ ರಾಶಿಯ ವಧೂವರರ ಬಾಸಿಂಗಬಲ ಕೂಡಿಬಂದಿದ್ದು ಜನವರಿ ೧೪ರಿಂದ ಅಗಸ್ಟ ೧೫ರ ಅವಧಿಯಲ್ಲಿ ವಿವಾಹ ಸಮಾರಂಭ ಜರಗುವುದು.

ಈ ರಾಶಿಯ ಗರ್ಭವತಿಯರ ಹೆರಿಗೆ ಡಿಸೆಂಬರ ೧೫ರಿಂದ ಜನವರಿ ೧೪, ಎಪ್ರಿಲ್ ೧೨ರಿಂದ ಜೂನ ೧೫ರ ಅವಧಿಯಲ್ಲಾದರೆ ವಿಶೇಷ ತೊಂದರೆಯಾಗುವದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಜನವರಿ ೧೪ ರಿಂದ ಎಪ್ರಿಲ್ ೧೨ರ ಅವಧಿಯಲ್ಲಾದರೆ ಉಚ್ಚ ಶ್ರೇಣಿಯಲ್ಲಿ ಉತ್ತೀರ್ಣರಾಗುವರಲ್ಲದೆ, ವಿದ್ಯಾರ್ಥಿ ವೇತನ, ಪಾರಿತೋಷಕಗಳನ್ನು ಪಡೆಯುವದರಲ್ಲಿ ಸಂಶಯವಿಲ್ಲ. ತದನಂತರವೆಂದರೆ ಡಿಸೆಂಬರ್ ೧೫ರಿಂದ ಜನವರಿ ೧೪, ಎಪ್ರಿಲ್ ೧೨ ರಿಂದ ಜೂನ್ ೧೫ರ ಅವಧಿಯಲ್ಲಾದರೆ ಯಶಸ್ಸು ಸಿಕ್ಕುವ ಭರವಸೆಯಿಲ್ಲ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಈ ವರ್ಷ ಪ್ರಗತಿದಾಯಕವಾಗಿದೆ. ಚುನಾವಣೆಗಳಲ್ಲಿ ಯಶಸ್ಸು ಖಂಡಿತ. ಕಳೆದ ವರ್ಷದಿಂದ ಶತ್ರುಗಳಾಗಿದ್ದವರು ಮಿತ್ರರಾಗಿ ಸಹಾಯ, ಸಹಕಾರಗಳನ್ನೀಯುವರು. ಅನೇಕ ಸಂಘ-ಸಂಸ್ಥೆಗಳ ಪದಾಧಿಕಾರ ಲಭಿಸುವದಲ್ಲದೆ ಕಳೆದುಕೊಂಡಿದ್ದ ಜನಪ್ರಿಯತೆಯನ್ನೂ ಮರಳಿ ಪಡೆಯುವುದರಲ್ಲಿ ಸಂಶಯವಿಲ್ಲ.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಜಯ ನಿಶ್ಚಿತ. ಅರ್ಧಕ್ಕೆ ನಿಂತಿದ್ದ ಕಾರ್ಯಗಳು ಜನವರಿ ೧೪ರಿಂದ ಎಪ್ರಿಲ್ ೧೨ರ ಅವಧಿಯಲ್ಲಿ ಪೂರ್ತಿಯಾಗುವವು.



## ಮಿಥುನ

**ಈ ವರ್ಷ ಈ ರಾಶಿಯವರಿಗೆ ಸಾಡೇಸಾತಿ ಇರುವದರಿಂದ ವಿಶೇಷ ಕ್ಲೇಶವುಂಟಾಗುವ ಸಂಭವ. ಮಾನಸಿಕ ತೊಂದರೆಯೂ ಹೆಚ್ಚು. ಪ್ರಾಪಂಚಿಕ ಸುಖವೂ, ಸಾಧಾರಣವೇ ಆಗಿದೆ ಎಂಬುದು ನಿಶ್ಚಿತ.**

ಜನವರಿ ೨೫ ರಂದು ಬರಲಿರುವ ಎಂಟನೆಯ ಗುರುವಿನಿಂದಾಗಿ ವಿಶೇಷ ತೊಂದರೆಗೊಳಗಾಗುವಿರಿ. ವರ್ಷವಿಡೀ ಆರೋಗ್ಯ ಚೆನ್ನಾಗಿರದು. ವಿಶೇಷವಾಗಿ ಜನವರಿ ೧೪ರಿಂದ ಫೆಬ್ರುವರಿ ೧೨, ಮೇ ೧೫ ರಿಂದ ಅಗಸ್ಟ ೧೫, ಸಪ್ಟೆಂಬರ್ ೧೫ರಿಂದ ಅಕ್ಟೋಬರ್ ೧೮ರ ಅವಧಿಯಲ್ಲಂತೂ ರೋಗ ಉಲ್ಬಣಿಸುವ ಭಯವುಂಟು. ಅಗ್ನಿ-ವಾಹನಗಳ ಭೀತಿಯೂ ಇದೆ. ಸಂಶಯ ಪ್ರವೃತ್ತಿಯವರಾದುದರಿಂದ ಆರೋಗ್ಯ ಸುಧಾರಿಸದೆಂಬ ಚಿಂತೆಯಲ್ಲೇ ಇರುವಿರಿ. ಆದಾಯ ಅಲ್ಪ, ವೆಚ್ಚ ವಿಪರೀತ. ಸಾಲಗಾರರ ಕಾಟ ಹೆಚ್ಚಿ, ಹೊಸ ಸಾಲಕ್ಕಾಗಿ ಪರದಾಟ; ನವ್ಹೆಂಬರ್ ೧೫ರಿಂದ ಡಿಸೆಂಬರ್ ೧೪, ಫೆಬ್ರುವರಿ ೧೨ ರಿಂದ ಮೇ ೧೫ರ ಅವಧಿಯಲ್ಲಿ ಮಾತ್ರ ನಿರೀಕ್ಷಿಸಿದ ಮೂಲದಿಂದ ಹಣಕಾಸಿನ ಸಹಾಯ ಲಭಿಸುವುದರಿಂದ ಅವಮಾನದ ಪ್ರಸಂಗ ತಪ್ಪುವದು; ಆದರೆ ಜನವರಿ ೧೪ರಿಂದ ಫೆಬ್ರುವರಿ ೧೨, ಮೇ ೧೫ರಿಂದ ಅಗಸ್ಟ ೧೫ರ ಅವಧಿ ತೀರ ತೊಂದರೆಯದಾಗಿದೆ.

ಈ ರಾಶಿಯ ನೌಕರವರ್ಗದವರಿಗೆ ಈ ವರ್ಷ ಪ್ರತಿಕೂಲವಿದೆ. ಪೂರ್ವಾರ್ಧಕ್ಕಿಂತ ಉತ್ತರಾರ್ಧದ ಕಾಲವಂತೂ ತೀರ ತೊಂದರೆಯದು. ಮೇ ೧೫ರಿಂದ ಅಗಸ್ಟ ೧೫, ಸಪ್ಟೆಂಬರ್ ೧೫ ರಿಂದ ಅಕ್ಟೋಬರ್ ೧೮ರ ಅವಧಿಯಲ್ಲಿ ಅನಪೇಕ್ಷಿತ ಸ್ಥಳಕ್ಕೆ ಬದಲಿಯಾಗುವದಲ್ಲದೆ, ವರಿಷ್ಠರಿಂದ ಅಸಹನೀಯ ಕಿರುಕುಳವುಂಟಾಗುವದರಿಂದ ನೌಕರಿಗೆ ರಾಜೀನಾಮೆ ನೀಡುವ ಪ್ರಸಂಗವುಂಟು. ಆದರೆ ತಾಳ್ಮೆಯಿಂದ ಇರುವದುತ್ತಮ. ನಿರುದ್ಯೋಗಿಗಳಿಗೂ ಈ ವರ್ಷ ಚೆನ್ನಾಗಿಲ್ಲ; ಆದರೆ ಫೆಬ್ರುವರಿ ೧೨ರಿಂದ ಮೇ ೧೫ರ ಅವಧಿ ತುಸು ಉತ್ಸಾಹದಾಯಕವಿದೆ. ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ ಮಿಶ್ರಫಲವಿದೆ. ಕಮೀಶನ್ ಏಜಂಟ್ಸ, ಹಂಚಿಕೆದಾರ, ಮಶಿನರಿ ವ್ಯಾಪಾರಿ, ದೊಡ್ಡ ಉದ್ದಿಮೆದಾರ, ಚಲಚಿತ್ರ ಉದ್ಯಮಿಗಳಿಗೆ ಪೂರ್ವಾರ್ಧ ಪ್ರಗತಿದಾಯಕವಾದರೆ ಉತ್ತರಾರ್ಧ ತೀರ ತೊಂದರೆಯದು. ಸಾಹಿತಿ, ಕಲಾವಿದ, ಬುದ್ಧಿಜೀವಿಗಳಿಗೂ ಪ್ರತಿಕೂಲವಿದೆ. ಉದ್ಯೋಗದಲ್ಲಿ ಚಟುವಟಿಕೆಯಿರದು. ಕೃಷಿಕರಿಗೆ ಪೂರ್ವಾರ್ಧ ಉತ್ತಮವಿರುವದಾದರೆ ಉತ್ತರಾರ್ಧದಲ್ಲಿ ಅನೇಕ ಜಟಿಲ ಸಮಸ್ಯೆಗಳು ಎದುರಾಗುತ್ತವೆ.

ಈ ರಾಶಿಯ ವಧೂವರರ ವಿವಾಹ ಪೂರ್ವಾರ್ಧದಲ್ಲಿ ಜರುಗಿದರೆ ಮಾತ್ರ ತೊಂದರೆಗಳು ಕಡಿಮೆ. ಉತ್ತರಾರ್ಧದಲ್ಲಿ ಮದುವೆ ಗೊತ್ತಾದರೂ ಬಿಡುಗಡೆಯಾಗುವ ಸಂಭವವೇ ಹೆಚ್ಚು. ವಿವಾಹಿತರಿಗಂತೂ ಈ ವರ್ಷ ಪ್ರತಿಕೂಲವಾಗಿದೆ. ಗೃಹಕಲಹ ಹೆಚ್ಚಿ ಮಾನಸಿಕ ಶಾಂತಿ ದೊರೆಯದು.

ಈ ರಾಶಿಯ ಗರ್ಭಿಣಿಯರ ಹೆರಿಗೆ ಪೂರ್ವಾರ್ಧದಲ್ಲಾದರೆ ಸುಖಪ್ರದ; ಉತ್ತರಾರ್ಧದಲ್ಲಾದರೆ ವಿಶೇಷ ತೊಂದರೆಯಾಗುವದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರ್ಷ ತೀರ ಅನಿಷ್ಟದಾಯಕವಾಗಿದೆ. ಶಿಕ್ಷಣ ಮುಂದುವರಿಸುವದೇ ಕಷ್ಟವಾಗುತ್ತದೆ. ನವೆಂಬರ್ ೭ರಿಂದ ಜನವರಿ ೧೪ರ ವರೆಗೆ ಫೆಬ್ರುವರಿ ೧೨ರಿಂದ ಮೇ ೧೫ ರೊಳಗಿನ ಅವಧಿಯಲ್ಲಿ ಪರೀಕ್ಷೆಗೆ ಕಟ್ಟುವವರು ಅತಿ ಸುಲಭವಾಗಿ ಉತ್ತೀರ್ಣರಾಗುವರು. ತದನಂತರವಾದರೆ ಉತ್ತೀರ್ಣರಾಗುವದು ಸಂಶಯ.

ಈ ರಾಶಿಯ ರಾಜಕೀಯ ಹಾಗು ಸಾಮಾಜಿಕ ಕಾರ್ಯಕರ್ತರಿಗೂ ಈ ವರ್ಷ ಪ್ರತಿಕೂಲವಾಗಿದೆ. ಸ್ಥಾನಮಾನದಿಂದ ಕೆಳಗಿಳಿಸಲ್ಪಡುವ ಸಂಭವ. ಮಿತ್ರರು ಶತೃಗಳಾಗಿ ಅವಿಶ್ವಾಸ ವ್ಯಕ್ತಪಡಿಸುತ್ತಾರೆ. ಸಲ್ಲದ ಅಪವಾದಕ್ಕೆ ಗುರಿಯಾಗುತ್ತಾರೆ. ಚುನಾವಣೆಗಳಲ್ಲಿ ಸ್ಪರ್ಧಿಸದಿರುವದುತ್ತಮ. ಅನಿವಾರ್ಯವಾಗಿ ಸ್ಪರ್ಧಿಸಬೇಕಾದಲ್ಲಿ ನವ್ಹೆಂಬರ್ ೧೫ರಿಂದ ಜನವರಿ ೧೪, ಫೆಬ್ರುವರಿ ೧೨ ರಿಂದ ಮೇ ೧೫ರ ಅವಧಿಯಲ್ಲಿ ಜರಗುವ ಚುನಾವಣೆಗಳಲ್ಲಿ ಬಹು ಪ್ರಯಾಸದಿಂದ ಆರಿಸಿಬರಬಹುದಾಗಿದೆ.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಕೈ ಹಾಕದಿರುವದುತ್ತಮ. ಇಲ್ಲವೇ ದಾವೆಯನ್ನು ಮುಂದೂಡುವದೇ ಹಿತಕರ. ಮೇ ೧೫ರಿಂದ ಅಗಸ್ಟ ೧೫ರ ಅವಧಿ ತೀರ ತೊಂದರೆಯದು.



## ಕರ್ಕ

**ಎಲ್ಲ ಗ್ರಹಗಳೂ ಉಚ್ಚಸ್ಥಾನದಲ್ಲಿರುವದರಿಂದ ಈ ವರುಷವು ಈ ರಾಶಿಯವರಿಗೆ ಎಲ್ಲ ವಿಷಯಗಳಲ್ಲಿಯೂ ಸುಖಕರವಾಗಿರುವದಲ್ಲದೆ ತುಂಬ ಉತ್ಕೃಷ್ಟದ್ದಾಗಿದೆ ಎಂದೇ ತಿಳಿಯಬೇಕು.**

ಎಲ್ಲ ಗ್ರಹಗಳ ಅನುಗ್ರಹಕ್ಕೆ ಪಾತ್ರರಾಗಿರುವದರಿಂದ ಕಾರ್ಯಗಳೆಲ್ಲ ನಿರಾಯಾಸವಾಗಿ ಜರಗುವವು. ಅನೇಕ ದಿನಗಳಿಂದ ನನೆಗುದಿಗೆ ಬಿದ್ದಿದ್ದ ಕಾರ್ಯವೂ ಕೂಡ ಈ ವರ್ಷ ನೆರವೇರುವದರಿಂದಾಗಿ, ಮನಸ್ಸು ಪ್ರಫುಲ್ಲವಾಗಿರುವದು. ಹನ್ನೊಂದನೆಯ ಶನಿ ಶುಭ ಫಲವನ್ನೇ ನೀಡುವವನಾಗಿದ್ದಾನೆ. ಜನವರಿ ೨೫ ರಿಂದ ಐದನೆಯವನಾಗಲಿರುವ ಗುರು ಕೂಡ ಶುಭದಾಯಕನಾಗಿದ್ದಾನೆ. ರಾಹುವಂತೂ ಆರನೆಯವನಾಗಿ ಇಡೀ ವರುಷ ಶುಭದಾಯಕನಿದ್ದಾನೆ.. ಈ ವರ್ಷ ನಿಮಗೆ ಸುವರ್ಣಕಾಲವಾಗಿದೆಯೆಂದರೆ ಅತಿಶಯೋಕ್ತಿಯೇನಲ್ಲ. ಇಂಥ ಅಮೂಲ್ಯ ಸುಸಂಧಿಯನು ಕಳೆದುಕೊಳ್ಳದೇ ಕಾರ್ಯ

ತತ್ಪರರಾಗಿರಿ ಎಂಬುದೇ ಗ್ರಹಗಳ ಆದೇಶ. ನಿಮ್ಮ ಆರೋಗ್ಯ ಫೆಬ್ರುವರಿ ೧೨ ರಿಂದ ಮಾರ್ಚ ೧೫, ಜೂನ್ ೧೫ರಿಂದ ಜುಲೈ ೧೫ರ ವರೆಗಿನ ಅವಧಿಯಲ್ಲಿ ಮಾತ್ರ ತುಸು ಕೆಡಬಹುದಾಗಿದೆ. ಆದರೆ ಉಳಿದೆಲ್ಲ ಅವಧಿಯಲ್ಲಿ ಆರೋಗ್ಯ ಅತ್ಯುತ್ತಮವಾಗಿದೆ. ಡಿಸೆಂಬರ್ ೧೫ರಿಂದ ಜನವರಿ ೧೪, ಮಾರ್ಚ್ ೧೫ ರಿಂದ ಜೂನ್ ೧೫ರ ಅವಧಿಯಲ್ಲಿ ಲಾಟರಿ, ಮೊದಲಾದ ಮೂಲದಿಂದ ಧನಲಾಭವಾಗಲಿದೆ. ಆರ್ಥಿಕಸ್ಥಿತಿ ತುಂಬ ತೃಪ್ತಿಕರ. ವಾಹನ ಸುಖ ಉತ್ತಮ. ಪರದೇಶ ಸಂಚಾರದ ಯೋಗವೂ ಉಂಟು.

ಈ ರಾಶಿಯ ನೌಕರವರ್ಗದವರಿಗೆ ಈ ವರ್ಷ ಅತ್ಯಂತ ಯಶೋದಾಯಕವಾಗಿದೆ. ವರಿಷ್ಠರ ಕೃಪೆಗೆ ಪಾತ್ರರಾಗಿ, ಮಾರ್ಚ ೧೫ ರಿಂದ ಜೂನ್ ೧೫, ಸಪ್ಟೆಂಬರ್ ೧೫ ರಿಂದ ಅಕ್ಟೋಬರ್ ೧೪ರ ಅವಧಿಯಲ್ಲಿ ಬಡತಿ ಪಡೆಯುವಿರಲ್ಲದೇ ಅನುಕೂಲಕರ ಸ್ಥಳಕ್ಕೆ ಬದಲಿಯಾಗುವದು. ನಿರುದ್ಯೋಗಿಗಳಿಗೆ ವರ್ಷದ ಪೂರ್ವಾರ್ಧದಲ್ಲಿ ನೌಕರಿ ದೊರೆಯುವದು. ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ ಅತ್ಯಂತ ಫಲಪ್ರದ ವರುಷವಿದಾಗಿದೆ. ನೂತನ ಉದ್ದಿಮೆಗಳನ್ನವರು ಪ್ರಾರಂಭಿಸುವರು. ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆ ಕೂಡ ಅತ್ಯಂತ ಉತ್ಕರ್ಷದ್ದಾಗಿದೆ. ಸರಕಾರ, ಸಂಘ ಸಂಸ್ಥೆಗಳಿಂದ ಮಾನ–ಸನ್ಮಾನ ಲಭಿಸುವದಲದೇ ವಿಪುಲ ದ್ರವ್ಯಲಾಭವೂ ಆಗುವದು. ಅದರಂತೆ ಕಾರ್ಮಿಕ ಹಾಗೂ ಕೃಷಿಕರಿಗೂ ಈ ವರ್ಷ ಉತ್ಸಾಹದಾಯಕವಾಗಿದೆ.

ಈ ರಾಶಿಯ ವಧೂವರರ ಕಂಕಣಬಲ ಕೂಡಿ ಬಂದಿರುವದಲ್ಲದೆ ಡಿಸೆಂಬರ್ ೧೫ ರಿಂದ ಜೂನ್ ೧೫ರ ಅವಧಿಯಲ್ಲಿ ವಿವಾಹವಾಗುವದು. ಈ ರಾಶಿಯ ವಿವಾಹಿತರಿಗೂ ಕೂಡ ಉತ್ತಮವಾಗಿದೆ. ಒಡೆದು ಹೋಗಿದ್ದ ಕುಟುಂಬ ಮತ್ತೆ ಒಂದುಗೂಡುವವು. ಬೆಲೆಯುಳ್ಳ ಆಭರಣಗಳ ಸಂಗ್ರಹವೂ ಸಾಧ್ಯ. ನೂತನ ಗೃಹ ಕಟ್ಟಿಸುವ ಯೋಗವಿದೆ.

ಈ ರಾಶಿಯ ಗರ್ಭವತಿಯರ ಪೆರಿಗೆ ತುಸು ಕಷ್ಟಕರವಾದರೂ ಗಂಡುಮಗುವೇ ಜನಿಸುವದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರ್ಷ ಅತೀವ ಪ್ರೋತ್ಸಾಹದಾಯಕವಾಗಿದೆಯಲ್ಲದೆ ಆರ್ಥಕ್ಕೆ ನಿಂತಿದ್ದ ಶಿಕ್ಷಣ ಮುಂದುವರಿಯುವುದು. ಮಾರ್ಚ ೧೫ ರಿಂದ ಜೂನ್ ೧೫ ಹಾಗು ಡಿಸೆಂಬರ್ ೧೫ ರಿಂದ ಜನವರಿ ೧೪ರ ಅವಧಿಯಲ್ಲಿ ಪರೀಕ್ಷೆಯಾದರೆ ಖಂಡಿತ ಯಶಸ್ಸು ದೊರೆಯುವುದಲ್ಲದೆ ಉಚ್ಚವರ್ಗದಲ್ಲಿ ಉತ್ತೀರ್ಣರಾಗುವ ಶಕ್ಯತೆಯಿದೆ. ಹಾಗು ಪಾರಿತೋಷಕ, ಶಿಷ್ಯವೃತ್ತಿಯನ್ನು ಪಡೆಯುವ ಸಾಧ್ಯತೆಯಿದೆ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೂ ವಿಶೇಷ ಉತ್ಸಾಹದಾಯಕ ವರುಷವಿದಾಗಿದೆ. ಮಾನ–ಸನ್ಮಾನ, ಪ್ರತಿಷ್ಠೆ ಹೆಚ್ಚುವದು. ರಾಜಕೀಯದಲ್ಲಿ ಗಣ್ಯವ್ಯಕ್ತಿಗಳಾಗುವವರಲ್ಲಿ ಸಂಶಯವಿಲ್ಲ. ಯಾವುದೇ ಚುನಾವಣೆಗೆ ಸ್ಪರ್ಧಿಸಿದರೂ ಆಯ್ಕೆ ನಿಶ್ಚಿತವೆಂದೇ ತಿಳಿಯಬೇಕು. ಡಿಸೆಂಬರ್ ೧೫ ರಿಂದ ಜನವರಿ ೧೪, ಮಾರ್ಚ್ ೧೫ ರಿಂದ ಜೂನ್ ೧೫ರ ಅವಧಿಯಲ್ಲಿ ಜರುಗಬಹುದಾದ ಚುನಾವಣೆಗಳಲ್ಲಿ ಬಹುಮತದಿಂದ ಆಯ್ಕೆಗೊಳ್ಳುವದರಲ್ಲಿ ಸಂಶಯವಿಲ್ಲ.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಗಳಲ್ಲಿ ಪ್ರಚಂಡ ಜಯ ದೊರೆಯುವುದು.ರಾಜಿಗಾಗಿ ಪ್ರಯತ್ನಿಸಬೇಕಾಗುವ ಆವಶ್ಯಕತೆಯಿಲ್ಲ.



ಸಿಂಹ

**ಈ ರಾಶಿಯವರಿಗೆ ಇದುವರೆಗೆ ಐದನೆಯವನಾಗಿದ್ದ ದುರು ಜನೇವರಿಯಿಂದ ಆರನೆಯವನಾಗಲಿರುವದರಿಂದ ಅಲ್ಲಿಂದ ಮುಂದಿನ ಅವಧಿ ಕಷ್ಟಸಾಧ್ಯ ಯಶಸ್ಸಿನ ಕಾಲವಾಗಿದೆ ಎಂದೇ ತಿಳಿಯಬೇಕು.**

ರಾಹು ಹಾಗು ಶನಿ ವರುಷವಿಡೀ ಶುಭ ಫಲವನ್ನೀಯುತ್ತಿದ್ದರೂ ಜನವರಿಯಿಂದ ಆರನೆಯವನಾಗಲಿರುವ ಗುರು ಅಶುಭ ಫಲವನ್ನೀಯುವನು. ಆರೋಗ್ಯ ವರ್ಷವಿಡೀ ಚೆನ್ನಾಗಿರುವುದಾದರೂ ಮಾರ್ಚ ೧೫ರಿಂದ ಎಪ್ರಿಲ್ ೧೨, ಜುಲೈ ೧೫ ರಿಂದ ಆಗಸ್ಟ ೧೬ರ ವರೆಗಿನ ಅವಧಿಯಲ್ಲಿ ಆರೋಗ್ಯ ಕೆಡಬಹುದಾಗಿದೆ. ಆರನೆಯ ಗುರುವಿನಿಂದಾಗಿ ಅಪ್ತೇಷ್ಟರೊಡನೆ ಕಲಹ, ಶತ್ರುಪೀಡೆ ಮುಂತಾದ ಫಲಗಳು ಲಭಿಸುವವು. ಆದರೆ ಆರ್ಥಿಕ ಸ್ಥಿತಿ ಮಾತ್ರ ಸಮಾಧಾನಕರ. ಡಿಸೆಂಬರ್ ೧೨ ರಿಂದ ಜುಲೈ ೧೫ರ ಅವಧಿಯಲ್ಲಿ ಲಾಟರಿ, ದತ್ತಕ ಮೊದಲಾದ ಮೂಲದಿಂದ ಆಕಸ್ಮಿಕ ಧನಲಾಭವಾಗುವದು.

ಈ ರಾಶಿಯ ನೌಕರವರ್ಗದವರಿಗೆ ಈ ವರುಷ ಶುಭದಾಯಕವಿದ್ದು, ಡಿಸೆಂಬರ್ ೧೫ ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ ರಿಂದ ಜುಲೈ ೧೫ರ ಅವಧಿಯಲ್ಲಿ ಬಡತಿಯ ಯೋಗವಿದ್ದು ಅನುಕೂಲಕರ ಸ್ಥಳಕ್ಕೆ ಬದಲಿಯಾಗುವದು. ಆದರೆ ಮಾರ್ಚ್ ೧೫ ರಿಂದ ಎಪ್ರಿಲ್ ೧೨, ಜುಲೈ ೧೫ ರಿಂದ ಸಪ್ಟೆಂಬರ್ ೧೫ರ ಅವಧಿಯಲ್ಲಿ ಬದಲಿಯಾದರೆ ಅನುಕೂಲಕರವಲ್ಲದ ಸ್ಥಳಕ್ಕೆ ಆಗುವದಲ್ಲದೆ ಮೇಲಧಿಕಾರಿಗಳಿಂದ ವಿಶೇಷ ತೊಂದರೆಯಾಗುವ ಸಂಭವ. ಡಿಸೆಂಬರ್ ೧೫ ರಿಂದ ಫೆಬ್ರುವರಿ ೧೨ ಹಾಗು ಮೇ ೧೫ ರಿಂದ ಜುಲೈ ೧೫ರ ಸಮಯದಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗ ದೊರೆಯಬಹುದಾಗಿದೆ. ತಾಂತ್ರಿಕ ಕೆಲಸಗಾರರಿಗೆ ಈ ವರುಷ ಅತ್ಯಂತ ಯಶೋದಾಯಕವಾಗಿದೆ. ಶನಿ–ರಾಹುಗಳೀರ್ವರೂ ಶುಭಪ್ರದರಾಗಿರುವದರಿಂದ ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ, ದೊಡ್ಡ ಉದ್ಯಮದಾರರಿಗೆ ವಿಶೇಷ ಲಾಭವಾಗಲಿದೆಯಲ್ಲದೆ ಹೊಸ ಹೊಸ ಉದ್ಯಮಗಳನ್ನವರು ಪ್ರಾರಂಭಿಸುವ ಸಾಧ್ಯತೆಯಿದೆ. ಈ ರಾಶಿಯ ಸರಕಾರಿ ಅಧಿಕಾರಿಗಳಿಗೆ ರಾಜಕಾರಣಿಗಳಿಂದ ವಿಶೇಷ ಕಿರುಕುಳ ಉಂಟಾಗುವ ಸಂಭವ. ಬುದ್ಧಿಜೀವಿ, ಸಾಹಿತಿ, ಕಲಾವಿದರಿಗೆ ಈ ವರ್ಷ ಪ್ರೋತ್ಸಾಹದಾಯಕವಾಗಿರುವದಿಲ್ಲ, ಆದರೂ ನವೆಂಬರ್ ೭ರಿಂದ ಫೆಬ್ರುವರಿ ೧೨, ಮೇ ೧೫ ರಿಂದ ಜುಲೈ ೧೫ರ ಅವಧಿಯಲ್ಲಿ ಸಮಾಜದಿಂದ, ಸರಕಾರದಿಂದ ಮನ್ನಣೆ ಪ್ರಶಸ್ತಿಗಳು ಲಭಿಸಬಹುದಾಗಿದೆಯಲ್ಲದೆ ವಿದೇಶ ಸಂಚಾರದ ಸಾಧ್ಯತೆಯುಂಟು.

ಈ ರಾಶಿಯ ವಧೂವರರ ಕಂಕಣಬಲ ಕೂಡಿ ಬಂದಿರುವದಲ್ಲದೆ ನವ್ಹೆಂಬರ್ ೭ ರಿಂದ ಫೆಬ್ರುವರಿ ೧೫ ರೊಳಗಾಗಿ ಅನಾಯಾಸವಾಗಿ ವಿವಾಹ ಜರಗುವದು. ವಿವಾಹಿತರಿಗೆ ಮಾತ್ರ ವಿಶೇಷ ತೊಂದರೆಯಾಗಲಿದೆ. ಏಕತ್ರ ಕುಟುಂಬದಲ್ಲಿ ಕಲಹವಿದ್ದೇ ಇದೆ. ಪರಸ್ಪರರಲ್ಲಿ ತಪ್ಪು ಗ್ರಹಿಕೆಯಿಂದಾಗಿ ಮಾನಸಿಕ ವೇದನೆ ಹೆಚ್ಚು; ಆದರೆ ಡಿಸೆಂಬರ್ ೧೫ ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ ರಿಂದ ಜುಲೈ ೧೫ರ ವರೆಗಿನ ಅವಧಿಯಲ್ಲಿ ನೂತನ ಗೃಹ ಕಟ್ಟಿಸುವ ಹಾಗು ಬೆಲೆಯುಳ್ಳ ಆಭರಣಗಳನ್ನು ಖರೀದಿಸಬಹುದಾಗಿದೆ. ತೀರ್ಥಯಾತ್ರೆಯ ಯೋಗವುಂಟು. ಈ ರಾಶಿಯ ಗರ್ಭಿಣಿಯರ ಪೆರಿಗೆ ನಿರಾಯಾಸವಾಗಿ ಆಗುವದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರ್ಷ ಶುಭದಾಯಕವಾಗಿದೆ. ಶಿಕ್ಷಣಕ್ಕೆ ತೊಂದರೆಯೇನೂ ಆಗದು. ನವ್ಹೆಂಬರ್ ೩ ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ ರಿಂದ ಜುಲೈ ೧೫ರ ಅವಧಿಯಲ್ಲಿ ಪರೀಕ್ಷೆ ಜರುಗಿದರೆ ನಿಶ್ಚಿತವಾಗಿಯೂ ತೇರ್ಗಡೆಯಾಗುತ್ತಾರೆ. ಹಾಗು ಬಹುತರರಿಗೆ ಮೇಲಿನ ಶ್ರೇಣಿ ದೊರೆಯುವುದು. ಆದರೆ ಮಾರ್ಚ್ ೧೫ ರಿಂದ ಎಪ್ರಿಲ್ ೧೨ ಹಾಗು ಜುಲೈ ೧೫ ರಿಂದ ಅಕ್ಟೋಬರ್ ೧೪ರ ಅವಧಿಯಲ್ಲಿ ಪರೀಕ್ಷೆಯಾದರೆ ಅಂಥವರ ಫಲಿತಾಂಶ ಹೇಳುವದು ಶಕ್ಯವಿಲ್ಲ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಮೊದಲಿನ ಮೂರು ತಿಂಗಳುಗಳು ಯಶೋದಾಯಕವಾಗಿದ್ದು ಮಾನ–ಸನ್ಮಾನಗಳು ಲಭಿಸುವವು; ಆದರೆ ವರ್ಷದ ಕೊನೆಯ ಮೂರು ತಿಂಗಳುಗಳು ಅತ್ಯಂತ ಪ್ರತಿಕೂಲವಾಗಿದ್ದು ಮಿತ್ರರು ಶತ್ರುಗಳಾಗಿ ಅಧಿಕಾರಚ್ಯುತಿಗೆ ಕಾರಣರಾಗುತ್ತಾರೆ. ಜನಾಪವಾದಕ್ಕೂ ಗುರಿಯಾಗಬಹುದು. ಡಿಸೆಂಬರ್ ೧೫ ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ ರಿಂದ ಜುಲೈ ೧೫ರ ಸಮಯದಲ್ಲಿ ಜರಗುವ ಚುನಾವಣೆಗಳಲ್ಲಿ ನಿಶ್ಚಿತ ಜಯ ಲಭಿಸುವದು.

ದಾವೆ–ಫಿರ್ಯಾದಿ ಇಲ್ಲವೆ ಖಾಸಗಿ ಕಾರ್ಯಗಳಲ್ಲಿ ಮಿಶ್ರಫಲ ಲಭ್ಯ. ಜನವರಿ ೧೪ ರಿಂದ ಜುಲೈ ೧೫ರ ಅವಧಿಯಲ್ಲಿ ನಿರ್ಣಯ ದೊರೆತರೆ ಪೂರ್ಣ ಅನುಕೂಲವಿದೆಯಾದರೆ ಇತರ ಅವಧಿಯಲ್ಲಿ ಪ್ರತಿಕೂಲವಾಗುವದು.



ಕನ್ಯಾ

**ಈ ವರ್ಷವು ಈ ರಾಶಿಯವರಿಗೆ ಬಹುತರ ಎಲ್ಲ ವಿಷಯಗಳಲ್ಲಿಯೂ ಸುಖಕರವಾಗಿರುವದಲ್ಲದೆ ತುಂಬ ಉತ್ಕರ್ಷವೂ ಆಗಿದೆ ಎಂಬುದು ನಿಶ್ಚಿತ.**

ಇದುವರೆಗೆ ನಾಲ್ಕನೆಯವನಾಗಿದ್ದ ಗುರು ಇದೇ ಜನವರಿ ೨೫ರಿಂದ ಐದನೆಯವನಾಗಲಿದ್ದು ವರ್ಷವಿಡೀ ಅತ್ಯಂತ ಶುಭಫಲವನ್ನೀಯಲಿದ್ದಾನೆ. ಈ ವರ್ಷ ನಿಮ್ಮ ಜೀವನ ಮಹತ್ವದ್ದಾಗಿದೆ ಎಂಬುದರ ಅನುಭವವಾಗದಿರದು. ಕಳೆದ ವರ್ಷದಿಂದ ಉಂಟಾಗಿದ್ದ ಶಾರೀರಿಕ ಪೀಡೆ ಈ ವರುಷ ಕಡಿಮೆಯಾಗುವದಲ್ಲದೆ ಸ್ವಜನ ವಿರೋಧದಿಂದ ಉಂಟಾಗಿದ್ದ ಮಾನಸಿಕ ತೊಂದರೆಯೂ ಸಹ ದೂರವಾಗುವದು; ಆದರೆ ಜನ್ಮಸ್ಥ ರಾಹುವಿನಿಂದಾಗಿ ಡಿಸೆಂಬರ್ ೧೫ರಿಂದ ಜನವರಿ ೨೫ರ ಮೂರು ತಿಂಗಳ ಅವಧಿಯಲ್ಲಿ ಆರೋಗ್ಯ ಕೆಡಬಹುದಾಗಿದೆಯಲ್ಲದೆ ಅಪಘಾತದ ಭೀತಿಯುಂಟು. ನಿರೀಕ್ಷಿಸಿದ ಮೂಲದಿಂದ ಹಣ ಬರುವದರಿಂದ ವರ್ಷವಿಡೀ ಆರ್ಥಿಕ ಸ್ಥಿತಿ ತೃಪ್ತಿಕರವಿದ್ದು, ಮೇ ೧೫ ರಿಂದ ಅಗಸ್ಟ ೧೫,

ಫೆಬ್ರುವರಿ ೧೨ ರಿಂದ ಮಾರ್ಚ್ ೧೫ರ ಅವಧಿಯಲ್ಲಿ ಆಕಸ್ಮಿಕ ಧನಲಾಭದ ಯೋಗವುಂಟು.

ಈ ರಾಶಿಯ ನೌಕರವರ್ಗದವರಿಗೆ ಈ ವರ್ಷ ಅನುಕೂಲಕರವಿದ್ದು, ಹಂಗಾಮಿ ನೌಕರರು ಕಾಯಂ ಆಗುವರು. ನಿರುದ್ಯೋಗಿಗಳಿಗೆ ಈ ವರ್ಷದ ಮಧ್ಯಂತರ ಅವಧಿಯಲ್ಲಿ ಉದ್ಯೋಗ ದೊರೆಯಬಹುದು. ಫೆಬ್ರುವರಿ ೧೨ ರಿಂದ ಮಾರ್ಚ್ ೧೫, ಮೇ ೧೫ ರಿಂದ ಆಗಸ್ಟ್ ೧೫ರ ಅವಧಿಯಲ್ಲಿ ಬಡತಿ ದೊರೆತು ಅನುಕೂಲ ರಸ್ಥಳಕ್ಕೆ ಬದಲಿಯಾಗುವ ಯೋಗವಿದೆಯಲ್ಲದೆ ಮೇಲಧಿಕಾರಿಗಳ ಉಪದ್ರವವೂ ಫೆಬ್ರುವರಿ ೧೨ ರಿಂದ ಕಡಿಮೆಯಾಗುವದು. ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ ಪ್ರಗತಿದಾಯಕ ವರ್ಷವಿದಾಗಿದೆ. ರಾಜಕಾರಣಿ ಹಾಗು ಸರಕಾರಿ ಅಧಿಕಾರಿಗಳ ಅವಕ ಪೆಗೊಳಗಾಗಿದ್ದ ವ್ಯಾಪಾರಿ ವರ್ಗಕ್ಕೆ ಅವರಿಂದ ಸಹಕಾರ ದೊರೆಯುವುದರಿಂದ ವಿಪುಲ ಲಾಭ ಸಿಕ್ಕುವದಲ್ಲದೆ, ನೂತನ ಉದ್ಯೋಗಗಳನ್ನು ಪ್ರಾರಂಭಿಸುವ ಸಂಭವ. ಈ ರಾಶಿಯ ಬುದ್ಧಿಜೀವಿ, ಲೇಖಕ, ಕಲಾವಿದರಿಗೆ ಐದನೆಯ ಗುರುವಿನ ಶುಭ ದೃಷ್ಟಿಯಿಂದಾಗಿ, ಸರಕಾರ ಹಾಗು ಸಮಾಜದಿಂದ ಪ್ರಶಸ್ತಿ, ಬಹುಮಾನವನ್ನು ಪಡೆಯಬಹುದಲ್ಲದೇ ವಿದೇಶ ಸಂಚಾರದ ಯೋಗವುಂಟು.

ಈ ರಾಶಿಯ ವಧೂವರರ ಕಂಕಣಬಲ ಕೂಡಿಬಂದಿದ್ದು ಫೆಬ್ರುವರಿಯಿಂದ ಆಗಸ್ಟ ತಿಂಗಳೊಳಗಾಗಿ ವಿವಾಹವಾಗುವದು ನಿಶ್ಚಿತ. ವಿವಾಹಿತರಿಗೆ ಈ ವರುಷ ಪ್ರಗತಿದಾಯಕವಿದೆ. ಒಡೆದು ಹೋಗಿದ್ದ ಕುಟುಂಬ ಮತ್ತೆ ಒಂದುಗೂಡುವ ಸಾಧ್ಯತೆಯಿದೆ. ಈ ರಾಶಿಯ ಗೃಹಿಣಿಯರು ಬೆಲೆಬಾಳುವ ಆಭರಣಗಳನ್ನೂ, ಸ್ಥಾವರ ಆಸ್ತಿಯನ್ನೂ ಹಾಗು ಸಂತದ ಮನೆಯನ್ನೂ ಪಡೆಯಬಹುದಾಗಿದೆ. ತೀರ್ಥಯಾತ್ರೆಯ ಯೋಗವೂ ಉಂಟು.

ಈ ರಾಶಿಯ ಗರ್ಭಿಣಿಯರ ಹೆರಿಗೆ ಡಿಸೆಂಬರ್ ೧೫ ರಿಂದ ಜನವರಿ ೨೫, ಆಗಸ್ಟ್ ೧೫ ರಿಂದ ಸಪ್ಟೆಂಬರ್ ೧೭ರ ಅವಧಿಯಲ್ಲಾದರೆ ತೊಂದರೆಯದೆಂದೇ ಹೇಳಬಹುದು. ನಂತರದ ಅವಧಿಯಲಾದರೆ ಸುಲಭ ಪ್ರಸೂತಿಯಾಗುವದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಐದನೆಯ ಗುರುವಿನಿಂದಾಗಿ ಈ ವರ್ಷ ಪ್ರೋತ್ಸಾಹದಾಯಕವಾಗಿದೆ. ಕಳೆದ ವರ್ಷ ಕುಂಠಿತವಾಗಿದ್ದ ಶಿಕ್ಷಣ ಮತ್ತೆ ಮುಂದುವರಿಸುವರು. ಫೆಬ್ರುವರಿ ೧೨ ರಿಂದ ಎಪ್ರಿಲ್ ೧೨, ಮೇ ೧೫ ರಿಂದ ಆಗಸ್ಟ್ ೧೫ರ ಅವಧಿಯಲ್ಲಿ ಜರಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಅನಾಯಾಸವಾಗಿ ಪಾಸಾಗುವರಲ್ಲದೇ ಉಚ್ಚಶ್ರೇಣಿಯನ್ನು ಪಡೆಯ ಬಲ್ಲರಲ್ಲದೆ ಸುವರ ಪದಕ ಸಂಪಾದಿಸಬಹುದಾಗಿದೆ. ಆದರೆ ಡಿಸೆಂಬರ್ ೧೫ ರಿಂದ ಜನವರಿ ೨೫, ಎಪ್ರಿಲ್ ೧೨ ರಿಂದ ಮೇ ೧೫ರ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವವರು ಅಪಾರ ಪರಿಶ್ರಮ ಪಡಬೇಕಾಗುತ್ತದೆ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೂ ಈ ವರ್ಷ ಅಪೂರ್ವವಾದುದಾಗಿದೆ. ಜನಪ್ರಿಯತೆ ಹೆಚ್ಚುವದಲ್ಲದೆ ಪಕ್ಷ, ಸಂಸ್ಥೆಗಳ ಸಹಕಾರವೂ ದೊರೆಯಬಲ್ಲದು. ಗಣ್ಯವ್ಯಕ್ತಿಗಳಾಗಿ ಅಧಿಕಾರ ಪಡೆಯಬಲ್ಲರು. ಚುನಾವಣೆಯಲ್ಲಿ ಭಾರೀ ಯಶಸ್ಸು ಸಿಕ್ಕುವದು. ಫೆಬ್ರುವರಿ ೧೨ ರಿಂದ ಮಾರ್ಚ್ ೧೫, ಮೇ ೧೫ರಿಂದ ಆಗಸ್ಟ್ ೧೫ರ ಅವಧಿಯಲ್ಲಿ ಜರಗುವ ಯಾವದೇ ಚುನಾವಣೆಯಲ್ಲೂ ಅವಿರೋಧ ಆಯ್ಕೆಯಾಗಬಹುದು. ಕೃಷಿಕ ವರ್ಗಕ್ಕೂ ಈ ವರ್ಷ ಅತ್ಯುತ್ತಮವಾಗಿದೆ. ಹೊಸ ಜಮೀನು, ದನಕರುಗಳನು ಕೊಳ್ಳುವ ಯೋಗವಿದೆ.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಕಾರ್ಯಗಳಲ್ಲಿ ಪ್ರಚಂಡ ಜಯ ಲಭಿಸುವದು. ಕಳೆದ ವರ್ಷದಿಂದ ಅರ್ಧಕ್ಕೆ ನಿಂತಿದ್ದ ಕಾರ್ಯಗಳು ಫೆಬ್ರುವರಿಯಿಂದ ಆಗಸ್ಟ್ ರೊಳಗಾಗಿ ಪೂರ್ತಿಗೊಳ್ಳುವವು.



ಈ ರಾಶಿಯವರಿಗೆ ಶನಿ ಎಂಟನೆಯವನಾಗಿದ್ದು ಜನೆವರಿ ೨೫ ರಂದು ಬರಲಿರುವ ನಾಲ್ಕನೆಯ ಗುರು ಕೂಡ ಅನಿಷ್ಟ ಫಲವನ್ನೇ ಕೊಡುವವನಾಗಿದ್ದಾನೆ. ಹೀಗಾಗಿ ವರ್ಷವಿಡೀ ತೊಂದರೆಗಳನ್ನೆದುರಿಸಬೇಕಾತ್ತದೆಂಬುದು ಸುನಿಶ್ಚಿತ.

ಪ್ರಾಮಾಣಿಕ, ಬುದ್ಧಿವಂತ, ಪ್ರತಿಷ್ಠಿತರೆಂದು ಕೀರ್ತಿ ಪಡೆದ ನಿಮ್ಮನ್ನು ಜನ ಈಗ ತಿರಸ್ಕಾರದಿಂದ ಕಾಣತೊಡಗುವರು. ಬದಲಾದ ಪರಿಸ್ಥಿತಿಯನ್ನು ಧೈರ್ಯದಿಂದ ಎದುರಿಸಬೇಕಲ್ಲದೆ ಹತಾಶರಾಗಬಾರದು. ಶ್ರೀ ಗುರು ದತ್ತನನ್ನು ಭಜಿಸಿ. ಎಲ್ಲವೂ ಸರಿಯಾಗುವದು. ಈ ರಾಶಿಯವರ ಆರೋಗ್ಯ ವರ್ಷವಿಡೀ ಚೆನ್ನಾಗಿರದು. ಜನವರಿ ೧೫ ರಿಂದ ಮಾರ್ಚ್ ೧೫, ಮೇ ೧೫ ರಿಂದ ಜೂನ್ ೧೫, ಸಪ್ಟೆಂಬರ್ ೧೭ ರಿಂದ ಆಕ್ಟೋಬರ್ ೧೮ರ ನಡುವಣ ಅವಧಿಯಲ್ಲಿ ರೋಗ ಉಲ್ಬಣಿಸುವದಲ್ಲದೆ ಅಪಘಾತದ ಭೀತಿಯುಂಟು. ಈ ಅವಧಿಯಲ್ಲಿ ತಾಂತ್ರಿಕ ವರ್ಗ, ವಾಹನ ಚಾಲಕರು ವಿಶೇಷ ಎಚ್ಚರಿಕೆಯಲ್ಲಿರುವದವಶ್ಯ. ಆರ್ಥಿಕ ಸ್ಥಿತಿ ಕೂಡ ತೀರ ಗಂಭೀರವಾಗಿದೆಯೆಂದೇ ತಿಳಿಯಬೇಕು. ಜನವರಿ ೧೪ ರಿಂದ ಫೆಬ್ರುವರಿ ೧೨, ಮೇ ೧೫ ರಿಂದ ಜುಲೈ ೧೫ರ ಅವಧಿ ತೀವ್ರ ತೊಂದರೆಯದಾಗಿದೆ. ಇದ್ದುದರಲ್ಲಿಯೇ ಮಾರ್ಚ್ ೧೫ ರಿಂದ ಎಪ್ರಿಲ್ ೧೨, ಜುಲೆ ೧೫ರಿಂದ ಸಪ್ಟೆಂಬರ್ ೧೪ರ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಹಣ ಬರುವದರಿಂದ ಅಪಮಾನದ ಭಯ ತಪ್ಪುವದು.

ಈ ರಾಶಿಯ ನೌಕರವರ್ಗದವರಿಗೆ ಈ ವರ್ಷ ಪ್ರತಿಕೂಲವಾಗಿದೆ. ಮೇಲಧಿಕಾರಿಗಳ ಉಪದ್ರವಕ್ಕೆ ಬೇಸತ್ತು ರಾಜೀನಾಮೆಯನ್ನೀಯುವದಕ್ಕೂ ಹಿಂತೆಗೆಯದಂತಹ ಪ್ರಸಂಗ ಬರಬಹುದು. ಆದರೆ ತಾಳ್ಮೆಯಿಂದಿರುವದೇ ಹಿತಕರ. ಜನವರಿ ೧೪ ರಿಂದ ಮಾರ್ಚ್ ೧೫, ಎಪ್ರಿಲ್ ೧೨ ರಿಂದ ಜೂನ ೧೫, ಸಪ್ಟೆಂಬರ್ ೧೫ ರಿಂದ ಆಕ್ಟೋಬರ್ ೧೮ರ ನಡುವಣ ಅವಧಿಯಲ್ಲಿ ಹಿಂಬಡತಿ, ಹಾಗು ಬೇಡವಾದ ಸ್ಥಳಕೆ ಬದಲಿಯಾಗುವ ಸಂಭವ; ಆದರೆ ಡಿಸೆಂಬರ್ ೧೫ ರಿಂದ ಜನೆವರಿ ೧೪, ಮಾರ ೧೫ ರಿಂದ ಎಪ್ರಿಲ್ ೧೨, ಜುಲೈ ೧೫ರಿಂದ ಸಪ್ಟೆಂಬರ್ ೧೭ರ ಅವಧಿ ಮಾತ್ರ ತುಸು ಅನುಕೂಲವಾಗಿದ್ದು, ನಿಮ್ಮ ಮನೋರಥ ಈಡೇರಬಹುದಾಗಿದೆ. ನಿರುದ್ಯೋಗಿಗಳಿಗಂತೂ ಈ ವರ್ಷ ಅಸಹನೀಯವಾದುದಾಗಿದೆಯೆಂದೇ ಹೇಳಬಹುದು. ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ ಉತ್ಸಾಹದಾಯಕ ವರ್ಷವಿದಾಗಿಲ್ಲ. ಸರಕಾರದ ನಿಬಂಧನೆಗಳನ್ನೆದುರಿಸಬೇಕಾಗುತ್ತದೆ. ಹೊಸ ಉದ್ಯಮಗಳನ್ನು ಆರಂಭಿಸಬೇಕೆಂಬ ಆಲೋಚನೆಯನ್ನು ಬಿಟ್ಟು ಕೊಡುವದೇ ಹಿತಕರ. ಬುದ್ಧಿಜೀವಿ, ಲೇಖಕ, ಕಲಾವಿದರಿಗೆ ಕೂಡ ಅತ್ಯಂತ ಪ್ರತಿಕೂಲವಿದೆ. ಕಾರ್ಮಿಕ ಹಾಗು ತಾಂತ್ರಿಕ ವರ್ಗದವರಿಗೆ ಹಣಕಾಸಿನ ದೃಷ್ಟಿಯಿಂದ ಈ ವರ್ಷ ಪ್ರಗತಿದಾಯಕವಿರುವದಾದರೂ ವರಿಷ್ಠರ ಕಿರುಕುಳ, ಸಂಗಡಿಗರ ಅಸಹಕಾರದಿಂದಾಗಿ ಮನಸ್ಸಿಗೆ ನೆಮ್ಮದಿ ಇರದು.

ಈ ರಾಶಿಯ ವಧೂವರರಿಗೆ ಈ ವರ್ಷ ಪ್ರತಿಕೂಲವಿದೆ. ಮದುವೆ ನಿಶ್ಚಯವಾಗಿದ್ದರೂ ಮುಂದೂಡಬಹುದಾಗಿದೆ. ಇಲ್ಲವೆ ವಿವಾಹ ಮುರಿಯಬಹುದಾಗಿದೆ. ಕಳೆದ ವರ್ಷ ನಿಶ್ಚಯವಾಗಿದರೆ, ಜನವರಿ ೨೫ ರೊಳಗೆ ವಿವಾಹ ಜರಗಿಸುವದುತ್ತಮ. ವಿವಾಹಿತರಿಗೂ ಈ ವರ್ಷ ಅನುಕೂಲವಾಗಿಲ. ಗೃಹಕಲಹದಿಂದಾಗಿ ಮಾನಸಿಕ ತೊಂದರೆ ಹೆಚ್ಚಬಹುದು. ಏಕತ್ರಯವಾಗಿದ್ದ ಕುಟುಂಬ ಒಡೆದುಹೋಗಬಹುದಾಗಿದೆ.

ಈ ರಾಶಿಯ ಗರ್ಭಿಣಿಯರಿಗೆ ಈ ವರ್ಷ ಪ್ರತಿಕೂಲವಿರುವದಾದರೂ ನವ್ಹೆಂಬರ್ ೭ ರಿಂದ ಜನವರಿ ೧೪, ಜೂನ್ ೧೫ ರಿಂದ ಸಪ್ಟೆಂಬರ್ ೧೭ ರೊಳಗೆ ಹೆರಿಗೆಯಾದರೆ ಸುಲಭವಾಗುವದು. ತದನಂತರದ ಕಾಲದಲ್ಲಾದರೆ ತುಂಬ ಕಷ್ಟಕರ.

ಈ ರಾಶಿಯ ವಿದ್ಯಾರ್ಥಿಗಳಿಗೂ ತೊಂದರೆದಾಯಕ ವರ್ಷವಿದಾಗಿದೆ. ಶಿಕ್ಷಣವನು ಅರ್ಧಕ್ಕೆ ನಿಲ್ಲಿಸಬೇಕಾದ ಸಾಧ್ಯತೆಯುಂಟು.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಕೂಡ ಅನುಕೂಲಕರ ವರ್ಷವಿದಾಗಿಲ. ಚುನಾವಣೆ ಮೊದಲಾದವುಗಳಿಂದ ದೂರವಿರುವದುತ್ತಮ. ನವ್ಹೆಂಬರ್ ೭ ರಿಂದ ಜನವರಿ ೨೫, ಜುಲೆ ೧೫ ರಿಂದ ಸಪ್ಟೆಂಬರ್ ೧೭ರ ಅವಧಿಯಲ್ಲಿ ಜರಗಬಹುದಾದ ಚುನಾವಣೆಗಳಲ್ಲಿ ಅನಿವಾರ್ಯವಾಗಿ ಸ್ಪರ್ಧಿಸಿದರೂ ಅತಿ ಪ್ರಯಾಸದಿಂದ ಜಯ ಸಿಕ್ಕಬಹುದಾಗಿದೆ. ಈ ರಾಶಿಯ ಕೃಷಿಕರಿಗೂ ಕೂಡ ಈ ವರ್ಷ ಚೆನ್ನಾಗಿಲ್ಲವಲ್ಲದೆ ಈಗಿದ್ದ ಜಮೀನುಗಳನು ಮಾರಬೇಕಾದ ಸಂದರ್ಭ ಎದುರಾಗುವದುಂಟು.

ದಾವೆ–ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳೆಲ್ಲವನ್ನು ಮುಂದೂಡುವದುತ್ತಮ. ನವ್ಹೆಂಬರ್ ೭ ರಿಂದ ಜನವರಿ ೨೫ ರೊಳಗಿನ ಅವಧಿಯಲ್ಲಿ ನಿರ್ಣಯವಾದರೆ ಯಶಸ್ಸು ದೊರೆಯಬಹುದು.






ಈ ವರ್ಷ ಈ ರಾಶಿಯವರಿಗೆ ಯಾವ ವಿಶೇಷ ಘಟನೆಗಳೂ ಜರುಗಲಾರವು. ಇದೇ ಜನೆವರಿ ೨೫ ರಿಂದ ಮೂರನೆಯವನಾಗಲಿರುವ ಗುರು ಮಿಶ್ರ ಫಲದಾಯಕನಿರುವದೇ ಕಾರಣವೆಂದು ತಿಳಿಯಬೇಕು.

ವರ್ಷವಿಡೀ ಶನಿ ಏಳನೆಯವನಾಗಿದ್ದರೂ ಆ ಶುಭ ಫಲಗಳನ್ನೇನೂ ಆತ ನೀಡಲಾರ. ಅದರಂತೆಯೇ ಶುಭ

ದಾಯಕನಾಗಿದ್ದ ರಾಹು ಮಧ್ಯಮ ಫಲವನ್ನೀಯು ವವನಾಗಿದ್ದಾನೆ. ಹೀಗಾಗಿ ಈಗಿದ್ದ ಯಥಾಸ್ಥಿತಿಯೇ ಮುಂದುವರಿಯಬಹುದಾಗಿದೆ. ವಿಶಾಖಾ ಕೊನೆಯ ಚರಣ ಹಾಗೂ ಅನುರಾಧಾದ ಮೊದಲಿನ ಎರಡು ಚರಣಗಳ ಈ ರಾಶಿಯವರಿಗೆ ಬರಲಿರುವ ಎಂಟನೆಯ ಶನಿಯ ಬಿಸಿ ಉತ್ತರಾರ್ಧದಲ್ಲಿ ತಗಲುವುದು. ವರ್ಷ ವಿಡೀ ಆರೋಗ್ಯ ಚೆನ್ನಾಗಿರುವುದಾದರೂ ಫೆಬ್ರುವರಿ ೧೨ರಿಂದ ಮಾರ್ಚ್ ೧೫, ಜೂನ್ ೧೫ರಿಂದ ಜುಲೈ ೧೫ರ ಅವಧಿಯಲ್ಲಿ ಮಾತ್ರ ಆರೋಗ್ಯ ಕೆಡಬಹುದಾಗಿದೆ. ಆರ್ಥಿಕ ಸ್ಥಿತಿ ಕೂಡ ಚೆನ್ನಾಗಿರದು. ನವೆಂಬರ್ ೭ರಿಂದ ಫೆಬ್ರವರಿ ೧೨, ಎಪ್ರಿಲ್ ೧೨ರಿಂದ ಮೇ ೧೫, ಆಗಸ್ಟ ೧೫ರಿಂದ ಅಕ್ಟೋಬರ್ ೧೮ರ ಅವಧಿಯಲ್ಲಿ ಆಕಸ್ಮಿಕ ಧನಾಗಮನವಾಗಲಿದೆಯಲ್ಲದೆ ನಿರೀಕ್ಷಿಸಿದ ಮೂಲ ದಿಂದಲೂ ಹಣ ಬರುವುದರಿಂದ ಆರ್ಥಿಕ ಸ್ಥಿತಿ ಹತೋಟಿಯಲ್ಲಿರಬಹುದಾಗಿದೆ.

ಈ ರಾಶಿಯ ನೌಕರವರ್ಗದವರಿಗೆ ಮಿಶ್ರಫಲ ದೊರೆಯುತ್ತದೆ. ಪೂರ್ವಾರ್ಧದಲ್ಲಿ ಬಡತಿ ದೊರೆತು ಬದಲಿಯಾದರೆ ಅಪೇಕ್ಷಿತ ಸ್ಥಳಕ್ಕೆಯೇ ಆಗುವುದಲ್ಲದೆ ವರಿಷ್ಠರಿಂದ ಸಹಾಯ, ಸಹಕಾರಗಳೂ ದೊರೆಯುತ್ತವೆ; ಆದರೆ ಉತ್ತರಾರ್ಧದಲ್ಲಿ ಬದಲಿಯಾದರೆ ಬೇಡವಾದ ಸ್ಥಳಕ್ಕೆ ಆಗಬಹುದಾಗಿದೆಯಲ್ಲದೆ ಮೇಲಧಿಕಾರಿಗಳಿಂದ ವಿಶೇಷ ಕಿರುಕುಳವುಂಟಾಗುವುದಲ್ಲದೆ ಫೆಬ್ರುವರಿ ೧೨ರಿಂದ ಮಾರ್ಚ್ ೧೫. ಜೂನ್ ೧೫ರಿಂದ ಜುಲೈ ೧೫ರ ಅವಧಿಯಲ್ಲಿ ಹಿಂಬಡತಿಯಾಗಬಹುದು. ಈ ರಾಶಿಯ ನಿರುದ್ಯೋಗಿಗಳಿಗೆ ಪೂರ್ವಾರ್ಧದಲ್ಲಿ ಉದ್ಯೋಗ ದೊರೆಯಬಹುದು. ವ್ಯಾಪಾರೋದ್ಯಮಗಳಿಗೆ ಮಿಶ್ರಫಲ ದೊರೆಯುವುದು. ನವೆಂಬರ್ ೭ರಿಂದ ಫೆಬ್ರವರಿ ೧೨, ಜುಲೈ ೧೫ರಿಂದ ಅಕ್ಟೋಬರ್ ೧೮ರ ಅವಧಿಯಲ್ಲಿ ಉದ್ಯೋಗದಲ್ಲಿ ಪ್ರಗತಿ ಹಾಗೂ ಲಾಭವಾದರೆ ಫೆಬ್ರವರಿ ೧೨ರಿಂದ ಜುಲೈ ೧೫ರ ಅವಧಿಯಲ್ಲಿ ಹಾನಿಯಾಗುವ ಸಂಭವವಿದೆ. ಬುದ್ಧಿಜೀವಿ, ಕಲಾವಿದ, ಲೇಖಕ ವರ್ಗದವರಿಗೂ ಕೂಡ ಈ ವರ್ಷ ಮಿಶ್ರಫಲವೇ ದೊರೆಯುವುದು. ಯಾವುದೇ ಮಹತ್ವದ ಸಂಗತಿಗಳೂ ಘಟಿಸಲಾರವು. ಕಾರ್ಮಿಕ ಹಾಗೂ ತಾಂತ್ರಿಕ ಕೆಲಸಗಾರರಿಗೆ ಮಾತ್ರ ಈ ವರ್ಷ ಯಶೋದಾಯಕವಾಗಿದೆ. ಕೃಷಿಕರಿಗೂ ಮಿಶ್ರ ಫಲವೇ ದೊರೆಯುವುದು.

ಈ ರಾಶಿಯ ವಧೂವರರ ವಿವಾಹ ನವೆಂಬರ್ ೭ರಿಂದ ಫೆಬ್ರವರಿ ೧೨, ಮಾರ್ಚ್ ೧೫ರಿಂದ ಜೂನ್ ೧೫ರ ಅವಧಿಯಲ್ಲಿ ಅನಾಯಾಸವಾಗಿ ಜರುಗುವುದು. ವಿವಾಹಿತ ಮಹಿಳೆಯರಿಗೆ ಪೂರ್ವಾರ್ಧ ಪ್ರಗತಿದಾಯಕವಾಗಿದೆ. ಈ ಅವಧಿಯಲ್ಲವರು ಬೆಲೆಯುಳ್ಳ ಆಭರಣ ಇತ್ಯಾದಿ ವಸ್ತುಗಳನ್ನು ಖರೀದಿಸುವ ಯೋಗವಿದೆ. ಆದರೆ ಉತ್ತರಾರ್ಧದಲ್ಲಿ ಮಾತ್ರ ಏಕತ್ರ ಕುಟುಂಬದಲ್ಲಿ ವಿರಸವುಂಟಾಗಬಹುದು.

ಈ ರಾಶಿಯ ಗರ್ಭಿಣಿಯರ ಹೆರಿಗೆ ಫೆಬ್ರುವರಿ ೧೨ರಿಂದ ಮಾರ್ಚ್ ೧೫, ಮೇ ೧೫ರಿಂದ ಜುಲೈ ೧೫ರ ಅವಧಿಯಲ್ಲಾದರೆ ಕಷ್ಟಕರ. ತದನಂತರದ ಅವಧಿಯಲ್ಲಾದರೆ ಸುಲಭ ಪ್ರಸೂತಿಯಾಗುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ನವೆಂಬರ ೭ರಿಂದ ಫೆಬ್ರುವರಿ ೧೨, ಎಪ್ರಿಲ್ ೧೨ರಿಂದ ಮೇ ೧೫ರ ಅವಧಿಯಲ್ಲಾದರೆ ಉಚ್ಚ ಶ್ರೇಣಿಯಲ್ಲಿ ಉತ್ತೀರ್ಣರಾಗುವರಲ್ಲದೆ, ಸುವರ್ಣ ಪದಕ ಇತ್ಯಾದಿ ಪಾರಿತೋಷಕಗಳನ್ನೂ ಪಡೆಯಬಹುದು; ಆದರೆ ಫೆಬ್ರುವರಿ ೧೨ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ರ ಅವಧಿಯಲ್ಲಾದರೆ ಉತ್ತೀರ್ಣರಾಗಲು ವಿಶೇಷ ಶ್ರಮ ಪಡಬೇಕಾಗಬಹುದು.

ಈ ರಾಶಿಯ ರಾಜಕೀಯ ಹಾಗೂ ಸಾಮಾಜಿಕ ಕಾರ್ಯಕರ್ತರಿಗೆ ಈ ವರ್ಷ ಪ್ರಗತಿಯದಾಗಿದೆ. ನವೆಂಬರ್ ೭ರಿಂದ ಫೆಬ್ರವರಿ ೧೨, ಎಪ್ರಿಲ್ ೧೨ರಿಂದ ಮೇ ೧೫, ಆಗಸ್ಟ ೧೫ರಿಂದ ಅಕ್ಟೋಬರ್ ೧೮ರ ಅವಧಿಯು ಅತ್ಯಂತ ಯಶೋದಾಯಕವಾಗಿದೆ. ಸ್ಥಾನ ಮಾನ ಪಡೆಯಬಹುದಲ್ಲದೆ ಜನಪ್ರಿಯತೆಯೂ ಹೆಚ್ಚುವುದು. ನವೆಂಬರ್ ೭ರಿಂದ ಫೆಬ್ರುವರಿ ೧೨ರ ಅವಧಿಯಲ್ಲಿ ನಡೆಯಬಹುದಾದ ಚುನಾವಣೆಗಳಲ್ಲಿ ಸ್ಪರ್ಧಿಸಿದರೆ ನಿಶ್ಚಿತವಾಗಿಯೂ ಆಯ್ಕೆಗೊಳ್ಳುವರು. ಆದರೆ ಇತರ ಅವಧಿಯಲ್ಲಿ ಸ್ಪರ್ಧಿಸಿದರೆ ಅತ್ಯಲ್ಪ ಬಹುಮತದಿಂದ ಆಯ್ಕೆಗೊಳ್ಳಬಹುದು.

ದಾವೆ-ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಗಳಲ್ಲಿ ಯಶಸ್ಸು ದೊರೆಯಬಹುದಾದರೂ ಪೂರ್ಣ ದೊರೆಯದು ಇಲ್ಲವೆ ರಾಜಿಯಿಂದ ವ್ಯಾಜ್ಯ ಮುಗಿಯಬಹುದು.



## ಧನು

ಈ ರಾಶಿಯುವರಿಗೆ ಈ ವರ್ಷ ಬಹುತರ ಎಲ್ಲ ವಿಷಯುಗಳಲ್ಲಿಯೂ ಸುಖಕರವಾಗಿದೆಯಾದರೆ ನವ್ಹೆಂಬರ್, ಮಾರ್ಚ್ ಹಾಗು ಜುಲೈ ತಿಂಗಳುಗಳ ಮಧ್ಯದ ಅವಧಿಯುಲ್ಲಿ ಆರೋಗ್ಯ ಕೆಡಬಹುದಾಗಿದೆ.

ಮೊದಲೇ ಶುಭದಾಯಕನಾಗಿರುವ ಶನಿಯೊಂದಿಗೆ ಜನವರಿಯಿಂದ ಎರಡನೆಯುವನಾಗಲಿರುವ ಗುರು ಕೂಡ ಶುಭದಾಯಕನಾಗಲಿರುವುದರಿಂದ ಕಳೆದ ವರ್ಷದಿಂದ ಎದುರಾಗಿದ್ದ ತಾಪತ್ರಯಗಳೆಲ್ಲ ದೂರವಾಗಿ ಸುಖ–ಸೌಭಾಗ್ಯಗಳು ಬೆಂಬತ್ತಿ ಬರುವವು. ಆರೋಗ್ಯ ಉತ್ತಮ. ಬರತಕ್ಕ ಹಣ ಸಕಾಲದಲ್ಲಿ ಬರುವುದಲ್ಲದೆ, ಫೆಬ್ರುವರಿ ೧೨ರಿಂದ ಮಾರ್ಚ್ ೧೫, ಮೇ ೧೫ರಿಂದ ಜೂನ್ ೧೫, ಆಗಸ್ಟ ೧೫ರಿಂದ ಅಕ್ಟೋಬರ್ ೨೬ರ ಅವಧಿಯಲ್ಲಿ ಲಾಟರಿ, ದತ್ತಕ, ವಾರ್ಸಾ ಮುಂತಾದ ಮೂಲಗಳಿಂದ ಧನ ಪ್ರಾಪ್ತಿಯಾಗಿ, ಆರ್ಥಿಕ ಸ್ಥಿತಿ ಸುಸ್ಥಿತಿಯಲ್ಲಿರುತ್ತದೆ.

ಈ ರಾಶಿಯ ನೌಕರವರ್ಗದವರಿಗೆ ಕಳೆದ ವರ್ಷದಲ್ಲಿದ್ದ ಅಸ್ಥಿರತೆ ದೂರವಾಗುತ್ತದೆ. ಫೆಬ್ರುವರಿ ೧೨ರಿಂದ ಮಾರ್ಚ್ ೧೫, ಮೇ ೧೫ರಿಂದ ಜೂನ್ ೧೫, ಆಗಸ್ಟ ೧೫ರಿಂದ ವರ್ಷಾಂತ್ಯದ ವರೆಗಿನ ಅವಧಿಯಲ್ಲಿ ಬಡತಿ ದೊರೆತು ಇಚ್ಛಿತ ಸ್ಥಳಕ್ಕೆಯೆ ಬದಲಿಯಾಗುವ ಯೋಗವಿದೆ. ನಿರುದ್ಯೋಗಿಗಳಿಗೂ ಈ ಅವಧಿಯಲ್ಲಿ ಉದ್ಯೋಗ ದೊರೆಯುಬಹುದಾಗಿದೆ. ಈ ರಾಶಿಯ ವ್ಯಾಪಾರೋದ್ಯಮಿಗಳಿಗಂತೂ ಅತ್ಯಂತ ಯಶೋದಾಯಕ ಕಾಲವಿದಾಗಿದೆ. ಹೊಸ ಉದ್ಯೋಗಗಳನ್ನು ಪ್ರಾರಂಭಿಸಿ ಅಪಾರ ಲಾಭ ಪಡೆಯುಬಲ್ಲರು. ವಾಹನ ಸುಖ ಚೆನ್ನಾಗಿದೆ. ವಿದೇಶ ಸಂಚಾರ ದ ಪ್ರಬಲ ಯೋಗ ಕೂಡ. ಸಾಹಿತಿ, ಬುದ್ಧಿಜೀವಿ, ಲೇಖಕ, ಕಲಾವಿದರಿಗೂ ಈ ವರ್ಷ ಅತ್ಯಂತ ಮಹತ್ವದ್ದಾಗಿದೆ. ಸರಕಾರದಿಂದ ಸನ್ಮಾನಿತರಾಗುವರಲ್ಲದೇ ವಿಪುಲ ಧನ ಪ್ರಾಪ್ತಿಯಾಗಲಿದೆ. ಕೃಷಿಕರಿಗೂ ಕೂಡ ಅತ್ಯಂತ ಪ್ರೋತ್ಸಾಹದಾಯಕವಾಗಿದೆಯುಲ್ಲದೆ ಹೊಸ ಜಾಗೆ, ಭೂಮಿ ಇತ್ಯಾದಿ ಆಸ್ತಿಗಳನ್ನು ಸಂಪಾದಿಸುವರು.

ಈ ರಾಶಿಯ ವಧೂವರರಿಗೆ ನವೆಂಬರ್ ೭ರಿಂದ ಮಾರ್ಚ್ ೧೫, ಎಪ್ರಿಲ್ ೧೨ರಿಂದ ಜುಲೈ ೧೫ರೊಳಗಿನ ಅವಧಿಯಲ್ಲಿ ಇಲ್ಲವೆ ಅತಿ ತಡವೆಂದರೆ ಆಗಸ್ಟ ೧೫ರಿಂದ ವರ್ಷಾಂತ್ಯದೊಳಗೆ ವಿವಾಹ ಸಮಾರಂಭ ಜರಗುವುದು. ವಿವಾಹಿತರಿಗೂ ಈ ವರ್ಷ ಅತ್ಯುತ್ತಮವಾಗಿದೆ. ಒಡೆದು ಹೋಗಿದ್ದ ಕುಟುಂಬ ಮತ್ತೆ ಒಂದುಗೂಡುವ ಯೋಗ ಪ್ರಬಲವಾಗಿದೆಯುಲ್ಲದೆ ಮನೆಯುಲ್ಲಿ ಸುಖ–ಶಾಂತಿಗಳು ನೆಲೆಗೊಳ್ಳುವವು. ಬಂಧುಗಳು ಸೌಹಾರ್ದದಿಂದಿರುವರು.

ಈ ರಾಶಿಯು ಗರ್ಭಿಣಿಯರ ಪ್ರಸೂತಿ ಸುಖಕರವಾಗಲಿದ್ದು ಬಹುಶಃ ಗಂಡು ಮಗುವೇ ಜನಿಸುವುದು.

ಈ ರಾಶಿಯ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೧೨ರಿಂದ ಮಾರ್ಚ್ ೧೫, ಆಗಸ್ಟ ೧೫ರಿಂದ ವರ್ಷಾಂತ್ಯದ ಅವಧಿಯಲ್ಲಿ ಜರುಗಿದರೆ ಉಚ್ಚ ಶ್ರೇಣಿಯುಲ್ಲಿ ತೇರ್ಗಡೆಯಾಗುವರು. ತದನಂತರ ನವ್ಹೆಂಬರ್ ೭ರಿಂದ ಜನವರಿ ೧೫, ಮಾರ್ಚ್ ೧೫ರಿಂದ ಎಪ್ರಿಲ್ ೧೨ರ ಅವಧಿಯಲ್ಲಾದರೆ ವಿಶೇಷ ಶ್ರಮ ಪಡಬೇಕಾಗುತ್ತದೆ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೂ ಈ ವರ್ಷ ಅವಿಸ್ಮರಣೀಯ ಬದಲಾವಣೆಯ ಕಾಲವಾಗಿದೆ. ಮಾನ–ಸನ್ಮಾನಗಳು ಹೆಚ್ಚುವವು. ಅಧಿಕಾರ ಪಡೆದು ರಾಜಕೀಯ ಕೇಂದ್ರ ವ್ಯಕ್ತಿಯಾಗುವದರಲ್ಲಿ ಸಂಶಯವೇ ಇಲ್ಲ. ಫೆಬ್ರುವರಿ ೧೨ರಿಂದ ಮಾರ್ಚ್ ೧೫, ಮೇ ೧೫ರಿಂದ ಜೂನ್ ೧೫, ಆಗಸ್ಟ ೧೫ರಿಂದ ವರ್ಷಾಂತ್ಯದ ಅವಧಿಗಳಲ್ಲಿ ಜರುಗುವ ಚುನಾವಣೆಗಳಲ್ಲಿ ಸ್ಪರ್ಧಿಸಿದರೆ ನಿಶ್ಚಿತವಾಗಿಯೂ ಆಯ್ಕೆಗೊಳ್ಳುವರು.

ದಾವೆ, ಫಿರ್ಯಾದಿ ಇತರ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಭಾರೀ ಯಶಸ್ಸು ದೊರೆಯುಬಹುದಲ್ಲದೆ ಕಳೆದ ಕೆಲ ವರ್ಷಗಳಿಂದ ಅರ್ಧಕ್ಕೆ ನಿಂತಿದ ವ್ಯಾಜ್ಯಗಳ ನಿರ್ಣಯವೂ ದೊರೆಯುತ್ತದೆ.



## ಮಕರ

ಈ ರಾಶಿಯುವರಿಗೆ, ವರ್ಷಾರಂಭದಿಂದಲೇ ರಾಹು ಹನ್ನೆರಡನೆಯುವನಾಗಿದ್ದು, ಫಲದಾಯುಕನಾಗಿದ್ದರೂ ಅನೇಕ ವಿಷಯುಗಳಲ್ಲಿ ಕಷ್ಟಸಾಧ್ಯ ಯುಶಸ್ಸು ದೊರೆಯುಬಹುದಾಗಿದೆ. ಅದರಂತೆ ಔದ್ಯೋಗಿಕ ಉತ್ಕರ್ಷಕ್ಕೂ ಪೋಷಕವಾಗಿಲ್ಲವೆಂದೇ ಹೇಳಬಹುದು.

ಕಳೆದ ವರ್ಷದಿಂದ ಹನ್ನೆರಡನೆಯುವನಾಗಿದ್ದು ಅಶುಭ ಫಲಗಳನ್ನೀಯುತ್ತಿದ್ದ ಗುರು ಜನ್ಮಸ್ಥನಾಗಿ ಮಧ್ಯಮ ಫಲವೀಯಲಿದ್ದಾನೆ. ಹಾಗು ಶನಿ ಐದನೆಯುವನಾಗಿದುದರಿಂದ ಆತನ ಅನಿಷ್ಟ ಪರಿಣಾಮಗಳನ್ನು ವರ್ಷವಿಡೀ ಎದುರಿಸಬೇಕಾಗುತ್ತದೆ. ಆರೋಗ್ಯ ಉತ್ತಮವಿದ್ದಾಗ್ಯೂ ಡಿಸೆಂಬರ್ ೧೫ರಿಂದ ಜನವರಿ ೨೫, ಎಪ್ರಿಲ್ ೧೨ ರಿಂದ ಮೇ ೧೫, ಆಗಸ್ಟ ೧೫ ರಿಂದ ಸಪ್ಟೆಂಬರ್ ೧೭ ರ ಅವಧಿಯುಲ್ಲಿ ಕೆಡಬಹುದಾಗಿದೆ. ಆರ್ಥಿಕ ಸ್ಥಿತಿಯಲ್ಲಿ ಪ್ರಗತಿಯಿರದಿದರೂ ಮಾರ್ಚ್ ೧೫ರಿಂದ ಎಪ್ರಿಲ್ ೧೨, ಜೂನ್ ೧೫ರಿಂದ ಜುಲೈ ೧೫, ಸಪ್ಟೆಂಬರ್ ೧೬ರಿಂದ ಅಕ್ಟೋಬರ್ ೨೬ರ ಅವಧಿಯಲ್ಲಿ ನಿರೀಕ್ಷಿಸಿದ ಮೂಲದಿಂದ ಧನಾಗಮನವಾಗಿ ಆರ್ಥಿಕ ಸ್ಥಿತಿ ಹಿಡಿತದಲ್ಲಿರಬಹುದಾಗಿಗೆ

ಈ ರಾಶಿಯ ನೌಕರವರ್ಗದವರಿಗೆ ವಿಶೇಷ ತೊಂದರೆಯುದಾಗಿದೆ. ಉದ್ಯೋಗದಲ್ಲಿ ಸ್ಥಿರತೆ ಇರದು. ಹನ್ನೆರಡು ವರ್ಷಕೊಮ್ಮೆ ಬರುವ ಜನ್ಮಸ್ಥ ಗುರುವಿನ ಪ್ರಭಾವದಿಂದಾಗಿ ಬಹುತರ ಎಲ್ಲ ವಿಷಯುದಲ್ಲೂ ಮಹತ್ವಪೂರ್ಣ ಬದಲಾವಣೆಯಾಗಲಿದೆ. ಮೇಲಿಂದ ಮೇಲೆ ಬದಲಿಯಾಗುವ ಸಂಭವ. ಉತ್ತರಾಷಾಢ ನಕ್ಷತ್ರದವರಿಗೆ ಬಡತಿ ದೊರೆತು ಬದಲಿಯಾದರೆ ಧನಿಷ್ಠಾ ನಕ್ಷತ್ರದವರು ಮಾತ್ರ ಬದಲಿಯಾಗುವರು. ನಿರುದ್ಯೋಗಿಗಳಿಗೆ ಈ ವರ್ಷ ಆಶಾದಾಯಕವಾಗಿದೆ. ಅನೇಕ ಕಡೆಗಳಿಂದ ಕರೆ ಬರುತ್ತವೆ. ಯಾವ ಉದ್ಯೋಗಕ್ಕೆ ಹೊಂದಿದರೆ ಸರಿ ಹೋದೀತು ಎಂಬ ಚಿಂತೆ ಅವರನ್ನು ಬಾಧಿಸುತ್ತದೆ. ಈ ರಾಶಿಯ ವ್ಯಾಪಾರೋದ್ಯಮಿಗಳಿಗೆ ಉದ್ಯೋಗದಲ್ಲಿ ಸ್ಥಿರತೆಯಿರದು. ಆದರೆ ಆರ್ಥಿಕ ಸ್ಥಿತಿ ಪ್ರಗತಿದಾಯಕವಿದೆ. ಬುದ್ಧಿಜೀವಿ, ಲೇಖಕ, ಕಲಾವಿದ ಮುಂತಾದವರಿಗೆ ಪ್ರಗತಿದಾಯಕ ವರ್ಷವಿದಾಗಿದೆ. ಮಾನ ಸನ್ಮಾನಗಳೂ ಲಭಿಸಲಿವೆ. ವಿದೇಶ ಸಂಚಾರದ ಯೋಗವುಂಟು. ವಾಹನ ಸುಖ ಉತ್ತಮ. ಕಷಿಕ ಹಾಗೂ ತಾಂತ್ರಿಕ ವರ್ಗದವರಿಗೂ ಈ ವರ್ಷ ಪ್ರಗತಿದಾಯಕವಾಗಿದೆ ಎಂಬುದು ನಿಶ್ಚಿತ.

ಈ ರಾಶಿಯ ವಧೂವರರ ವಿವಾಹವಾಗುವದಿದ್ದಲ್ಲಿ ಅದಕ್ಕೆ ಬಾಸಿಂಗ ಬಲವಿದೆಯೆಂಬುದು ನಿಶ್ಚಿತ. ಅದರಲ್ಲಿಯೂ ಜನವರಿ ೧೫ರಿಂದ ಎಪ್ರಿಲ್ ೧೨, ಮೇ ೧೫ರಿಂದ ಜುಲೈ ೧೫ರ ಅವಧಿಯೊಳಗಾಗಿ ಅನಾಯಾಸವಾಗಿ ವಿವಾಹ ಜರುಗಬಹುದಾಗಿದೆ. ವಿವಾಹಿತರಿಗೆ ಈ ವರ್ಷ ಪ್ರಗತಿಯುದಾಗಿದೆ. ಗೃಹ ಕಲಹವಿಲ್ಲದಾಗಿ ಒಡೆದಿದ್ದ ಕುಟುಂಬ ಮತ್ತೆ ಕೂಡಬಹುದಾಗಿದೆ. ದಾಯಾದಿಗಳು ಈ ಮೊದಲಿನ ಅಸೂಯಾಭಾವನೆ ತೊರೆದು ಪರಸ್ಪರ ಪ್ರೀತಿ–ವಿಶ್ವಾಸಗಳಿಂದ ಕಾಣುತ್ತಾರೆ. ಜನವರಿ ೨೫ರಿಂದ ಆಗಸ್ಟ ೨೫ರ ಅವಧಿಯಲ್ಲಿ ಬೆಲೆಯುಳ್ಳ ಆಭರಣಗಳನ್ನು ಖರೀದಿಸುವ ಹಾಗು ತೀರ್ಥಯಾತ್ರೆ ಕೈಕೊಳ್ಳುವ ಪ್ರಬಲ ಯೋಗವಿದೆ.

ಈ ರಾಶಿಯ ಗರ್ಭಿಣಿಯರ ಹೆರಿಗೆ ಮಾರ್ಚ್ ೧೫ರಿಂದ ಎಪ್ರಿಲ್ ೧೨, ಜೂನ್ ೧೫ರಿಂದ ಜುಲೈ ೧೫, ಸಪ್ಟೆಂಬರ್ ೧೬ರಿಂದ ಅಕ್ಟೋಬರ್ ೨೬ರ ಅವಧಿಯಲ್ಲಾದರೆ ಸುಲಭ ಪ್ರಸೂತಿಯಾಗುವುದು. ತದನಂತರದ ಕಾಲದಲ್ಲಾದರೆ ಶಸ್ತ್ರಕ್ರಿಯೆಗೊಳಗಾಗಬಹುದು.

ಈ ರಾಶಿಯ ವಿದ್ಯಾರ್ಥಿಗಳಿಗೆ ಈ ವರ್ಷ ಅನುಕೂಲವಾಗಿದೆ. ಅರ್ಧಕ್ಕೆ ನಿಂತಿದ್ದ ಶಿಕ್ಷಣವನ್ನು ಮುಂದುವರಿಸಬಹುದು. ಮಾರ್ಚ್ ೧೫ರಿಂದ ಏಪ್ರಿಲ್ ೧೨, ಜೂನ್ ೧೫ರಿಂದ ಜುಲೆ ೧೫ ಸಪ್ಟೆಂಬರ್ ೧೬ರಿಂದ ಆಕ್ಟೋಬರ್ ೨೨ ರೊಳಗಿನ ಅವಧಿಯಲ್ಲಿ ಜರುಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ಉಚ್ಚ ಶ್ರೇಣಿ ಪಡೆದು ಪಾಸಾಗುವರಲ್ಲದೆ ಪ್ರಶಸ್ತಿಯನ್ನೂ ಪಡೆಯುಬಲ್ಲರು. ಆದರೆ ಡಿಸೆಂಬರ್ ೧೫ರಿಂದ ಜನವರಿ ೨೫, ಎಪ್ರಿಲ್ ೧೨ರಿಂದ ಜೂನ್ ೧೫ರ ಅವಧಿಯಲ್ಲಿ ಪರೀಕ್ಷೆಗೆ ಕಟ್ಟುವವರು ವಿಶೇಷ ಪರಿಶ್ರಮ ಪಡಬೇಕಾಗುವುದು.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಮಿಶ್ರ ಫಲ ದೊರೆಯುವುದು. ಪೂರ್ವಾರ್ಧದಲ್ಲಿ ಪ್ರತಿಕೂಲವಿದ್ದು ಮಿತ್ರರು ಶತ್ರುಗಳಾಗುವರಲ್ಲದೆ ಅಸಹಕಾರವನ್ನು ಎದುರಿಸಬೇಕಾಗುತ್ತದೆ. ಆದರೆ ಉತ್ತರಾರ್ಧ ಪ್ರೋತ್ಸಾಹದಾಯಕವಾಗಿದು ಎಲ್ಲ ರಾಶಿಗಳ ಸಹಾಯ, ಸಹಕಾರ ದೊರೆಯುವುದು. ಚುನಾವಣೆಗಳಲ್ಲಿ ಮಾತ್ರ ನಿಖರದ ಹೋರಾಟಕ್ಕಿಳಿಯಬೇಕಾಗುತ್ತದೆ.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಕೈ ಹಾಕದಿರುವುದೇ ಹಿತಕರ. ಮಾರ್ಚ್ ೧೫ರ ನಂತರದ ಅವಧಿಯಲ್ಲಿ ಅನುಕೂಲಕರ ನಿರ್ಣಯ ದೊರೆಯುಬಹುದು.



## ಕುಂಭ

**ಈ ರಾಶಿಯವರಿಗೆ ಈ ವರ್ಷದ ಮುಕ್ಕಾಲು ಭಾಗ ಅತೀವ ಕಷ್ಟವಾಯದ್ದಾದರೆ ಕಾಲು ಭಾಗ ಒಳ್ಳೆಯ ಯಶೋದಾಯಕ ಹಾಗು ಸುಖಕರ ಕಾಲವಾಗಿದೆ ಎಂದೇ ತಿಳಿಯಬೇಕು.**

ಇದೇ ಜನವರಿ ೨೫ರಿಂದ ಹನ್ನೆರಡನೆಯವನಾಗಲಿರುವ ಗುರು ಅಶುಭ ಫಲದಾಯಕನಾಗಿದ್ದಾನಲ್ಲದೇ ಶನಿಯೂ ಅನಿಷ್ಟ ಫಲವನ್ನೀಯುವವನಾಗಿದ್ದಾನೆ. ರಾಹು ಹನ್ನೊಂದನೆಯವನಾಗಿದ್ದು ವರ್ಷವಿಡೀ ಶುಭ ಫಲದಾಯಕನೇ ಆಗಿದ್ದಾನೆ. ಗ್ರಹಗಳ ಸ್ಥಿತಿ ಹೀಗಿರುವುದರಿಂದ ಆರೋಗ್ಯ ಚೆನ್ನಾಗಿರದು. ಅದರಲ್ಲೂ ಜನವರಿ ೧೫ರಿಂದ ಏಪ್ರಿಲ್ ೧೨, ಮೇ ೧೫ರಿಂದ ಜೂನ್ ೧೫, ಸಪ್ಟೆಂಬರ್ ೧೭ರಿಂದ ಅಕ್ಟೋಬರ್ ೧೮ರ ನಡುವಣ ಅವಧಿಯಲ್ಲಿ ಆರೋಗ್ಯ ವಿಷಮಿಸುತ್ತದಲ್ಲದೇ ಅಗ್ನಿ ಭಯ, ವಾಹನ ಭಯ ಕೂಡ ಉಂಟು. ಸಿದ್ಧಿಯೊಡೆಯ ಗಣಪತಿಯನ್ನು ಪ್ರಾರ್ಥಿಸಿ.ಎಲ್ಲವೂ ಸುಗಮವಾಗುವುದು. ಆರ್ಥಿಕ ಸ್ಥಿತಿಯೂ ಸರಿಯಾಗಿಲ್ಲ. ವರ್ಷದ ಪ್ರಾರಂಭದ ಮೂರು ತಿಂಗಳುಗಳಲ್ಲಿ ನಿರೀಕ್ಷಿಸಿದ ಮೂಲದಿಂದ ಧನಾಗಮನವಾಗುವುದಲ್ಲದೆ, ವಾರ್ಸಾ, ಲಾಟರಿ, ಮುಂತಾದ ಮೂಲಗಳಿಂದ ಆಕಸ್ಮಿಕ ಧನ ಲಾಭವಾಗಲಿದೆ. ಆದರೆ ವರ್ಷದ ಕೊನೆಯ ಮೂರು ತಿಂಗಳು ಮಾತ್ರ ಗಂಭೀರ ಪರಿಸ್ಥಿತಿಯನ್ನೆದುರಿಸಬೇಕಾಗುತ್ತಿದೆ. ಮಧ್ಯದ ಆರು ತಿಂಗಳ ಅವಧಿ ಸಾಮಾನ್ಯದ್ದಾಗಿದೆ.

ಈ ರಾಶಿಯ ನೌಕರವರ್ಗದವರಿಗೆ ನವೆಂಬರ್ ೭ರಿಂದ ಜನವರಿ ೨೫, ಏಪ್ರಿಲ್ ೧೨ರಿಂದ ಮೇ ೧೫ರ ಅವಧಿ ಅತ್ಯುತ್ತಮವಾಗಿದೆ. ಈ ಅವಧಿಯಲ್ಲಿ ಅನುಕೂಲಕರ ಸ್ಥಳಕ್ಕೆ ಬದಲಿಯಾಗುವುದಲ್ಲದೆ ಮೇಲಧಿಕಾರಿಗಳ ಸಹಾಯ, ಸಹಕಾರಗಳೂ ಲಭಿಸುವವು. ನಿರುದ್ಯೋಗಿಗಳಿಗೆ ಈ ಅವಧಿಯಲ್ಲೇ ಉದ್ಯೋಗ ದೊರೆಯಬಹುದು. ಆದರೆ ತದನಂತರದ ಕಾಲ ಪ್ರತಿಕೂಲವಿದೆ. ಅದರಲ್ಲೂ ಜನವರಿ ೨೫ರಿಂದ ಏಪ್ರಿಲ್ ೧೨, ಮೇ ೧೫ರಿಂದ ಜೂನ್ ೨೫, ಸಪ್ಟೆಂಬರ್ ೧೫ರಿಂದ ಅಕ್ಟೋಬರ್ ೧೮ರ ಅವಧಿ ವಿಶೇಷ ತೊಂದರೆಯದಾಗಿದೆಯಲ್ಲದೆ ಬೇಡವಾದ ಸ್ಥಳಕ್ಕೆ ಬದಲಿಯಾಗಿ, ಮೇಲಧಿಕಾರಿಗಳ ಅವಕೃಪೆಗೆ ಪಾತ್ರರಾಗುವರಲ್ಲದೆ ರಾಜೀನಾಮೆ ನೀಡುವ ಪ್ರಸಂಗ ಎದುರಾಗಬಹುದು. ವ್ಯಾಪಾರೋದ್ಯಮಿಗಳಿಗೆ ವರುಷದ ಪೂರ್ವಾರ್ಧ ಉತ್ಸಾಹದಾಯಕವಾಗಿದ್ದು ವಿಪುಲ ಲಾಭವಾಗುವುದಾದರೆ ಉತ್ತರಾರ್ಧವು ಅತ್ಯಂತ ತೊಂದರೆಯದಾಗಿದೆ. ಗಿರಣಿ, ಸಿನಿಮಾ ಟಾಕೀಜ ಮೊದಲಾದ ಉದ್ಯಮಗಳವರು ನವೆಂಬರ್ ೭ರಿಂದ ಜನವರಿ ೨೫, ಮಾರ್ಚ್ ೧೫ರಿಂದ ಮೇ ೧೫ರ ನಡುವಿನ ಅವಧಿಯಲ್ಲಿ ದ್ವಿಗುಣ ಲಾಭ ಪಡೆಯುವರು. ಬುದ್ಧಿಜೀವಿ, ಲೇಖಕ, ಕಲಾವಿದು ಮೊದಲಾದವರಿಗೂ ಈ ವರ್ಷ ಪ್ರತಿಕೂಲವಾಗಿದೆ. ಆದರೆ ಹನ್ನೊಂದನೆಯ ಗುರು ಇರುವವರೆಗೆ ಅಂದರೆ ನವೆಂಬರ್ ೭ರಿಂದ ಜನವರಿ ೨೫ರ ಅವಧಿ ಅನುಕೂಲಕರವಾಗಿದೆ. ಈ ಅವಧಿಯಲ್ಲಿ ವಿಶೇಷ ಮನ್ನಣೆ ಪಡೆಯುತ್ತಾರೆ. ಉಳಿದ ಅವಧಿ ತೊಂದರೆಯದೆಂದೇ ಗ್ರಹಿಸಬೇಕು.

ಈ ರಾಶಿಯ ವಿವಾಹೇಚ್ಛುಗಳ ವಿವಾಹ ನವೆಂಬರ್ ೭ರಿಂದ ಜನವರಿ ೨೫, ಏಪ್ರಿಲ್ ೧೨ರಿಂದ ಮೇ ೧೫ರ ಅವಧಿಯಲ್ಲಿ ಅನಾಯಾಸವಾಗಿ ನೆರವೇರುವದು. ಮಿಕ್ಕ ಅವಧಿಯಲ್ಲಿ ವಿವಾಹ ನಿಶ್ಚಯವಾಗಿದ್ದರೂ ಬಿಡುಗಡೆಯಾಗುವ ಇಲ್ಲವೇ ಮುಂದೂಡಲ್ಪಡುವ ಸಂಭವ ಹೆಚ್ಚಾಗಿದೆ. ವಿವಾಹಿತರಿಗೆ ಮಾತ್ರ ಈ ವರ್ಷ ಪ್ರತಿಕೂಲವಿದೆ.

ಈ ರಾಶಿಯ ಗರ್ಭವತಿಯರ ಹೆರಿಗೆ ವರುಷದ ಮೊದಲಿನ ಮೂರು ತಿಂಗಳ ಅವಧಿಯಲ್ಲಾದರೆ ಸುಲಭ. ತದನಂತರದ ಕಾಲದಲ್ಲಾದರೆ ತೊಂದರೆಯಾಗುವುದು.

ಈ ರಾಶಿಯ ವಿದ್ಯಾರ್ಥಿಗಳಿಗೂ ಕೂಡ ಈ ವರ್ಷ ಪ್ರತಿಕೂಲವಾಗಿದೆ. ನವೆಂಬರ್ ೭ರಿಂದ ಜನವರಿ ೨೫, ಏಪ್ರಿಲ್ ೧೨ರಿಂದ ಮೇ ೧೫ರ ಅವಧಿಯಲ್ಲಿ ಜರಗುವ ಪರೀಕ್ಷೆಗೆ ಕಟ್ಟುವ ವಿದ್ಯಾರ್ಥಿಗಳು ನಿಶ್ಚಿತವಾಗಿ ತೇರ್ಗಡೆ ಹೊಂದುತ್ತಾರೆ. ಆದರೆ ಜನವರಿ ೨೫ರಿಂದ ಏಪ್ರಿಲ್ ೧೨, ಮೇ ೧೫ರಿಂದ ಜೂನ್ ೧೫, ಸಪ್ಟೆಂಬರ್ ೧೭ರಿಂದ ಅಕ್ಟೋಬರ್ ೨೮ರ ಅವಧಿಯಲ್ಲಿ ಜರಗುವ ಪರೀಕ್ಷೆಗೆ ಕಟ್ಟುವವರ ಫಲಿತಾಂಶ ಸಂಶಯಾಸ್ಪದವಾಗಿದೆ.

ಈ ರಾಶಿಯ ರಾಜಕೀಯ, ಸಾಮಾಜಿಕ ಕಾರ್ಯಕರ್ತರಿಗೆ ಗುರು ಹನ್ನೆರಡನೆಯವನಾಗಲಿರುವುದರಿಂದ ಪ್ರೋತ್ಸಾಹದಾಯಕವಾಗಿಲ್ಲ. ಮಿತ್ರರು ಶತ್ರುಗಳಾಗುವರು. ಚುನಾವಣೆಗಳಲ್ಲಿ ಸ್ಪರ್ಧಿಸದಿರುವುದು ಉತ್ತಮ. ನವೆಂಬರ್ ೭ರಿಂದ ಜನವರಿ ೨೫ರ ಅವಧಿಯಲ್ಲಿ ಜರುಗಬಹುದಾದ ಚುನಾವಣೆಗೆ ಸ್ಪರ್ಧಿಸಿದರೆ ನಿಖರವಾದ ಹೋರಾಟವಾದರೂ ಜಯ ನಿಶ್ಚಿತ.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಈ ವರುಷದ ಮೊದಲಿನ ಮೂರು ತಿಂಗಳುಗಳಲ್ಲಿ ನಿರ್ಣಯ ದೊರೆತರೆ ಜಯ ನಿಶ್ಚಿತ. ತದನಂತರವಾದರೆ ಜಯ ಸಿಕ್ಕದು.



## ಮೀನ

**ಈ ರಾಶಿಯವರಿಗೆ ಈ ವರ್ಷ ಎಲ್ಲ ವಿಷಯಗಳಲ್ಲೂ ಅತ್ಯಂತ ಪ್ರೋತ್ಸಾಹದಾಯಕ ಹಾಗು ಸುಖಕರ ಕಾಲವಾಗಿದೆ ಎಂಬುದು ಸುನಿಶ್ಚಿತ.**

ಈ ರಾಶಿಯವರಿಗಿರುವ ಶನಿ ಶುಭದಾಯಕನಾಗಿರುವನಲ್ಲದೆ, ಜನವರಿ ೨೫ರಂದು ಹನ್ನೊಂದನೆಯವನಾಗಲಿರುವ ಗುರು ಕೂಡ ಅತ್ಯಂತ ಉಚ್ಚನಾಗಿದ್ದಾನೆ. ರಾಹು ಕೂಡ ಶುಭ ಫಲದಾಯಕನೇ! ಹೀಗೆ ಅನೇಕ ಗ್ರಹಗಳ ಬೆಂಬಲವಿದ್ದು ವರ್ಷವಿಡೀ ಅತ್ಯಂತ ಉತ್ಸಾಹದಾಯಕವಾಗಿದೆ. ಫೆಬ್ರುವರಿ ೧೨ರಿಂದ ಮಾರ್ಚ್ ೧೫ ಹಾಗೂ ಜೂನ್ ೧೫ರಿಂದ ಜುಲೈ ೧೫ರ ಅವಧಿಯಲ್ಲಿ ಮಾತ್ರ ತುಸು ದೇಹಾಲಸ್ಯ ಉಂಟಾಗಲಿದೆಯಲ್ಲದೆ ಉಳಿದೆಲ್ಲ ಕಾಲದಲ್ಲಿ ಆರೋಗ್ಯ ಚೆನ್ನಾಗಿರುವುದು. ಆರ್ಥಿಕ ಸ್ಥಿತಿ ಕೂಡ ತುಂಬ ತೃಪ್ತಿಕರ. ನಿರೀಕ್ಷಿತ ಮೂಲದಿಂದ ಬರಬೇಕಾಗಿದ್ದ ಬಾಕಿ ಹಣ ಕೂಡ ಹಿಂತಿರುಗುವುದಲ್ಲದೆ ನವೆಂಬರ್ ೧೫ರಿಂದ ಫೆಬ್ರುವರಿ ೧೨, ಮೇ ೧೫ರಿಂದ ಜೂನ್ ೧೫, ಆಗಸ್ಟ್ ೧೫ರಿಂದ ಸಪ್ಟೆಂಬರ್ ೧೬ರ ಅವಧಿಯಲ್ಲಿ ದತ್ತಕ, ಲಾಟರಿ, ವಾರಸಾ, ಮೊದಲಾದ ಮೂಲದಿಂದ ಧನ ಪ್ರಾಪ್ತಿಯಾಗಲಿದೆ.

ಈ ರಾಶಿಯ ನೌಕರವರ್ಗದವರಿಗಂತೂ ಅತ್ಯಂತ ಯಶೋದಾಯಕ ವರ್ಷವಿದಾಗಿದೆ. ಪರಿಷ್ಕೃತ ಕೃಪೆಗೆ ಸಂಪೂರ್ಣ ಪಾತ್ರರಾಗುವಿರಿ. ನವೆಂಬರ್ ೧೫ರಿಂದ ಫೆಬ್ರುವರಿ ೧೨, ಏಪ್ರಿಲ್ ೧೨ರಿಂದ ಜೂನ್ ೧೫, ಆಗಸ್ಟ್ ೧೫ರಿಂದ ಸಪ್ಟೆಂಬರ್ ೧೭ರ ಅವಧಿಯಲ್ಲಿ ಬಡತಿ ದೊರೆತು ಇಚ್ಛಿತ ಸ್ಥಳಕ್ಕೆ ಬದಲಿಯಾಗುವ ಯೋಗ ಪ್ರಬಲವಾಗಿದೆ. ನಿರುದ್ಯೋಗಿಗಳಿಗೂ ಮೇಲಿನ ಅವಧಿಯಲ್ಲಿ ಉದ್ಯೋಗ ದೊರೆಯಲಿದೆ ಎಂಬುದು ನಿಶ್ಚಿತ. ವ್ಯಾಪಾರೋದ್ಯಮಿಗಳಿಗೆ ಈ ವರುಷ ಉತ್ಸಾಹದಾಯಕವಾಗಿದೆ. ಹೊಸ ಹೊಸ ಉದ್ಯಮಗಳನ್ನವರು ಪ್ರಾರಂಭಿಸಬಹುದಾಗಿದೆಯಲ್ಲದೆ ವಿಪುಲ ಲಾಭವನ್ನೂ ಪಡೆಯುವರು. ಬುದ್ಧಿಜೀವಿ, ಕಲಾವಿದರಿಗೂ ಅತ್ಯಂತ ಯಶೋದಾಯಕವಾಗಿದೆ. ಸಂಘ ಸಂಸ್ಥೆಗಳು, ಸರಕಾರದಿಂದ ಮನ್ನಣೆ ಪಡೆಯುವರು. ಒಟ್ಟಿನಲ್ಲಿ ಎಲ್ಲ ವರ್ಗದ ಕಾರ್ಮಿಕರಿಗೂ ಅತ್ಯಂತ ಯಶೋದಾಯಕವಾಗಿದೆ.

ಈ ರಾಶಿಯ ವಧೂವರರ ವಿವಾಹವಾಗದೇ ಇದ್ದಲ್ಲಿ ಅದಕ್ಕೂ ಕಂಕಣಬಲ ಕೂಡಿ ಬಂದಿದ್ದು ನವೆಂಬರ್ ೧೫ರಿಂದ ಫೆಬ್ರುವರಿ ೧೨, ಮಾರ್ಚ್ ೧೫ ರಿಂದ ಜೂನ ೧೫ ರ ಅವಧಿಯಲ್ಲಿ ನಿರಾಯಾಸವಾಗಿ ಜರಗುವುದು. ವಿವಾಹಿತರಿಗೂ ಅತ್ಯುತ್ತಮ ಕಾಲವಾಗಿದೆ. ಒಡೆದು ಹೋಗಿದ್ದ ಕುಟುಂಬ ಮತ್ತೆ ಒಂದುಗೂಡುವುದು ಬಂಧು-ಬಾಂಧವರು ಹಿಂದಿನ ಕಹಿಭಾವನೆ ತೊರೆದು ಪ್ರೀತಿ—ವಿಶ್ವಾಸಗಳಿಂದ ಬಾಳತೊಡಗುವರು.

ಈ ರಾಶಿಯ ಗರ್ಭಿಣಿಯರ ಹೆರಿಗೆ ಸುಲಭ ಹಾಗು ಸುಖಕರವಾಗಲಿದೆ.

ಈ ರಾಶಿಯ ವಿದ್ಯಾರ್ಥಿಗಳಿಗೂ ಈ ವರ್ಷ ಅತ್ಯುತ್ತಮವಾಗಿದೆ. ಅರ್ಧಕ್ಕೆ ನಿಂತಿದ್ದ ಶಿಕ್ಷಣ ಮುಂದುವರೆಯುವದು. ಉಚ್ಚ ಶ್ರೇಣಿಯಲ್ಲಿ ಉತ್ತೀರ್ಣರಾಗುವರಲ್ಲದೆ ಪ್ರಶಸ್ತಿ ಪದಕಗಳನ್ನೂ ಸಂಪಾದಿಸಬಲ್ಲರು.

ಈ ರಾಶಿಯ ರಾಜಕಾರಣಿ, ಸಾಮಾಜಿಕ ಕಾರ್ಯಕರ್ತರಿಗೂ ಈ ವರ್ಷ ಯಶೋದಾಯಕವಾಗಿದೆ. ಮಾನ ಸನ್ಮಾನ ಹೆಚ್ಚುವವು. ಅಧಿಕಾರ ದೊರೆತು ರಾಜಕೀಯದಲ್ಲಿ ಕೇಂದ್ರ ವ್ಯಕ್ತಿಗಳಾಗಬಹುದು. ಚುನಾವಣೆಯಲ್ಲಿ ಸ್ಪರ್ಧಿಸುವ ಅವಶ್ಯಕತೆಯೇ ಉಂಟಾಗದು. ಅವಿರೋಧ ಆಯ್ಕೆಯಾಗುವಸಂಭವವೇ ಹೆಚ್ಚು! ಜನಪ್ರಿಯತೆ ಹಾಗೂ ಪ್ರತಿಷ್ಠೆಗಳೂ ಹೆಚ್ಚುವವು.

ದಾವೆ, ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಭಾರೀ ಯಶಸ್ಸು ಲಭಿಸುವುದು. ಬಹು ದಿನಗಳಿಂದ ಅರ್ಧಕ್ಕೆ ನಿಂತಿದ್ದ ಕಾರ್ಯಗಳು ಈ ವರ್ಷ ಪೂರ್ತಿಗೊಳ್ಳುವವು.

●



# ಭೂಮಿಕನ್ಯೆ

ಲೇಖಕ:
**ರಂ.ಶಾ.**

ಚಿತ್ರಗಳು: ಎಸ್. ಸಿ. ದೇಸಾಯಿ

ರೋಶನ್, ಅಗೋ ರೋಶನ್ ನೆತ್ತಿಯ ಮೇಲೆ ಬಿಲ್ಲೆ ಇಟ್ಟು ಕುಂಟುತ್ತಿದ್ದ. ರೋಶನ್‌ಳಿಗೆ ಅದು ಕೇಳಿಸಿದರೂ ಆಕೆ ಹಾಗೆಯೇ ನಿಂತಿದ್ದಳು. ಆಯಿ ಇಷ್ಟು ಬೇಗ ಬಂದಳೇಕೆ ಎಂದು ಯೋಚನೆ ಮಾಡುತ್ತಿದ್ದಂತೆ ಕಿಟ್ಟಿ ಅಪ್ಪಿಳು. ಆಕೆ ನಿಂತರೆ ಹೋಗುವಾಗ ಅವಳ ಮೇಲಿನ ಬಿಲ್ಲೆ ನೆಲದ ಮೇಲೆ ಬಿದ್ದಿತು.

"ಹಾ! ಔಟ್" ಎಂದು ಕೂಗಿದರು ಉತ್ಸಾಹದಿಂದ ಶಕೀಲಾ ಹಾಗೂ ತಬಸುಮ್. ಮಣ್ಣಿನಲ್ಲಿಯ ಬಿಲ್ಲೆಯನ್ನೆತ್ತಿ ತನ್ನ ಸಲವಾರಕ್ಕೆ ಒರೆಸಿಕೊಂಡು ರೋಶನ್ ಬದಿಗೆ ನಿಂತಳು. ಶಕೀಲಾ ಕಣ್ಣು ಮುಚ್ಚಿ ಚೌಕಗಳಲ್ಲಿ ಹೆಜ್ಜೆ ಹಾಕತೊಡಗಿದಳು.

"ರೋಶನ್, ನೀನೆಲ್ಲಿ ಸತ್ತೆಯೇನು?"

ಈಗ ಮಾತ್ರ ರೋಶನ್‌ಳಿಗೆ ತಡೆಯಲಾಗಲಿಲ್ಲ. ಆಕೆ ಅಸಹಾಯ ಕಣ್ಣುಗಳಿಂದ ತನ್ನ ಗೆಳತಿಯರತ್ತ ನೋಡಿದಳು.

"ಅಮ್ಮಾ ಕರೆಯುತ್ತಿದ್ದಾಳೆ" ಆಕೆ ಎಂದಾಗ ಅದು ಅವರಿಗೂ ಅಪ್ರಿಯವಾದುದು ಅವರ ಕಿಶೋರ ಕಣ್ಣುಗಳಲ್ಲಿ ಪ್ರತಿಬಿಂಬಿಸಿತು.

"ನೀನು ಹೋಗು" ಎಂದಳು ಶಕೀಲಾ. ತಬಸುಮ್ ಅತ್ತ ನೋಡುತ್ತಾ, "ನಿನ್ನ ಅಮ್ಮ ಎಷ್ಟು ಸಿಟ್ಟಿನಾಕೆ!"

ರೋಶನ್ ಅಲ್ಲಿಂದ ಕಾಲು ಕಿತ್ತಿದಳು. ಇನ್ನೊಮ್ಮೆ ತಾಯಿಯ ಕರೆ ಬರುವ ಮೊದಲೇ.

"ಏನೇ, ಏನು ಮಾಡುತ್ತಿದ್ದಿ ಇಷ್ಟು ಹೊತ್ತು?" ಹೊರಗೆ ಹೋಗು ಬರುವವರನ್ನು ನೋಡುತ್ತ, ಹಂಚಿಕಡ್ಡಿಯಿಂದ ಹಲ್ಲಿನಲ್ಲಿ ಸಿಕ್ಕಿಕೊಂಡ ಅಡಿಕೆ ಚೂರು ತೆಗೆಯುತ್ತ ಬಾಗಿಲಿನಲ್ಲಿ ನಿಂತಿದ್ದ ಜುಬೇದಾ ಮಗಳನ್ನು ಕಂಡೊಡನೆ ಗುಡುಗಿದಳು.

ಒಮ್ಮೆ ತಾಯಿಯತ್ತ ನೋಡುತ್ತ, ಇನ್ನೊಮ್ಮೆ ಹೊರಗೆ ದೂರ ಬೇವಿನ ಮರದಡಿ ಆಡುತ್ತಿದ್ದ ಗೆಳತಿಯರತ್ತ ನೋಡುತ್ತ ರೋಶನ್ ಬಿಲ್ಲೆಯಿಂದ ಬಾಗಿಲ ಮೇಲೆ ಗೀರತೊಡಗಿದಳು.

"ಚಹದ ಪಾತೇಲಿ ಕಪ್ಪು ಬಸಿ ತೊಳೆದೆಯೇನು?"

ರೋಶನ್ ಹೌದೆಂದು ಗೋಣು ಹಾಕಿದಳು.

"ಅಡಿಗೆ ಸೊಪ್ಪು ಹಾಕಿದೆಯೇನು?"

ಅದಕ್ಕೂ ರೋಶನ್ ಗೋಣು ಹಾಕಿದಳು.

ತಾನು ಮಗಳಿಗೆ ಇನ್ನೇನು ಕೆಲಸ ಹೇಳಿದ್ದೆಯೆಂದು ಜುಬೇದಾ ನೆನೆಸಿಕೊಳ್ಳುತ್ತಿದ್ದಂತೆ ಆಕೆ ತಾಯಿಯತ್ತ ಬೆದರು ಕಣ್ಣುಗಳಿಂದ ನೋಡಿದಳು. ಅಲ್ಲಿ ಉದ್ರೇಕವಿರಲಿಲ್ಲ. ರೋಶನ್‌ಳಿಗೆ ಅಂತಹದರಲ್ಲೂ ಆಶ್ಚರ್ಯೆನಿಸಿತು. ಆಕೆ ಬಿಲ್ಲೆ ಖಮೀಜಿನ ಜೇಬಿನಲ್ಲಿ ಹಾಕಿದಳು. ತಾಯಿಯತ್ತ ತಿರುಗಿ ನಿಂತಳು. "ಇಷ್ಟು ಬೇಗ ಕಾರಖಾನೆಗೆ ಹೋಗಿ ಬಂದೆಯೇನು?" ಆಕೆ ಧೈರ್ಯದಿಂದ ಕೇಳಿದಳು. ಮುನ್ನ ರಾತ್ರಿ, ಅಂದು ಮುಂಜಾವ ಹಾಗೂ ಮಧ್ಯಾಹ್ನ ತಾಯಿ ತಾನು ಕಟ್ಟಿದ ಬೀಡಿಗಳನ್ನು ಕಾರಖಾನೆಯಲ್ಲಿ ಕೊಡಲು ಹೋದಾಕೆ ಇಷ್ಟು ಬೇಗ ಬರುವುದೆಂತು? ಅದೇ ನಿಮಿತ್ತವಾಗಿ ಅಲ್ಲಿ ಬಂದ ಹತ್ತು ಹನ್ನೆರಡು ಹೆಂಗಸರೊಡನೆ ಬೀಡಿಯ ಲೆಕ್ಕ ತೆಗೆದುಕೊಂಡು ಕೂಲಿ ಕೊಡುವ ಬಾಬಾಲಾಲನೊಡನೆ ಹರಟೆ, ಅವನಿಂದ ಮತ್ತೆ ಬೀಡಿ ಚೂರು, ತಂಬಾಕು, ಒಣ ಎಲೆಗಳ ಕಟ್ಟು ತೂಗಿಸಿ ತೆಗೆದುಕೊಂಡು ಬರಬೇಕಾದರೆ ಎರಡು ಮೂರು ಗಂಟೆಗಳಾದರೂ ಆಗುತ್ತದೆಯೆಂಬುದು ರೋಶನ್‌ಳ ಅನುಭವ. ಹಾಗೆ ಆಕೆ ತಾಯಿಯೊಡನೆ ಎಷ್ಟೋ ಸಲ ಅಲ್ಲಿ ಹೋದದ್ದೂ ಉಂಟು. ಬಿದಿರು ಮೊರಗಳಲ್ಲಿ ಕತ್ತರಿಸಿದ ಎಲೆಗಳನ್ನೂ, ತಂಬಾಕನ್ನೂ ಹಾಕಿಟ್ಟುಕೊಂಡು ಸರ ಸರನೆ ಬೀಡಿ ಕಟ್ಟುವ ಗಂಡಸರನ್ನು, ಹುಡುಗರನ್ನು ನೋಡಿದ್ದೂ ಉಂಟು. ಅವರೆಲ್ಲ ಹೆಚ್ಚು ಕಡಿಮೆ ಜುಬೇದಾಳ ಪರಿಚಯದವರು. ಅವರನ್ನೆಲ್ಲ ಆಕೆ "ಚಾಚಾ", "ದಾದಾ", "ಬಾಬಾ" ಎಂದು ಮಾತನಾಡಿಸದ ದಿನವೂ ಇರಲಿಕ್ಕಿಲ್ಲ. ಅಷ್ಟಾದ ಬಳಿಕ ಸೀರೆ ಸೊಂಟದಲ್ಲಿ ಸಿಕ್ಕಿಸಿಕೊಂಡ ಚಂಚಿ ಬಿಡಿಸಿ ಎಲೆಯಡಕೆ ವಿನಿಮಯವಾಗಬೇಕು, ನಂಬರು ಹಚ್ಚಿ ಕಾದು ಕುಳಿತಿದ್ದ ಹೆಂಗಸರಲ್ಲಿಯ ಸಲುಗೆಯವರೊಡನೆ. ಅದನ್ನೆಲ್ಲ ನೆನಪಿಸುತ್ತಿದ್ದಂತೆ ರೋಶನ್ ಮತ್ತೆ ಕೇಳಿದಳು. "ಅಮ್ಮಾ ನೀನು ಬೇಗ ಬಂದೆ?"

"ಹಾಂ, ನಿನಗೆ ನೆನಪಿಲ್ಲವೇನು?" ಜುಬೇದಾ ಹಂಚಿಕಡ್ಡಿ ಬಾಗಿಲಾಚೆಗೆ ಎಸೆದಳು. "ಇಂದು ಗುರುವಾರ. ನಿನ್ನ ಅಬ್ಬಾ ಜಾನ್ ಬರುವವರಿದ್ದಾರೆ"

ರೋಶನ್‌ಳ ಮೋರೆ ಸರ್ರನೆ ಇಳಿಯಿತು. ತಾಯಿಯ ಮೋರೆ ಕುತೂಹಲದಿಂದ ನೋಡುತ್ತಿದ್ದ ಕಣ್ಣುಗಳು ಅಂಗಳದಲ್ಲಿಯ ಹಳ್ಳ ತಿಟ್ಟುಗಳನ್ನು, ಒಗೆಯುವ ಕಲ್ಲುಗಳನ್ನು ಶೂನ್ಯ ನೋಟದಿಂದ ಈಕ್ಷಿಸತೊಡಗಿದವು.

"ಅದಕ್ಕೇ ನಂಬರು ಹೆಚ್ಚು ಇದ್ದರೂ ಬಾಬಾಲಾಲನಿಗೆ ಹೇಳಿದೆ, ಇಂದು ಅವರು ಬರುವವರಿದ್ದಾರೆ. ಬೇಗ ಮನೆಗೆ ಹೋಗಬೇಕು." ಜುಬೇದಾ ಕಣ್ಣೆದುರು ಕಟ್ಟುತ್ತಿದ್ದ ದೃಶ್ಯ ಬಣ್ಣಿಸುವಂತೆ ಹೇಳತೊಡಗಿದಳು. "ಅವನು ನಕ್ಕ. ನನ್ನ ಹೆಂಡತಿ ಎಂದೂ ಇಷ್ಟು ಸಂಭ್ರಮ ಪಟ್ಟವಳಲ್ಲ ಎಂದ. ಫಾಜಿಲ್! ಅವನಿಂದ ಹಣ ತೆಗೆದುಕೊಂಡು ಬಂದೆ. ಇಂದು ತಂಬಾಕು–ಎಲೆ ತೆಗೆದುಕೊಳ್ಳಲಿಲ್ಲ. ನನಗೆ ಬಿಡುವೆಲ್ಲಿ ಇರುತ್ತದೆ ಹೇಳು ಇವರು ಬಂದರೆಂದರೆ? ಬರುವಾಗ ಪೇಟೆಯಲ್ಲಿ ಎಳೆ ಬದನೇಕಾಯಿ ತೆಗೆದುಕೊಂಡೆ, ನಿನ್ನ ಅಬ್ಬಾ ಜಾನ್‌ಗೆ ಎಣ್ಣೆಯಲ್ಲಿ ಬೇಯಿಸಿದ ಬದನೆಕಾಯಿ ಎಂದರೆ ಎಷ್ಟು ಇಷ್ಟ! ಅದರ ಜತೆಗೆ ದಾಲಚೀನಿ, ಲವಂಗ, ಮೆಣಸು, ಎಳ್ಳು, ಇಂಗು, ಸಾಸಿವೆ, ಜೀರಿಗೆ ಎಲ್ಲ ಸಾಂಬಾರ ತಂದೆ."

ಹೊಸ್ತಿಲ ಮೇಲೆ ಕುಳಿತ ಜುಬೇದಾ ಸೊಂಟದ ಚಂಚಿ ಬಿಚ್ಚಿ ಚಿಕ್ಕ ಅಡಕೊತ್ತಿನಿಂದ ಅಡಕೆ ಕತ್ತರಿಸುತ್ತಿದ್ದಂತೆ ರೋಶನ್ ಮತ್ತೆ ತಾಯಿಯ ಮುಖ ನೋಡಿದಳು. ಎಣ್ಣೆಗಾಯಿಯ ನೆನಪಾಗಿ ಆಕೆಗೆ ಬಾಯಿ ನೀರು ಬಿಟ್ಟಿತ್ತು.

"ಎಷ್ಟು ಹೊಡೆದಿರಬಹುದು?" ಜುಬೇದಾ ಕೇಳಿದಾಗ ರೋಶನ್ ಬಾಗಿಲೆದುರಿಗಿನ ದೀಪದ ಕಂಬದ ನೆರಳು ನೋಡಿದಳು. "ಐದು ಹೊಡೆದಿರಬಹುದು, ಅಮ್ಮಾ".

"ಹಾಗಾದರೆ ಒಳಗೆ ಜೋಳ ಎಷ್ಟು ಇದೆ ನೋಡು". ಎರಡು ಸೇರು ಆರಿಸಿ ಬೀಸಿಸಿಕೊಂಡು ಬಾ. ಆರು ಗಂಟೆಗೆ ಗಿರಣಿ ನಿಂತು ಹೋಗುತ್ತದೆ. ನಿನ್ನ ಅಬ್ಬಾ ಏನನ್ನುತ್ತಾರೆ ಗೊತ್ತಲ್ಲ? ನನ್ನ ಕೈ ರೊಟ್ಟಿಯ ರುಚಿ ಯಾವುದಕ್ಕೂ ಇಲ್ಲವಂತೆ.! ಏನಾದರೂ ಹೇಳುತ್ತಾರೆ ಆಯಿತು! ಆಕೆ ಅರೆ ಅಭಿಮಾನದಿಂದ ಅರೆ ಗಂಡನ ಬಗ್ಗೆ ಕೌತುಕದಿಂದ ಓರೆ ನೋಟ ಬೀರಿ ಮಗಳನ್ನು ಕಣ್ಣೆತ್ತರದಲ್ಲಿ ಅಳೆದಳು.

"ನೀನು ಎಷ್ಟು ದೊಡ್ಡಾಕೆಯಾದೆ ಬಿಟಿಯಾ! ಇನ್ನೂ ಹುಡುಗಿಯರ ಜತೆಗೆ ಆಟ ಆಡುತ್ತೀ ಬೀದಿಯಲ್ಲಿ! ನಾಳಿನ ರಮಜಾನಕ್ಕೆ ಹದಿನೈದು ತುಂಬುತ್ತವೆ ನಿನಗೆ. ಇಂತಹ ಆಟಗಳನ್ನೆಲ್ಲ ಬಿಡಬೇಕು. ನಿನ್ನಷ್ಟು ಇದ್ದಾಗ ನಾನು ಗಂಡನ ಮನೆಗೆ ಹೋಗಿ ಎರಡು ವರ್ಷ ಆಗಿತ್ತು. ನಿನ್ನ ಸಲವಾರ್ ಏನು, ಕಮೀಜ್ ಏನು, ಎಲ್ಲ ಮಣ್ಣುಮಯ. ನಿನ್ನೆಯೇ ತೊಟ್ಟುಕೊಂಡದ್ದು." ಹೊರಗೆ ನೋಡುವುದನ್ನು ಬಿಟ್ಟು ಒಳಗೆ ಮೋರೆ ತಿರುಗಿಸಿ ಕುಳಿತು ಜುಬೇದಾ ಮಗಳಿಗೆ ಹೇಳತೊಡಗಿದಳು. "ಗಿರಣಿಗೆ ಹೋಗಿ ಬರುವಾಗ ಎರಡಾಣೆಯ ಸಾಬೂನು ತೆಗೆದುಕೊಂಡು ಬಾ. ಇನ್ನೂ ಹೊತ್ತಿದೆ. ನಿನ್ನ ಬಟ್ಟೆ ಒಗೆದು ಹಾಕಿಕೋ. ಅದರ ಜತೆಗೆ ನನ್ನ ನೈಲಾನ್ ಕುಪ್ಪಸವನ್ನೂ ಒಗೆದು ಹಾಕು."

ಅಲ್ಯೂಮಿನಿಯಂ ಗುಂಡಿಯಲ್ಲಿದ್ದ ಜೋಳವನ್ನೆಲ್ಲ ಕೆಳಗೆ ಮೋರೆ ಹಾಕಿ ಪಟ ಪಟ ಕೇರುತ್ತಿದ್ದ ರೋಶನ್ ಉತ್ತರವೀಯಲಿಲ್ಲ.

"ಹಾಂ, ನೆನಪಾಯಿತು, ಎರಡಾಣೆ ಸಾಬೂನಿನ ಜತೆಗೆ ಎರಡಾಣೆ ಬಿಳಿ ಅಡಿಕೆ ತೆಗೆದುಕೊಂಡು ಬಾ ಇಬ್ರಾಹಿಮನ ಅಂಗಡಿಯಿಂದ. ಹಣ ನಂತರ ಕೊಡುತ್ತೇನೆಂದು ಹೇಳು".

"ಇಬ್ರಾಹಿಮ ಕೇಳುವುದಿಲ್ಲ, ಅಮ್ಮ. ಹಿಂದಿನ ಬಾಕಿ ತೀರಿಸದಿದ್ದರೆ ಸಾಮಾನು ಕೊಡುವುದಿಲ್ಲ ಎಂದು ಹೇಳುತ್ತಾನೆ". ರೋಶನ್ ಮೆತ್ತಗೆ ಹೇಳಿದಳು ಜೋಳದಲ್ಲಿಯ ಮಣ್ಣು, ಕಸ ಆರಿಸುತ್ತ. ಅಮ್ಮನಿಗೆ ಅಷ್ಟು ಗೊತ್ತಿಲ್ಲವೇನು? ಜುಬೇದಾ ಹಲ್ಲು ಕಚ್ಚಿದಳು. "ಅವನ ಮನೆ ಹಾಳಾಗಲಿ" ಎಂದು ಶಪಿಸಿದಳು. "ಅವನ ಸೊಕ್ಕು ಮುರಿಯುವವರು ಯಾರೂ ಹುಟ್ಟಿಲ್ಲವೇನು?"

ರೋಶನ್ ಮೊರದಲ್ಲಿಯ ಜೋಳವನ್ನು ಸಿಗರೇಟ್ ಡಬ್ಬದಿಂದ ಅಳೆದಳು. "ಎರಡೂವರೆ ಸೇರಾಗುತ್ತದೆ, ಅಮ್ಮ".

"ಅವನಿಗೆ ಎರಡೇ ಸೇರೆಂದು ಹೇಳು" ಜುಬೇದಾ ಚಂಚಿಯಲ್ಲಿಯ ಎಂಟಾಣೆ ನಾಣ್ಯ ತೆಗೆದು ಕುಳಿತಲ್ಲಿಂದಲೇ ಮಗಳತ್ತ ಎಸೆದಳು. "ಅಲ್ಲಿ ಆಡುತ್ತ ಕೂಡ್ರಬೇಡ. ಜೋಳದ ಮೇಲೆ ಜೋಳ ಹಾಕಿಸು. ಗಿರಣಿಯವರೆಲ್ಲ ಕಳ್ಳರು. ಹಿಟ್ಟು ಮಾರಿಕೊಳ್ಳುತ್ತಾರೆ. ಬಟ್ಟಿಯ ಬಾಯಿಯ ಒಳಗೆ ಕೈ ಹಾಕಿ ಹಿಟ್ಟು ಬಳಿದುಕೋ. ಗಿರಣಿಯದು ಆರು ಪೈಸೆ. ಅಡಿಕೆ ಸಾಬೂನು ನಾಲ್ಕಾಣೆ. ಮಿಕ್ಕ ಹಣ ತಂದು ಕೊಡು."

ಅಲ್ಯೂಮಿನಿಯಂ ಗುಂಡಿಯನ್ನೆತ್ತಿಕೊಂಡು ಮಗಳು ಗಿರಣಿಯ ದಿಕ್ಕಿನಲ್ಲಿ ಹೋದಾಗ ಜುಬೇದಾ ಮತ್ತೆ ಬೀದಿಯ ಕಡೆ ಮೋರೆ ಮಾಡಿ ಕುಳಿತಳು. ಅವಳ ಮನೆಯೆಂದರೆ ಮೂರಂಕಣದ ಆ ಕೋಣೆಯೊಂದೇ. ಅಡಿಗೆ, ಊಟ, ಮಲಗುವುದು ಎಲ್ಲವೂ ಅಷ್ಟರಲ್ಲೇ. ಬೇಸಗೆಯ ದಿನವಾದರೆ ರಾತ್ರಿ ಅಂಗಳದಲ್ಲಿ ಚಾಪೆ ಹಾಸಿ. ಅದರ ಮೇಲೆ ಮತ್ತನ್ನ ಹರಕು ಕವದಿಗಳನ್ನು ಹಾಸಿ ಮಲಗುವುದು ಆ ಓಣಿಯಲ್ಲೆಲ್ಲರ ಪದ್ಧತಿ. ಆದರೆ ಜುಬೇದಾ ಆಗಲೂ ಒಳಗೇ ಮಲಗುತ್ತಾಳೆ. ಮೊದಲಿನ ಗಂಡ ಸತ್ತ ಹತ್ತು ವರ್ಷಗಳ ನಂತರ,ವಯಸ್ಸಿನ ಮೂವತ್ತೈದು ವರ್ಷಕ್ಕೆ ಮರುಮದುವೆ ಮಾಡಿಕೊಂಡ ನಂತರ ಆಕೆ ಬದಲಾಗಿದ್ದಾಳೆಂದು ನೆರೆಮನೆಯ ಫಾತಿಮಾಬೀ, ಕುಲಸೂಮಾ ಎಲ್ಲರೂ ಹೇಳುತ್ತಾರೆ ತಮ್ಮ ತಮ್ಮೊಳಗೆ. ಅದು ಜುಬೇದಾಳ ಕಿವಿಯ ವರೆಗೂ ಬಿದ್ದಿತ್ತು. ಒಂದು ಕಾಲು ಕಬ್ರದಲ್ಲಿಟ್ಟ ಮುದುಕಿಯರಿವರು ಎಂದು ಆಕೆ ಅದನ್ನು ಮರೆಯಲೆತ್ನಿಸಿದ್ದಳು.

ಗುಂಡಿಯಲ್ಲಿಯ ಜೋಳದಲ್ಲಿ ಕೈಯಾಡಿಸುತ್ತ ರೋಶನ್. ಅಲ್ಲೇ ಕಾದಳು ಗಿರಣಿಯ ಸರದಿಯಲ್ಲಿ. ಮಿಕ್ಕ ದಿನಗಳಾಗಿದ್ದರೆ ಆಕೆ ಗುಂಡಿ ಸಾಲಿನಲ್ಲಿಟ್ಟು ಕುಂಟೆ ಬಿಲ್ಲೆಯನ್ನೋ, ಕುಂಟು ಮುಟ್ಟಾಟವನ್ನೋ ಆಡಲು ಹೋಗಬಹುದಾಗಿತ್ತು. ಆದರೆ ಇಂದು ಅದು ಅವಳ ಲಕ್ಷ್ಯದಲ್ಲೂ ಇರಲಿಲ್ಲ. 'ಮತ್ತೆ, ಅವರು ಬರುತ್ತಾರೆ, ವಿಚಾರವೊಂದೇ ಅವಳ ಮನಸ್ಸಿನಲ್ಲಿ ಝೇಂಕರಿಸತೊಡಗಿತು. ಅವರಿಗೆ ಅಬ್ಬಾ ಜಾನ್ ಎನ್ನಬೇಕೆಂದು ಅಮ್ಮ ಹೇಳುತ್ತಾಳೆ. ಅಷ್ಟೇ ಏಕೆ, ಅವರ ಸಂದರ್ಭ ಬಂದಾಗಲೆಲ್ಲ ನಿನ್ನ ಅಬ್ಬಾ, ನಿನ್ನ ಅಬ್ಬಾ ಜಾನ್ ಎನ್ನುತ್ತಾಳೆ. ಹೋಗು, ನಿನ್ನ ಅಬ್ಬಾ ಜಾನ್ ಅವರನ್ನು ಕರೆದುಕೊಂಡು ಬಾ ಎನ್ನುತ್ತಾಳೆ. ಅವರೋ? ಮೂಲೆಯಲ್ಲಿಯ ಬೀಡಾ ಬೀಡಿ ಅಂಗಡಿಯವನ ಜೊತೆ ಹರಟುತ್ತ ನಿಂತರೆ ತಾನು ಅಲ್ಲಿ ಹೋದದ್ದೇಕೆಂಬುದನ್ನೂ ಮರೆಯುತ್ತಾರೆ. ತಾನು ಅವರನ್ನು ಹೇಗೆ ಕರೆಯುವುದು? 'ಏ, ಉಶ್,'

ಎನ್ನುವುದೇ? 'ಅಬ್ಬಾ' ಎಂದೂ ಅನ್ನುವಂತಿಲ್ಲ. ತೀರ ಸಮೀಪ ಹೋಗಿ ಅಮ್ಮ ಕರೆಯುತ್ತಾಳೆ ಎಂದು ಹೇಳಿ ಅಲ್ಲಿಂದ ಓಡಬೇಕು. ಮಿಕ್ಕವರೆಲ್ಲ ಅವರ ಚೇಷ್ಟೆ ಮಾಡಿದ್ದು ಅಂತಹದರಲ್ಲೂ ತನಗೆ ಕೇಳ ಬರುತ್ತದೆ. 'ಬೇಗಮ್ ಸಾಹಿಬಾ ಕರೆಯುತ್ತಾರೆ.' ತಾನು ಓಡುತ್ತ ಬಂದಾಗ ತಾಯಿ ಕೇಳುತ್ತಾಳೆ. 'ನಿನ್ನ ಅಬ್ಬಾಜಾನ್ ನಿನ್ನನ್ನು ನುಂಗುತ್ತಾರೇನು?' ಆಕೆಗೇನು ಹೇಳುವುದು? ಶೀ ಆಕೆಗೇನು ಕೌತುಕವೋ? ವಾಸನೆಯ ಸಾಬೂನು ಹಚ್ಚಿ ಮುಖ ತೊಳೆಯುತ್ತಾಳೇನು, ಪೌಡರ ಬಳಿಯುತ್ತಾಳೇನು, ಅವಳ ಕಾಡಿಗೆಯೇನು, ನೈಲಾನ್ ಕುಪ್ಪಸವೇನು, ಇದೆಲ್ಲ ತನ್ನಂತಹ ವಯಸ್ಸಿನವರು ಮಾಡಿದರೆ ಶೋಭಿಸೀತು....

ಗಿರಣಿಯ ಆಳು ತಟ್ಟನೆ ಗುಂಡಿಗೆ ಕೈ ಹಾಕಿದಾಗಲೇ ಆಕೆಗೆ ಎಚ್ಚರವಾಯಿತು. "ಏಯ್ ಜೋಳದ ಮೇಲೆ ಜೋಳ ಹಾಕಬೇಕು" ಎಂದು ಆಕೆ ಯಾಂತ್ರಿಕವಾಗಿ ಅವಸರದಿಂದ ಹೇಳಿದಳು. ಗಿರಣಿಯಾಳು ನಕ್ಕ.

"ನೀನೆಲ್ಲಿ ನೋಡುತ್ತಿದ್ದೆ? ಅಥವಾ ಗಂಡನ ಯೋಚನೆ ಮಾಡುತ್ತಿದ್ದೆಯೋ?" ಎಂದಾತ ಎಂದಾಗ ಹುಡುಗರು ಹೆಂಗಸರೆಲ್ಲ ಘಿದಿಘಿದಿ ನಕ್ಕರು. ರೋಶನ್‌ಗೆ ನಾಚಿಕೆ ಸಾವಾಯಿತು. ಆಕೆ ಕೆಳಗೆ ಮೋರೆ ಹಾಕಿ ಬಟ್ಟೆಯಲ್ಲಿಂದ ಬೀಳುವ ಹಿಟ್ಟು ನೋಡಿದಳು. ಜೋಳ ಮುಗಿಯುತ್ತ ಬಂದಂತೆ ಆಕೆ ಕಬ್ಬಿಣ ಮೊಳೆಯಿಂದ ಕಟ ಕಟನೆ ಬಾರಿಸಿ, ಒಳಗೆ ಕೈ ಹಾಕಿ ಹಿಟ್ಟು ತೆಗೆಯುವ ನಿಮಿತ್ತದಿಂದ ಮೊಳಕೈ ವರೆಗೆ ಹಿಟ್ಟು ಮಾಡಿಕೊಂಡಳು. ತುಂಬಿದ ಗುಂಡಿಯ ಮೇಲಿನ ಹಿಟ್ಟು ಒತ್ತಿ ಗಿರಣಿಯವನ ಕೈಯಲ್ಲಿ ಎಂಟಾಣೆ ಹಾಕಿದಳು. "ಎರಡೇ ಸೇರು."

ಆತ ಹಿಟ್ಟು ನೋಡುವ ಬದಲು ಅವಳ ಮೋರೆ ನೋಡಿದ. ಮಾತಿಲ್ಲದೆ ಆ ನಾಣ್ಯ ಪೆಟ್ಟಿಗೆಯಲ್ಲಿ ಹಾಕಿ ಮಿಕ್ಕ ಹಣ ಎಣಿಸಿಕೊಟ್ಟ. ಗಿರಣಿಯಿಂದ ಬರುವಾಗ ರೋಶನ್‌ಗೆ ದಾರಿಯಲ್ಲಿ ಸಗಣಿ ಕಂಡಿತು. ಆಕೆ ಚಿಕ್ಕವಳಿದ್ದಾಗ ತಾಯಿ ಅಂತಹದನ್ನೆಲ್ಲ ತರಲು ಹೇಳುತ್ತಿದ್ದಳು. ತಾನಾದರೂ ಮಿಕ್ಕ ಹುಡುಗಿಯರೊಡನೆ ಜಗಳ ಕಾದು ಸಗಣಿ ತರುತ್ತಿದ್ದೆ. ಆದರೆ ಈಗ? ಊಹೂಂಹೂಂ! ಅಂತಹ ಹೊಲಸನ್ನೆಲ್ಲ ತರಬೇಕೇನು? ಏನಿಲ್ಲದೆ ಗಂಡಸರು, ಹುಡುಗರು, ನಿಟ್ಟಿಸುತ್ತಾರೆ ತನ್ನ ಮೋರೆಯೆಡೆ, ಎದೆಯೆಡೆ. ಅರಿವಿಲ್ಲದೆ ಆಕೆ ಹೆಗಲ ಮೇಲಿನ ದುಪಟ್ಟಾ ಉಬ್ಬು ಎದೆಯ ಮೇಲೆ ಹರವಿಕೊಂಡಳು. ಅವಳ ಲಕ್ಷ್ಯ ಕೈಗೆ ಹತ್ತಿದ ಹಿಟ್ಟಿನ ಕಡೆಗೆ ಹೋಯಿತು. ಇನ್ನು ತಾನು ಹೀಗೆಲ್ಲ ಮಾಡಬಾರದು ಎನ್ನಿಸಿತು ಅವಳಿಗೆ ಮೊದಲ ಸಲ. ತಮ್ಮ ಮನೆ ಎದುರು ಸಾಲಿನಲ್ಲಿಯ ದೌಲತ್ ತನ್ನೆಡೆ ಹೇಗೆ ನೋಡುತ್ತಾನೆ! ಅವಳಿಗೆ ಮೈ ನವಿರೆದ್ದಂತಾಯಿತು. ಗಂಡಸು ಇದ್ದರೆ ಅವನಂತಿರಬೇಕು. ಎತ್ತರ, ಕಟ್ಟುಮಸ್ತಾದ ಆಳು. ಗರಡಿ ಮನೆಗೂ ಹೋಗುತ್ತಿದ್ದಿರಬೇಕು. ಗಂಡಸರಿಗೆ ಬಣ್ಣ ಮುಖ್ಯವಲ್ಲವೆಂದು ತಾಯಿ ಹೇಳುತ್ತಾಳೆ. ಅದು ನಿಜವೇ! ಒಮ್ಮೊಮ್ಮೆ ಒಳ ಚಡ್ಡಿ ಬನಿಯನ್ ಮೇಲೆ ಮನೆಯ ಕಟ್ಟಿಗೆ ಒಡೆಯುತ್ತಿದ್ದಾಗ ಅವನ ತೋಳು ಹೇಗೆ ಕಾಣುತ್ತವೆ! ಬೆವರು ಕಟ್ಟಿ ಮಿರುಗುವ ಬೆನ್ನು ಹೇಗೆ ತುಂಬಿಕೊಂಡಂತೆ ಕಾಣುತ್ತದೆ. ಅಂತಹದರಲ್ಲೂ ಆತ ತನ್ನನ್ನು ನೋಡಿ ಕಾರಣವಿಲ್ಲದೆ ನಗುತ್ತಾನೆ. ಹಾಗೆ ಕಾರಣವಿಲ್ಲದೆಯೆ ಅವಳ ಮೋರೆಯ ಮೇಲೂ ನಗು ಮೂಡಿತು.

"ಏನೇ, ನಗುತ್ತೀಯೇಕೆ?" ಬಾಗಿಲ ಹೊಸ್ತಿಲ ಮೇಲೆ ಕುಳಿತ ತಾಯಿ ಕಣ್ಣು ದೊಡ್ಡದು ಮಾಡಿ ಕೇಳಿದಾಗ ಅವಳಿಗೆ ಪಿಚ್ಚೆನಿಸಿತು. ರೋಶನ್ ಹಿಟ್ಟಿನ ಗುಂಡಿ ಒಳಗಿಟ್ಟಳು. ಬಟ್ಟೆ ತುಂಡಿನಿಂದ ಕೈ, ಮೋರೆ ಒರೆಸಿಕೊಂಡಳು. ಕನ್ನಡಿಯಲ್ಲೊಮ್ಮೆ ನೋಡಿಕೊಂಡಳು. "ಮತ್ತೆಲ್ಲಿ ಹೊರಟೆ?" ಬಾಯಿಯಲ್ಲಿಯ ಎಲೆ ಅಡಿಕೆ ಬದಿಗೆ ಮಾಡಿ ಜುಬೇದಾ ಕೇಳಿದಾಗ ಆಕೆಗೆ "ಸಾಬೂನು ಅಡಕೆ ತರುವುದನ್ನು ಮರೆತೆ, ಅಮ್ಮಾ" ಎಂದು ಹೇಳಬೇಕಾದರೆ ಸಂಕೋಚವಾಯಿತು.

"ಜಾಣಳಿದ್ದೀ, ಬೇಗ ಹೋಗಿ ಬಾ" ಎಂದು ಗದರಿಸಿ ಜುಬೇದಾ ಬದಿಗೆ ಸರಿದಳು.

* * * *

ರೋಶನ್ ಬಟ್ಟೆ ಒಗೆಯುತ್ತಿದ್ದಂತೆ ಜುಬೇದಾ ವಾಸನೆ ಸಾಬೂನು ಹಚ್ಚಿ ಮೋರೆ ತೊಳೆದುಕೊಂಡಳು. ಕೈ ಕಾಲು ತೊಳೆದುಕೊಂಡು ಸೀರೆ ಬದಲಿಸಿದಳು. "ನೀನೂ ಮೋರೆ ತೊಳೆದುಕೋ, ಅದೇ ಸಾಬೂನಿನಲ್ಲಿ. ಬೇಡ" ಆಕೆ ತಡೆದಳು ಏನೋ ನೆನಪಾದವರಂತೆ. "ಮೊದಲು ಆಡು ಕರೆ. ಅದರ ಹಾಲು ಬಟ್ಟೆಯಲ್ಲಿ ಸೋಸಿ ಒಲೆಗೆ ಕಿಚ್ಚು ಹಾಕು. ನಂತರವೇ ಮೋರೆ ತೊಳೆದುಕೋ. ನಿನ್ನ ಅಬ್ಬಾ ಬರುವ ವೇಳೆಯಾಯಿತು."

ರೋಶನ್ ಪಿಟ್ಟೆನ್ನದೆ ತಾಯಿ ಹೇಳಿದಂತೆ ಹಾಲು ಕರೆದು ಕಿಚ್ಚು ಮಾಡಿ ಬಟ್ಟೆಯ ಸಾಬೂನಿನಲ್ಲಿ ಕೈಕಾಲು ಮೋರೆ ತೊಳೆದುಕೊಂಡಳು. ಮಾಸಿದ ಬಟ್ಟೆ ಕಳಚಿ ಸ್ವಚ್ಛ ಸಲವಾರು ಕಮೀಜ್ ತೊಟ್ಟಳು. ತನ್ನದು ತನಗೇ ಸ್ವಚ್ಛವೆನಿಸಿತು. ಕನ್ನಡಿಯಲ್ಲಿ ನೋಡಿಕೊಂಡಾಗ ಆಕೆಗೆ ತಾನೂ ಪೌಡರ್ ಹಚ್ಚಿಕೊಳ್ಳಬೇಕೆನಿಸಿತು. ಆದರೆ ತಾಯಿಗೆ ಅದೆಲ್ಲ ಸೇರುವುದಿಲ್ಲವೆಂಬುದೂ ಆಕೆಗೆ ನೆನಪಾಯಿತು. ತಾನು ಮಾತ್ರ ಹಚ್ಚುತ್ತಾಳೆ!

ತನ್ನ ಕೆಲಸ ಬಹುಶಃ ಮುಗಿಯಿತೆನ್ನಿಸಿತು ರೋಶನ್‌ಗೆ. "ಅಮ್ಮಾ ನಾನು ಇಲ್ಲೇ ಹೋಗಿ ಬರಲೇ?" ಆಕೆ ದೀನ ದನಿಯಿಂದ ಕೇಳಿದಾಗ "ಎಂತಹ ಹುಚ್ಚಿ ನೀನು?" ಎಂದು ಜುಬೇದಾ ಅವಳ ಮೇಲೆ ಎರಗಿದಳು, "ಈಗ ಅವರು ಬರುವ ಹೊತ್ತಾಯಿತು. ನೀನೆಲ್ಲಿ ಹೊರಟು ನಿಂತೆ? ಇಲ್ಲೇ ಬಾಗಿಲಲ್ಲಿರು. ನನಗೆ ಅಡುಗೆಗೆ ಸಾಮಾನು ಬೇರೆ ಕೊಡಬೇಕು."

ಬೆರಣಿಯ ಹೊಗೆ ನಿಂತು ಬೆಂಕಿ ನಿಗಿ ನಿಗಿಯಾಯಿತು. ಹಾರಿವಾಳದ ಕಟ್ಟಿಗೆ ಹಚ್ಚಿ, ಜುಬೇದಾ ಅದರ ಮೇಲೆ ಹಾಲು ಕಾಯಿಲಿಟ್ಟಳು. ಬದನೆಕಾಯಿ ಹೆಚ್ಚುವದಕ್ಕೆ ಅಲ್ಯೂಮಿನಿಯಂ ತಟ್ಟೆ ಎಳೆದುಕೊಂಡಳು. ಹಾಲು ಕಾದು, ಎಳ್ಳು ಹುರಿದು ಪಲ್ಯಕ್ಕೆಂದು ಒಗ್ಗರಿಸಿದರೂ ಗಂಡನ ಪತ್ತೆಯಿಲ್ಲ! ಆಕೆಯ ಜೀವ ಚಡಪಡಿಸಿತು. "ಇನ್ನೂ ಬರಲಿಲ್ಲವೇನೇ?" ಆಕೆ ಮಗಳ ಮೇಲೆಯೇ ಹರಿಹಾಯ್ದಳು. "ಪಚ್" ಮಾಡಿದಳು ರೋಶನ್. "ಎಲ್ಲೂ ಕಾಣುವುದಿಲ್ಲ." ಕಾಲು ಸೋತವರಂತೆ ಆಕೆ ಹೊಸ್ತಿಲ ಮೇಲೆ ಕುಳಿತಳು. ಬದನೇಕಾಯಿ ಬೇಯುವ ವರೆಗೆ ಜುಬೇದಾ ಅಂಗಳದಲ್ಲಿಯ ಚಪ್ಪಡಿ ಕಲ್ಲಿನ ಮೇಲೆ ಎಳ್ಳು, ಮೆಣಸು, ದಾಲಚಿನಿ, ಲವಂಗಗಳನ್ನೆಲ್ಲ ಅರೆದುಕೊಂಡಳು. ಹಾಗೆ ಅರೆಯುತ್ತಿದ್ದಂತೆಯೂ . ಗೋಣು ಹತ್ತು ಸಲ ಹಿಂದೆ ಹೊರಳಿತ್ತು ಅವರಿವರ ಚಪ್ಪಲಿಯ ಸದ್ದು ಕೇಳಿ. ಅರೆದ ಮಸಾಲೆಯಲ್ಲಿಯದನ್ನು ಕೊಂಚ ಇಟ್ಟು ಕೊಂಚ ಬೇಯುವ ತರಕಾರಿಗೆ ಹಾಕಿದಳು. ಅದು ಬೇಯುತ್ತಿದ್ದಂತೆ ಗಮ್ಮೆಂದು ವಾಸನೆ ಹರಡಿತು. ಒಮ್ಮೆ ಚಮಚ ತಿರುವಿ ಆಕೆ ಅದನ್ನು ಇಳಿಸಿಟ್ಟಳು. ನಡುವೆ ತೂತು ಬಿದ್ದ ಕಬ್ಬಿಣ ಹೆಂಚು ಒಲೆಯ ಮೇಲಿಟ್ಟಳು.

"ಹೊತ್ತು ಎಷ್ಟಾಯಿತೇ?" ಎಂದು ಮತ್ತೆ ಮಗಳನ್ನೇ ಕೆಣಕಿದಳು. "ಯಾರನ್ನಾದರೂ ಕೇಳಿಕೊಂಡು ಬಾ. ಸಂಜೆ ಆರರ ಸುಮಾರಕ್ಕೆ ಬರುತ್ತೇನೆಂದು ಹೇಳಿದವರು ದೀಪ ಹಚ್ಚಿದರೂ ಇನ್ನೂ ಬರಲಿಲ್ಲ." ರೋಶನ್ ಅಲ್ಲಿಂದ ಎದ್ದು ಬೀದಿಗೆ ಬಂದಳು. ಅತ್ತಿತ್ತ ನೋಡಿದಳು. ಎದುರಿನ ಮನೆಯ ದೌಲತ್ ಅದೇ ಕೆಲಸ ಮುಗಿಸಿ ಬರುತ್ತಿದ್ದ ಕೆಳಗೆ ಮೋರೆ ಹಾಕಿಕೊಂಡು.

ಕತ್ತಲೆ ಕವಿಯತೊಡಗಿತ್ತು. ರಸ್ತೆಯ ದೀಪ ಮಿಣಿ ಮಿಣಿ ಬೆಳಕು ತೂರತೊಡಗಿದ್ದವು. ರೋಶನ್ ಅಲ್ಲೇ ನಿಂತಳು. ಹರೆಯದ ದೌಲತ್ ಸನಿಹಕ್ಕೆ ಬರುವ ವರೆಗೆ. "ದೌಲತ್" ಆಕೆ ಮೆಲ್ಲನೆ ಕರೆದಳು. ಅವಳ ಮೈ ಕಂಪಿಸಿತು. ಅನಾಮಿಕ ಭಾವನೆಯಿಂದ. "ಗಂಟೆ ಎಷ್ಟಾಯಿತು?" ಆಕೆ ಕೇಳಿದಾಗ ಆತ ಬಳಲಿದ ಮೋರೆಯೆತ್ತಿ ನಕ್ಕ. ಗಡಿಯಾರ ಕೈಯಲ್ಲಿಲ್ಲವೆಂದು ಮುಂಗೈ ಅಲ್ಲಾಡಿಸಿ ತೋರಿಸಿದ. "ಆದರೂ ಏಳು ಏಳೂವರೆ ಆಗಿರಬಹುದು" ಆತ ಅಂದಾಜು ಹೇಳಿದ. "ಅಥವಾ ನಿಲ್ಲು, ನಾನು ನೋಡಿಕೊಂಡು ಬರುತ್ತೇನೆ" ಆತ ದಾಪುಗಾಲು ಹಾಕಿ ಬೀದಿಯ ಕೊನೆಯ ವರೆಗೆ ಹೋದ. ಅಲ್ಲಿಯ ಬೀಡಾ ಬೀಡಿ ಅಂಗಡಿಯಲ್ಲಿಯ ಗಡಿಯಾರ ನೋಡಿಕೊಂಡು ಅದೇ ವೇಗದಿಂದ ತಿರುಗಿದ. "ರೋಶನ್, ಎಂಟು ಗಂಟೆಗೆ ಹತ್ತು ನಿಮಿಷ ಇದೆ". ಆಕೆ ತಿರುಗಿದಳು. ಮೆಲ್ಲನೆ ಸುಳಿದ ಸುಳಿಗಾಳಿಯೊಂದಿಗೆ ಬೇವಿನ ಹೂಗಳ ಮಧುರ ವಾಸನೆ ಅವಳ ಮೂಗಿನಲ್ಲಿ ಅಡಗಿತು. "ಆಹ್" ಎಂದು ಕಣ್ಣು ಮುಚ್ಚಿದಳು ನಿಂತಲ್ಲೇ. ಅವಳ ಮನಸ್ಸೂ ಸುಗಂಧದಂತೆ ತೇಲಿತು. ಇನ್ನೂ ಎಷ್ಟು ಹೊತ್ತು ಆಕೆ ಆ ಸಮಾಧಿಯಲ್ಲಿ ಇರುತ್ತಿದ್ದಳೋ.

"ರೋಶನ್, ಅಗೇ ರೋಶನ್... ಎಲ್ಲಿ ಹೋದೆ ಸಿಡಿಯಲು?" ತಾಯಿಯ ದನಿ ಕೇಳಿ ಆಕೆಗೆ ಪಕ್ಷ ಕಳಚಿದ ಪಾತರಗಿತ್ತಿಯಂತಾಯಿತು.

"ಬಂದೆ ಅಮ್ಮಾ" ಎಂದು ಆಕೆ ಓಡಿದಳು.

"ಎಂಟು ಹೊಡೆಯಲು ಹತ್ತು ನಿಮಿಷ ಇದೆ" ಆಕೆ ತೇಕುತ್ತಲೇ ಹೇಳಿದಳು. ಒಳಗೆ ನಗುವ ಸದ್ದಾಯಿತು. ಓಹ್! ಅವರು ಈಗಾಗಲೇ ಬಂದು ಕುಳಿತಿದ್ದಾರೆ! ಆಕೆಗೆ ಸಂಕೋಚವೆನಿಸಿತು.

"ಎಂಟು ಹೊಡೆಯಿತು." ಎಂದು ಬಶೀರ್ ಮತ್ತೆ ನಕ್ಕ. "ಇಂದು ಇಷ್ಟೇಕೆ ತಡ?" ಜುಬೇದಾ ಕೇಳುತ್ತ ತಟ್ಟೆಯಲ್ಲಿಯ ಹಿಟ್ಟು ಕಾಲಿ ಮಾಡಿ ಕೈ ಮೇಲೆ ರೊಟ್ಟಿ ಮಾಡತೊಡಗಿದಳು.

"ಮಾಲುಧನಿಗಳೊಂದು ಕೇಳಬೇಕಲ್ಲ?" ಬಶೀರ ಹೇಳತೊಡಗಿದ. "ಹಾಗೆ ನಾನು ಟ್ರಕ್ ತೆಗೆದುಕೊಂಡು ಮುಂಬಯಿಯಿಂದ ಮಧ್ಯಾಹ್ನ ನಾಲ್ಕು ಗಂಟೆಗೇ ಸಾಂಗಲಿಗೆ ಬಂದೆ. ಇಲ್ಲಿಷ್ಟು ಇಳಿಸು. ಅಲ್ಲಿಷ್ಟು ಇಳಿಸು, ಇದನ್ನು ಅಲ್ಲಿಡು, ಅದನ್ನು ಇಲ್ಲಿಡು; ಇವೆಲ್ಲ ಆಗುವುದರೊಳಗಾಗಿ ಅಲ್ಲೇ ಏಳು ಹೊಡೆಯಿತು. ಮಿರಜೆಗೆ ಬರಬೇಕೆಂದರೆ ಯಾವ ಟ್ರಕ್ಕೂ ಇರಲಿಲ್ಲ. ಬಸಿಗೆ ಹೀಗೆ ಗದ್ದಲ! ಬೇಜಾರಾಗಿ ಹೋಯಿತು!"

"ಹಾಗಾದರೆ ಊಟ ಮುಗಿಸಿ ಗಡದು ಮಲಗಿ ಬಿಡಿರಿ" ನಿದ್ದೆ ಹತ್ತುವವರೆಗೆ ರೋಶನ್ ನಿಮ್ಮ ಕಾಲು ಎಣ್ಣೆ ಹಚ್ಚಿ ನೀವುತ್ತಾಳೆ" ತಾಯಿಯ ಮಾತು ಕೇಳಿ ರೋಶನಳ ಮೋರೆ ಇನ್ನಷ್ಟು ಬಾಡಿತು. ಬಶೀರ ಬಂದಾಗಲೆಲ್ಲ ಇದು ಆಕೆ ಮಾಡಲೇಬೇಕಾದ ಕೆಲಸ. ತನಗೆ ನಿದ್ದೆ ಬಂದರೂ ಆಕೆ ಅವನ ಕಾಲು ತಿಕ್ಕುತ್ತಲೇ ಇರಬೇಕು. ತುಸು ತೂಕಡಿಸಿದಂತೆ ಕಂಡರೆ ಅವನ ಬದಿಯಲ್ಲಿ ಮಲಗಿ ಹರಟುತ್ತಿದ್ದ ತಾಯಿ ಗದರಿಸಬೇಕು, "ಕಿವಿ ಉದ್ದ ಮಾಡಿ ನಮ್ಮ ಮಾತು ಕೇಳಬೇಡ. ಅವರ ಕಾಲೊತ್ತು" ಬಶೀರ್ ಸಾಕೆನ್ನುವ ವರೆಗೆ ಕಾಲು ತಿಕ್ಕಿದ

ಬಳಿಕ ಮೂಲೆಯಲ್ಲಿಯ ತನ್ನ ಹಾಸಿಗೆಯ ಮೇಲೆ ಒರಗ ಬೇಕು. ಅಲ್ಲೇ ಬದಿಗೆ ಆಡು ತನ್ನೆರಡು ಮರಿಗಳೊಡನ ಕುಳಿತಿರುತ್ತದೆ. ಹಗಲೆಲ್ಲ ಹೊರಗೆ ಕಟ್ಟಿ ರಾತ್ರಿ ಒಳಗ ತಂದ ಆ ಆಡು ಒಮ್ಮೊಮ್ಮೆ ಆಕೆಯ ಹಾಸಿಗೆಯಲ್ಲಿ ಉಚ್ಚೆ ಹೊಯ್ಯುತ್ತದೆ. ಹಿಕ್ಕೆ ಉದುರಿಸುತ್ತದೆ. ರೋಶ ನ್‌ಗೆ ಅಳು ಬಂದಂತೆನಿಸಿತು. ಆಕೆ ನಿರಾಶೆಯಿಂದ ಬಶೀರನ ಮೋರೆ ನೋಡಿದಳು. ಆತ ಜುಬೇದಾಳ ಮೋರೆಯನ್ನೇ ನೋಡುತ್ತಿದ್ದ. ಒಲೆಯಲ್ಲಿಯ ಉರಿಯ ಹಳದಿ ಬೆಳಕಿನಲ್ಲಿ ಅದು ಅವನಿಗೆ ಇನ್ನಷ್ಟು ಆಕರ್ಷಕವೆನಿಸಿರಬೇಕು.

"ಅಗೇ" ಆತ ರೋಶನಳನ್ನು ಕರೆದ. ಆತ ಹೆಸರು ಗೊಂಡು ಆಕೆಯನ್ನು ಕರೆದದ್ದು ಅಪರೂಪ. "ಅಮರ ಟಾಕೀಜದಲ್ಲಿ ಯಾವ ಸಿನೇಮಾ ಇದೆ?" ರೋಶನ್‌ಗೆ ಲಕ್ಷ್ಯದಲ್ಲಿರಲಿಲ್ಲ. ಆಕೆ ನೆನಪಿಸಿಕೊಂಡಂತೆ ಮಾಡಿದಳು. "ಮೆರೆ ಮೆಹಬೂಬ" ಇರಬೇಕು"

"ಇರಬೇಕು!" ಆತ ತನ್ನ ತಂಬಾಕಿನಿಂದ ಕೆಂಪಾದ ಹಲ್ಲು ತೋರಿಸಿ ನಕ್ಕ. "ಅಂದರೆ ಯಾವುದು ಇದೆ ಗೊತ್ತಿಲ್ಲ?" ಅಷ್ಟು ಎತ್ತರವಲ್ಲದ ಗುಂಡು ಗುಂಡಾದ ಕಪ್ಪು ಬಣ್ಣದ ಬಶೀರನನ್ನು ನೋಡಿ ರೋಶನ್‌ಗೆ ಅಸಹ್ಯವೆನಿಸಿತು.

"ಹೋಗಲಿ, ಆಶಾದಲ್ಲಿ ಯಾವುದಿದೆ?" ರೋಶನ್ "ಪಚ್ ಮಾಡಿದಳು.

"ಹೇಗೂ ಮನೆ ಬಿಟ್ಟು ಹೊರಬಿದ್ದ ಮೇಲೆ ಗೊತ್ತಾಗುತ್ತದಲ್ಲ?" ಜುಬೇದಾ ಗಂಡನಿಗೆ ಹೇಳಿದಳು. ಮೆದು ದನಿಯಲ್ಲಿ. "ಏ ಕತ್ತೇ, ನೋಡುತ್ತ ನಿಂತೆಯೇನು? ತಟ್ಟೆ ಕೊಡು, ನಿನ್ನ ಅಬ್ಬಾ ಜಾನ್‌ಗೆ. ಲೋಟೆಯಲ್ಲಿ ನೀರು ತುಂಬಿಡು. ನನಗೂ ನಿನಗೂ ತಟ್ಟೆ ತೆಗೆದುಕೋ" ಆಕೆ ಅಷ್ಟೇ ಕಠೋರವಾಗಿ ಮಗಳಿಗೆ ಒದರಿದಳು. "ದಿನವೂ ಇದನ್ನೆಲ್ಲ ಹೇಳಬೇಕೇನೂ?" ಅಪರಾಧಿಯಂತೆ ಕೆಳಗೆ ಮೋರೆ ಹಾಕಿದ ರೋಶನ್ ಬಶೀರನಿಗಾಗಿ ಮೆತ್ತಗೆ ಹಾಸಿದಳು. ತಟ್ಟೆ, ನೀರು ಇಟ್ಟಳು. ಜುಬೇದಾ ಬಿಸಿ ರೊಟ್ಟಿ ಪಲ್ಯ ಹಾಕಿದ ನಂತರ ಆತ ನಿರ್ವಾಹವಿಲ್ಲದವರಂತೆ ಎದ್ದು, ಬಾಗಿಲಿಗೆ ಬಂದ. ರೋಶನ್ ಅವನ ಕೈ ಮೇಲೆ ನೀರು ಹಾಕಿದಳು. ಬಟ್ಟೆಯ ತುಂಡು ಕೊಟ್ಟಳು ಕೈ ಒರೆಸಲು. ಅವನದಾದ ಬಳಿಕ ತಾನೂ ಕೈ ತೊಳೆದುಕೊಂಡಳು. ಜುಬೇದಾ ಕುಳಿತಲ್ಲೇ ಜೋಳದ ಹಿಟ್ಟು ಇದ್ದ ತಟ್ಟೆಯಲ್ಲಿ ಕೈ ತೊಳೆದಳು.

ಮೌನವಾಗಿ ಊಟ ಸಾಗಿತು. "ನೀವು ಉಣ್ಣಲಿಲ್ಲ?" "ನೀನು ಏನೂ ತಿನ್ನಲಿಲ್ಲ?" ಅವರಿಬ್ಬರಲ್ಲಿ ಪರಸ್ಪರ ಆಗ್ರಹವಾದವು. "ಬದನೆಕಾಯಿ ಪಲ್ಯ ಬಹಳ ರುಚಿಯಾಗಿದೆ. ಕೋಳಿ ತಿಂದ ಹಾಗನಿಸುತ್ತದೆ." ಆತ ಎಂದಾಗ ಜುಬೇದಾಳ ಮೈ ಮೇಲೆ ಮುಷ್ಟಿ ಮಾಂಸ ಬೆಳೆದಂತಾಯಿತು. ಮೂಲೆಯಲ್ಲಿ ಕುಳಿತು ಅರ್ಧ ಬದನೆಕಾಯಿಯೊಡನೆ ಮುನ್ನಾ ದಿನದ ಬಿರುಸು ತಂಗಳು ರೊಟ್ಟಿ ತಿನ್ನುತ್ತಿದ್ದ ರೋಶನ್ ಅವರ ಲೆಕ್ಕದಲ್ಲಿದ್ದಂತಿರಲಿಲ್ಲ. ಊಟ ಮುಗಿದೊಡನೆ ಬಶೀರ್ ಬಾಯಿ ಮುಕ್ಕಳಿಸಿ, ಅದೇ ನೀರು ಕುಡಿದ. ಅರಿವೆ ತುಂಡಿಗೆ ಕೈ ಒರೆಸಿ ಎದ್ದು ನಿಂತ. "ಈಗಿನ್ನೂ ಎಂಟು ಮುಕ್ಕಾಲು ಆಗುತ್ತಿದೆ."

"ಎಲೆ ತಿನ್ನಲು ಹೊರಗೆ ಹೋಗಬೇಡಿರಿ. ಹೇಗಿದ್ದರೂ ಸಿನೇಮಾಕ್ಕೆ ಹೋಗುವುದಿದ್ದೇ ಇದೆ. ದಾರಿಯಲ್ಲೇ ತೆಗೆದುಕೊಂಡರಾಯಿತು" ತನ್ನ ತಟ್ಟೆಯಲ್ಲಿ ಉಳಿದ ಅರ್ಧ ರೊಟ್ಟಿಯನ್ನು ಮತ್ತೆ ಬುಟ್ಟಿಯಲ್ಲಿ ಹಾಕಿಟ್ಟು ಜುಬೇದಾ ನೀರು ಕುಡಿದಳು. ಊಟದ ತಟ್ಟೆಯಲ್ಲೇ ಕೈ ತೊಳೆದುಕೊಂಡಂತೆ ಮಾಡಿದಳು.

"ನಾನು ಸೀರೆ ಬದಲಾಯಿಸುತ್ತೇನೆ ಎರಡು ನಿಮಿಷದಲ್ಲಿ." ರೋಶನ್‌ಗೆ ನಗು ಬಂದಿತು. ರೊಟ್ಟಿಯ ತುತ್ತು ಶ್ವಾಸನಾಳ ಸೇರಿ ಕೆಮ್ಮಲು ಬಂದಿತು 'ಸಂಜೆ ಆರು ಗಂಟೆಗೇ ಸೀರೆ ಬದಲಾಯಿಸಿ ಆಯಿತು. ಅವರು ಬರುತ್ತಾರೆಂದು. ಇನ್ನು ಮತ್ತೆ ಬದಲಾಯಿಸಬೇಕೆ? ಆಕೆ ಪ್ರಯಾಸದಿಂದ ಕೆಮ್ಮಲು ತಡೆದುಕೊಂಡಳು.

"ಊಂಹೂಂ" ಬಶೀರ್ ಹೇಳಿದ. "ಇದಕ್ಕೆ ಏನಾಗಿದೆ? ಮೇಲಾಗಿ ಅಲ್ಲಿ ಬರುವ ಜನ ಸಿನೇಮಾ ನೋಡಲು ಬರುತ್ತಾರೆ. ನಿನ್ನನ್ನು ನೋಡಲು ಅಲ್ಲ" ಅವನ ವಿನೋದಕ್ಕೆ ಆಕೆ ನಕ್ಕಳು. "ಹಾಗಾದರೆ ನಡೆಯಿರಿ" ಜುಬೇದಾ ಅವಸರ ಪಡಿಸಿದಾಗ ಆತ ಚಪ್ಪಲಿ ಹಾಕಿಕೊಂಡು ಹೊರಗೆ ನಿಂತ. ಅಷ್ಟರಲ್ಲಿ ಜುಬೇದಾ



ತನ್ನ ಕುಪ್ಪಸ ಕಳಚಿ ನೈಲಾನ್ ಕುಪ್ಪಸ ಹಾಕಿಕೊಂಡಳು, ಹಲ್ಲಿನಲ್ಲಿ ಸೀರೆಯ ಅಂಚು ಹಿಡಿದು. ಚಪ್ಪಲಿಯಲ್ಲಿ ಕಾಲು ಸರಿಸುತ್ತಿದ್ದಂತೆ "ಆಡು ಒಳಗೆ ತಂದು ಕಟ್ಟು. ಮರೆತರೆ ಯಾರಾದರೂ ಬಿಚ್ಚಿಕೊಂಡು ಹೋದಾರು. ಬಾಗಿಲಿಗೆ ಚಿಲುಕ ಹಾಕಿಕೋ. ಕಲ್ಲು ಹಚ್ಚು" ಆಕೆ ಉರುಟಾಗಿಯೇ ಮಗಳಿಗೆ ಹೇಳಿದಳು. "ನಿನಗೆ ಎಷ್ಟು ಸಲ ಹೇಳಿದರೂ ಲಕ್ಷ್ಯದಲ್ಲಿ ಬರುವುದಿಲ್ಲ."

ಅವರು ಹೋದನಂತರ ರೋಶನ್‌ಗೆ ಹೆದರಿಕೆಯೆನಿಸಿತು. ಇದು ಮೊದಲ ಪ್ರಸಂಗವೆಂತಲ್ಲ. ಆದರೂ ಅನಾಮಿಕ ಭೀತಿಯಿಂದ ಆಕೆಗೆ ಮೈ ಕಂಪಿಸಿತು. ಆಕೆ ಬೆದರಿದ ಜಿಂಕೆಯಂತೆ ಅತ್ತಿತ್ತ ನೋಡಿ ಆಡಿನ ಕೊರಳಿನ ಕುಣಿಕೆ ಬಿಡಿಸಿದಾಗ ಅದು ತಾನಾಗಿ ಒಳಗೆ ಬಂದಿತು. ಅದರ ಜತೆಗೆ ಮರಿಗಳೂ ಬಂದವು. ಒಂದೊಂದು ಮರಿ ಆರು ತಿಂಗಳದ್ದಾದಾಗ ಅರವತ್ತು ಎಪ್ಪತ್ತು ರೂಪಾಯಿ ಬೆಲೆ ಬರುತ್ತದಂತೆ! ಆಕೆ ಆ ಮೂರು ವಾರದ ಮರಿಗಳ ಮೈ ಮೇಲೆ ಕೈಯಾಡಿಸಿದಳು. ತಾಯಿಯ ಬದಿಗೊತ್ತಿ ಮರಿಗಳೂ ಮಲಗಿದವು. ರೋಶನ್ ಬಾಗಿಲಿಗೆ ಕೊಂಡಿ ಹಾಕಿ ಕೆಳಗೆ ಅಡ್ಡ ಕಲ್ಲು ಹಚ್ಚಿ, ದೀಪ ಚಿಕ್ಕದು ಮಾಡಿ ತನ್ನ ಹಾಸಿಗೆಯನ್ನು ತೆಗೆದು ಬಿಡಿಸಿಕೊಂಡಳು. ಮಲಗಿದಂತೆ ಆಕೆ ನೀಳವಾಗಿ ಉಸಿರು ಬಿಟ್ಟಳು; ಮಗ್ಗುಲಾದಳು. ಮರು ಕ್ಷಣವೇ ನಿದ್ದೆ ಆವರಿಸಿತು ನಡು ರಾತ್ರಿ ಖಟ ಖಟ ಬಾಗಿಲು ಬಾರಿಸುವವರೆಗೆ. "ಉಠ್‌ಗೇ" ಬಶೀರನ ದನಿ ಕೇಳಿ ಬೆಚ್ಚಿ ತಡವರಿಸಿ ರೋಶನ್ ಬಾಗಿಲು ತೆಗೆದಳು. ದೀಪ ದೊಡ್ಡದು ಮಾಡಿದಳು. ಅವನು ಪಾಯಿಜಾಮ ಅಂಗಿ ಕಳಚುವ ವರೆಗೆ ಆಕೆ ಅವರಿಬ್ಬರ ಹಾಸಿಗೆ ಹಾಕಿದಳು. ಹೊದಿಕೆ ಇಟ್ಟಳು. ತಾಯಿ ಒಳಗೆ ಬಂದೊಡನೆ ಆಕೆ ಬಾಗಿಲು ಇಕ್ಕಿ ಮತ್ತೆ ಕಲ್ಲಿರಿಸಿದಳು. "ಈ ಹೊದಿಕೆ ಏಕೆ?" ಸೆಕೆಯಿಂದ ಜೀವ ಗುದುಮರಿಸಿದಂತಾಗುತ್ತದೆ" ಬಶೀರ ಬರಿಯ ಒಂದು ಒಳ ಚಡ್ಡಿಯಲ್ಲಿ ಹಾಸಿಗೆಯ ಮೇಲೆ ಅಡ್ಡಾಗುತ್ತ ಹೇಳಿದ್ದ: "ಮುಂಜಾನೆ ಚಳಿ ಇರುತ್ತದೆ. ಇರಲಿ, ಕಾಲು ಹತ್ತಿರ" ಜುಬೇದಾ ಹಾಗೆಯೇ ಒರಗಿದಳು ಅವನ ಬದಿ. "ನೋಡುತ್ತ ನಿಂತೆಯೇನು?" ಆಕೆ ಗುಡುಗಿದಳು. "ಅವರ ಅಂಗಾಲಿಗೆ ಎಣ್ಣೆ ಹಚ್ಚಿ ಸವರು. ಮೊದಲು ದೀಪ ಸಣ್ಣದು ಮಾಡು. ಎಲ್ಲ ಮತ್ತೆ ಮತ್ತೆ ಹೇಳಬೇಕು. ತಾನಾಗಿ ಒಂದೂ ಕೆಲಸ ಮಾಡುವುದಿಲ್ಲ"

ರೋಶನ್ ಬಶೀರನ ಕಾಲು ನೀವುತ್ತಿದ್ದಂತೆ ಅವರಿಬ್ಬರಲ್ಲಿ ಸಿನೇಮಾದ ಕತೆಯ ಬಗ್ಗೆ ಚರ್ಚೆ ನಡೆಯಿತು. "ಅವಳು ಯಾರು? ಇವಳು ಯಾರು? ಅವನು ಹಾಗೇಕೆ ಮಾಡಿದ?" ಜುಬೇದಾ ಕೇಳುತ್ತಿದ್ದಳು. ಬಶೀರ ಉತ್ಸಾಹದಿಂದ ಹೇಳುತ್ತಿದ್ದ. ರೋಶನ್ ಕೆಳಗೆ ಮೋರೆ ಹಾಕಿಕೊಂಡು ಒಂದೇ ಸವನೆ ತಿಕ್ಕುತ್ತಿದ್ದಳು. ಅವನ ಕೂದಲು ತುಂಬಿದ ಜಾಲಿಯ ಕೊರಡಿನಂತಹ ಕಾಲು ಅವಳಿಗೆ ಅಸಹ್ಯ ತಂದಿತ್ತು. ಆದರೆ ಮೋರೆ ಎತ್ತಿದರೆ ಬಶೀರ, ತಾಯಿಯ ಕೈಗಳೊಂದಿಗೆ ಆಡುವುದು ಆಕೆ ಕಾಣಬೇಕಿತ್ತು.

"ಆಯಿತು ಸಾಕಿನ್ನು. ಹೋಗಿ ಮಲಗಿಕೋ" ಜುಬೇದಾಳೇ ಹೇಳಿದಾಗ ರೋಶನ್ ತನ್ನ ಹಾಸಿಗೆಗೆ, ಹೋದಳು. ಇವರು ಹೀಗೇಕೆ ಮಾಡುತ್ತಾರೆಂಬುದು ಆಕೆಗೆ ಯಕ್ಷ ಪ್ರಶ್ನೆಯಾಗಿತ್ತು.

"ನಿದ್ದೆ ಬಂದಿತೇನು?" ಜುಬೇದಾ ಪಿಸುಗುಟ್ಟಿದ್ದು ಕೇಳಿ ರೋಶನ್ ಕುತೂಹಲದಿಂದ ನೋಡಿದಳು. ತಾಯಿ ಬಶೀರ್‌ನ ಕಡೆ ಮಗ್ಗುಲಾಗಿದ್ದಳು. "ಹುಡುಗಿ ಮಲಗಿದಳೇನು?" ಬಶೀರ್ ಪಿಸುಗುಟ್ಟಿದ್ದು ಕೇಳಿ ರೋಶನ್ ಕಣ್ಣು ಬಿಗಿದಳು.

ಜುಬೇದಾ ಎದ್ದ ಸದ್ದಾಯಿತು. ಅರೆ ನಿಮಿಷ ನಿಂತ ಸದ್ದಾಯಿತು. ಕಂದೀಲೆತ್ತಿ ಊದಿದ ಸದ್ದಾಯಿತು. ರೋಶನ್ ಮೆಲ್ಲನೆ ಕಣ್ಣು ಬಿಚ್ಚಿದಳು. ಕತ್ತಲೆ ತಾನೇ ತಾನಾಗಿತ್ತು. ಆದರೆ ಆಕೆಯ ಕಣ್ಣಿಗೆ ಅಂತಹದರಲ್ಲೂ ತಾಯಿಯೊಡನೆ ಬಶೀರನ ಸಲುಗೆ ಕಾಣತೊಡಗಿತು.

* * * *

ರೂಢಿಯಂತೆ ಒಂದೆರಡು ದಿನ ಇದ್ದು ಹೋಗಬೇಕಾದ ಬಶೀರ್ ಆ ಸಲ ಎಂಟು ದಿನ ಅಲ್ಲೇ ತಳ ಊರಿದ. ಹಗಲೆಲ್ಲ ಟ್ರಕ್ಕಿನ ದುರಸ್ತಿಯೆಂದು ಸಾಂಗಲಿಗೆ ಹೋಗಿ ಬರುತ್ತಿದ್ದ. ಜುಬೇದಾ ಅವನಿಗಾಗಿ ಒಂದು ಸಲ ಕೋಳಿ ಬೇಯಿಸಿದಳು. ಒಮ್ಮೆ ಆಡಿನ ಮಾಂಸ ಕುಚ್ಚಿದಳು. ಎರಡು ಸಲ ಮೊಟ್ಟೆಯ ಸಾರೂ ಆಯಿತು. ಕೆಲಸದಲ್ಲಿ ರೋಶನ್‌ಳಿಗೆ ಬೇವಿನ ಗಿಡದಡಿ ಗೆಳತಿಯರೊಂದಿಗೆ ಆಟ ತಪ್ಪಿತು. ಆದರೆ ಆಕೆಯ ಮನಸ್ಸು ಅದರಲ್ಲಿರಲಿಲ್ಲ. ತನ್ನ ಮಲ ತಂದೆ ತಾಯಂದಿರ ಸಲುಗೆಯನ್ನು ಕಣ್ಣಿಟ್ಟು ನೋಡುವುದೊಂದೇ ಆಕೆಗೆ ಉದ್ಯೋಗವಾಯಿತು. ಆಕೆಗರಿಯದಂತೆ ಆಕೆಯ ಮೈ ಮನಸ್ಸು ಪುಲಕಗೊಳ್ಳತೊಡಗಿದವು. ಅಂತಿಂತಹ ಕೇಳಿದ ಕತೆಗಳೆಲ್ಲ ಆಕೆಗೆ ನೆನಪಾಗತೊಡಗಿದವು. ಅದೆಲ್ಲ ನಿಜವೇನು? ಇರಬೇಕು? ಇಲ್ಲದಿದ್ದರೆ ಇವರು ಹೀಗೇಕೆ ವರ್ತಿಸುತ್ತಾರೆ. ಆಕೆಯ ಮನಸ್ಸು ಓಲಾಡುತ್ತಿತ್ತು.

ಟ್ರಕ್ಕು ರಿಪೇರಿಯಾದ ನಂತರ ಬಶೀರ ಮತ್ತೆ ತನ್ನ ಮುಂಬಯಿಗೆ ಕುರಿ ಸಾಗಿಸುವ ಉದ್ಯೋಗದಲ್ಲಿ ತೊಡಗಿದ. ಲೇಲಾಂಡ್‌ದಲ್ಲಿ ಹೋಗುವಾಗ ನೂರಾಹತ್ತು ಆಡು ಕುರಿ ತುಂಬಿಕೊಂಡು ನೇರ ಮುಂಬಯಿ ಬಾಂದ್ರಾಗೆ ಹೋಗುವುದು, ಬರುವಾಗ ಚಿಂಚ ಬಂದರದ ಕಮಿಶನ್ ಏಜಂಟನನ್ನು ಕಂಡು ಕೊಲ್ಹಾಪುರ ಸಾಂಗಲಿ ಭಾಗಕ್ಕೆ ಸರಕು ತರುವುದು ಅವನ ಮುಖ್ಯ ಉದ್ಯೋಗ. ಹಾಗೆನ್ನುವುದಕ್ಕಿಂತ ಆ ಟ್ರಕ್ಕಿನ ಮಾಲಕ ಹಾಕಿ ಕೊಟ್ಟ ಜಾಡು ಅದು. ಬಾಡಿಗೆಯ ಹಣದ ಲೆಕ್ಕವನ್ನೂ ಮಾಲಕನಿಗೆ ಒಪ್ಪಿಸಬೇಕು. ದಾರಿಯಲ್ಲಿ ತೆಗೆದುಕೊಂಡ ಪ್ರಯಾಣಿಕರ ಹಣ ಮಾತ್ರ ನೇರ ಬಶೀರನ ಜೇಬಿಗೇ. ಎಂಟು ಹತ್ತು ದಿನಗಳಿಗೊಮ್ಮೆ ಆತ ಮನೆಗೆ ಬಂದಾಗ ಜೇಬಿನಿಂದ ಒಂದೊಂದರ, ಐದರ ನೋಟು ತೆಗೆದು ತಾಯಿಗೆ ಕೊಟ್ಟದ್ದು ನೋಡಿ ರೋಶನ್ ಬೆಪ್ಪಾಗುತ್ತಿದ್ದಳು. ಅವರು ಬಂದಾಗ ತಾಯಿ ಒಳ್ಳೊಳ್ಳೆಯದನ್ನು ಮಾಡಿ ಹಾಕುತ್ತಾಳೆ, ಅವರಿಲ್ಲದಾಗ ಅಡಿಗೆ ಮಾಡಿದರೆ ಮಾಡಿದಳು, ಬಿಟ್ಟರೆ ಬಿಟ್ಟಳು. ತಾನೇ ಬೇಕರಿಯಿಂದ ಬ್ರೆಡ್ಡು ತರಬೇಕು. ಅದನ್ನು ಒಣ ಒಣ ನುಂಗಿ ನೀರು ಕುಡಿಯಬೇಕು. ರೋಶನ್‌ಗೆ ಒಮ್ಮೊಮ್ಮೆ ಅಚ್ಚರಿಯಾಗುತ್ತಿತ್ತು. ಅವರಿದ್ದಾಗ ತನ್ನೊಡನೆ 'ಹುಡತ್' ಮಾಡುವ ತಾಯಿ ಅವರು ಹೋದ ಬಳಿಕ ಎಷ್ಟೊಂದು ಮೆತ್ತಗೆ ಮಾತನಾಡುತ್ತಾಳೆಂಬುದೂ ಅವಳಿಗೆ ಸೋಜಿಗವಾಗಿತ್ತು. ಆದರೆ ಹೀಗೇಕೆ ? ಆಕೆಯ ಕಿಶೋರ ಮನಸ್ಸಿಗೆ ಒಂದೊಂದು ಒಡಪಾಗುತ್ತಿತ್ತು.

ರೋಶನ್ ತಾನೂ ಒಳ್ಳೊಳ್ಳೆಯ ಬಟ್ಟೆ ಹಾಕಿಕೊಂಡು ಬಾಗಿಲಿನಲ್ಲಿ ನಿಲ್ಲತೊಡಗಿದಳು. ಅತ್ತಿತ್ತ ಹೋಗುವವರನ್ನು ನೋಡತೊಡಗಿದಳು. ಗೆಳತಿಯರೆಡೆ ಹೋದರೂ ಅಂತಹವೇ ಮಾತು. "ಆಕೆಯ ಗಂಡ ಹಾಗೆ, ಈಕೆಯ ಗಂಡ ಹೀಗೆ" ದಿನಕ್ಕೆರಡು ಸಲ ಹೆರಳು ಹಾಕಿ ಮೋರೆ ತೊಳೆದುಕೊಂಡು ಕನ್ನಡಿಯಲ್ಲಿ ನಿಟ್ಟಿಸುತ್ತ ನಿಂತರೆ ಹೊತ್ತು ಕಳೆದುದು ಆಕೆಗೆ ತಿಳಿಯಲಿಕ್ಕಿಲ್ಲ. "ಅದೇನು ನೋಡುತ್ತೀ ಕನ್ನಡಿಯಲ್ಲಿ? ಅಕ್ಕಿ ಆರಿಸಿ ಕೊಡು. ನಿಮ್ಮ ಅಬ್ಬಾಜಾನ್ ಬರುವವರಿದ್ದಾರೆ ಇಂದು ಸಂಜೆ. ಪುಲಾವ್ ಮಾಡೋಣ" ಜುಬೇದಾ ಕೂಗಿದಾಗಲೇ ಆಕೆ ಬೆಚ್ಚಿ ಹಿಂಜರಿಯಬೇಕು. ಬಾಗಿಲ ಹೊರಗೆ ನಿಂತು ದೌಲತ್ ಕಟ್ಟಿಗೆ ಒಡೆಯುವುದನ್ನು ನಿಂತು ನೋಡುವುದರಲ್ಲೂ ಆಕೆಗೆ ಆನಂದವೇ. ಇಷ್ಟೇ ಏಕೆ. ಅವನು ಕಣ್ಣಿಗೆ ಬಿದ್ದರೆ ಸಾಕು, ಆಕೆಯ ಮನಸ್ಸು ಹರವಾಗುತ್ತಿತ್ತು. ಕಬ್ಬಿಣ ಕೊಡ ತುಂಬಿ ಬೀದಿಯಲ್ಲಿಯ ನಲ್ಲಿಯಿಂದ ಮನೆಗೆ ಹೋಗುವವರೆಗೂ ಆಕೆ ಅವನ ಮನೆಯತ್ತ ನಿಟ್ಟಿಸಬೇಕು. ದೌಲತ್ ಕೆಲಸಕ್ಕೆ ಹೋಗುವ ಸಮಯ. ಮಧ್ಯಾಹ್ನ ಊಟಕ್ಕೆ ಬರುವ ಸಮಯ ಮತ್ತೆ ಹೋಗು



ವುದು, ಸಂಜೆ ಬರುವುದು, ಎಲ್ಲ ಆಕೆಗೆ ಪಾಠವಾದಂತಿತ್ತು. ದಿನವೂ ನೋಡಿ ನೋಡಿ ಅಂತಹ ಹೊತ್ತಿನಲ್ಲಿ ಆಕೆ ನೆವ ತೆಗೆದು ಅವನ ಇದಿರು ಹೋಗಬೇಕು. ದೌಲತ್ ಮೊದ ಮೊದಲು ಮುಗುಳ್ನಗೆ ಬೀರುತ್ತಿದ್ದವ "ಏನು?" "ಎಲ್ಲಿ?" "ಇಂದು ನಲ್ಲಿಗೆ ನೀರು ತಡವಾಗಿ ಬಂದಿತೇನು?" ಎಂದು ಕೇಳತೊಡಗಿದ. ಹಾಗೆ ಅವನೊಡನೆ ಮಾತನಾಡುವಾಗ ಎದೆ ದಡದಡ ಎನುವುದು ರೋಶನ್‌ಗೆ ಸುಖಪ್ರದವೆನಿಸಬೇಕು.

ಹಗಲು ಹೇಗೂ ಹೊತ್ತು ಕಳೆಯುತ್ತಿತ್ತು. ಆದರೆ ರಾತ್ರಿ? ಬಶೀರ್ ಇದ ರೆ ಅದೊಂದು ತರಹದ ಹಿಂಸೆ. ಇಲ್ಲದಿದ್ದರೆ ಆಕೆಗೆ ಕನಸಿನಲ್ಲಿ ದೌಲತ್ ಬರುತ್ತಿದ, ಎಂತೆಂತಹ ಪುರುಷರು –ಬಶೀರ್ ಕೂಡ ಬರುತ್ತಿದ್ದರು. ಕನಸು ಹರಿದಾಗ ಎಷ್ಟೋ ಸಲ ಆಕೆಗೆ ಅಳುಬರುತ್ತಿತ್ತು. ಅದರ ಕಾರಣವೂ ಆಕೆಗೆ ತಿಳಿಯುತ್ತಿರಲಿಲ್ಲ. ಅವರೇಕೆ ಬಂದರೆಂದೇ ಅಥವಾ ಕನಸು ಇಷ್ಟು ಬೇಗ ಏಕೆ ಮುಗಿಯಿತೆಂದೇ? ಆಕೆಗೆ ಅರ್ಥವಾಗುತ್ತಿರಲಿಲ್ಲ.

* * * *

ಆ ವರ್ಷ ಮಿರಜಿಯಲ್ಲಿ ಸಾರ್ವಜನಿಕ ಗಣಪತಿ ಉತ್ಸವ ಸಾಂಗವಾಗಿ ಬಗೆಹರಿಯಲಿಲ್ಲ. ಸರಾಫಿ ಕಟ್ಟೆಯಲ್ಲಿಯ ಮೂರ್ತಿಗೆ ಯಾರೋ ಇಟ್ಟಂಗಿ ಎಸೆದು ಊನ ಮಾಡಿದರಂತೆ. ಹುಂದರದಲ್ಲಿ ಕಾಯಲು ಕುಳಿತ ಹುಡುಗರು ಇಬ್ಬರು ಮೂರು ಜನರ ಹೆಸರು ಹೇಳಿದಾಗ ಆ ಸುದ್ದಿ ಕಾಳ್ಗಿಚ್ಚಿನಂತೆ ಹರಡಿತು. ಪರಿಸ್ಥಿತಿ ಪ್ರಕ್ಷುಬ್ಧವಾಯಿತು. ಆರೋಪಿತ ವ್ಯಕ್ತಿಗಳಲ್ಲಿಯ ಇಬ್ಬರನು ಹಿಡಿದು ಎಳೆದು ತಂದರು. ತಾಲೀಮಿನ ಹುಡುಗರು ಕೂಡಿ ಅವರ ಎಲುಬು ಹಣ್ಣು ಮಾಡಿದರು. ಆ ಹೊಡೆತಕ್ಕೆ ಅವರ ಕುಡಿತದ ಅಮಲು ಇಳಿಯಿತು. ಆದರೆ ಉಳಿದವರೊಂದು ಕೇಳಬೇಕಲ್ಲ? "ವಿಜಾಪುರ ಅಗಸೆಯ ಹತ್ತಿರ ಪಾಕಿಸ್ತಾನ ಜಿಂದಾಬಾದ್ ಎಂದು ಘೋಷಣೆ ಕೊಡುತ್ತ ಮೆರವಣಿಗೆ ಹೊರಟಿದೆ" ಎಂದು ಸುದ್ದಿ ಹೊರಟಿತು. ಊರಲ್ಲಿಯ ಅಂಗಡಿಗಳೆಲ್ಲ ಮುಚ್ಚಿದವು. ಲಕ್ಷ್ಮೀ ಮಾರ್ಕೆಟ್ಟಿನಲ್ಲಿಯ ವೀಳ್ಯದೆಲೆ ಮಾರುವವರ ಬುಟ್ಟಿಗಳೆಲ್ಲ ತೂರಲಾದವು. ತರಕಾರಿ ಹಣ್ಣು ಮಾರುವ ಬಾಗವಾನರೆಲ್ಲ ಓಡಿ ಹೋದರು. ಚಿತ್ರಾ ಟಾಕೀಜ ಹತ್ತಿರದ ಕಟ್ಟಿಗೆಯ ಅಡ್ಡೆ (ಡಿಪೋ)ಗೆ ಬೆಂಕಿ ಹಾಕಿದಾರೆಂದೂ ಸುದ್ದಿಯಾಯಿತು. ಯಾವುದು ನಿಜ, ಯಾವುದು ಸುಳ್ಳು ಎಂದು ಯೋಚಿಸುವ, ನೋಡುವ ವ್ಯವಧಾನ ಯಾರಿಗೂ ಉಳಿಯಲಿಲ್ಲ. ಕಿವಿಗೆ ಬಿದ್ದದ್ದೆಲ್ಲ ನಂಬಿ, ಹರೆಯದವರೆಲ್ಲ ಊರ ಆಡಳಿತ ತಮ್ಮೆಡೆ ತೆಗೆದುಕೊಂಡಂತೆ ಮಾಡಿದರು.

ಜುಬೇದಾಳ ಮನೆಯಿದ್ದುದು ಮುಸಲ್ಮಾನರು ಹೆಚ್ಚಾಗಿ ವಾಸಿಸುವ ಓಣಿಯಲ್ಲಿ. ಗರಡಿ ಹುಡುಗರ ಗುಂಪು ಆ ಓಣಿಗೂ ನುಗ್ಗಿತು. "ಉಸ್ಮಾನ್ ಎಲ್ಲಿದ್ದಾನೆ" ಎಂದು ಮನೆ ಮನೆ ಸೇರಿ ಶೋಧಿಸತೊಡಗಿತು. ಆ ನಿಮಿತ್ತದಿಂದ ಮನೆಯಲ್ಲಿದ್ದ ಗಡಿಯಾರ ಟ್ರಾನ್ಸಿಸ್ಟರ್ ಹಾರಿಸತೊಡಗಿತು. ಅರಬ್ಬೀ ಬೋಧವಾಕ್ಯಗಳ ಫೋಟೋಗಳನ್ನು ಬೀದಿಗೆಸೆಯಿತು.

ಆಗ ಬಶೀರ್ ಊರಲ್ಲಿರಲಿಲ್ಲ. ಜುಬೇದಾಳ ಎದೆ ಪುಕು ಪುಕು ಮಾಡಿತು. ಹಳೆಯ ಪೆಟ್ಟಿಗೆಯಲ್ಲಿಯ ತನ್ನ ಹಣ, ಆಭರಣಗಳನ್ನು ಇವರು ಅಪಹರಿಸಿದರೆ ಗತಿಯೇನು? ಆಕೆ ತಲೆಯ ಮೇಲೆ ಕೈ ಹೊತ್ತು ಕುಳಿತಳು.

"ರೋಶನ್ ಬಾಗಿಲು ಇಕ್ಕಿಕೊಂಡರೆ ಹೇಗೆ?" ಆಕೆ ನಡುಗು[illegible]ನಲ್ಲಿ ಕೇಳಿದಳು.

"ಅವರು ಇಷ್ಟು ಜನ, ನಮ್ಮ ಬಾಗಿಲು ಕಿತ್ತಿ ಒಗೆಯಲಾರರೇ?"

"ಬಾಗಿಲಿಗ . ಹಾಕಿ ಇಂಡೆ ಹೊರಗೆ ಹೋದರೆ?"

ರೋಶನ್ ಏನು ಹೇಳಬೇಕು?

"ನಾವು ಉಸ್ಮಾನ್‌ನನ್ನು ಮನೆಯಲ್ಲಿರಿಸಿದೇವೆಂದು ನೆವ ಹೂಡಿ ಅವರು ಬಾಗಿಲು ಒಡೆದರೂ ಒಡೆದರೇ" ತಾನೇ ಹೇಳಿಕೊಂಡಳು ಜುಬೇದಾ.

"ಏನು ಮಾಡಲೀ?" ಎಂಧು ಅಳತೊಡಗಿದಳು. ಮನೆಯ ಒಳಗೊಮ್ಮೆ, ಬಾಗಿಲ ಹೊರಗೊಮ್ಮೆ ಬೆದರಿದ ಮೊಲದಂತೆ ಓಡಾಡುತ್ತಿದ್ದು, ನಡು ನಡುವೆ, ದೂರದಲ್ಲಿ ಕಾಣುವ ಜನಸಂದಣಿಯತ್ತ ನಿಟ್ಟಿಸುತ್ತಿದ್ದ ರೋಶನ್‌ಗೆ ದೌಲತ್ ಎದುರಿಗೆ ಬಂದುದೂ ಕಾಣಲಿಲ್ಲ. ಮಿರಜಿಯ ಪೇಟೆ ಮುಚಿ ಅವನಿಗೂ ಬಿಡುವಾಗಿತ್ತು. ಟ್ರಕ್ಕುಗಳಿಂದ ಚೀಲ, ಬೆಲ್ಲದ ಪೆಂಟಿ ಇಳಿಸುವ, ಸರಕು ಏರಿಸುವ ದೌಲತ್‌ನಿಗೆ ಉಳಿದವರು ಕೆಲಸ ಮಾಡಲು ಕೊಟ್ಟಿರಲಿಲ್ಲ.

"ಏನಾಯಿತು ರೋಶನ್?" ಆತ ಬೀದಿಯ ಮಧ್ಯದಲ್ಲಿ ನಿಂತೇ ಆಕೆಯನ್ನು ಕೇಳಿದ. ಆಕೆಗೋ ಮೊದಲೇ ಎದೆಗುದಿ, ಅದರಲ್ಲಿ ಇದಿರು ಬಂದ ದೌಲತ್‌ನನ್ನು ತಾನು ನೋಡಲಿಲ್ಲವೆಂಬ ಅಳುಕು. ಆದರೆ? ಅವಳ ಮೊರೆ ಸರ್ರನೆ ಇಳಿಯಿತು. ಅವನೂ ಅವರ ಪೈಕಿಯೇ- ಆದರೂ ಅದನ್ನು ತೋರಗೊಡದೆ ಆಕೆ ಶುಷ್ಕವಾಗಿ ಹೇಳಿದಳು: "ಅವರು ಉಸ್ಮಾನ್‌ನನು ಶೋಧಿಸುತ್ತಿದ್ದಾರೆ."

"ನಿಮ್ಮಲ್ಲಿ ಅವನನ್ನು ಬಚ್ಚಿಟ್ಟಿದ್ದೀರೇನು?" ಆತ ನಕ್ಕಾಗ ರೋಶನ್‌ಳ ಎದೆಯೊಡೆದು ನೀರಾಯಿತು.

ಅಂದರೆ ಇವನೂ? ಆಕೆ ಥರ ಥರ ನಡುಗಿದಳು.

ದೌಲತ್ ಮತ್ತೆ ಎರಡು ಹೆಜ್ಜೆ ಮುಂದಿಟ್ಟ: "ಮನೆಯಲ್ಲಿ ಚಾಚಿ ಇದ್ದಾಳಲವೇನು?" ಆತ ಮತ್ತೆ ನಕ್ಕ. ರೋಶನ್‌ಳಿಗೆ ಸಂಭ್ರಮವಾಯಿತು. ಇವನು ಹೀಗೇಕೆ ಶಾಂತ ಸ್ವರದಿಂದ ಕೇಳುತ್ತಿದ್ದಾನೆ? ಆಕೆ ಮನೆಯೊಳಗೆ ಓಡಿದಳು. ದೌಲತ್ ನಗುತ್ತಲೇ ಅವಳ ಬೆನ್ನಹಿಂದೆ ಬಂದ.

"ಚಾಚೀ ನೀವು ಉಸ್ಮಾನ್‌ನನ್ನು ಬಚ್ಚಿಟ್ಟಿದ್ದೀರೇನು?" ಆತ ಕೇಳಿದಾಗ ಜುಬೇದಾ ಉಸಿರು ಬಿಟ್ಟಳು "ನೋಡಿಕೋ ಮಹಾರಾಯ" ಎಂದಳು.

"ಹಾಗಾದರೆ ರೋಶನ್ ಇಷ್ಟೇಕೆ ಹೆದರಿಕೊಂಡಿದ್ದಾಳೆ?"

"ಪುಕ್ಕ ಹುಡುಗಿ" ಒಣ ನಗೆ ಎಳೆದು ತಂದಂತೆ ಜುಬೇದಾ ಹೇಳಿದಳು.

"ಹಾಗಾದರೆ ನಾನು ನೋಡಿಕೊಳ್ಳುತ್ತೇನೆ. ನೀವು ಹೆದರಬೇಡಿರಿ. ಬಶೀರ್‌ಭಾಯಿ ಬರಲಿಲ್ಲವೇನು?"

"ಅವರಿಗಿನ್ನೂ ಎರಡು ದಿನ ಬೇಕು. ನಿನ್ನೆ ರಾತ್ರಿಯೇ ಹೋಗಿರಬಹುದು ಅವರು ಮುಂಬಯಿಗೆ."

ರೋಶನ್‌ಳಿಗೆ ಜೀವದಲ್ಲಿ ಜೀವ ಬಂದಂತಾಯಿತು. ಹೊಸ್ತಿಲ ಹತ್ತಿರ ಒಳಗೆ ಕುಳಿತು ದೌಲತ್ ಏನೇನೋ ವಿಷಯ ತೆಗೆದು ಹರಟ ತೊಡಗಿದ. ಅರ್ಧ ಮುಕ್ಕಾಲು ಗಂಟೆಯ ನಂತರ 'ಸ್ಪೇಶಲ್ ರಿಜರ್ವ್ ಪೋಲೀಸ್' ಗಾಡಿ ತಿರುಗತೊಡಗಿದಾಗ ಆತ ಅಲ್ಲಿಂದೆದ್ದು ಓಣಿಯುಲ್ಲಿ ಅತ್ತಿತ್ತ ನೋಡಿದ. ಗುಂಪು ಕರಗಿ ಹೋಗಿತ್ತು.

"ನಾನು ಹೋಗಲೇ ಚಾಚೀ? ಪೋಲೀಸರು ಗಸ್ತು ಹಾಕು[illegible]ದ್ದಾರೆ" ಆತ ಕೇಳಿದಾಗ ಜುಬೇದಾ ಬೇಡವೆಂಬಂತೆ ಕೈ ಮಾಡಿದಳು.

"ರೋಶನ್ ಒಲೆ ಹೊತ್ತಿಸಲು ಹಾಕಿ ಆಡು ಕರೆ. ಚಹ ಮಾಡು." ಆಕೆ ಮಗಳಿಗೆ ಹೇಳಿ ದೌಲತ್‌ನತ್ತ ತಿರುಗಿದಳು. "ನಿನಗೆ ಆಡಿನ ಹಾಲಿನಲ್ಲಿಯ ಚಹ ನಡೆಯಬಹುದಲ್ಲ? ಇಲ್ಲದಿದ್ದರೆ ಅಂಗಡಿಗೆ ಕಳಿಸಿ ಎಮ್ಮೆ ಹಾಲು ತರಿಸುತ್ತೇನೆ."

"ಚಾಚೀ. ಈಗ ಎಲ್ಲ ಅಂಗಡಿ ಮುಚ್ಚಿವೆ" ದೌಲತ್‌ನ ಕಣ್ಣು ಎವೆಯಿಕ್ಕದೆ ರೋಶನ್‌ಳ ಚಲನವಲನಗಳನ್ನೇ ನಿರುಕಿಸುತ್ತಿತ್ತು. "ಆಡಿನ ಹಾಲೂ ಸೈ, ಯಾವ ಹಾಲೂ ಸೈ, ಹಾಲು ಇಲ್ಲದಿದ್ದರೂ ಸೈ. ಸಕ್ಕರೆ ಇದೆಯೋ ಅಥವಾ ಬೆಲ್ಲವೋ?" ಆತ ನಕ್ಕ.

"ಸಕ್ಕರೆ ಇದೆ" ರೋಶನ್ ಧೈರ್ಯದಿಂದ ಹೇಳಿದಳು. ಹಾಲು ಕರೆಯುತ್ತಿದ್ದಂತೆ ಹಿಂದೆ ನೋಡಿ.

ಹಾಲಿಗೆ ವಾಸನೆ ಹೊಡೆಯುತ್ತಿದ್ದರೂ ದೌಲತ್ ರುಚಿಯಿಂದ ಕುಡಿಯುವವರಂತೆ ಚಹ ಕುಡಿದ. "ಉತ್ತಮ ಸಾಧಿಸಿದೆ" ಎಂದು ಪ್ರಶಸ್ತಿ ಕೊಟ್ಟ.

"ಚಾಚೀ ಒಂದು ಹೋಳು ಅಡಿಕೆ ಇದ್ದರೆ ಕೊಡಿರಿ" ಎಂದು ಹಕ್ಕಿನಿಂದ ಬೇಡಿ ತೆಗೆದುಕೊಂಡ.

ಮರುದಿನ ರಾತ್ರಿ ಊಟವಾದ ಬಳಿಕ ಜುಬೇದಾ ಇನ್ನೇನು ಬಾಗಿಲು ಇಕ್ಕಬೇಕು. ಅಷ್ಟರಲ್ಲಿ ದೌಲತ್ ಬಾಗಿಲ ಹೊರಗಡೆ ಕಂಡ. "ಬಾ ದೌಲತ್" ಆಕೆ ಕರೆದಳು. ಅವನು ಹೊರಗಡೆ ಕಲ್ಲಿನ ಮೇಲೆ ಕುಳಿತೊಡನೆ ತಾನೂ ಹೊಸ್ತಿಲ ಒಳಗಡೆ ಕುಳಿತಳು. ಹಾಸಿಗೆ ಹಾಕುತ್ತಿದ್ದ ರೋಶನ್ ತಾನೂ ತಾಯಿಯ ಹತ್ತಿರ ಕುಳಿತಳು. ಮುನ್ನಾ ದಿನದ ಗೊಂದಲದ ವಿಷಯ ಅವರ ಹರಟೆಗೆ ಸಾಕಾಗಲಿಲ್ಲ. ದೂರದಲ್ಲೆಲ್ಲೋ ಹತ್ತರ ಗಂಟೆ ಬಾರಿಸಿದಾಗ ದೌಲತ್ ಎದ್ದ. "ರಾತ್ರಿಯಾಯಿತು, ನಾನಿನ್ನು ಮಲಗಲು ಹೋಗುತ್ತೇನೆ" ಎಂದ. ಎರಡು ದಿನಗಳ ನಂತರ ಬಶೀರ್ ಬಂದ ರಾತ್ರಿಯೂ ಆತ ಹರಟೆಗೆ ಬಂದ. ಬಶೀರನಿಗೂ ನಡೆದ ಸಂಗತಿ ತಿಳಿದಿತ್ತು. ಮತ್ತೆ ಅದನ್ನೇ ದೌಲತ್ ಹೇಳಿದ. ರಾತ್ರಿ ಹನ್ನೊಂದರ ವರೆಗೆ ಅಂದು ರಾತ್ರಿ ಮಾತಾದವು.

ಮರು ರಾತ್ರಿ ದೌಲತ್ ಅಲ್ಲಿ ಬಂದಾಗ ಬಾಗಿಲು ಇಕ್ಕಿತ್ತು. ಊಟಕ್ಕೆ ಇಷ್ಟು ತಡವೇ? ಎಂದುಕೊಂಡ ಆತ. ಹೊರಗೆ ಇರಬೇಕಾಗಿದ್ದ ಆಡೂ ಇರಲಿಲ್ಲ. ಅಂದರೆ ಇಷ್ಟು ಬೇಗ ಒಂಬತ್ತು ಗಂಟೆಗೇ ಮಲಗಿದಾರೆಯೇ? "ಬಶೀರ್‌ಭಾಯ್" ಆತ ಹೊರಗಿನಿಂದ ಕೂಗಿದ. ಉತ್ತರ ಬರದಾದಾಗ "ಚಾಚೀ" ಎಂದು ಕೂಗಿದ. ಅದಕ್ಕೂ ಉತ್ತರವಿಲ್ಲದಾದಾಗ ಆತ ತಿರುಗಿದ್ದ, ಹರಟೆಯ ಚಪಲ ಅದುಮಿ.

ಅವನು ಎರಡು ಸಲ ಕರೆದಿದ್ದು ಒಳಗೆ ಮಲಗಿದ್ದ ರೋಶನ್‌ಳಿಗೆ ಕೇಳಿಸಿತ್ತು. ತಾಯಿಯೊಡನೆ ಬಶೀರ್ ಸಿನೇಮಾಕ್ಕೆ ಹೋದ ನಂತರ ಆಕೆ ಅದೇ ಬಾಗಿಲು ಇಕ್ಕಿಕೊಂಡಿದ್ದಳು ಆಡು ಒಳಗೆ ತಂದುಕೊಂಡು. ಆದರೆ ಬಾಗಿಲು ಹೇಗೆ ತೆರೆಯುವುದು? ಅವನು ಗಂಡಸು. ತಾನು ಒಬ್ಬಂಟಿಗ ಹುಡುಗಿ. ಆಕೆಗೆ ಅಧೈರ್ಯವಾಯಿತು. ಮೇಲಾಗಿ ತಾನು ಅವನೊಡನೆ ಮಾತನಾಡುವುದಾದರೂ ಏನು? ಅವನು ಮರಳಿ ಹೋದ ಎಷ್ಟೋ ಹೊತ್ತಿನ ವರೆಗೆ ಆಕೆ ಮಲಗಿದಲ್ಲಿಯೇ ಯೋಚಿಸುತ್ತಿದ್ದಳು. ತನಗೇಕೆ ಅಧೈರ್ಯ? ದೌಲತ್ ಏನು ಮಾಡಬಲ್ಲ? ಅವಳಿಗೆ ಕಚಕುಳಿಯಿಟ್ಟಂತಾಯಿತು. ಬಶೀರ್ ತನ್ನ ತಾಯಿಯ ಕೈ ಹಿಡಿದಂತೆ, ಮೈ ಮೇಲೆ ಕೈ ಆಡಿಸಿದಂತೆ ದೌಲತ್ ಕೂಡ? ಹಾಸಿಗೆಯ ಮೇಲೆ ಮಲಗಿದಾಕೆ ಎದ್ದು ಕುಳಿತಳು. ಆಕೆಗೆ ಅದೇನೋ ಅಪೂರ್ವ ಕಲನೆಯೆನಿಸತೊಡಗಿತು. ಜುಬೇದಾ ಬಶೀರ್ ಸಿನೇಮಾ ಬಿಟ್ಟು ಬರುವ ವರೆಗೆ ಕಲ್ಲುಸಕ್ಕರೆಯಂತೆ ಆಕೆ ಅದನ್ನೇ



ನವೆಯುತ್ತಿದ್ದಳು. [illegible] ಹೋಗಿದಾಗ ಬಾಗಿಲು ತೆರೆದಾಯಿತು. ಬಶೀರ್ ತನ್ನ ಇಸ್ತ್ರಿಯ ಪಾಯಿಜಾಮ ಅಂಗಿ ತೆಗೆದ. ಬರಿಯ ಬನಿಯನ್, ಒಳ ಚಡ್ಡಿಯಲ್ಲಿಯೇ ಅವನ ಕಪ್ಪು ಶರೀರ ನೋಡಿ ಅವಳಿಗೆ ಈ ಸಲ ಜಿಗುಪ್ಸೆ ಹುಟ್ಟಿಸಲಿಲ್ಲ. ಎಣ್ಣೆಯ ಬಟ್ಟಲು ತೆಗೆದುಕೊಂಡು ಆಕೆ ಸದ್ದಿಲ್ಲದೆ ಅವನ ಕಾಲು ನೀವತೊಡಗಿದಳು. 'ದೌಲತ್ ಇಷ್ಟು ಕಪ್ಪಲ್ಲ. ಇಷ್ಟು ಅಡ್ಡತಿಡ್ಡ ಬೆಳೆದವನೂ ಅಲ್ಲ' ಅವಳ ಮನಸ್ಸು ಏಕೆ ಹಾಕತೊಡಗಿತು. 'ಪ್ರಮಾಣ ಬದ್ಧ ಶರೀರಯಷ್ಟಿ, ಆಕರ್ಷಕ ವ್ಯಕ್ತಿ' ತನ್ನೆದುರು ಮಲಗಿದವ ದೌಲತ್‌ನೆಂದೇ ಅವಳ ಮನಸ್ಸು ಭಾವಿಸಿತು. ತಾನು ದೌಲತ್‌ನ ಕಾಲು ನೀವುತ್ತಿದ್ದೇನೆಂದು ಆಕೆ ಯೋಚಿಸಿದಳು. ಅಂಗಾಲು, ಹಿಮ್ಮಡದಿಂದ ಮೊಳಕಾಲ ವರೆಗೆ ಆಕೆ ಎಣ್ಣೆ ಸವರಿ ತಿಕ್ಕಿದಳು, ಆ ಭಾವನೆಯಲ್ಲಿಯೇ.

"ಇಷ್ಟು ದಿನಗಳಲ್ಲಿ ಇಂದು ಹುಡುಗಿ ಭೇಷಾಗಿ ತಿಕ್ಕಿದಳು" ಬಶೀರ್ ತೃಪ್ತಿ ಸೂಚಿಸಿದಾಗ "ಈಗ ಆಕೆಗೆ ತಿಳಿಯುತ್ತಿದೆ" ಎಂದುತ್ತರವಿತ್ತಳು [illegible] "ಬೇಟೀ ಹೋಗಿ ಮಲಗಿಕೋ" ಆಕೆ ಮಗಳನ್ನು [illegible]ಗಡೆ ಮಾಡಿದಳು. ಎಣ್ಣೆ ಬಟ್ಟಲು ಎತ್ತಿಟ್ಟು ರೂಮಿನ ತನ್ನ ಹಾಸಿಗೆಗೆ ಬಂದಳು. ಬಶೀರ್ [illegible] ಹುಸಿ ಮಾತು ಇನ್ನೂ ನಡೆಯುತ್ತಿರುವಾಗಲೇ ಆಕೆ ನಿದ್ದೆ ಆವರಿಸಿತು. ಮರು ಸಲ ಅವರು [illegible] ಹೋದ ನಂತರ ಆಕೆ ಯಾಂತ್ರಿಕವಾಗಿ ಅವನ ಬಳಿ ಹೋದಳು, ಕೊರಳ ಹಗ್ಗದ [illegible]

ಆಕೆಗೆ ಲಕ್ಷ್ಯ ದಕ್ಕಿ ಬಂದಿತು. ಆಡು ಮತ್ತೆ ತಾಯಿಯಾಗಲಿದೆಯೆಂದು. ಆಕೆ ಮೆಲ್ಲನೆ ಅದರ ಬೆನ್ನು ಸವರಿದಳು. ಹೊಟ್ಟೆ ಸವರಿದಳು. ಮರಿ ಗಂಡೇ ಇರಲಿ, ಹೆಣ್ಣೇ ಇರಲಿ. ಆರೆಂಟು ತಿಂಗಳಿಗಿಂತ ಹೆಚ್ಚು ಜುಬೇದಾ ಅದನ್ನು ಇಟ್ಟುಕೊಳ್ಳುತ್ತಿರಲಿಲ್ಲ. ಹೀಗಾಗಿ ತಾಯಿ ಆಡು ಒಂದೇ ಉಳಿದಿತ್ತು. ರೋಶನ್ ಕೊರಳ ಹತ್ತಿರ ತುರುಸಿದಂತೆ ಅದು ಸಮಾಧಾನದಿಂದ ಮನೆಯೊಳಕ್ಕೆ ಕಾಲು ಹಾಕಿತು. ತನ್ನ ಜಾಗಕ್ಕೆ ಹೋಗಿ ಮಲಗಿತು. ರೋಶನ್ ತನ್ನ ಹಾಸಿಗೆ ಹಾಕಿಕೊಂಡಳು. ಇನ್ನೇನು ಬಾಗಿಲು ಇಕ್ಕಿಕೊಂಡು ದೀಪ ಸಣ್ಣದು ಮಾಡಿ ಮಲಗಿಕೊಳ್ಳಬೇಕು. ಆದರೆ ನಿದ್ದೆ ಬಂದಂತಿರಲಿಲ್ಲ. ಇಷ್ಟು ಬೇಗ ಮಲಗಿ ಏನಾಗಬೇಕಾಗಿದೆ? ಆಕೆ ಬಾಗಿಲ ಹತ್ತಿರ ಕುಳಿತಳು. ದೌಲತ್ ಬರಲಾರನೇ? ಎಂದು ಮನಸ್ಸು ಕಾತರಿಸಿತು. ಒಂದೆರಡು ಸಲ ಆಕೆ ಎದ್ದುನಿಂತು ಕಣ್ಣಿಗೆಟಕುವಷ್ಟು ದೂರ ನೋಡಿದಳು. ಕಚೇರಿಯಲ್ಲಿಯ ತಾಸು ಹತ್ತು ಬಾರಿಸಿದಾಗ ಆಕೆ ಬೇಸತ್ತು ಬಾಗಿಲು ಇಕ್ಕಿಕೊಂಡಳು. 'ದೌಲತ್‌ನೊಂದಿಗೆ ಮಾತು ಕೂಡ ಆಡಬಾರದು' ಎಂದುಕೊಳ್ಳುತ್ತಲೇ.

ಮರು ವಾರ ಬಶೀರ–ಜುಬೇದಾ ಪಿಕ್ಚರಿಗೆ ಹೋದಾಗ ಮಾತ್ರ ದೌಲತ್ ಹೇಳಿ ಕಳಿಸಿದವರಂತೆ ಬಂದ. "ಬಶೀರ್‌ಭಾಯ್ ಇಲ್ಲವೇನು?" ಆತ ಕಲ್ಲ ಮೇಲೆ ಕೂಡ್ರುತ್ತ ಕೇಳಿದ.

"ಇಲ್ಲ" ಸಂಭ್ರಮಗೊಂಡವರಂತೆ ರೋಶನ್ ಹೇಳಿದಳು. "ಚಾಚೀ?" "ಆಕೆಯೂ ಇಲ್ಲ" "ಎಲ್ಲಿ ಹೋಗಿದ್ದಾರೆ?" "ಸಿನೇಮಾಕ್ಕೆ" "ಯಾವುದು?" "ಗೊತ್ತಿಲ್ಲ".

"ನಿನ್ನನ್ನು ಕರೆದುಕೊಂಡು ಹೋಗುವುದಿಲ್ಲವೇ?" ಆತ ಆಕೆಯ ಮೇಲೆ ಮೋರೆ ನಿಟ್ಟಿಸಿದ. ಆಕೆ "ಪಚ್" ಮಾಡಿದಳು. "ನನಗೇನು ತಿಳಿಯುತ್ತದೆ?" ದೌಲತ್ ಮನಸಾರೆ ನಕ್ಕ. "ಅದರಲ್ಲಿ ತಿಳಿಯುವುದೇನಿದೆ? ನೀವು ಮನೆಯಲ್ಲಿ ಹೇಗೂ ಉರ್ದು ಮಾತನಾಡುತ್ತೀರಿ. ಹಿಂದಿ ತಿಳಿಯುವುದು ಸುಲಭ."

"ಹಾಗೆ ನಾನು ಒಂದೆರಡು ನೋಡಿದೇನೆ" ಆಕೆ ಹಳೆಯದನ್ನು ನೆನೆಸಿಕೊಂಡಂತೆ ಹೇಳಿದಳು.

"ಎಪ್ರಿಲ್ ಫೂಲ್ ನೋಡಿದ್ದೀಯೇನು?" ಅವನ ಪ್ರಶ್ನೆ.

ಆಕೆ ಮತ್ತೆ "ಪಚ್" ಮಾಡಿದಳು.

"ನಾನು ನಿನಗೆ ಅದರ ಕತೆ ಹೇಳುತ್ತೇನೆ" ದೌಲತ್ ಅರ್ಧ ಗಂಟೆಯ ವರೆಗೆ ಕತೆ ಹೇಳಿದ. ನಡು ನಡುವೆ ಅಭಿನಯ ಮಾಡಿದಂತೆ ಮಾಡಿದ. ರೋಶನ್‌ಗೆ ಮೋಜೆನಿಸಿತು.

ತಾಸು ಹತ್ತು ಬಾರಿಸಿದಾಗ ದೌಲತ್ ಎದ್ದ. "ಇನ್ನು ಹೋಗಿ ಮಲಗಬೇಕು." ಮನಸ್ಸಿಲ್ಲದ ಮನಸಿನಿಂದ ರೋಶನ್ ಎದ್ದು ಬಾಗಿಲು ಇಕ್ಕಿಕೊಂಡಳು. ಅರೆನಿದ್ದೆಯಲ್ಲಿ ಅವಳ ಮನಸ್ಸು ಏನೇನೋ ಯೋಚಿಸುತ್ತಿತ್ತು. ದೌಲತ್ ತನ್ನ ಕೈ ಹಿಡಿದ ಹಾಗೆ, ತಾವಿಬ್ಬರೂ ಸಿನೇಮಾಕ್ಕೆ ಹೋದ ಹಾಗೆ—ಇನ್ನೂ ಏನೇನೋ.

ಬಶೀರ್ ಇರಲಿ, ಬಿಡಲಿ, ದೌಲತ್ ಎರಡು ಮೂರು ದಿನಕ್ಕೊಮ್ಮೆ ರಾತ್ರಿ ಹರಟೆಗೆ ಬರುವುದು ನಿಲ್ಲಿಸಲಿಲ್ಲ. ಅವರಿಬ್ಬರೂ ಸಿನೇಮಾಕ್ಕೆ ಹೋದಾಗ ರೋಶನ್‌ಳೊಂದಿಗೆ ಮಾತು ಬೆಳೆಸುತ್ತಿದ್ದ. ಒಮ್ಮೆಯಂತೂ "ಅವರು ಅತ್ತ ಸಿನೇಮಾಕ್ಕೆ ಹೋಗಿದ್ದಾರೆ. ನಾವಿಬ್ಬರೂ ಮತ್ತೊಂದು ಸಿನೇಮಾಕ್ಕೇ ಹೋಗಬಾರದು?" ಎಂದು ಆಕೆಯ ಕೈ ಹಿಡಿದ. ರೋಶನ್‌ಳ ಮೈ ಜುಮ್ಮೆಂದಿತು. ಆಕೆ ಕೈ ಬಿಡಿಸಿಕೊಳ್ಳಲಿಲ್ಲ. ಅವಳಿಗೆ ಬಶೀರನ ನೆನಪಾಯಿತು. ಅವರೂ ಹೀಗೆಯೇ ತಾಯಿಯ ಕೈ ಹಿಡಿಯುತ್ತಾರೆ ತಾನು ಕಾಲೊತ್ತುವಾಗ

"ಹೋಗೋಣವೇ?" ಆತ ಆಕೆಯ ಬೆವರು ತುಂಬಿದ ಮೋರೆ ನಿಟ್ಟಿಸಿದ. ಆಕೆ "ಚಕ್" ಮಾಡಿದಳು.

"ಯಾರಾದರೂ ನೋಡಿಯಾರು. ಒಳಗೆ ಬಾ." ಆಕೆ ಡವಡವಿಸುವ ಹೃದಯದಿಂದ ಹೇಳಿದಳು. ದೌಲತ್ ಒಳಗೆ ಬಂದಾಗ ಆಕೆ ಬಾಗಿಲು ಮುಂದೆ ಮಾಡಿದಳು.

* * * *

ಅದೇನು ಹೆದರಿಕೆಯೆನಿಸಿತೋ, ದೌಲತ್ ಬಶೀರನನ್ನು ತಪ್ಪಿಸತೊಡಗಿದ. ಅವನಿದ್ದಾಗ ಆತ ಬರುವುದನ್ನು ನಿಲ್ಲಿಸಿದ. ಜುಬೇದಾ ಇದ್ದಾಗ ಯಾವಾಗಾದರೊಮ್ಮೆ ಬರತೊಡಗಿದ. ಆದರೆ ಅವರು ಸಿನೇಮಾಕ್ಕೆ ಹೋದಾಗ ಮಾತ್ರ ಬಂದೇ ತೀರುತ್ತಿದ್ದ. ಅಕಸ್ಮಾತ್ತಾಗಿ ಟಿಕೀಟು ದೊರೆಯದೆ ಅವರು ಮರಳಿ ಬಂದರೆ ಎನ್ನುವ ಆತಂಕದಿಂದ ಹತ್ತು ಹೊಡೆಯುವ ವರೆಗೆ ಬಾಗಿಲ ಹೊರಗೇ ಕಾದು ಮಾತನಾಡುತ್ತಿದ್ದ. ನಂತರ ಮಾತ್ರ ಅವನಿಗೆ ತಡೆಯಲಾಗುತ್ತಿರಲಿಲ್ಲ.

ಅಂದು ರಾತ್ರಿ ಇನ್ನೂ ಹತ್ತೂವರೆ ಕೂಡ ಆಗಿರಲಿಲ್ಲ. ಹೊರಗೆ ಬಾಗಿಲು ಬಾರಿಸಿತು. ಒಳಗಿದ್ದ ದೌಲತ್ ಸಿಡಿದು ದೂರ ನಿಂತ. "ಯ್‌ಯ್ಯಾsರು?" ರೋಶನ್‌ಳ ಹರಕು ದನಿಯಲ್ಲಿ ಅಳುಕು ತುಂಬಿತ್ತು. ಯಾರು ಬಂದಿರಬಹುದೆಂಬುದು ಆಕೆಗೆ ತಿಳಿದಿತ್ತು. ಆದರೆ ಮಾಡಬೇಕೇನು? ಅವಸರವಸರದಿಂದ ಆಕೆ ಕಮೀಜ್ ಹಾಕಿಕೊಂಡಳು. ಸಲವಾರದ ನಾಡಿ ಕಟ್ಟಿಕೊಂಡಳು. ಬಾಗಿಲು ಮತ್ತೆ ಬಾರಿಸಿತು. "ಅಗೇ ರೋಶನ್" ಜುಬೇದಾಳ ದನಿ! ಏನು ಮಾಡಬೇಕೆಂಬುದು ಆಕೆಗೆ ತಿಳಿಯಲಿಲ್ಲ. ಮಿಕಮಿಕನೆ ಆಕೆ ದೌಲತ್‌ನ ಮೋರೆ ನೋಡಿದಳು. ಅವನಿಗೆ ಏನು ಹೊಳೆಯಿತೋ? ಕಂದೀಲಿನ ಗಾಜೆತ್ತಿ ಉಫ್ ಎಂದು ಊದಿದ. ಕತ್ತಲೆ ನಾನೆಂದಾಗ ಮೆಲ್ಲನೆ ಬಾಗಿಲು ಕೊಂಡಿ ಕಳಚಿ ಬಾಣದಂತೆ ನುಸುಳಿದ. ಹೊರಗೂ ಬೀದಿ ದೀಪಗಳಿಲ್ಲದೆ ಕತ್ತಲೆ ದಟ್ಟಾಗಿತ್ತು. "ಯಾರು? ಯಾರು ಓಡಿದವರು?" ಜುಬೇದಾ ಕೂಗಲೆತ್ನಿಸಿದಳು. ಅತ್ತಿತ್ತ ನೋಡುತ್ತ ನಿಂತಿದ್ದ ಬಶೀರನಿಗೆ ಏನಾಯಿತೆಂಬುದು ತಿಳಿಯಲೇ ಇಲ್ಲ.

"ರೋಶನ್" ಜುಬೇದಾ ಮತ್ತೆ ಕೂಗಿದಳು. "ಹಾಂ, ಅಮ್ಮಾ ಬಾಗಿಲು ತೆಗೆದಿದೆ."

"ದೀಪ ಎಲ್ಲಿದೆ?" ಜುಬೇದಾ ಅತ್ತಿತ್ತ ನೋಡುತ್ತ ಹೊಸ್ತಿಲೊಳಗೆ ಕಾಲು ಹಾಕಿದಳು. "ನೀವೂ ಬನ್ನಿರಲ್ಲ" ಆಕೆ ಗಂಡನನ್ನು ಆಹ್ವಾನಿಸಿದಳು.

"ದೀಪ ಗಾಳಿಗೆ ಆರಿ ಹೋಗಿರಬಹುದು." ರೋಶನ್ ಕಡ್ಡಿಪೊಟ್ಟಣಕ್ಕಾಗಿ ತಡಕಾಡತೊಡಗಿದಳು. ದೌಲತ್‌ನ ಉಪಾಯ ನಿಜಕ್ಕೂ ಅವಳಿಗೆ ಮೆಚ್ಚಿಗೆಯಾಗಿತ್ತು. ಅವಳ ಮನಸ್ಸಿನ್ನೂ ಅದನ್ನೇ ನೆನೆಸಿಕೊಳ್ಳುತ್ತಿತ್ತು. ಖೊರ್ರೆಂದು ಜುಬೇದಾ ಕಡ್ಡಿ ಕೊರೆದಳು. ಪೊಟ್ಟಣ ಶೋಧಿಸಿ ಅದರ ಬೆಳಕಿನಲ್ಲಿ ಕಂದೀಲು ಕಂಡಿತು. ಇನ್ನೊಂದು ಕಡಿ ಕೊರೆದು ಆಕೆ ಕಂದೀಲು ಹಚ್ಚಿದಳು. ಇಷ್ಟು ಹೊತ್ತು ಬಾಗಿಲ ಹೊರಗೆ ಕಾದಿದ್ದ ಬಶೀರ್ ಒಳಗೆ ಬಂದ.

"ಯಾರು ಹೊರಗೆ ಹೋದರು?" ಜುಬೇದಾ ಸಂಶಯದಿಂದ ಮಗಳ ಕೈ ಹಿಡಿದು ಕೇಳಿದಳು.

"ನನಗೆ...ನನಗೆ ಗೊತ್ತಿಲ್ಲ" ಭೀತಿಯಿಂದ ರೋಶನ್‌ಳ ಮೈ ಕಂಪಿಸಿತು.

"ನೀವು ನೋಡಲಿಲ್ಲವೇನು. ಈಗ ಯಾರೋ ಹೋದರು?" ಜುಬೇದಾ ಗಂಡನತ್ತ ತಿರುಗಿದಳು. ಆತ ಪಾಯಿಜಾಮ ಕಳೆದು ಗೂಟಕ್ಕೆ ಹಾಕುತ್ತಿದ್ದವ "ನಾನು ನೋಡಲಿಲ್ಲ" ಎಂದ.

"ನೀವು ಹೀಗೆಯೇ" ಎಂದಿಲ್ಲದೆ ಆಕೆ ಬಶೀರನ ಮೇಲೂ ಹರಿಹಾಯ್ದಳು. ರೋಶನ್ ಅವರಿಬ್ಬರಿಗಾಗಿ ಹಾಸಿಗೆ ಹಾಕುತ್ತಿದ್ದಂತೆ ಜುಬೇದಾ ಅವಳ ಮುಂಗೈ ಹಿಡಿದು ಕೇಳಿದಳು "ನಿಜ ಹೇಳು. ಯಾರು ಹೋದರು?"

ಮಗಳ ಗಂಟಲು ಒಣಗಿತ್ತು. ಮಾತು ಬರಲಿಲ್ಲ. ಬಾಗಿಲು ಇಕ್ಕುತ್ತಿದ್ದಂತೆ ಜುಬೇದಾ ಅತ್ತಿತ್ತ ನೋಡಿದಳು. "ಈ ಚಪ್ಪಲಿ ಯಾರವು?" ಆಕೆ ಕಣ್ಣು ಕಿಸಿರಿ ಕೇಳಿದಳು.

"ಆಂ?" ಎಂದು ಅಡ್ಡಾದ ಬಶೀರ್ ಎದ್ದು ಬಂದು ನೋಡಿದ.-

"ಊಂ ಹೂಂ, ನನಗೆ ಗೊತ್ತಿಲ್ಲ. ಯಾರಾದರೂ ಬಂದವರು ಮರೆತು ಹೋಗಿರಬಹುದು" ಆತ ಅಲಕ್ಷ್ಯದಿಂದ ಹೇಳಿದ.

"ನೀವಂತೂ ಹೀಗೆಯೇ– ದೊಡ್ಡವರ ಆಕಾರದ ಟೈರ್ ಬಡಿಸಿದ ಚಪ್ಪಲಿಗಳು. ದೊಡ್ಡವರಾದವರು ಚಪ್ಪಲಿ ಮರೆತು ಹೋಗುತ್ತಾರೆಯೇ?" ಜುಬೇದಾ ಮಗಳ ಕಡೆಗೆ ತಿರುಗಿದಳು "ಏನೇ ಗಯ್ಯಾಳೀ, ಸರಳ ಮಾತಿನಿಂದ ಹೇಳುತ್ತಿಯೋ ಇಲ್ಲವೋ?"

ರೋಶನ್‌ಳಿಗೆ ಜೋರಾಗಿ ಅಳು ಬಂದಿತು. ಆಕೆ ಕುಳಿತಲ್ಲೇ ದನಿ ತೆಗೆದಳು. ಜುಬೇದಾಗೆ ಕಾರಣವಿಲ್ಲದ ಅಳುವಿನಿಂದ ಇನ್ನಷ್ಟು ರೇಗಿತು. ಆಕೆ ಅತ್ತಿತ್ತ ನೋಡಿ ಸೌದೆ ಕಟ್ಟಿಗೆ ಎತ್ತಿಕೊಂಡಳು.

"ಅಮ್ಮಾ, ಬೇಡ" ರೋಶನ್ ದನಿಯೇರಿಸಿದಳು. "ಹಾಗಾದರೆ ಯಾರು ಬಂದಿದ್ದರು ಹೇಳು" ಆಕೆ ಮಗಳ ಬೆನ್ನಿಗೊಂದು ಬಾರಿಸಿದಳು. ರೋಶನ್ ಏರುದನಿಯಲ್ಲಿ ಅಳತೊಡಗಿದಳು.

ಊರಲ್ಲಿಯ ವಿದ್ಯುತ್ ಪೂರೈಕೆ ಅಕಸ್ಮಾತ್ತಾಗಿ ನಿಂತುಹೋಗಿ ಸಿನೇಮಾ ಬಂದಾದುದೂ, ಜನ ಜಗಳವಾಡಿದರೂ ಥಿಯೇಟರಿನವರು ಹಣ ವಾಪಸುಮಾಡಲು ನಿರಾಕರಿಸಿದುದೂ ಬಶೀರ್‌ನಿಗೆ ಸಾಕಷ್ಟು ತಲೆ ನೋವು ತಂದಿತ್ತು. ಅದರಲ್ಲಿ ಮನೆಗೆ ಬಂದೊಡನೆ ಈ ರಾದ್ಧಾಂತ. ಎಂದಿಲ್ಲದ ಹೆಂಡತಿಯ ಬಿರುಸು ಮಾತುಗಳು. ಅದು ಸಾಕಾಗಲಿಲ್ಲವೆಂಬಂತೆ ಈ ಹುಡುಗಿಯ ಏರುದನಿಯಲ್ಲಿಯ ರೋದನ. ಅವನು ಸಿಡಿಮಿನಿಂದಲೇ ಎದ್ದ. "ಏ ಚಿನಾಲೀ, ಬಾಯಿ ಬಿಟ್ಟು ಹೇಳು" ಆಕೆಯನ್ನು ಜೋರಾಗಿ ಒದ್ದ. "ನಮ್ಮ ಮನೆಯಲ್ಲಿ ಇವು ಯಾರ ಚಪ್ಪಲಿ? ಮನೆಗೆ ನಾವಿದ್ದಾಗ ಯಾರೂ ಬಂದಿರಲಿಲ್ಲ."

ರೋಶನ್ "ಅಮ್ಮಾಗೇ" ಎಂದು ಚೀರಿದಳು ಆ ಒದೆತಕ್ಕೆ. "ನೋಡಿರಿ ನೀವು ಒದ್ದರೂ ಆಕೆ ಹೇಳುತ್ತಾಳೇನು?" ಜುಬೇದಾ ಚೀರುದನಿಯಲ್ಲಿ ಹೇಳಿದಳು. ಬಶೀರ್‌ನ ಕೋಪ ಇನ್ನಷ್ಟು ಉಕ್ಕಿತು. ಹೆಂಡತಿಯ ಕೈಯಲ್ಲಿಯ ಕಟ್ಟಿಗೆ ಕಸಿದುಕೊಂಡು ಆತ ತನ್ನ ಮಲಮಗಳನ್ನು ಚೆನ್ನಾಗಿ ಥಳಿಸಿದ.

"ಚುಪ್. ಬಾಯಿ ಬಿಟ್ಟರೆ, ಬಾಯಿ ಮೇಲೆಯೇ ಒಂದು ಕೊಟ್ಟೇನು–" ರೋಶನ್ ತುಟಿ ಬಿಗಿದುಕೊಂಡಳು.

"ಹೇಳುತ್ತಿಯೋ ಇಲ್ಲವೋ?" ಆತ ಮತ್ತೆ ರಪರಪನೆ ಹೊಡೆದ. "ನೀನು ಹೇಳುವವರೆಗೆ ನಾನು ಬಿಡುವವನಲ್ಲ. ನಿನ್ನ ತಲೆ ಒಡೆದುಬಿಡುತ್ತೇನೆ. ಹಾದರಗಿತ್ತೀ".

"ಹೇಳುತ್ತೇನೆ ಹೇಳುತ್ತೇನ್" ಮೈ ಕೈ ಹಣ್ಣಾಗಿ ನೋವು ತಾಳಲಾರದೆ ರೋಶನ್ ಬಶೀರ್‌ನ ಕಾಲು

ಹಿಡಿದಳು. "ಆದರೆ, ಅವನನು ಹೊಡೆಯಲು ಹೋಗ ಬೇಡಿರಿ."

"ಅದನ್ನು ನಾನು ನೋಡಿಕೊಳ್ಳುತ್ತೇನೆ" ಬಶೀರನ ಕಾವು ಇನ್ನೂ ಆರಿರಲಿಲ್ಲ.

"ಹೇಳು ಹೇಳು. ನಾವು ಅವನ ಗೋಜಿಗೆ ಈಗಂತೂ ಹೋಗುವುದಿಲ್ಲ" ಜುಬೇದಾ ಹೇಳಿದಳು.

ರೋಶನ್ ಕೊನೆಗೆ ಬಾಯಿಬಿಟ್ಟಳು. ಬಶೀರ್‌ನಿಗೆ ಏನು ಮಾಡಬೇಕೆಂಬುದು ತಿಳಿಯಲಿಲ್ಲ. ಆತ ಹೆಂಡತಿಯ ಮೋರೆ ನೋಡಿದ. ಈಗ ಮಾತ್ರ ಜುಬೇದಾಳ ಮೈಯಲ್ಲಿ ಆವೇಶ ತುಂಬಿತು. ಆಕೆ ಗಂಡನ ಕೆರವು ಎತ್ತಿ ಮಗಳನ್ನು ಕೈಗೆ ಬಂದಂತೆ ಹೊಡೆದಳು. ತೋಳು, ಮುಂಗೈ, ತೊಡೆ, ಬೆನ್ನು, ತಲೆ, ಕಿವಿ, ಸಿಕ್ಕಲ್ಲಿ. ಮೂಕಳಂತೆ ರೋಶನ್ ಎಲ್ಲ ಸಹಿಸಿದಳು. ಸಹನೆ ಮೀರಿದಾಗ ಹಲ್ಲು ಕಚ್ಚಿ ನರಳಿದಳು. ಸಿಟ್ಟು ಇಳಿದಂತೆ ಜುಬೇದಾ ಕೆರವು ಮೂಲೆಗೆ ಬೀಸಿ ಗಂಡನ ಬದಿ ಬಿದ್ದಳು ಅಳುತ್ತ. ಆತ ಅವಳ ಬೆನ್ನ ಮೇಲೆ ಕೈಯಾಡಿಸಿ ಸಮಾಧಾನದ ಮಾತು ಹೇಳುತ್ತಿದ್ದುದ್ದು ರೋಶನ್‌ಳ ಕಣ್ಣಿಗೆ ಬಿದ್ದರೂ ಅವಳಿಗೆ ಅದರ ಅರ್ಥವಾದಂತಿರಲಿಲ್ಲ. ಶರೀರದಂತೆಯೇ ಅವಳ ಮನಸ್ಸೂ ಬಧಿರವಾಗಿತ್ತು.

* * * *

ಮೈಕೈ ನೋವು ಇಳಿಯಲು ಮುಂದೆ ನಾಲ್ಕಾರು ದಿನ ಬೇಕಾದವು. ಆದರೆ ರೋಶನ್‌ಳ ಮನಸ್ಸಿಗಾದ ಗಾಯ? ಆಕೆ ಯಾವುದನ್ನೂ ಕಣ್ಣೆತ್ತಿ ನೋಡುವುದನ್ನೇ ಬಿಟ್ಟಳು. ಮಾತೂ ಕಡಿಮೆಯಾಯಿತು. ಯಾಂತ್ರಿಕವಾಗಿ ಹೇಳಿದಷ್ಟು ಕೆಲಸ ಮಾಡಬೇಕು. ಅದರಲ್ಲೂ, ಬಿಡುವಾದರೆ ಮಂಕು ಬಡಿದವರಂತೆ ಆಕೆ ಧೇನಿಸುತ್ತಾ ಕುಳಿತುಕೊಳ್ಳಬೇಕು. ಸಿನೇಮಾಕ್ಕೆ ಹೇಗೆ ಹೋಗಬೇಕೆಂಬುದು ಪೇಚಾಗಿ ಮುಂದೆ ಐದಾರು ವಾರ ಜುಬೇದಾ ಬಶೀರ್ ಅದರ ವಿಚಾರವನ್ನೇ ಮಾಡಲಿಲ್ಲ. ದೌಲತ್‌ನಂತೂ ಆ ಕಡೆ ಹಾಯಲಿಲ್ಲ. ಬೀಡಿಕಾರಖಾನೆಗೆ ಹೋಗ ಬೇಕಾದಾಗ ಅವಳೊಬ್ಬಳನ್ನೇ ಬಿಟ್ಟು ಹೋಗಲು ಧೈರ್ಯವಾಗದೇ ಜುಬೇದಾ ತನ್ನೊಡನೆ ಕರೆದುಕೊಂಡೇ ಹೋಗತೊಡಗಿದಳು.

"ಇಷ್ಟು ದೊಡ್ಡವಳಾದೆ. ಕೆಲಸವಿಲ್ಲದೆಯೆ ಹೇಗೆ ಕೂಡುತ್ತೀ?" ಎಂದಳೊಮ್ಮೆ ಜುಬೇದಾ ಮಗಳಿಗೆ.

"ಏನು ಮಾಡಲಿ ಅಮ್ಮಾ? ನೀನು ಕೆಲಸ ಹೇಳು" ವಿರಳಿತವಿಲ್ಲದ ದನಿಯಲ್ಲಿ ರೋಶನ್ ಉತ್ತರವಿತ್ತಳು. ತಾಯಿಗೂ ಯೋಚನೆಯಾಯಿತು "ಅದೇಕೆ? ನಾನು ಬೀಡಿ ಕಟ್ಟುತ್ತೇನೆ: ನೋಡುತ್ತೀಯಲ್ಲ? ನಿನಗೇನಾಗಿದೆ ಧಾಡಿ? ನೀನೂ ಕಟ್ಟಬಹುದು."

ಅಂದು ಅವಳು ಮಗಳಿಗೆ ಎಲೆ ಕತ್ತರಿಸುವುದನ್ನು ತಿಳಿಸಿಕೊಟ್ಟಳು. ಮುಂದೆರಡು ದಿನಗಳಾದ ಮೇಲೆ ತಂಬಾಕು ತುಂಬಿಸುತ್ತುವುದನ್ನೂ, ಕಬ್ಬಿಣ ಮೊಳೆಯಿಂದ ಚುಚ್ಚಿ ಬೀಡಿ ಸಿದ್ಧಪಡಿಸುವುದನ್ನೂ ಕಲಿಸಿದಳು. ರೋಶನ್ ವಾರದಲ್ಲಿ ಅದನ್ನೆಲ್ಲ ಕಲಿತಳು. ಅದೂ ಯಾಂತ್ರಿಕವಾಯಿತು. ಪಟಪಟನೆ ಬೀಡಿ ಕಟ್ಟುತ್ತ ಮನಸ್ಸು ಅದನ್ನೇ ಅದನ್ನೇ ಯೋಚಿಸುತ್ತಿತ್ತು. ಕಣ್ಣು ನೀರಿಡುತ್ತಿತ್ತು.

ತಾಯಿ–ಮಲತಂದೆ ಮನೆಯಲ್ಲಿ ತನ್ನಿರವನ್ನು ಅಲಕ್ಷಿಸಿ ಶೃಂಗಾರ ಮಾಡಿದರೆ ನಡೆಯುತ್ತದೆ. ತಾನು ಮಾಡಿದರೆ ಅದು ಬಾ– ಕಾಯದಾ! ಅದಕ್ಕೆ ಶಿಕ್ಷೆಯೆಂದರೆ ಜನ್ಮದಲ್ಲಿ ನೆನಪಿಡುವಂತಹದು.. ಅಲ್ಲಾಹ್ ಇವರನ್ನು ಕ್ಷಮಿಸಿಯಾನೇ? ತಾನೇನು ಚಿಕ್ಕವಳೇ, ತನಗೂ ಭಾವನೆಗಳಿಲ್ಲವೇ? ಮಲತಂದೆ ತಾಯಿಯು ತುಹರ್ (ಎರಡು ಮುಟ್ಟುಗಳ ನಡುವಿನ ಶುದ್ಧಕಾಲ) ಕೂಡ ನೋಡುವುದಿಲ್ಲ.ತನಗಿಂತ ಮನೆಯಲ್ಲಿಯ ಆಡು ಒಳ್ಳೆಯದು...



ಪ್ರತಿವರ್ಷ ರಜಬ್ ತಿಂಗಳಿನಲ್ಲಿ ಮಿರಜೆಯಲ್ಲಿ ಉರುಸಾಗುತ್ತದೆ. ಆದಕ್ಕೆ ಎಲ್ಲೆಲ್ಲಿಂದ ಜನ ಬರುತ್ತಾರೆ. ಎಷ್ಟೋ ಜನ ಭಕ್ತರು ಕಿಚ್ಚಿನಲ್ಲಿ ಹಾಯುತ್ತಾರೆ. ಮೂರು ದಿನಗಳ ಆ ಉತ್ಸವದಲ್ಲಿ ಹಿಂದೆ ಅಬ್ದುಲ್ ಕರೀಮ್‌ಖಾನ್ ಅವರು ಸಂಗೀತಸೇವೆ ಸಲ್ಲಿಸುತ್ತಿದ್ದರು. ಈಗ ಅವರ ಶಿಷ್ಯರೂ ಒಂದು ರಾತ್ರಿ ಸಂಗೀತ ಕಚೇರಿ ಮಾಡುತ್ತಾರೆ, ಜಾತಿಭೇದ ಎಣಿಸದೆ.

ಉರುಸು ನಿಮಿತ್ತವಾಗಿ ಹೊಸ ಬಟ್ಟೆ ಕೊಟ್ಟು ರೋಶನ್ ತಾಯಿಯೊಡನೆ ಅಂಗಡಿಗಳ ಗದ್ದಲದಲ್ಲಿ, ಜನಸಂದಣಿಯಲ್ಲಿ ತಿರುಗುತ್ತಿದ್ದಾಗ ದೌಲತ್ ಆಕಸ್ಮಾತ್ತಾಗಿ ಕಂಡ. ಆಕೆಯ ಹೃದಯ ಮತ್ತೆ ಸ್ಪಂದಿಸಿತು. ಅವನೂ ಆಕೆಯನ್ನು ನೋಡಿ ಕೆಲ ಅಂತರ ಹಾಗೇ ಗದ್ದಲದಲ್ಲಿ, ನೂಕುನುಗ್ಗಲಾಟದಲ್ಲಿ ನಡೆದ. ಆಕೆ ಹಿಂತಿರುಗಿ ನೋಡುತ್ತಿದ್ದಂತೆ ಆತ ಸನ್ನೆ ಮಾಡಿದ. ಆಕೆ ಮೆಲ್ಲನೆ ತಾಯಿಯ ಕೈ ಬಿಟ್ಟಳು. ಅವರಿಬ್ಬರೂ ಬೇರೆಯಾದರು.

ದೌಲತ್ ಮೆಲ್ಲನೆ ರೋಶನ್‌ಳ ಬಳಿಸಾರಿದ. ಇಬ್ಬರೂ ಕೂಡಿ ದೂರದೂರದಿಂದಲೇ ಅನ್ನುವಂತೆ ಮಾರ್ಕೆಟು ದಾಟಿದರು. ಪೋಸ್ಟ ಆಫೀಸ್ ದಾಟಿದರು. ಅಲ್ಲಿ ಗದ್ದಲ ಕಡಿಮೆಯಾಗಿತ್ತು.

"ಅಂದು ಬಹಳ ಹೊಡೆದರಂತೆ ನಿನ್ನನ್ನು?" ಆತ ಪ್ರೇಮ ತುಂಬಿದ ದನಿಯಲ್ಲಿ ಕೇಳಿದ. ರೋಶನ್ - ಹೌದೆಂಬಂತೆ ಗೋಣು ಹಾಕಿದಳು. "ನನಗಾದರೂ ಹೇಗೆ ತಿಳಿಯಬೇಕು, ಅವರು ಬರುತ್ತಾರೆನ್ನುವುದು?" ಆತ ಅಪರಾಧಿಯ ಸ್ವರದಲ್ಲಿ ಹೇಳಿದ.

ಆಕೆ ಚಕ್ ಮಾಡಿದಳು. "ನಿನಗಾದರೂ ಹೇಗೆ ತಿಳಿಯಬೇಕು? ನಿನ್ನದೇನೂ ತಪ್ಪಿಲ್ಲ."

"ನನ್ನದಾದರೂ ಏನು ತಪ್ಪು?" ಆತನ ಮರು ಸವಾಲಿಗೆ ಅವಳೆಡೆ ಉತ್ತರವಿರಲಿಲ್ಲ. ಹೌದು, ತನ್ನದಾದರೂ ಏನು ತಪ್ಪು, ತನ್ನನ್ನು ಅವರು ಹೀಗೆ ಶಿಕ್ಷಿಸಲು?

"ನಿನ್ನದೂ ತಪ್ಪಿಲ್ಲ" ದೌಲತ್ ತಾನಾಗಿ ಹೇಳಿದ.

"ಹಾಗಾದರೆ ನನ್ನನ್ನು ಹಾಗೇಕೆ ಶಿಕ್ಷಿಸಿದರು?" ಅವಳು ತನ್ನ ಮನಸ್ಸಿಗೇ ಎಂಬಂತೆ ಕೇಳಿಕೊಂಡಳು ಮೆಲುದನಿಯಲ್ಲಿ. ಅವನು ಮೌನದಿಂದ ಹೆಜ್ಜೆ ಹಾಕಿದಾಗ



ಆಕೆ ಅಳತೊಡಗಿದಳು. "ನನ್ನ ತಪ್ಪು ಇಷ್ಟೇ. ನಾನು ಅವನ ಅಲ್ಲ, ಅಮ್ಮಾನ ಮಗಳಾಗಿ ಹುಟ್ಟಿದೆ. ಅಮ್ಮ ಅವರೊಡನೆ ನಿಕಾ ಮಾಡಿಕೊಂಡಳು. ಇದೇ ನನ್ನ ತಪ್ಪು" ಮಾತಿನೊಡನೆ ಅಳುವೂ ಬಂತು.

"ಅಳಬೇಡ, ರೋಶನ್. ಅಳುವುದರಿಂದ ಯಾವುದೂ ಬಗೆಹರಿಯುವುದಿಲ್ಲ. ಏನಾದರೂ ಉಪಾಯ ಯೋಚಿಸು." ಹಾಗೆಯೇ ಅವರು ಕಾಲು ಹಾಕಿದರು.

"ಚಾಚಿ ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲವೆಯಂತೆ ಕಾಣುತ್ತದೆ."

"ಹಾಂ. ಬೀಡೀ ಕಾರಖಾನೆಗೂ ನನ್ನನ್ನು ಎಳೆದುಕೊಂಡು ಹೋಗುತ್ತಾಳೆ. ಅಲ್ಲಿ ನಂಬರು ಹಚ್ಚಿ ಆ ತಂಬಾಕಿನ ಘಾಟು ಕುಡಿಯುತ್ತ ಕೂಡ್ರಬೇಕು. ಕಟ್ಟು ಎನಿಸಿಕೊಂಡು ಬಾಬೂಲಾಲ್ ತಂಬಾಕು, ಎಲೆ ತೂಗಿ ಬುಟ್ಟಿಯಲ್ಲಿ ಹಾಕಿದ ಬಳಿಕವೇ ಬಿಡುಗಡೆ." ಆಕೆ ಉಸಿರು ಹಾಕಿದಳು.

"ನನಗೆ ಬೇಜಾರಾಗಿದೆ. ನಾನು ಬರುವುದಿಲ್ಲವೆಂದು ನೀನು ಹೇಳಿದರೆ?" ದೌಲತ್ ಅಲ್ಲೇ ನಿಂತ.

ರೋಶನ್‌ಳೂ ನಿಂತಳು. ಆಕೆಗೆ ಕೂಡಲೆ ಉತ್ತರ ಹೊಳೆಯಲಿಲ್ಲ.

"ಬರುವುದಿಲ್ಲವೆಂದದ್ದಕ್ಕೆ ಮಾತ್ರ ಚಾಚಿ ನಿನ್ನನ್ನು ಹೊಡೆಯಲಾರಳು" ಆತ ಮತ್ತೆ ಕೇಳಿದ ಸಮಿಪಕ್ಕೆ ಬಂದು. ಅವನ ಮೈ ಬೆವರಿನ ವಾಸನೆಯೂ ಅವಳಿಗೆ ಅಪ್ಯಾಯಮಾನವೆನಿಸಿತು. ಆಕೆ ಚೆಕ್ ಮಾಡಿದಳು "ಬಹಳವಾದರೆ ನನ್ನನ್ನು ಒಳಗೆ ಹಾಕಿ ಬೀಗಹಾಕಿಕೊಂಡು ಹೋಗಬಹುದು" ದೌಲತ್ ಚುಟಿಕೆ ಬಾರಿಸಿದ. ಅನುವ್ದೇ ಶಿಕಾರಿ ಅವಳ ಕೈ ಹಿಡಿದ.

"ಇನ್ನು ಹೋಗೋಣ ನಡೆ."

ರೋಶನ್ ಮೆಲ್ಲಗೆ ಕೈ ಕೊಸರಿಕೊಂಡಳು.

"ಚಾಚಿಗೆ ಸಿನೇಮಾದ ಹುಚ್ಚು ಬಹಳ. ಈ ಎರಡು ತಿಂಗಳು ಆಕೆಗೆ ಎಲ್ಲೂ ಹೋಗಲು ದೊರೆಯದಿದ್ದುದು ಬೇಜಾರಾಗಿರಬಹುದು" ಆತ ಎಂದಾಗ ಆಕೆ ಸೈಯೆಂಬಂತೆ ಗೋಣು ಹಾಕಿದಳು. "ರಾತ್ರಿ ಮಲಗಿದಾಗ ಎರಡು ಮೂರು ಸಲ ಅವರಿಗೆ ಹೇಳಿದಳು."

"ಅಂದರೆ ನೀನು ಅವರ ಮಾತೆಲ್ಲ ಕೇಳುತ್ತೀಯೇನು?" ಆತ ತುಂಟತನದಿಂದ ಕೇಳಿದ.

"ಕಣ್ಣು ಮುಚ್ಚಿಕೊಳ್ಳಲು ಬರುತ್ತದೆ. ಕಿವಿ ಮುಚ್ಚಿಕೊಳ್ಳಲು ಬರುವುದಿಲ್ಲ" ಆಕೆ ಅಷ್ಟೇ ತುಂಟತನದಿಂದ ನಗೆ ಬೀರಿ ಹೇಳಿದಳು. ದೌಲತ್‌ನಿಗೆ ಸಮಾಧಾನವೆನಿಸಿತು. ಆ ನಗೆ ನೋಡಿ, ರೋಶನ್‌ಳಿಗಂತೂ ಹೊಸ ಉಸಿರು ತೆಗೆದುಕೊಂಡಷ್ಟು ಆನಂದವಾಯಿತು.

ಎರಡು ದಿನಗಳ ಬಳಿಕ ಜುಬೇದಾ ಮಧ್ಯಾಹ್ನ ಅವಸರಪಡಿಸತೊಡಗಿದಳು. "ಎದ್ದು ಮೋರೆ ತೊಳೆದುಕೋ. ಇನ್ನು ಕಾರಖಾನೆಗೆ ಹೋಗಬೇಕೋಣ." ರೋಶನ್ ಮಾತನಾಡಲಿಲ್ಲ. "ಏಕೆ? ಏಳು, ಹೊತ್ತಾಗುತ್ತದೆ."

"ನಾನು ಕಾರಖಾನೆಗೆ ಬರುವುದಿಲ್ಲ" ಆಕೆ ಸ್ಪಷ್ಟವಾಗಿ ಹೇಳಿದಳು. ಮಗಳ ಧೈರ್ಯನೋಡಿ ಬೆಚ್ಚಿದಂತಾದರೂ ಜುಬೇದಾ ಅದನ್ನು ತೋರಗೊಡಲಿಲ್ಲ. "ಏಕೆ ಬರುವುದಿಲ್ಲ? ಅಲ್ಲೇನು ಹುಲಿ ತಿನ್ನುತ್ತದೇನು ನಿನ್ನನ್ನು?"

"ಹಾಗೆ ತಿಂದರೆ ಜನ್ಮ ನೀಗಿದಂತಾದೀತು" ಯಾರದೋ ಕೇಳಿದ ಮಾತು ರೋಶನ್‌ಳ ಬಾಯಿಗೆ ತಟ್ಟನೆ ಬಂದಿತು.

"ಮತ್ತೇನಾಗುತ್ತದೆ ಅಲ್ಲಿ?" ಅಪ್ರತಿಭಳಾದಂತೆ ಜುಬೇದಾ ಕೇಳಿದಳು. "ನೀನೇಕೆ ಅಲ್ಲಿ ಬರಬಾರದು?"

ಇಂತಹ ಪ್ರಶ್ನೆಗೆ ಯಾವ ಉತ್ತರ ಕೊಡಬೇಕೆಂಬುದನ್ನು ರೋಶನ್ ಯೋಚಿಸಿಟ್ಟಿದ್ದಳು. ಆದರೂ ಆಕೆ ನಾಟಕೀಯವಾಗಿ ಉಸಿರು ಹಾಕಿದಳು.

"ಅಲ್ಲಿ ಬೀಡಿ ಕಟ್ಟಲು ಹುಡುಗರು ಕುಳಿತಿರುತ್ತಾರಲ್ಲ..." ಆಕೆ ಅರ್ಧಕ್ಕೆ ಮಾತು ಬಿಟ್ಟಳು. ಕುತೂಹಲ ಕೆರಳಿಸಲೆಂಬಂತೆ "ಅವರೇನು ಮಾಡುತ್ತಾರೆ?"

"ನನ್ನನ್ನು ನೋಡಿ ಕಿಸಿ ಕಿಸಿ ನಗುತ್ತಾರೆ. ಕಣ್ಣು ಮಿಟುಕಿಸುತ್ತಾರೆ. ಸಿಳ್ಳು ಹಾಕುತ್ತಾರೆ ಸೊಕ್ಕಾಗಿ"

"ಇಂದು ಬಾ. ಯಾವಾರು ಸಿಳ್ಳು ಹಾಕುತ್ತಾರೆ, ನನಗೆ ತೋರಿಸು.ನಾನು ಬಾಬೂಲಾಲ್‌ಗೆ ಹೇಳುತ್ತೇನೆ."

"ಊಂಹೂಂ. ಅವನೂ ಅವರ ಪೈಕಿಯೇ. ತೂಗಿದ ತಂಬಾಕು, ಬೀಡಿ ಕಟ್ಟುವ ಎಲೆ ಬುಟ್ಟಿಯಲ್ಲಿ ಹಾಕುವಾಗ ಹೆಂಗಸರ ಎದೆ ನೋಡುತ್ತಿರುತ್ತಾನೆ, ಪಾಜಾಯಿಶ್"

ಇದಕ್ಕೆ ಜುಬೇದಾಳ ಬಳಿ ಉತ್ತರವಿರಲಿಲ್ಲ. ಗಂಡು ಗರಜ್‌ದಾರರು. ಇಂತಹವುಗಳಿಗೆ ವಿಶೇಷ ಮಹತ್ವ ಕೊಡಬಾರದು ಎಂದೆಲ್ಲ ಹೇಳಬೇಕೆನಿಸಿತು. ಆದರೂ ತಾನಾ ನಾಲ್ವತ್ತರ ಗಡಿಯಲ್ಲಿಯ ಹೆಂಗಸು. ಈಕೆ ಹದಿನಾರರ ಸೀಮೆಯಲ್ಲಿಯ ಹುಡುಗಿ. ತನ್ನಂತಹ ತಿಳುವಳಿಕೆ ಈಕೆಗೆ ಹೇಗೆ ಬಗ್ಗೀತು?

"ಅದ್ಲಿಯಲ್ಲ" ಆಕೆ ತನ್ನ ಬೀಡಿ ತುಂಬಿದ ಪುಟ್ಟ ಬುಟ್ಟಿ ಎತ್ತಿದಳು. ಮರುಕ್ಷಣವೇ ಅವಳಿಗೆ ಹಿಂದಿನದು ನೆನಪಾಯಿತು. ಅವಳ ಮೋರೆ ಬಿರುಸಾಯಿತು. "ನೀನು ಒಳಗಿರು. ನಾನು ಬೀಗ ಹಾಕಿಕೊಂಡು ಹೋಗುತ್ತೇನೆ."

ಅರ್ಧ ಬದಾಮಿನ ಆಕಾರದ ಹಿತ್ತಾಳೆಯ ಬೀಗ ತೋರಿಸಿ ಜುಬೇದಾ ಹೊರ ಬಿದ್ದಳು. ಬಾಗಿಲಿಗೆ ಕೊಂಡಿ ಹಾಕಿ ಬೀಗ ಜಡಿದಳು. ಎರಡು ಸಲ ಎಳೆದು ನೋಡಿದಳು ರೂಢಿಯಂತೆ.

ಒಳಗೆ ರೋಶನ್‌ಗೆ ಬೇಜಾರಾಯಿತು. ಆ ಕತ್ತಲೆಯಲ್ಲಿ ಏನು ಮಾಡಬೇಕೆನ್ನುವುದೂ ಆಕೆಗೆ ತಿಳಿಯಲಿಲ್ಲ. ಆಕೆ ಹರಕು ಚಾದರೊಂದನ್ನು ಹಾಸಿಕೊಂಡಳು. ಕುಳಿತು ಧೇನಿಸಿದಳು. ಬೇಸರವೆನಿಸಿದಾಗ ಅಡ್ಡಾದಳು. ಹಾಗೆಯೇ ನಿದ್ದೆ ಬಂದಿತು. ಒಂದೆರಡು ಸಲ ಹೀಗಾದಾಗ ಜುಬೇದಾಗೆ ಇದು ಒಳ್ಳೆಯ ಉಪಾಯವೆನಿಸಿತು. ಹೀಗೆಯೇ ಇವಳನ್ನು ಒಳಗೆ ಹಾಕಿ ಸಿನೇಮಾಕ್ಕೆ ಹೋಗಲು ಅಡ್ಡಿಯಿಲ್ಲ ಆಕೆ ಎಂದುಕೊಂಡಳು. ಮರುದಿನ ಬಂದ ಗಂಡನಿಗೂ ಅದನ್ನೇ ಹೇಳಿದಳು. ಅವನು ಒಂದೂ ಅನ್ನಲಿಲ್ಲ. ಏನೂ ಅನ್ನಲಿಲ್ಲ. ಸಂಜೆಯ ಊಟ ಬೇಗ ಮುಗಿಸಿ ಜುಬೇದಾ ಸಿಂಗಾರವಾದಳು. "ನಾವು ಸಿನೇಮಾಕ್ಕೆ ಹೋಗಿ ಬರುತ್ತೇವೆ. ಕಂದೀಲು ಸಣ್ಣ ಇಟ್ಟುಕೊಂಡು ಬೀಡಿಗಳನ್ನಾದರೂ ಕಟ್ಟು" ಎಂದಳು ಮಗಳಿಗೆ. "ನನಗೆ ಈಗಲೇ ನಿದ್ದೆ ಬರುತ್ತಿದೆ" ಎಂದು ಮಗಳು ಹೇಳಿದಾಗ ಈಗ ರೋಶನ್ ಕೂಡ ಮಾರುತ್ತರ ಕೊಡಬಹುದು ತಯಾರಾಗಿದ್ದಾಳೆನಿಸಿತು ಬಶೀರ್‌ನಿಗೆ. ಹೆಂಡತಿಯ ಉತ್ಸಾಹವನ್ನೂ ಅದುಮುವಂತಿರಲಿಲ್ಲ. ಆತ ಇನ್ನುಳಿ



ಪಾಯಿಜಾಮು. ಹಸಿರು ಬಣ್ಣದ ಫುಲ್‌ಷರ್ಟ್ ತೊಟ್ಟು ಬಿಳಿ ಬಟ್ಟೆಯ ಗುಂಡು ಟೊಪ್ಪಿಗೆ ತಲೆಗೇರಿಸಿ ಹೊರ ಬಿದ್ದ. ಆಡಿನ ಮರಿಗಳನ್ನೂ ಆಡಿನೊಡನೆ ಒಳಗೆ ಬಿಟ್ಟು ಜುಬೇದಾ ಬಾಗಿಲಿಗೆ ಬೀಗ ಹಾಕಿ ಹೊರಟಳು.

ದೌಲತ್‌ನಿಗೆ ಇದರ ಅಂದಾಜು ಇತ್ತು. ಮನೆಯ ಬೀಗ ನೋಡಿಕೊಂಡು ಆತ ಅವರಿವರಲ್ಲಿ ಹೋಗಿ ಬೀಗದ ಕೈ ಶೇಖರಿಸಿದ ತನ್ನ ಮನೆಯ ಬೀಗದ ಕೈ ಕಳೆದಿದೆಯೆಂದು ನೆಪ ಹೇಳಿ. ಕಳಕ್ಕೆಂದು ಬೀಗ ಬಿಚ್ಚಿದ ಸದ್ದಾದಾಗ ಇವರಿಗೇನು ತಿಕೀಟು ದೊರೆಯಲಿಲ್ಲವೋ ಎಂದುಕೊಂಡು ರೋಶನ್ ಎದ್ದು ಕುಳಿತಳು. ಆದರೆ ಒಳಗೆ ಕಾಲಿಟ್ಟವರು ತನ್ನ ಮಲ ತಂದೆಯಲ್ಲ! ದೌಲತ್! ಅವಳ ಹೃದಯ ಬಾಯಿಗೆ ಬಂದಂತಾಯಿತು.

"ದೌಲತ್" ಎಂದಳಾಕೆ ಆಶ್ಚರ್ಯದಿಂದ. "ಶ್" ಮಾಡಿದ "ಗೋಡೆಗೂ ಕಿವಿಗಳಿರುತ್ತವೆ".

"ಇನ್ನೇನು, ಇಷ್ಟರಲ್ಲಿ ಅವರು ಬರಲಿಕ್ಕಿಲ್ಲವಲ್ಲ?" ಆಕೆ ಆತಂಕ ತುಂಬಿದ ದನಿಯಲ್ಲಿ ಕೇಳಿದಳು. ಆತ ಬಾಗಿಲ ಒಳಚಿಲಕ ಹಾಕುತ್ತಿದ್ದಂತೆ ಮಾಮಲೆದಾರ ಕಚೇರಿಯ ತಾಸು ಹತ್ತು ಬಾರಿಸಿತು.

* * * *

"ಇದೇನು, ಬೀ। ಕಾಣುವುದಿಲ್ಲ? ಕೊಂಡಿಯೂ ಕಳಚಿದೆ" ಜುಬೇದಾಳ ದನಿಯಲ್ಲಿ ನಡುಕ ತುಂಬಿತ್ತು.

"ಆಂ?" ಎಂದ ಬಶೀರ್ ಆಕಳಿಕೆ ತಡೆದುಕೊಂಡು. ತಾನೇ ಮುಂದಾಗಿ ಬಾಗಿಲು ನೂಕಿ ನೋಡಿದ. ಒಳಗೆ ಚಿಲುಕ ಹಾಕಿದಂತಿತ್ತು. ಆತ ಮೆಲ್ಲನೆ ಹೊರ ಕೊಂಡಿ ಹಾಕಿದ. "ಇಲ್ಲಿ ಸ್ವಲ್ಪ ತಡೆಯುತ್ತೀಯೇನು? ನಾನು ಪೋಲೀಸ್ ಸ್ಟೇಶನ್ ವರೆಗೆ ಹೋಗಿ ಬರುತ್ತೇನೆ."

"ನಾನೊಬ್ಬಳೇ ನಿಲ್ಲಲಾರೆ. ನಾನೂ ಬರುತ್ತೇನೆ" ಎಂದಳು ಜುಬೇದಾ. ಏನಾಗಿರಬಹುದೆಂಬುದರ ತರ್ಕ ಇಬ್ಬರಿಗೂ ಹೊಳೆದಿತ್ತು.

"ನಮ್ಮ ಮನೆ ಒಡೆದಿದ್ದಾರೆ" ಬಶೀರ್ ಡ್ಯೂಟಿಯ ಮೇಲಿನ ಹವಾಲದಾರನಿಗೆ ಹೇಳಿದ. "ನಾವು ಎಂದಿನಂತೆ ಬೀಗ ಹಾಕಿಕೊಂಡು ಸಿನೇಮಾಕ್ಕೆ ಹೋಗಿದ್ದೆವು. ನನಗೆ ತಲೆನೋಯತೊಡಗಿತೆಂದು ತಿರುಗಿ ಬಂದೆವು. ಮನೆಗೆ ಬೀಗ ಇಲ್ಲ. ಕೊಂಡಿ ಕಳಚಿದೆ".

"ಹಾಗಾದರೆ?"

"ಒಳಗೆ ಯಾರೋ ಇದ್ದಾರೆ. ಒಳಗಿನಿಂದ ಕೊಂಡಿ ಹಾಕಿಕೊಂಡಿದ್ದಾರೆ. ನೀವು ಕಾನ್‌ಸ್ಟೇಬಲ್‌ರನು ಕಳಿಸಿರಿ".

ಕಾನ್‌ಸ್ಟೇಬಲ್‌ನೊಬ್ಬನನ್ನು ಕರೆದುಕೊಂಡು ಹವಾಲದಾರ ತಾನೇ ಬಂದ. ಕೊಂಡಿ ಕಳಚಿ ಬಾಗಿಲು ಬಾರಿಸಿದ. "ಯಾರಿದ್ದೀರಿ? ಬಾಗಿಲು ತೆರೆಯಿರಿ" ಎಂದ.

"ನೀವಾರು ನಮಗೆ ಗೊತ್ತಿಲ್ಲ. ಬಾಗಿಲು ತೆಗೆಯುವುದಿಲ್ಲ"ವೆಂದು ದನಿ ಬಂದಿತು ಒಳಗಿನಿಂದ. ಅದು ದೌಲತ್‌ನದೆಂದು ತಿಳಿಯಲು ಬಶೀರ್‌ನಿಗೆ ತಡವಾಗಲಿಲ್ಲ. "ದೌಲತ್ ಬಾಗಿಲು ತೆರೆ" ಆತ ಕೂಗಿದ. ಜುಬೇದಾ ಭೀತಿಯಿಂದ ಅವನ ತೋಳ ಆಸರೆಗೆ ನಿಂತಳು. ಹವಾಲದಾರ ಮತ್ತೆ ಕೊಂಡಿ ಬಾರಿಸಿದ. "ಯಾರಿದ್ದೀರಿ, ಬಾಗಿಲು ತೆಗೆಯಿರಿ".

ಬಾಗಿಲು ತೆರೆದು ಓಡಬೇಕೆನ್ನುವ ದೌಲತ್‌ನನು ಕಾನ್‌ಸ್ಟೇಬಲ್ ಹಿಡಿದ. ದೌಲತ್ ಎಷ್ಟೆಂದರೂ ಗರಡಿ ಆಳು. ಪುಡಿ ಪೋಲೀಸನಿಗೆ ಕೇಳಬಹುದೇ? ಇನ್ನೇನು ಆತ ಬಿಡಿಸಿಕೊಂಡು ಓಡಬಹುದೆನ್ನಿಸಿದಾಗ ಬಶೀರ್ ಮುಂದೆ ನುಗ್ಗಿ ಅವನನ್ನು ತೋಳ ತೆಕ್ಕೆಯಲ್ಲಿ ಹಿಡಿದ. ಮಗಳ ಸಮಾಚಾರಕಾಗಿ ಜುಬೇದಾ ಮನೆಯಲ್ಲುಳಿದಳು. ಉಳಿದವರ ಮೆರವಣಿಗೆ ಪೋಲೀಸ್ ಸ್ಟೇಶನ್ ವರೆಗೆ ಹೋಯಿತು.

ತಮ್ಮ ಮನೆಯ ಬೀಗ ಒಡೆದು ಅಕ್ರಮವಾಗಿ ಮನೆಯಲ್ಲಿ ಸೇರಿದ ಬಗ್ಗೆ ಬಶೀರ್ ತಕರಾರು ಕೊಟ್ಟ. ದೌಲತ್‌ನ ಮೈಕಟ್ಟು ನೋಡಿ ಅವನಿಗೆ ಥರ್ಡ್ ಡಿಗ್ರೀ ಕೊಡುವ ಧೈರ್ಯ ಅವರಾರಿಗಾಗಲಿಲ್ಲ.

"ನೀವು ಜೇಲಿಗೆ ಕಳಿಸಿದರೆ ಹೋಗುತ್ತೇನೆ" ದೌಲತ್ ಹವಾಲದಾರನಿಗೆ ಹೇಳಿದ. "ಆದರೆ ಜತೆಗೆ ಇವರಿಬ್ಬರನ್ನೂ ಕರೆದುಕೊಂಡೇ ಹೋಗುತ್ತೇನೆ."

ಹವಾಲದಾರನಿಗೆ ಆಶ್ಚರ್ಯವಾಯಿತು. "ಇವರೇನು ಮಾಡಿದ್ದಾರೆ?"

"ಇವರು ತಮ್ಮ ಹುಡುಗಿಯನ್ನು ಕ್ರೂರತನದಿಂದ ನಡೆಸಿಕೊಳ್ಳುತ್ತಾರೆ. ಮನೆಯಲ್ಲಿ ಅಕ್ರಮವಾಗಿ ಬಂಧಿಸಿ ಹೊರಗಿನಿಂದ ಬೀಗ ಹಾಕುತ್ತಾರೆ. ಇದನ್ನೆಲ್ಲ ನಾನು ಕೋರ್ಟಿನಲ್ಲಿ ಹೇಳುವವನೇ. ಆದೇಕೆ, ಅವಶ್ಯವಿದ್ದರೆ ಆಕೆಯ ಸಾಕ್ಷಿಯನ್ನೂ ತೆಗೆಸುತ್ತೇನೆ" ದೌಲತ್ ಬಡಬಡನೆ ಹೇಳಿದ. ಈ ಬಗ್ಗೆ ಈಗಾಗಲೇ ಆತ ವಕೀಲರನು ಕಂಡಿರಬಹುದೆಂದು ಬಶೀರ್‌ನಿಗೆ ಸಂಶಯವೆನಿಸಿತು.

"ಇದು ನಿಜವೇನು?" ಹವಾಲದಾರ ಕೇಳಿದ ಬಶೀರನನ್ನು.

"ಆಂ..." ಬಶೀರ್‌ನಿಗೆ ಏನು ಹೇಳಬೇಕೆಂಬುದು ಹೊಳೆಯಲಿಲ್ಲ. "ನಾವು, ಅಂದರೆ ನಾನು, ನನ್ನ ಹೆಂಡತಿ ಸಿನೇಮಾಕ್ಕೆ ಹೋಗುವಾಗ ಆ ಹುಡುಗಿಯನ್ನು ಮನೆಯಲ್ಲಿಟ್ಟಿರುತ್ತೇವೆಂಬುದು ನಿಜ."

"ಅದೇಕೆ, ಹೆಚ್ಚು ಕಡಿಮೆ ದಿನವೂ ಮಧ್ಯಾಹ್ನ, ಸಂಜೆ ಆಕೆಯನ್ನು ಅಕ್ರಮವಾಗಿ ಬಂಧಿಸಿಟ್ಟು ಇವರ ಹೆಂಡತಿ ಹೋಗುತ್ತಾಳೆ." ಕಲಿಸಿದವರಂತೆ ದೌಲತ್ ಹೇಳಿದ.

"ಇಂದು ರಾತ್ರಿ ಏನಾಯಿತು ಹೇಳುತ್ತೇನೆ ಕೇಳಿರಿ. ಇವರ ಮಲ ಮಗಳು ಹಾವು ಹಾವು ಎಂದು ಕೂಗಿದಳು. ನಾನು ಅಂಗಳದಲ್ಲಿ ಮಲಗಿದ್ದೆ. ಎಚ್ಚರಾಯಿತು. ಎಲ್ಲಿದೆಯೆಂದು ನೋಡಲು ಓಡಿದೆ. ಹುಡುಗಿಗೆ ಬಾಗಿಲು ತೆರೆ ಎಂದು ಹೇಳಿದೆ. ಆಕೆ ಹೊರಗಿನಿಂದಲೇ ಬೀಗ ಹಾಕಿದೆಯೆಂದಳು. ನಾನು ಅವಸರದಿಂದ ನಮ್ಮ ಮನೆಯಲ್ಲಿಯ ನಾಲ್ಕಾರು ಬೀಗದ ಕೈ ತಂದು ನೋಡಿದೆ. ಒಂದು ಕೈ ಹತ್ತಿತು. ಬಾಗಿಲು ತೆರೆದು ದೀಪ ದೊಡ್ಡದು ಮಾಡಿದೆ. ನೀರಿನ ಹೂಜೆಯ ಹತ್ತಿರ ಇಂತಹ ನಾಗರ ಹಾವು!" ದೌಲತ್ ಮಾರುದ್ದ ಕೈ ಮಾಡಿದ. "ಅದನ್ನು ಹೊಡೆಯಲು ನನಗೊಬ್ಬನಿಗೇ ಧೈರ್ಯವಾಗಲಿಲ್ಲ. ಆಕಸ್ಮಾತ್ ಅದು ಸಾಯದೆ ಉಳಿದರೆ ಸಿಟ್ಟು ಹಿಡಿದು ಕಡಿಯುತ್ತದಂತೆ ಹಿಂಸಿಸಿದವರನ್ನು. ನಾನು ಮೆಲ್ಲನೆ ಅದನ್ನು ಹೊರಗೆ ಅಟ್ಟಿದೆ. ಆಗ ಬಾಗಿಲು ಚಿಲುಕ ಹಾಕಿದೆ. ಹುಡುಗಿಗೆ ಸಮಾಧಾನ ಹೇಳುತ್ತ ಕುಳಿತಿದ್ದೆ. ನೀವು ಬಂದಿರಿ" ಆತ ಮೆಲ್ಲನೆ ಉಸಿರು ಹಾಕಿದ. "ನೀವು ಎಲ್ಲಿ ಕೇಳಿದರೂ ನಾನು ಇಷ್ಟೇ ಹೇಳುವವ. ಕೋರ್ಟಿನಲ್ಲೂ ಹೀಗೇ ಹೇಳುವವ".

ಹವಾಲದಾರ ಬಶೀರನ ಮೋರೆ ನೋಡಿದ. ಬಶೀರ ಕಾನ್‌ಸ್ಟೆಬಲ್‌ರ ಮೋರೆ ನೋಡಿದ.

"ನಿಮ್ಮ ಹುಡುಗಿ ಇವನನು ಕರೆದಿದ್ದರೆ ಅದು ಅಕ್ರಮ ಪ್ರವೇಶ ಆಗಲಾರದು" ಹವಾಲದಾರ ತನ್ನ ನಿರ್ಣಯ ಕೊಟ್ಟ. ಇದೊಳ್ಳೆಯ ಕಾಜೀ ನ್ಯಾಯ ಎನ್ನಿಸಿತು ಬಶೀರನಿಗೆ.

"ನಿಮಗೇನನಿಸುತ್ತದೆ. ನಿಮ್ಮ ಹುಡುಗಿ ಇವನನ್ನು ಕರೆದಿರಬಹುದೇನು? ಹಾವೇ ಇರಲಿ ಏನೇ ಇರಲಿ."

"ಕೇಳಿಕೊಂಡು ಬರುತ್ತೇನೆ." ಬಶೀರ್ ಅಲ್ಲಿಂದ ಎದ್ದ. ಹವಾಲದಾರ ಮೋರೆ ಸೊಟ್ಟ ಮಾಡಿ ನಕ್ಕದ್ದು ಅವನಿಗೆ ಕಾಣಲಿಲ್ಲ. ಅಲ್ಲಿಂದ ಹೊರ ಬಿದ್ದ ದೌಲತ್‌ನಿಗೆ ಮಾತ್ರ ಅದು ಕಂಡು ಮೋಜೆನಿಸಿತು.

ಬಶೀರ್ ಪೋಲೀಸ್ ಸ್ಟೇಶನ್ನಿನಿಂದ ಮನೆಗೆ ಬರುವವರೆಗೆ ತಾ[illegible]ಯಿತ್ತು. ಒಬ್ಬರು ಇನ್ನೊಬ್ಬರ ಕೂದಲು ಹಿಡಿದು ಎಳೆದಾಡಿದ್ದರು.

ಉಪ್ವಾಸ ಹರಿದುಕೊಂಡಿದ್ದರು. ತೋಳು ಮುಂಗೈ ಹಲ್ಲಿನಿಂದ ಕಚ್ಚಿದ್ದರು. ಏನು ಮಾಡಬೇಕೆಂಬುದು ಬಶೀರನಿಗೆ ಪ್ರಶ್ನೆಯೇ ಆಯಿತು. ಏನಿದ್ದರೂ ಮತ್ತೆ ಪೋಲೀಸ್ ಕೇಸು ಬೇಡ ಎಂದಿತು ಅವನ ಡ್ರೈವರ್ ಮನಸ್ಸು. ತಾನೇ ಮುಂದಾಗಿ ಅವರಿಬ್ಬರನ್ನೂ ಬಿಡಿಸಿದ. "ನಾಳೆ ನೋಡೋಣ, ಮಲಗಿರಿ" ಎಂದು ಸಮಾಧಾನ ಹೇಳಿದ. ಹೇಳಿದ್ದೇ ಹೇಳಿ ಜುಬೇದಾ ತಲೆ ಚಿಟ್ಟು ತರಿಸಿದಾಗ, "ಇನ್ನು ಬಾಯಿ ಮುಚ್ಚಿಕೊಂಡು ಬೀಳದಿದ್ದರೆ ನಾನೇ ನಿನ್ನ ತಲೆ ಒಡೆಯುತ್ತೇನೆ" ಎಂದು ಬೆದರಿಕೆಯನ್ನು ಹಾಕಿದ. ಆಗಮಾತ್ರ ವಟಗುಡುತ್ತ ಆಕೆ ಅಡ್ಡಾದಳು ಒಂದು ಮೂಲೆಯಲ್ಲಿ ಕವದಿ ಹಾಸಿಕೊಂಡು. ಎಷ್ಟೋ ಹೊತ್ತು ಯಾರಿಗೂ ನಿದ್ದೆ ಬರಲಿಲ್ಲ. ಬಶೀರ್ ಮೆಲ್ಲನೆ ಗೊರಕೆ ಹೊಡೆಯತೊಡಗಿದ. ಜುಬೇದಾಗೂ ನಿದ್ದೆ ಬಂದಿತು.

ಅವರಿಬ್ಬರಿಗೂ ಎಚ್ಚರಾದಾಗ ಬೆಳ್ಳ ಬೆಳಗಾಗಿತ್ತು. ಬಾಗಿಲು ಆ ಎಂದು ತೆರೆದಿತ್ತು. ಒಳಗಿದ್ದ ಆಡು ಎಲ್ಲಿಯೋ ಓಡಿ ಹೋಗಿತ್ತು, ರೋಶನ್‌ಳಂತೆಯೇ.

* * * *

ಮಿರಜಿ ಬಿಟ್ಟು ನಸುಕಿನಲ್ಲಿಯೇ ಹೊರಟ ರೋಶನ್ ದೌಲತ್‌ರಿಗೆ ಪಂಢರಪುರ ಮುಟ್ಟಲು ಮಧ್ಯಾಹ್ನವಾಯಿತು. ದೌಲತ್ ಮನೆಯಲ್ಲಿದ್ದ ಐವತ್ತು ಅರವತ್ತು ರೂಪಾಯಿ ತೆಗೆದುಕೊಂಡು ಹೊರಬಿದ್ದಿದ್ದ. ರೋಶನ್ ಕೂಡ ಬಶೀರನ ಜೇಬಿನಲ್ಲಿಯ ಇಪ್ಪತ್ತೈದು-ಮೂವತ್ತು ರೂಪಾಯಿ ತೆಗೆದುಕೊಂಡಿದ್ದಳು.

ಬಸ್ಸಿನಲ್ಲಿ ಇವರ ಬದಿ ಕುಳಿತಿದ್ದವನೊಬ್ಬ ಮುದುಕ ಮೆಲ್ಲನೆ ಮಾತು ಬಿಚ್ಚಿದ. "ಎಲ್ಲಿ ಸಾಂಗೋಲಾಕ್ಕೇನು?"

"ಇಲ್ಲ, ಪಂಢರಪುರಕ್ಕೆ" ದೌಲತ್ ಹೇಳಿದ.

"ಅಲ್ಲೇನು ಕೆಲಸಕ್ಕಿದ್ದೀರೇನು?"

ಏನು ಹೇಳಬೇಕೆಂಬುದು ದೌಲತ್‌ನಿಗೆ ಪ್ರಶ್ನೆಯಾಯಿತು. ಅವನು ಆ ಬಗ್ಗೆ ಹೆಚ್ಚಾಗಿ ಯೋಚಿಸಿರಲಿಲ್ಲ.

"ಇಲ್ಲ, ಯಾತ್ರೆಗೆ ಹೊರಟಿದ್ದೇವೆ" ಆತ ಏನೋ ಹೇಳಿದ. "ನಿಮ್ಮ ಜತೆಗಿದ್ದವರಾರು?"

ಇವರಿಗೆಲ್ಲ ಏಕೆ ಬೇಕು ಕಾರಭಾರ? ಎನ್ನಿಸಿತು ದೌಲತ್‌ನಿಗೆ. ಆದರೆ ಕೆಲವರ ಸ್ವಭಾವವೇ ಹಾಗೆ.

"ಆಕೆ...ಅಂ... ಆಕೆಯೋ, ನನ್ನ ಹೆಂಡತಿ" ದೌಲತ್ ಹೇಳಿದಾಗ ಅವನಾಚೆ ಕುಳಿತು ಕಿಟಕಿಯ ಹೊರಗೆ ಕಾಣುವ ಗಿಡ-ಮರ, ಗುಡ್ಡ-ತಿಟ್ಟು ನೋಡುತ್ತಿದ್ದ ರೋಶನ್‌ಗೆ ಲಜ್ಜೆಯಿಂದ ಕೆನ್ನೆ ಕೆಂಪೇರಿತು. ಬಸ್ಸು ಬಿಡುವವರೆಗಿದ್ದ ಅವಳ ಎದೆಗುದಿ ಯಾವಾಗಲೋ ಕಡಿಮೆಯಾಗಿತ್ತು. ಮೇಲಾಗಿ ತನ್ನ ಬಳಿ ದೌಲತ್‌ನಿರುವಾಗ ತಾನು ಯಾರಿಗೇಕೆ ಹೆದರಬೇಕು? ಆಕೆ ವಿಶ್ವಾಸದಿಂದ ಅವನಿಗೆ ತೀರ ಹತ್ತಿರ ಸರಿದು ಕುಳಿತಿದ್ದಳು. ಹಿಂದೆ ಓಡುವ ಜಾಲಿಯ ಗಿಡಗಳಂತೆ ಕಳೆದ ವರ್ಷಾರು ತಿಂಗಳಿನಲ್ಲಿಯ ಕಹಿ-ಸಿಹಿ ಘಟನೆಗಳೂ ಅವಳ ನೆನಪಿನ ಪರದೆಯ ಮೇಲೆ ಮೂಡಿ ಮಾಸಿದವು. ಈಗ ಎಲ್ಲವೂ ರುಚಿಯೇ ಆಗಿತ್ತು. ಆಕೆ ಮೆಲ್ಲನೆ ಅವನ ಬಲಗೈ ತನ್ನ ತೊಡೆಯ ಮೇಲೆ ತೆಗೆದುಕೊಂಡಳು.

"ನಿಮ್ಮ ಹೆಂಡತಿ?" ಮುದುಕ ಸಂಶಯದಿಂದ ನೋಡಿದಂತೆ ಮಾಡಿದ. ತಾನು ಸೀರೆ ಉಟ್ಟುಕೊಂಡು ಬಂದದ್ದೇ ಒಳ್ಳೆಯದಾಯಿತೆನ್ನಿಸಿತು ರೋಶನ್‌ಗೆ.

"ಹಾಂ, ಹೌದು" ದೌಲತ್ ಹೇಳಿದ ಹಣೆಗೆ ಗಂಟು ಹಾಕಿ. "ಏನಿಲ್ಲ" ಮುದುಕ ಬಚ್ಚ ಬಾಯಿ ತೋರಿಸಿ ನಕ್ಕ. "ಹಣೆಯ ಮೇಲಿನ ಕುಂಕುಮ ಅಳಿಸಿದೆ." ದೌಲತ್ ರೋಶನ್‌ಳತ್ತ ನೋಡಿದ. "ಹೌದೇನು?" ಆಕೆ ನಾಚಿಕೆಯಾಗಿ ಕೇಳಿದಳು. "ಬಸ್ಸಿಗೆ ಬರುವ ಅವಸರದಲ್ಲಿ ಮೋರೆ ತೊಳೆದುಕೊಂಡ ಬಳಿಕ ಕುಂಕುಮ ಹಚ್ಚಿಕೊಂಡದ್ದು ನನ್ನ ಲಕ್ಷ್ಯದಲ್ಲಿಲ್ಲ."

"ಅದರಲ್ಲೇನು ಮಹತ್ವ ಬಿಡು. ಪಂಢರಪುರಕ್ಕೆ ಹೋದ ಬಳಿಕ ಹಚ್ಚಿಕೊಂಡರಾಯಿತು" ಆತ ಅಸಡ್ಡೆಯಿಂದ ಹೇಳಿದ. "ಹಾಗೆ ಹೇಗೆ? ಅದು ಸುಮಂಗಲಿಯರ ಸೌಭಾಗ್ಯ" ಮುದುಕ ಇನ್ನೂ ಏನೋ ಹೇಳುವುದರಲ್ಲಿದ್ದ. ದೌಲತ್ ಅವನನ್ನು ತಡೆದ. "ಅವಸರದಲ್ಲಿ ಅಳಿಸಿ ಹೋದರೆ ಅದಕ್ಕೇನು ಉಪಾಯ?" ಅವನ ಬಿರುಸು ಮೋರೆ ನೋಡಿ ಮುದುಕ ತಣ್ಣಗಾದ.

'ಕುಂಕುಮವಿಲ್ಲದ ಬಗ್ಗೆ ಏನೋ ನೆಪ ಹೇಳಿದಂತಾಯಿತು. ಆದರೆ ಕೊರಳಲ್ಲಿ ಮಂಗಳಸೂತ್ರವಿಲ್ಲದ ಬಗ್ಗೆ ಯಾರಾದರೂ ಕೇಳಿದರೆ? ಆಕೆ ಕೊರಳು ಮುಚ್ಚುವಂತೆ ಮೈ ತುಂಬ ಸೆರಗು ಹೊದ್ದುಕೊಂಡಳು. ಪಂಢರಪುರಕ್ಕೆ ಹೊದ ನಂತರ ಎರಡು ಸಂಗತಿ, ಕುಂಕುಮ-ಮಂಗಳಸೂತ್ರ ಮುಖ್ಯ ಎಂದು ಅವಳ ಮನಸ್ಸು ಗಂಟು ಹಾಕಿಕೊಂಡಿತು.

ಬಸ್ಸಿನಿಂದ ಇಳಿದೊಡನೆ ಧರ್ಮಶಾಲೆಯೊಂದನ್ನು ಶೋಧಿಸುತ್ತ ಬರುತ್ತಿದ್ದಂತೆ ರೋಶನ್ ಕನ್ನಡಿಯಿದ್ದ ಕುಂಕುಮ ಡಬ್ಬಿ, ಕರಿಮಣಿ, ನೈಲಾನ್ ದಾರ ತೆಗೆದುಕೊಂಡಳು. ಇಪ್ಪತ್ತೈದು ಪೈಸೆ ದಿನಕ್ಕೆ ಬಾಡಿಗೆಯ ಕೋಣೆಯೊಂದು ದೊರಕಿಸಿದಾಗ ನಾನಾ ಪ್ರಶ್ನೆ ಅವರೆದುರು ದುತ್ತೆಂದು ನಿಂತವು. ಏನೋ ಒಂದು ಕಾವಿನಲ್ಲಿ ಮಿರಜಿ ಬಿಟ್ಟು ಹೊರಬಿದ್ದದ್ದಾಯಿತು. ಆದರೆ ಮುಂದೇನು? ತಂದ ಹಣ ಎಂಟು ದಿನ. ಹೆಚ್ಚೆಗೆ ಹೆಚ್ಚು ಹದಿನೈದು ದಿನ ಸಾಕಾದೀತು. ರೋಶನ್ ಹಾಗೆ ಹೇಳಿದಾಗ ದೌಲತ್ ನಕ್ಕ. ತೀಡಿ ಕುಂಕುಮ ಹಚ್ಚಿಕೊಳ್ಳುವ ಕೈ ಹಿಡಿದು ಎಳೆದ. "ನಾನಿದ್ದಾಗ ಹಣಕ್ಕೇನು ಕೊರತೆ?" ಎಂದ.

ಅಂದು ಮಧ್ಯಾಹ್ನ ಅವರು ಖಾನಾವಳಿಯಲ್ಲಿ ಉಂಡರು. ಪೇಟೆಯಲ್ಲಿ ತಿರುಗಾಡಿ ಹಾಸಲು ಹೊದೆಯಲು ಹಳೆ ಬಟ್ಟೆ ಮಾರುವವರ ಹತ್ತಿರ ಕವದಿ ತೆಗೆದುಕೊಂಡರು. ಅವಶ್ಯವಿದ್ದ ಬಟ್ಟೆ ಇಬ್ಬರೂ ತಂದಾಗಿತ್ತು. ರಾತ್ರಿಯ ಊಟವೂ ಹೊರಗೇ ಆಯಿತು.

ಮರುದಿನ ಮುಂಜಾವ ಚಂದ್ರಭಾಗೆಯಲ್ಲಿ ಸ್ನಾನ ಮಾಡಿ ಶ್ರೀವಿಠ್ಠಲನ ದರ್ಶನ ತೆಗೆದುಕೊಂಡರು. ಪಾಂಡುರಂಗನ ಮಂದಿರದ ಸುತ್ತ ಅಂಗಡಿಗಳು ಸಾಕಷ್ಟು ಇವೆ. ಒಂದು ಅಂಗಡಿಯ ಹತ್ತಿರ ನಿಂತಳು ರೋಶನ್. "ಒಂದು ಕಬ್ಬಿಣ ಹೆಂಚು ತೆಗೆದುಕೊಂಡರೆ ಹೇಗೆ?" ಎಂದಳು ದೌಲತ್‌ನಿಗೆ.

"ನಿನ್ನ ಅವಸರ ಆರಂಭವಾಯಿತೇನು?' ಆ ವ್ಯಾಪ ಇದ್ದೇ ಇದೆ. ನಾಲ್ಕು ದಿನ ಮೋಜು ಮಾಡೋಣ" ದೌಲತ್ ಹೇಳಿದ. "ಹೀಗೇ ತಿರುಗೋಣ. ಕೈಯಲ್ಲಿ ಕೈ ಹಾಕಿಕೊಂಡು. ಸಿನೇಮಾ ನೋಡೋಣ ಹಗಲಿಗೆ ಹಗಲು ಹಚ್ಚಿ ಕುಳಿತು."

ಆ ನಾಲ್ಕು ದಿನ ನಾಲ್ಕು ಗಳಿಗೆಗಳಂತೆ ಕರಗಿದವು. ಮಾರನೆಯ ದಿನ ದೌಲತ್ ಹೇಳಿದ. "ಇಂದಿನಿಂದ ನಾನು ಕೆಲಸ ನೋಡುತ್ತೇನೆ." ದೋತರ ಬಿಚ್ಚಿ ಹಾಫ್‌ಪ್ಯಾಂಟ್ ಹಾಕಿಕೊಂಡು ಆತ ಮಾರುಕಟ್ಟೆಯಲ್ಲಿ ತಿರುಗಾಡಿದ. ಮಿರಜಿಯಲ್ಲಾದರೋ ದಿನಕ್ಕೆ ಐದು ರೂಪಾಯಿ ಕೂಲಿ ಸಿಕ್ಕೇ ಸಿಗುತ್ತಿತ್ತು. ಇಲ್ಲಿ ನಾಲ್ಕು ರೂಪಾಯಿಯಾದರೂ ಆದೀತೆಂದುಕೊಂಡ. ಆದರೆ ಯಾವ ದೊಡ ಅಂಗಡಿಯಲ್ಲೂ ಅವನಿಗಾಗಿ ಕೆಲಸ ಉಳಿದಿರಲಿಲ್ಲ. ಬೇಸತ್ತು ಆತ ಎಸ್. ಟಿ. ಸ್ಟ್ಯಾಂಡಿನತ್ತ ಹೋದ. ಅಲ್ಲೂ ಪೈಪೋಟಿ. ಮಧ್ಯಾಹ್ನದ ವರೆಗೆ ಒಂದೂವರೆ ರೂಪಾಯಿ ದಕ್ಕಿತು. ಊಟಕ್ಕೆ ಕರೆಯಲೆಂದು ಆತ ಕೋಣೆಗೆ ಬಂದರೆ ರೋಶನ್ ಅಡುಗೆ ಸಿದ್ಧಪಡಿಸಿದ್ದು ನೋಡಿ ಸೋಜಿಗವಾಯಿತು. "ರೋಶನ್" ಆತ ಆಶ್ಚರ್ಯ ಸೂಚಿಸಿದಾಗ ಆಕೆ "ಶ್‌ಶ್" ಮಾಡಿದಳು. "ನನ್ನ ಹೆಸರು ರೋಶನ್ ಅಲ್ಲ. ಮುಕ್ತಾ"–ಆಕೆ ಪಿಸು ನುಡಿದಳು. "ಇಲ್ಲಿ ಎಲ್ಲ ಪಾತ್ರ ದೊರೆಯುತ್ತವಂತೆ ಬಾಡಿಗೆಗೆ. ನನಗೆ ಗೊತ್ತಿರಲಿಲ್ಲ. ಬದಿಯ ಕೋಣೆಯಲ್ಲಿಯ ರಖುಮಾ ನನಗೆ ಹೇಳಿದಳು. ನಾನು ಪಾತ್ರ ಬಾಡಿಗೆಗೆ ತೆಗೆದುಕೊಂಡೆ. ಸೇರು ಜೋಳ ಕೊಂಡು ಬೀಸಿಸಿ ತಂದೆ. ತರಕಾರಿ ರಖುಮಾನೇ ಕೊಟ್ಟಿದ್ದಾಳೆ." ರೋಶನ್ ಸಂಭ್ರಮದಿಂದ ದೌಲತ್‌ನ ಮೋರೆ ನೋಡಿದಳು. ಅಲ್ಲಿ ತೃಪ್ತಿ ಕಂಡಾಗ ಆಕೆಗೆ ಉತ್ಸಾಹವೆನಿಸಿತು. ಇಬ್ಬರೂ ಕೈ ತೊಳೆದುಕೊಂಡು ರೊಟ್ಟಿ ಪಲ್ಯ ತಿಂದರು. ನೀರು ಕುಡಿದು ತೇಗಿದರು. ಮಧ್ಯಾಹ್ನ ತುಸು ನಿದ್ದೆ ಮಾಡಿ ದೌಲತ್ ಮತ್ತೆ ಹೊರಬಿದ್ದ. ಹೊತ್ತು ಮುಳುಗಿದರೂ ಅವನಿಗೆ ಒಂದು ರೂಪಾಯಿ ಕೂಲಿಯೇನೂ ದಕ್ಕಲಿಲ್ಲ. ಮರುದಿನವೂ ಅದೇ ಕತೆಯಾಯಿತು.

ರಾತ್ರಿ ರೋಶನ್‌ಳನ್ನು ತಬ್ಬಿಕೊಳ್ಳುತ್ತಿದ್ದಂತೆ ದೌಲತ್ ಹೇಳಿದ, "ನಾವು ಈ ಊರು ಬಿಡೋಣ" ರೋಶನ್ ಮಾತನಾಡಲಿಲ್ಲ. ಅವನ ನಿರಾಶೆ ಬಹುಶಃ ಅವಳಿಗೆ ಅರ್ಥವಾಗಿರಬೇಕು. "ಈ ಊರಲ್ಲಿ ಕೆಲಸ ಸಿಕ್ಕುವಂತಿಲ್ಲ. ಶಿವರಾತ್ರಿಯೆದ್ದು ಏಕಾದಶಿಯ ಮನೆಗೆ ಕಡಕ್ಕೆ ಹೋದಂತಾಯಿತು. ಇಲ್ಲಿಯ ಜನರಿಗೇ ಇಲ್ಲಿ ಕೆಲಸವಿಲ್ಲ. ನಾನು ಹೊರಗಿನಿಂದ ಬಂದು ಗಳಿಸುವುದೇನು?"

"ಹಾಗಾದರೆ?" ಆಕೆ ಆತಂಕದಿಂದ ಕೇಳಿದಳು. ಮರಳಿ ಮತ್ತೆ ಮಿರಜಿಗೆ ಹೋಗುವ ವಿಚಾರ ಅವನ ತಲೆಯಲ್ಲಿ ಸುಳಿಯುತ್ತಿದೆಯೇನು? ಆಕೆ ಬೆಬ್ಬಸಗೊಂಡಳು.

"ನಾವು ಆ ಕಡೆ ಹೋಗೋಣ ಪಶ್ಚಿಮಕ್ಕೆ. ಕೊಲ್ಹಾಪುರ ನಿಪ್ಪಾಣಿ ಬೆಳಗಾವಿಯ ಕಡೆಗೆ. ಅಲ್ಲಿ ನಮ್ಮಂತೆ ಕಷ್ಟದ ಕೆಲಸ ಮಾಡುವ ಜನ ಕಡಮೆ ಎಂದು ಕೇಳಿದ್ದೇನೆ. ಈ ಬೆಳವಲದ ಹಣೆಬರಹವೇ ಇಷ್ಟು" ಅವನ ದನಿಯಲ್ಲಿ ನಿರಾಸೆ ತುಂಬಿದಂತಿತ್ತು.

ಮರುದಿನ ಬೆಳಗಿನಲ್ಲಿ ಅವರು ಜತ್ತಿಯ ಮಾರ್ಗವಾಗಿ ವಿಜಾಪುರ ತಲುಪಿದರು. ಅಲ್ಲಿಂದ ಬಸ್ಸು ಹಿಡಿದು ಬೆಳಗಾವಿ ತಲುಪಿದಾಗ ರಾತ್ರಿಯಾಗಿತ್ತು. ಬಸ್ ಸ್ಟೇಶನ್‌ದಲ್ಲಿ ಕುಳಿತು ರಾತ್ರಿ ಕಳೆದರು. ಮುಂಜಾವದಲ್ಲಿ ಆಕೆಯನ್ನು ಬಿಟ್ಟು ಆತ ಊರಲ್ಲಿ ಹೊರಟ. ಮರ ಕೊರೆಯುವ ಕಾರಖಾನೆಗಳಲ್ಲಿ ವಿಚಾರಿಸಿದ. ಸೌದೆ ಒಡೆಯುವ ಅಡ್ಡೆಯಲ್ಲಿ (ಡಿಪೋ)ನಾಲ್ಕು ಕಡೆಗೆ ವಿಚಾರಿಸಿದಾಗ ಕೆಲಸ ದೊರೆಯಿತು. ಆದರೆ ದಿನ ಕೂಲಿ ಮೂರೂವರೆ ರೂಪಾಯಿ ಎಂದು ಹೇಳಿದ ಮಾಲಕ. ದೌಲತ್‌ನಿಗೆ ಒಪ್ಪದೆ ಗತ್ಯಂತರವಿರಲಿಲ್ಲ. ಆತ ಮತ್ತೆ ಬಸ್ ಸ್ಟೇಶನ್‌ಗೆ ಹೋಗಿ ರೋಶನ್‌ಳನ್ನು ಕರೆತಂದ. ಅವರಿಬ್ಬರೂ ಎರಡು ದಿನ ಡಿಪೋದಲ್ಲೇ ತಂಗಿದರು. ಊಟಕ್ಕೆ ಹೊರಗೆ ಹೋಗಬೇಕಿತ್ತು. ಅಡ್ಡೆಯಲ್ಲಿ ಬೆಂಕಿ ಹೇಗೆ ಮಾಡಗೊಟ್ಟಾರು? ಬಿಡುವಿನಲ್ಲಿ ದೌಲತ್ ರವಿವಾರ ಪೇಟೆಯಲ್ಲಿ ಸುತ್ತಾಡಿದ. ಧಾನ್ಯದ ಚೀಲ ಹೊರಲು ಒಂದು ಗುದಾಮದಲ್ಲಿ ಕೆಲಸ ದೊರೆಯಿತು. ದಿನಕ್ಕೆ ನಾಲ್ಕು ರೂಪಾಯಿ ಕೂಲಿ. ಆ ಗುದಾಮದಲ್ಲಿಯೇ ಇರಲು ಅನುವೂ ಆಯಿತು. ರೋಶನ್ ತನ್ನ ಸಂಸಾರ ಹೂಡಿದಳು. ತನ್ನ ಬಿಡುವಿನ ವೇಳೆಯಲ್ಲಿ ಏನಾದರೂ ಕೆಲಸ ಮಾಡಬಹುದಿತ್ತು. ಆಕೆ ಪೇಟೆಯಲ್ಲಿ ಹತ್ತಾರು

ಬೀಡಿ ಅಂಗಡಿಗಳಲ್ಲಿ ಕೇಳಿದಳು. "ನಿಮಗೆ ಬೀಡಿ ಕಟ್ಟಿ ಕೊಡಲೇ?" ಅವರೆಲ್ಲ ರೋಶನ್‌ಳ ಮೋರೆ, ಮೈ ಮಾಟಗಳತ್ತ ಹಸಿದವರಂತೆ ನೋಡಿದರು. ಆದರೆ ಕೆಲಸ ಕೊಡಲಿಲ್ಲ. ರಾತ್ರಿ, ಗುದಾಮಿನಲ್ಲಿ ಇಲಿ ಹೆಗ್ಗಣಗಳ ಕಾಟ. ಹಗಲು ಇತರ ಕೂಲಿಯವರ ಕಣ್ನೋಟ. ಎಲ್ಲರೂ ಮಿಕಿ ಮಿಕಿ ನೋಡುವವರೇ, ಬಯಲುಗಮ್ಮಾರನ ಸಂಸಾರ ನಿಟ್ಟಿಸುವಂತೆ. ದೌಲತ್‌ನಿಗೇ ಬೇಸರವೆನಿಸಿತು. ಆತ ಹೊಸ ಗುರುತಿನವರೊಬ್ಬರ ಮೂಲಕ ಚವಾಟ ಗಲ್ಲಿಯಲ್ಲಿ ಒಂದು ಕೋಣೆ ಹಿಡಿದ. ಎಂಟು ರೂಪಾಯಿ ಬಾಡಿಗೆ. ಬೆಳಗಿನಲ್ಲಿ ರೊಟ್ಟಿ ತಿಂದು ಚಹ ಕುಡಿದು ಹೋದರೆ ಮಧ್ಯಾಹ್ನ ಒಂದು ಗಂಟೆಗೆ ಬರುವ. ಮತ್ತೆ ಮೂರು ಗಂಟೆಗೆ ಹೋದರೆ ರಾತ್ರಿ ಎಂಟಾಗುತ್ತಿತ್ತು, ಬರಲು.

ರೋಶನ್ ಅವರಿವರಲ್ಲಿ ಮನೆಗೆಲಸಕ್ಕೆ ಹೋಗ ತೊಡಗಿದಳು. ಹತ್ತು ಹನ್ನೆರಡು ರೂಪಾಯಿ ದೊರೆಯ ಬೇಕಾದರೆ ಆಕೆಗೆ ದಿನವಿಡೀ ದುಡಿಯಬೇಕಾಗಿತ್ತು.

ರೋಶನ್‌ಳಿಗೆ ಇಂತಹ ಕೆಲಸದ ಅಭ್ಯಾಸವಿರಲಿಲ್ಲ. ಹಾಗೆ ಆಕೆ ಮಿರಜಿಯ ಮನೆಯಲ್ಲಿ ಕೆಲಸ ಮಾಡುತ್ತಿರಲಿಲ್ಲವೇನು? ಆದರೆ ಮನೆಯಲ್ಲಿ ಇದ್ದವರು ಇಬ್ಬರೋ, ಇಲ್ಲ ಮೂವರೋ. ಅಷ್ಟೇಷ್ಟು ಕೆಲಸವಿದ್ದೀತು? ಇಲ್ಲಿ ಮಾತ್ರ ಪರಾತ ತುಂಬಿದ ಮುಸುರೆ ಪಾತ್ರೆಗಳು, ಬಕೆಟು, ತುಂಬಿದ ಬಟ್ಟೆಗಳು, ಆಕೆಗೆ ಒಮ್ಮೊಮ್ಮೆ ಸೊಂಟ ಎತ್ತಲು ಆಗುತ್ತಿರಲಿಲ್ಲ. ಅಲ್ಲದೆ ಆಳದ ಬಾವಿಯಿಂದ ನೀರು ಸೇದಬೇಕು, ಒಬ್ಬಳೇ. ಅದೂ ರೋಶನ್‌ಗೆ ರೂಢಿಯಿಲ್ಲ. ಆದರೆ ಒಂದೇ ಏಳಿಗೆಗಾಗಿ ಆಕೆ ಇದನ್ನೆಲ್ಲ ಸಹಿಸಿಕೊಂಡಳು. ಅಷ್ಟು ಕೆಂಪಲ್ಲದ ಆಕೆಯ ಮೈಬಣ್ಣ ಕಪ್ಪಾಗತೊಡಗಿತು. ಮೈ ಸೊರಗತೊಡಗಿತು. ದೌಲತ್‌ನದಾದರೂ ಅಷ್ಟೇ. ಮಿರಜಿಯಲ್ಲಿ ಇಷ್ಟೊಂದು ಕೆಲಸ ಬೀಳುತ್ತಿರಲಿಲ್ಲ. ಮೈಗಳ್ಳತನ ಮಾಡಿದರೆ ನಡೆಯುವಂತಿತ್ತು. ಬೆಳಗಾವಿಯಲ್ಲಿ ಮಾತ್ರ ಉಸಿರಿಗೂ ಬಿಡುವಿಲ್ಲದಂತೆ ಕೆಲಸ ಮಾಡಬೇಕಿತ್ತು. ಅಡಕಲಿನಿಂದ ಚೀಲ ಇಳಿಸಿ, ತೂಗಿಸಿ, ಟ್ರಕ್ಕು ತುಂಬುವ ಕೆಲಸ ಆರಂಭವಾಯಿತೆಂದರೆ ಎರಡೆರಡು ಗಂಟೆ ಅದೇ ಕೆಲಸವಾಗುತ್ತಿತ್ತು. ಮಿರಜಿಯಲ್ಲೋ, ಮನೆಯಲ್ಲಿ ಎಮ್ಮೆಯಿತ್ತು. ಹಾಲು, ಮೊಸರು, ಬೆಣ್ಣೆ ಮೊದಲು ಮೊಮ್ಮಗನಿಗೆ ತಿನಿಸಿ ಹೆಚ್ಚಾದದನ್ನು ಮುದುಕಿ ಮಾರುತ್ತಿದ್ದಳು. ರೋಶನ್‌ಳಿಗೆ ಊಟದಲ್ಲಿ ಹಾಲು ಮೊಸರಿನ ರೂಢಿಯಿಲ್ಲ. ರೊಟ್ಟಿಗೆ ಖಾರವಾದದ್ದು ಯಾವುದಾದರೂ ಇದ್ದರೆ ಆಯಿತು. ಆಕೆಯ ದೃಷ್ಟಿಯಿಂದ ಅಡುಗೆ ಮುಗಿದಂತೆ.

ಅಜ್ಜಿಯ ಕಣ್ಮಣಿಯಾಗಿ ರುಚಿ ರುಚಿಯಾಗಿ ತಿಂದ ದೌಲತ್‌ನಿಗೆ ಇದು ಉಪವಾಸದಂತೆ ಎನಿಸಬೇಕು. ಆತ ಮೆಲ್ಲನೆ ಹೊರಗೆ ವಡೆ, ಪಕೋಡ, ದೋಸೆ ತಿನ್ನತೊಡಗಿದ. ಮನೆಗೆ ಬರುವ ಹಣ ಕಡಿಮೆಯಾಯಿತು. 'ಯಾವುದಾದರೂ ಸಿನೇಮಾಕ್ಕೆ ಹೋಗೋಣವೇ?" ಆತ ಒಂದು ರಾತ್ರಿ ಆಕೆಯನ್ನು ಕೇಳಿದ. ರೋಶನ್ ಅವನ ಮೇಲೆಯೇ ಎರಗಿದಳು. "ಮನೆ ವೆಚ್ಚ ಹೇಗೆ ತೂಗಿಸಿಕೊಂಡು ಹೋಗುತ್ತೇನೆಂಬುದು ನನಗೇ ಗೊತ್ತು. ಆದರಲ್ಲಿ ನೀನು ಕೊಡುವ ಹಣವೂ ಕಡಿಮೆಯಾಗಿದೆ. ನಿನಗೆ ನನ್ನ ಮೇಲಿನ ಪ್ರೇಮ, ವಿಶ್ವಾಸ ಕಡಿಮೆಯಾಗಿದೆ." ಆಕೆ ಅಳ ತೊಡಗಿದಳು. ಮೊದಲಿನಂತೆ ನೀನು ನನ್ನೊಡನೆ ಮಾತನಾಡುವುದಿಲ್ಲ. ನನ್ನಡೆ ಒಮ್ಮೊಮ್ಮೆ ನೋಡುವುದಿಲ್ಲ ಕೂಡ. ರಾತ್ರಿಯಾದರೋ ನಾನು ಚಿಂತೆಯಿಂದ ಜಂತಿಗಳತ್ತ ನೋಡುತ್ತಿದ್ದರೆ ನೀನು ಗೊರಕೆ ಹೊಡೆಯತೊಡಗುತ್ತೀ."

ದೌಲತ್‌ನ ಕರುಳು ಚುರ್ರೆಂದಿತು. ಪಾಪ ತನಗಾಗಿ ಮನೆ ಬಿಟ್ಟು ಬಂದ ಹುಡುಗಿ! ಆತ ಅವಳ ಮುಂಗೈ ಹಿಡಿದ. ಕೆಲಸದಿಂದ ಅವೂ ಎಷ್ಟು ಬಿರುಸಾಗಿವೆ ಎನ್ನಿಸಿತು ಅವನಿಗೆ. ಬಳೆಗಳೆಲ್ಲ ಎಷ್ಟು ಸಡಿಲಾಗಿವೆ. ಹೌದು ರೋಶನ್ ಸೊರಗುತ್ತಿದ್ದಾಳೆ. ಆತ ಅವಳನ್ನು ದೀರ್ಘವಾಗಿ ಅಲಂಗಿಸಿದ. ಆಕೆ ಮತ್ತೆ ಅಳತೊಡಗಿದಳು. "ನಾನು ಎಷ್ಟು ಕೆಟ್ಟವಳು! ನಿನಗೇ ಏನಾದರೂ ಎನ್ನುತ್ತೇನೆ. ನಿನ್ನ ಸುಖದ ಬಗ್ಗೆ ನಾನೆಂದಾದರೂ ಯೋಚಿಸುತ್ತೇನೆಯೇ? ನಾವು ಸಿನೇಮಾ ನೋಡಿ ಎಷ್ಟು ದಿನಗಳಾದವು! ನಿನಗೆ ಮತ್ತೆ ಹೋಗಬೇಕೆನಿಸಿದರೆ ನಾನು ಮುಟ್ಟುಗೋಲು ಹಾಕಿದೆ. ನಾನು ಪಾಪಿ." ಆಕೆ ಆಕ್ರೋಶದಿಂದ ಹಣೆ ಹಣೆ ಚಚ್ಚಿಕೊಂಡಳು.

"ನಿನ್ನದೇನೂ ತಪ್ಪಿಲ್ಲ. ನನಗಾಗಿ ನೀನು ಮನೆ ಬಿಟ್ಟು ಬಂದೆ. ನಿನ್ನನ್ನು ಸುಖದಲ್ಲಿರಿಸುವುದು ನನ್ನ ಕರ್ತವ್ಯ. ಅದನ್ನು ಮರೆತು ನಾನು ನನ್ನ ಹಿತವನ್ನೇ ನೋಡುತ್ತಿದ್ದೇನೆ" ಎಂದಿಲ್ಲ ದೌಲತ್‌ನ ಕಣ್ಣಲ್ಲಿ ನೀರೂರಿತು. ಎಲ್ಲದಕ್ಕೂ ತಾನೇ ಹೊಣೆಗಾರನೆಂದು ಅವರಿಬ್ಬರೂ ವಾದಿಸಿದರು. ಮನಸೋಕ್ತ ಅತ್ತರು, ಉತ್ತರ ರಾತ್ರಿಯವರೆಗೆ. ಹಳೆಯದನ್ನೆಲ್ಲ ನೆನೆಸಿ ಆಯಿತು. ಜೀವದಾಣೆಗಳಾದವು.

ಮರುದಿನ ದೌಲತ್‌ನಿಗೆ ರಜೆ. ಆತ ಸಮೀಪದಲ್ಲಿಯ ಕಟುಕರಲ್ಲಿಂದ ಕಾಲು ಸೇರು ಮಾಂಸ ತಂದ. ರೋಶನ್ ಗೋದಿಯ ರೊಟ್ಟಿಯೊಡನೆ ಮಾಂಸದ ಅಡುಗೆ ಮಾಡಿದಳು. ಹೊಟ್ಟೆಬಿರಿ ಉಂಡು ಎಲೆ ಮೆದ್ದರು. ಬಿಸಿಲು ಇಳಿದಾಗ ಇಬ್ಬರೂ ತಿರುಗಾಡಲು ಹೊರಟರು. ಗಣಪತಿಗಲ್ಲಿ ದಾಟುವಾಗ ಬೀದಿಯ ಬದಿಗೊಂದು ಗುಂಪು ಕಂಡಿತು. ರೋಶನ್ ಹಣಿಕ್ಕಿದಳು. ಬ್ಯಾಟರಿಯ ಮೇಲೆ ನಡೆಯುವ ಯಂತ್ರದಿಂದ ಒಬ್ಬ ಹಚ್ಚೆ ಬಟ್ಟು ಹಾಕುತ್ತಿದ್ದ. "ನಾನೂ ಹಚ್ಚೆ ಬಟ್ಟು ಹಾಕಿಸಿಕೊಳ್ಳಲೇ?" ಆಕೆ ಸಲುಗೆಯಿಂದ ದೌಲತ್‌ನನ್ನು ಕೇಳಿದಳು.

"ಏನು ಹಾಕಿಸಿಕೊಳ್ಳುತ್ತೀ?" ಆತ ಕುತೂಹಲದಿಂದ ಕೇಳಿದ.

"ಮತ್ತಿನ್ನೇನು? ನಿನ್ನ ಹೆಸರು?" ಆಕೆ ಮುಗುಳ್ನಗೆ ನಕ್ಕಳು. ಆತನೂ ನಕ್ಕಾಗ ಆಕೆ ಮುಂದಾದಳು.

ಹಚ್ಚೆ ಬಟ್ಟು ಹಾಕುವವ ನಾನಾ ಚಿತ್ರಗಳನ್ನು ಹರವಿಕೊಂಡು ಕುಳಿತಿದ್ದ. ಕೃಷ್ಣ, ನವಿಲು, ಗಿಳಿ, ಎತ್ತು, ಸೂರ್ಯ, ಸ್ವಸ್ತಿಕ ಕ್ರಾಸ್, ನಕ್ಷತ್ರ ಚಕ್ರ. ಇನ್ನೂ ಏನೇನೋ.

ರೋಶನ್ ಎಡ ಮುಂಗೈ ಮುಂದೆ ಚಾಚಿದಳು. "ಏನು ಹಾಕಲಿ?" ಆತ ಕೇಳಿದ.

"ಅವರ ಹೆಸರು ಹಾಕು ಸಣ್ಣ ಅಕ್ಷರದಲ್ಲಿ" ಆಕೆ ಹೇಳಿದಳು. "ಯಾವ ಹೆಸರು?" "ದೌಲತ್" ಆಕೆ ನಾಚಿದಳು. ಅಷ್ಟು ಗಂಡಸರ ನಡುವೆ ಹೆಸರು ಹೇಳಿದ್ದಕ್ಕೆ.

"ಇಂಗ್ಲಿಷಿನಲ್ಲಿ ಹಾಕಲೇನು?" ಆತ ಕೇಳಿದ. "ಬೇಡ ಮರಾಠಿಯಲ್ಲಿ ಹಾಕು" ದೌಲತ್ ಹೇಳಿದ.

"ನನಗೆ ಮರಾಠಿ ಬರುವುದಿಲ್ಲ. ಕನ್ನಡದಲ್ಲಿ ಹಾಕಲೇನು?" ಆತ ಮತ್ತೆ ಕೇಳಿದ. "ಹಾಕು, ಹಾಕು" ರೋಶನ್ ಹೇಳಿದಳು.

"ಏಕೆ ಮರಾಠಿ ಬೇಡವೇ?" ದೌಲತ್ ಕೇಳಿದ.

"ನನಗೆ ಕನ್ನಡವೂ ಬರುವುದಿಲ್ಲ. ಮರಾಠಿಯೂ ಬರುವುದಿಲ್ಲ. ಯಾವ ಭಾಷೆಯಲ್ಲಿ ಬರೆದರೂ ಅಷ್ಟೇ. ಉರ್ದುವಿನಲ್ಲಿ ಹಾಕುತ್ತಿದ್ದರೆ..." ಆಕೆ ನಾಲಗೆ ಕಚ್ಚಿಕೊಂಡಳು.

"ಉರ್ದೂ ಕೂಡ ಬರುವುದಿಲ್ಲಮ್ಮ" ಆತ ಅಸ




ಹಾಯಿಸಿದಂತೆ ಹೇಳಿದ. "ಹಾಗಾದರೆ ಕನ್ನಡದಲ್ಲೇ ಬರೆ" ಆಕೆ ಮುಂಗೈ ಒಡ್ಡಿದಳು. ಆತ ಎಣ್ಣೆ ಸವರಿ ಚುಗು ಚುಗು ಯಂತ್ರ ಆರಂಭಿಸಿದ. ಮಸಿಯಲ್ಲದ್ದಿ ಮುದ್ದಾಗಿ "ದೌಲತ್" ಎಂದು ಹಚ್ಚೆಬಟ್ಟು ಹಾಕಿದ. "ಹಿಂದೆ ಮುಂದೆ ಹೂವಿನ ಆಕಾರ ಬರೆಯಲೇ?" ಆತ ಕೇಳಿದಾಗ ದೌಲತ್ "ಬೇಡ" ಎಂದ.

ಪೆಟ್ಟಿಗೆಗೇರಿಸಿದ ಬಳೆ ಮುಂದೆ ಸರಿಸಿಕೊಂಡು ರೋಶನ್ ಎದ್ದಳು. ನೂರಾರು ಇರುವೆ ಕಚ್ಚಿದಂತೆ ಹಚ್ಚೆ ಬಟ್ಟಿನ ಗಾಯ ಹಿಂಸಿಸುತ್ತಿತ್ತು. ಆಕೆ ನಗತೊಡಗಿದಳು ಅದನ್ನು ಮರೆಯಲು. ಅದರ ಸುತ್ತ ಕೈಯಾಡಿಸತೊಡಗಿದಳು.

"ಏಕೆ ನೋಯುತ್ತದೇನು?" ಆತ ಪ್ರೇಮದಿಂದ ಕೇಳಿದ. ಆಕೆ "ಚಕ್" ಮಾಡಿದಳು. "ನಿನ್ನ ಹೆಸರೇನಾದರೂ, ಎಂದಾದರೂ ನೋಯಬಹುದೇನು?" ಆತ ಮನಸಾರೆ ನಕ್ಕ "ಯಾವ ಹೆಸರೇನು ರೋಶನ್, ಆ ಹಚ್ಚೆ ಬಟ್ಟಿನ ಸೂಜಿಗೆ? ಅದು ತನ್ನ ಚುಚ್ಚುವ ಕೆಲಸ ಮಾಡೇ ತೀರುತ್ತದೆ" ಆಕೆ ಅರ್ಥಪೂರ್ಣ ದೃಷ್ಟಿಯಿಂದ ಅವನೆಡೆ ನೋಡಿದಳು.

"ಯಾವುದಾದರೂ ಸಿನೇಮಾಕ್ಕೆ ಹೋಗೋಣವೇ?" ದೌಲತ್‌ನೇ ಕೇಳಿದ. ಸಂಜೆಗೆ ನನಗಂತೂ ಹಸಿವೆಯಿಲ್ಲ"

"ನನಗೂ ಹಸಿವೆಯಿಲ್ಲ" ಆಕೆ ಹೇಳಿದಳು.

ಇಬ್ಬರೂ ಹಂಸ ಟಾಕೀಜಿನಲ್ಲಿ ಸಿನೇಮಾ ನೋಡಿದರು. ಮೆಹಮೂದನ ವಿನೋದ ನೋಡಿ ಮನಸಾರೆ ನಕ್ಕರು. ರಾತ್ರಿ ಕೋಣೆಗೆ ಬಂದಾಗ ತೃಪ್ತಿಯಿಂದ ಮನಸ್ಸು ತುಳುಕಿ ಹೋಗಿತ್ತು. ರೋಶನ್‌ಗೆ ಇನ್ನೇನೂ ಬೇಕಾಗಿರಲಿಲ್ಲ.

ಚಿತ್ರಾ, ಹಸ್ತಾದ ಮಳೆಗಳಂತೆ ದೌಲತ್ ಪ್ರೇಮದ ವರ್ಷವನ್ನೆರೆದ ಮುಂದೆ ಹಲವು ದಿನ. ಆದರೇನು? ಮುಂದೆ ಪಡುವಣ ಗಾಳಿ ಬೀಸುವುದು ನಿಸರ್ಗ ಕ್ರಮ. ಬುಗ್ಗೆಯಂತೆ ಉಕ್ಕಿದ ಪ್ರೇಮ ಋತು ಚಕ್ರದಂತೆ ಕ್ಷೀಣವಾಯಿತು. ಮತ್ತೆ ಅದೇ ರೊಟ್ಟಿ ಊಟ, ಅದೇ ಗುದಾಮ, ಅಂತಹವೇ ತೊಗರಿ ಬೇಳೆ ಕಡಲೆ ಬೇಳೆಯ ಚೀಲಗಳು, ಅವೇ ಅವೇ ಟ್ರಕ್ಕುಗಳು, ಅವರೇ ಡ್ರೈವರರು, ಅದೇ ಕೋಣೆ, ಇಷ್ಟೇ ಏಕೆ, ಅದೇ ರೋಶನ್. ದೌಲತ್‌ನಿಗೆ ಬೇಜಾರೆನಿಸತೊಡಗಿತು. ಮೊದಲೋ ದುಂಡು ದುಂಡಾಗಿ ಮೈ ಕೈ ತುಂಬಿಕೊಂಡಿದ್ದಳು ರೋಶನ್. ಈಗ ಮಾಂಸವೆಲ್ಲ ಸವೆದು ಹಂದರವಷ್ಟೇ ಉಳಿದಿದೆ ಎನಿಸುತ್ತಿತ್ತು, ದೌಲತ್‌ನಿಗೆ ಒಮ್ಮೊಮ್ಮೆ. ಆಗ ಅಪಾಯಮಾನಿಸಿದ ಅವಳ ಸಂಗ ಈಗ ಬೇಸರವನ್ನುಂಟು ಮಾಡುತ್ತಿತ್ತು.

ತಾನು ದಿನೇ ದಿನೇ ಅಶಕ್ತಳಾಗುತ್ತಿದ್ದುದು ರೋಶನ್‌ಳಿಗೂ ತಿಳಿಯುತ್ತಿತ್ತು. ಆದರೆ ಕೆಲಸವಿಲ್ಲದೆ ಕುಳಿತರೆ ಹೇಗೆ? ಏರುಮಾರಿನ ವೆಚ್ಚ ನೀಗಿಸುವುದು ಸಾಮಾನ್ಯವೇ? ಕೆಲಸಕ್ಕೆ ಹೋದಲ್ಲಿ ತಂಗಳು ರೊಟ್ಟಿ, ಅನ್ನ ಒಮ್ಮೊಮ್ಮೆ ದೊರೆಯುತ್ತಿತ್ತು. ಆಕೆ ಮಧ್ಯಾಹ್ನದ ರಾತ್ರಿಯ ಊಟದ ಸಮಯದಲ್ಲಿ ಕದ್ದು ತಿನ್ನುತ್ತಿದ್ದಳು. ತಾನು ಇನ್ನೊಬ್ಬರ ಮನೆಯಿಂದ ತಂದುದು ದೌಲತ್‌ನಿಗೆ ಸೇರುವುದೋ ಇಲ್ಲವೋ, ಯಾರಿಗೆ ಗೊತ್ತು?

ಇಂತಹದರಲ್ಲಿ ರೋಶನ್ ಕೆಲಸಕ್ಕೆ ಹೋಗುತ್ತಿದ್ದ ಸುಭದ್ರಾಬೆನ್‌ಳ ಹೆರಿಗೆಯಾಯಿತು. ಮನೆಯಲ್ಲಿ ಮುದುಕಿ ಅತ್ತೆ. ದೊಡ್ಡ ಮಕ್ಕಳಿಬ್ಬರು. ಬಾಣಂತಿಗೆ ಮೈಗೆ ಎಣ್ಣೆ ಹಚ್ಚಲು ರೋಶನ್ ಸಿದ್ಧಳಾದಳು. ತಿಂಗಳೊಂದಕ್ಕೆ ಹತ್ತು ರೂಪಾಯಿ ಏನೂ ಕಡಮೆಯಲ್ಲ. ಕೂಸಿನ ಬಟ್ಟೆ ಒಗೆಯಲು ಮತ್ತೆ ಐದು ರೂಪಾಯಿ. ಮುಂಜಾವದ ಏಳು ಗಂಟೆಗೆ ಗಂಡನಿಗೆ ಬಿಸಿ ರೊಟ್ಟಿ ಪಲ್ಯ ಕೊಟ್ಟು ಆಕೆ ಸುಭದ್ರಾಬೆನ್‌ಳ ಮನೆಗೆ ಹೋಗಬೇಕು. ಬಾಣಂತಿಗೆ ಎಣ್ಣೆ ಹಚ್ಚಿ ಎರೆಯಬೇಕು. ಅಗ್ಗಿಷ್ಟಿಕೆ ಹಾಕಿ ಕೊಡಬೇಕು. ಕೂಸಿಗೆ ಎಣ್ಣೆ ಹಚ್ಚಿ ಮುಂಗಾಲ ಮೇಲೆ ಹಾಕಿಕೊಂಡಾಗ ಅದರ ಅಜ್ಜಿ ಬಿಸಿ ಬಿಸಿ ನೀರು ಹಾಕಬೇಕು. ಕೂಸು ತೊಟ್ಟಿಲಲ್ಲಿ ಮಲಗಿದೊಡನೆ ಉಳಿದ ಕೆಲಸಕ್ಕೆ ಆಕೆಗೆ ಬಿಡುವು.

ಮುದುಕಿಗೆ ಅಡುಗೆಯ ಕೆಲಸವೂ ನೀಗುತ್ತಿರಲಿಲ್ಲ. ರೋಶನ್ ಮುಂದಾಗಿ ಆಕೆಗೆ ಅಕ್ಕಿ ಬೇಳೆ ಗೋದಿ ಆರಿಸಿ ಕೊಡಬೇಕು. ತರಕಾರಿ ಆರಿಸಿ ಹೆಚ್ಚಿ ಕೊಡಬೇಕು. ಕಸ ಗುಡಿಸಿ ನೆಲ ಒರೆಸಬೇಕು. ಇವೆಲ್ಲ ಆಕೆಯ ಕೆಲಸಗಳಲ್ಲ. ಆದರೆ ಆ ತುಂಬಿದ ಮನೆ ಬಿಟ್ಟು ಹೋಗಬಾರದೆಂದೆನಿಸುತ್ತಿತ್ತು ಆಕೆಗೆ. ತೊಟ್ಟಿಲಿನಲ್ಲಿಯ ಕೂಸು ಅಳತೊಡಗಿದರೆ ಎದ್ದು ಆಕೆ ಅದನ್ನು ತೊಡೆಯ ಮೇಲೆ ಹಾಕಿಕೊಳ್ಳುತ್ತಿದ್ದಳು. ಬಾಟಲಿಯಿಂದ ಹಾಲು ಕುಡಿಸುತ್ತಿದ್ದಳು. ಕೂಸು ನೋಡುತ್ತಿದ್ದಂತೆ ಒಮ್ಮೊಮ್ಮೆ ಆಕೆಯ ಹೃದಯ ಉಕ್ಕಿ ಬರಬೇಕು. ಇದು ಹೀಗೇಕೇ, ಏನು ಆಕೆಗೆ ಅರ್ಥವಾಗುತ್ತಿರಲಿಲ್ಲ. ಯಾರದೋ ಕೂಸಿಗೆ ತನ್ನ ಎದೆ ಯಾಕೆ ತುಡಿಯಬೇಕು?

"ಎಷ್ಟು ಚಿಕ್ಕವಳಿದ್ದರೂ ಹೇಗೆ ಕೆಲಸ ನಿಭಾಯಿಸಿಕೊಂಡು ಹೋಗುತ್ತಾಳೆ!" ಎನ್ನಬೇಕು ಮುದುಕಿ. ಬಾಣಂತಿಗಾಗಿ ಮಾಡಿದ ಸಿಹಿ ಸಜ್ಜಿಗೆ ಉಳಿದದ್ದು ಆಕೆಗೆ ಕೊಡಬೇಕು. ಎರಡು ಮೂರು ಸಲ ಚಹ ಕೊಡಬೇಕು. ಮಧ್ಯಾಹ್ನ ಒಮ್ಮೊಮ್ಮೆ ಮುದುಕಿಯೊಡನೆ ಅಲ್ಲೇ ಊಟವೂ ಆಗುತ್ತಿತ್ತು. ಅನ್ನ, ಸಾರು, ಪಲ್ಯ, ಚಪಾತಿ, ಸಕ್ಕರೆ ಯಥಾಸ್ಥಿತ. ಸಜ್ಜಿಗೆ ತಿನ್ನುವಾಗ, ಮೃಷ್ಟಾನ್ನ ಉಣ್ಣುವಾಗ ರೋಶನ್‌ಗೆ ಒಮ್ಮೊಮ್ಮೆ ದೌಲತ್‌ನ ನೆನಪಾಗಬೇಕು. ತಾನು ಹೀಗೆ ರುಚಿ ರುಚಿಯಾದದ್ದನ್ನು ಹೊಟ್ಟೆ ತುಂಬ ತಿನ್ನುತ್ತಿದ್ದೇನೆ. ಅವನಿಗೇನಿದೆ? ಖಿನ್ನತೆಯಿಂದ ಬಾಯಿಯಲ್ಲಿಯ ತುತ್ತು ತಿರುಗಬೇಕು. ಮುದುಕಿ ಇದನ್ನು ಒಂದೆರಡು ಸಲ ನೋಡಿದಳು.

"ಹುಡುಗೀ, ನಿನ್ನದೂ ಗಡಿಬಿಡಿ ಇದೆಯೇನು?" ಆಕೆ ಬಚ್ಚ ಬಾಯಿಯಿಂದ ನಕ್ಕಾಗ ರೋಶನ್‌ಗೆ ಅರ್ಥವಾಯಿತು. ಆಕೆ "ಪಚ್" ಮಾಡಿದಳು. ಕಳೆದ ಐದಾರು ತಿಂಗಳುಗಳಲ್ಲಿ ಮುಟ್ಟು ಒಂದೆರಡು ದಿನ ಮುಂದೆ ಹೋದರೆ ಏನೋ ಆಸೆ ಎನಿಸುತ್ತಿತ್ತು. ಆದರೆ ಅದು ಒಡೆಯುವುದಕ್ಕಾಗಿ ಮಾತ್ರ. ಆ ಎರಡು ದಿನ ಹುರುಪಿನಿಂದ ಮಾತನಾಡಿದ ರೋಶನ್‌ಳ ಉತ್ಸಾಹ ಮೂರನೆ ದಿನ. ಅಂದಿನಿಂದ ಮೂರು ದಿನ ಕೆಲಸಕ್ಕೆ ರಜೆ–ಇಳಿದು ಹೋಗುತ್ತಿತ್ತು. ನಿರ್ವಾಹವಿಲ್ಲದೆ ಆಕೆ ಗಂಡನಿಗಾಗಿ ಕೂಳು ಕುಚ್ಚಬೇಕು.

ಇದನ್ನೆಲ್ಲ ನೆನೆಸಿಕೊಳ್ಳುತ್ತಿದ್ದಂತೆ ಆಕೆಯ ಕಣ್ಣು ಕೇವಾದವು. "ಏನೂ ಇಲ್ಲ, ಹಾಗೇನೂ ಇಲ್ಲ. ಒಮ್ಮೊಮ್ಮೆ ಅವರ ನೆನಪಾಗುತ್ತದೆ." ಆಕೆ ಅವಸರದಿಂದ ಹೇಳಿದಳು. "ಇಂತಹದು ಅವರಿಗೆಲ್ಲಿ ದೊರೆಯಬೇಕು?" ರೋಶನ್ ನೀರು ಕುಡಿದಳು. "ಅಜ್ಜಿ, ಒಂದು ಮಾತು ಕೇಳಲಾ?"

ಮುದುಕಿ ಮೋರೆಯೆತ್ತಿ ಮೇಲೆ ನೋಡಿದಳು. "ನನಗೆ ಕೊಡುವುದನ್ನೆಲ್ಲ ಬೇರೆಯಾಗಿಡಿರಿ. ನಾನು ಮನೆಗೆ ಒಯ್ಯುತ್ತೇನೆ" ಆಕೆ ಮುದುಕಿಯ ಮೋರೆ ನಿಟ್ಟಿಸಲೆತ್ನಿಸಿದಾಗ ಅದು ಕೆಳಗಾಯಿತು. ಅಂದರೆ ತಾನು ಹೇಳುವುದರಲ್ಲಿ ಹೆಚ್ಚು ಕಡಿಮೆ ಆಯಿತೇನು? ತನ್ನದೇನಾದರೂ ತಪ್ಪಿತೇನು? ತಾನೇನು ಅವರಿಂದ ಹೆಚ್ಚಿನದನ್ನು ಬೇಡಲಿಲ್ಲ. ಆತಂಕದಿಂದ ಆಕೆಗೆ ಊಟ ಬೇಡವಾಯಿತು. ಆಕೆ ನೀರು ಕುಡಿದು ಎದ್ದಳು. ಬಚ್ಚಲಿಗೆ ಹೋಗಿ ಕೈ ತೊಳೆದುಕೊಂಡಳು. ಮುದುಕಿಯ ಊಟವೂ ಮುಗಿದಿತ್ತು. ರೋಶನ್ ರೂಢಿಯಂತೆ ತಟ್ಟೆಯೆತ್ತಿಟ್ಟಳು. ಉಳಿದ ಅಡುಗೆ ಮುಚ್ಚಿಟ್ಟಳು. ಮುಸುರೆ ಪಾತ್ರ ತೆಗೆದಿರಿಸಿದಳು. ನೀರು ಹಾಕಿ ನೆಲ ಒರೆಸಿದಳು. "ಅಜ್ಜೀ, ನಾನು ಮನೆಗೆ ಹೋಗುತ್ತೇನೆ. ಅವರು ಬರುವ ಹೊತ್ತಾಯಿತು" ಆಕೆ ಹೇಳಿದಳು.

ಅಡಕೆ ಪುಡಿ ಮೆಲ್ಲುತ್ತಿದ್ದ ಮುದುಕಿ ತಿರುಗಿ ನೋಡಿದಳು. "ಮುಕ್ತಾ, ಒಂದು ಮಾತು ಹೇಳಲೇ?" ರೋಶನ್ ಸಮೀಪ ಹೋದಳು. "ಗಂಡನ ಮೇಲೆ ಇಷ್ಟು ಜೀವ ಇರಬಾರದು. ಅವರು ಹೊರಗೆ ಬೇಕಾದುದೆಲ್ಲ ತಿನ್ನುತ್ತಾರೆ." ಮುದುಕಿ ಹೇಳಿದಾಗ ರೋಶನ್ ಪುಟದೆದ್ದಳು. "ನಮ್ಮವರು ಹಾಗಲ್ಲ ಅಜ್ಜಿ, ನಮ್ಮವರು ಹಾಗಲ್ಲ. ಅಂತೆಯೇ ಅವರನ್ನು ಬಿಟ್ಟು ತಿನ್ನುವಾಗ ಜೀವ ಕಡಿಯುತ್ತದೆ." ಅವಳ ಕಣ್ಣಂಚಿನಿಂದ ಎರಡು ಹನಿಗಳು ಉದುರಿದುವು.

"ಹೀಗೆಯೇ ನಿನ್ನ ಸೌಭಾಗ್ಯ ಉಳಿಯಲಮ್ಮ. ನಿನ್ನ ಗಂಡ ಅಂತಹವನಿದ್ದರೆ ಅವನು ಭಾಗ್ಯಶಾಲಿ, ನೀನೂ ಅದೃಷ್ಟವಂತೆ." ಹೋಗುವಾಗ ನಾಲ್ಕು ಚಪಾತಿ ಪಲ್ಯ ಸ್ವಲ್ಪ ಅನ್ನ ತೆಗೆದುಕೊಂಡು ಹೋಗು. ಶಾಲೆಯಿಂದ ಮಧ್ಯಾಹ್ನ ಮರಳಿದ ಬಳಿಕ ಹುಡುಗರು ಉಣ್ಣುವುದು ಅಷ್ಟರಲ್ಲೇ ಇದೆ".

ರೋಶನ್ ಬೇಡವೆಂದರೂ ಆಗ್ರಹದಿಂದ ಮುದುಕಿ ಚಪಾತಿ, ಪಲ್ಯ, ಅನ್ನ, ಸಾರು ಕೊಟ್ಟಳು.

ಅದನ್ನು ಮನೆಗೆ ತರುತ್ತಿದ್ದಂತೆ ರೋಶನಳ ಮನಸ್ಸು ಮೂಕ ಮೇಷ ಮಾಡತೊಡಗಿತು. "ತಾನು ಬೇಡವೆಂದರೂ ಮುದುಕಿ ಕೊಟ್ಟಳು. ಇನ್ನು ದೌಲತ್‌ನಿಗೆ ಇದೆಲ್ಲವೂ ಸೇರುವುದೋ, ಇಲ್ಲವೋ, ಯಾರಿಗೆ ಗೊತ್ತು. ಆದರೆ ದೌಲತ್ ಅದರಲ್ಲೇನೂ ದೋಷವೆಣಿಸಲಿಲ್ಲ. ಮರುದಿನ ರೋಶನ್ ಊಟದೊಡನೆ ತನ್ನ ಪಾಲಿನ ಸಿಹಿ ಸಜ್ಜಿಗೆಯನ್ನೂ ತಂದಳು. ದೌಲತ್‌ನಿಗೆ ಮೋಜೆನಿಸಿತು. ದಿನವೂ ಏನಾದರೂ ತರುವುದು ನಡೆಯಿತು. ಅತ್ತೆಯ ಔದಾರ್ಯ ಹೊರಸಿನ ಮೇಲೆ ಒಳಗೆ ಮಲಗಿದ್ದ ಸುಭದ್ರಾಬೆನ್‌ಗೆ ಮೈ ಚುಚ್ಚುತ್ತಿತ್ತು. ತನ್ನ ಕೈಯಿಂದ ಆಗುವುದಿಲ್ಲವೆಂದು ಅದೊಂದು ತಿಂಗಳು ಆಕೆ ಹೇಗೋ ಸಹಿಸಿದಳು. ಕೂಸಿಗೆ ಆರು ವಾರ ಆದಾಗ ಆಕೆ ಮೈಗೆ ಎಣ್ಣೆ ಹಚ್ಚಿಕೊಳ್ಳುವುದನ್ನು ನಿಲ್ಲಿಸಿದಳು. "ಮುಕ್ತಾ, ನಾಳೆಯಿಂದ ಮೈಗೆ ಎಣ್ಣೆ ಹಚ್ಚುವುದು ಬೇಡ" ಆಕೆ ಹೇಳಿದಾಗ ರೋಶನ್‌ಳ ಉಸಿರು ಕಟ್ಟಿದಂತಾಯಿತು. ನೀವು ಹಣ ಕೊಡುವುದು ಬೇಡ. ನಾನು ಹಾಗೆಯೇ ಹಚ್ಚುತ್ತೇನೆ ಎನ್ನಬೇಕೆನ್ನಿಸಿತೊಮ್ಮೆ. ಹಣಕ್ಕಾಗಿಯೇ ಅವರು ಬಿಡಿಸುತ್ತಿದ್ದರೆ, ಸೀರೆಯನ್ನೆಲ್ಲ ಮೇಲೆ ಸರಿಸಿಕೊಂಡು ತಪ ತಪ ಎಣ್ಣೆ ಹಚ್ಚಿದ ಕೂಸು ಕಾಲ ಮೇಲೆ ಹಾಕಿಕೊಂಡು ಅದಕ್ಕೆ ಸ್ನಾನ ಹಾಕುವುದೂ, ನಿದ್ದೆ ತಿಳಿದೆದ್ದ ಬಳಿಕ ಬಾಟಲಿಯಲ್ಲಿ ಹಾಲು ಹಾಕಿ ತೊಡೆಯ ಮೇಲೆ ಮಲಗಿಸಿಕೊಂಡು ಕುಡಿಸುವುದೂ ಅವಳಿಗೆ ಎಷ್ಟೊಂದು ಒಗ್ಗಿಕೊಂಡಿದ್ದವು!

ಅಗ್ಗಿಷ್ಟಿಕೆ ಹಾಕುತ್ತಿದ್ದಂತೆ ಸುಭದ್ರಾಬೆನ್ ಇನ್ನೊಮ್ಮೆ ಹೇಳಿದಳು. "ಇಂದಿಗೆ ನೀನು ಎಣ್ಣೆ ಹಚ್ಚ ತೊಡಗಿ ತಿಂಗಳು ಮುಗಿಯಿತು, ನಾಳೆಯಿಂದ ಬೇಡ" "ಆಗಲಿ"



ಅಂದಳು ರೋಶನ್. "ಕೂಸಿನ ಬಟ್ಟೆ ಒಗೆಯುವುದು ಇರಲೋ ಅಥವಾ?" "ಅದು ಇರಲಿ. ಅದನ್ನಾರು ಮಾಡುವರು?" ಸುಭದ್ರಾಬೆನ್ ಮಲಗಿದಲ್ಲಿಂದಲೇ ಗುಡುಗಿದಳು. "ನಾಳೆನಿಂದ ಮುಂಜಾನೆ ಒಂಬತ್ತು ಗಂಟೆಗೆ ಬಂದು ಮುಸುರೆ, ಬಟ್ಟೆ ಮುಗಿಸಿ ಹತ್ತು ಗಂಟೆಗೆ ಹೋಗು. ಮಧ್ಯಾಹ್ನ ನಾಲ್ಕು ಗಂಟೆಗೆ ಮುಸುರೆಗೆ ಬಾ."

ರೋಶನ್‌ಳ ಮೋರೆ ಇಳಿಯಿತು. "ಆಗಲಿ,ಬಾಯಿ ಸಾಹೇಬ್" ಆಕೆ ಸೋತ ದನಿಯಲ್ಲಿ ಹೇಳಿದಳು.

ಮರು ವಾರದಿಂದಲೇ ಆಕೆ ಮನೆಯ ವೆಚ್ಚಕ್ಕೆ ಕತ್ತರಿ ಹಾಕಿದಳು. ಶನಿವಾರದ ಸಂತೆಯಲ್ಲಿ ಹಳೆಯ ಬಟ್ಟೆಗಳದೊಂದು ಸಾಲೇ ಹತ್ತಿರುತ್ತದೆ ಬೆಳಗಾವಿಯಲ್ಲಿ. ರೋಶನ್ ತನಗಾಗಿ ಕೊಂಡಿದ್ದ ಹಳೆಯ ಸೀರೆಗಳೆರಡೂ ಅಲ್ಲಲ್ಲಿ ಬಳೆ ಬಿಟ್ಟಿದ್ದವು. ದೌಲತ್‌ನಿಗೂ ಚೀಲ ಹೊತ್ತು ಹೊತ್ತು ಬೆನ್ನ ಮೇಲಿನ ಮಂಡಿಯ ಬಟ್ಟೆ ಹಳೆಯ ಹೋಳಿಗೆಯಾಗಿತ್ತು. ಅವನಿಗೂ ಹೊಸದು ಕೊಳ್ಳಬೇಕು. ವಲ್ಯಕ್ಕೆ ಹಾಕುವ ಮಸಾಲೆ, ವಾರಕ್ಕೊಮ್ಮೆ ಆಗುವ ಮಾಂಸದ ಅಡಿಗೆ ಕಡಿಮೆಯಾಯಿತು. ಹಣ ಉಳಿಯಲೇ ಇಲ್ಲ. ಏನೇನೋ ನಿಮಿತ್ತದಿಂದ ಕೈಬಿಟ್ಟು ಹೋಯಿತು. ದೌಲತ್‌ನಿಗೆ ಮನೆಯ ಊಟ ಬೇಸರವೆನಿಸತೊಡಗಿತು. ಆತ ಹೊರಗೆ ಪಕೋಡ, ಚಕ್ಕುಲಿ, ದೋಸೆ ತಿನ್ನತೊಡಗಿದ. ರೋಶನ್‌ಗೆ ಕೊಡುವ ಹಣ ಕಡಿಮೆಯಾಯಿತು. ಆಕೆ ಮರು ಮಾತಿಲ್ಲದೆ ಮತ್ತೆ ವೆಚ್ಚ ಕಡಿಮೆ ಮಾಡಿದಳು.

ರವಿವಾರಪೇಟೆಯಲ್ಲಿ ಒಮ್ಮೆ ಮಿರಜಿಯ ಕ್ಲೀನರ್ ಹುಡುಗ ಸಿಕ್ಕಿದಾಗ ದೌಲತ್ ಮೋರೆ ತಪ್ಪಿಸಲೆತ್ನಿಸಿದ. ಆತ ಬಿಡಬೇಕಲ್ಲ? "ದೌಲೂ" ಆತ ತಾನಾಗಿ ಕರೆದಾಗ ನಿರ್ವಾಹವಿಲ್ಲದೆ ದೌಲತ್ ಆವನೆಡೆ ನೋಡಿದ. ಇದಿರು ಅಂಗಡಿಯಲ್ಲಿ ಚಹ ಸವಿಯುತ್ತಿದ್ದಂತೆ ಹಳೆಯ ನೆನಹುಗಳೆಲ್ಲ ತಳಕು ಮೇಲಾದುವು. "ಮುದುಕಿ ಹೇಗಿದಾಳೆ?" ದೌಲತ್ ಕೇಳಿದ. "ನಾನು ಅತ್ತ ಹೋಗೇ ಇಲ್ಲ" ಆ ಹುಡುಗ ಹೇಳಿದ. ಎಂಟು ದಿನಗಳ ನಂತರ ದೌಲತ್‌ನ ಸೋದರ ಮಾವ ಶೋಧಿಸುತ್ತ ಬಂದ. ಅವನನ್ನು ಕಂಡೊಡನೆ "ಮನೆಗೆ ಹೋಗೋಣ, ನಡೆ" ಎಂದ.

ದೌಲತ್‌ನಿಗೆ ಅಚ್ಚರಿಯಾಯಿತು.ತಾನು ಇಲ್ಲಿದ್ದುದು ಇವನಿಗೆ ಹೇಗೆ ತಿಳಿಯಿತು? ಆತ ಮಾತನಾಡಲಿಲ್ಲ. ಮಾವ ಅವನನ್ನು ನೂರು ಹೆಜ್ಜೆ ದೂರ ಒಯ್ದ.

"ಎಷ್ಟು ಬಡಕಲಾಗಿದ್ದೀ? ಬರಿಯ ಎಲುವಿನ ಹಂದರ ಉಳಿದಿದೆ. ಅತ್ತ ಮುದುಕಿ ಸೊರಗಿ ಸಾಯಲಾಗಿದ್ದಾಳೆ, ಆಕೆಗೆ ನಿನ್ನದೇ ಧ್ಯಾನ. ಯಾರಾದರೂ ಅಪರಿಚಿತರು ಮನೆಯಲ್ಲಿ ಕಾಲಿಟ್ಟರೆ, ನನ್ನ ದೌಲೂ, ಎಂದು ಕೂಗುತ್ತಾಳೆ." ಹೇಳುತ್ತಿದ್ದಂತೆ ಮಾವನ ಕಣ್ಣು ತೇವಾದುವು. "ಈಗ ಮೋತಿಬಿಂದು ಆಗಿ ಆಕೆಗೆ ಕಾಣುವುದೂ ಇಲ್ಲ." ದೌಲತ್‌ನಿಗೂ ಹಳೆಯದೆಲ್ಲ ನೆನಪಾಯಿತು. ಅವನೂ ಅಳತೊಡಗಿದ.

* * * *

ಅಂದು ರಾತ್ರಿ ರೋಶನ್ ದೌಲತ್‌ನಿಗಾಗಿ ಕಾದೇ ಕಾದಳು. ಮನೆಯ ಒಳ ಹೊರಗೆ ಹತ್ತಾರು ಬಾರಿ ಮಾಡಿದಳು. ದೋತರ ಗಂಡುಗಚ್ಚೆ ಹಾಕಿದ, ಮಾಸಲು ಅಂಗಿಯವರು ಯಾರಾದರೂ ದೂರಿನಿಂದ ಕಂಡರೆ ಆಕೆ ಹಾಗೆಯೇ ನಿಲ್ಲಬೇಕು. ಆತ ದೌಲತ್ ಅಲ್ಲ ಎಂದು ತಿಳಿಯುವ ವರೆಗೆ. ಬೀದಿಯಲ್ಲಿಯ ಜನರು ಬರುಹೋಗುವುದು ಕಡಿಮೆಯಾದಾಗ ಆಕೆ ಬಾಗಿಲು ಮುಂದೆ ಮಾಡಿ ಕವದಿ ಹಾಕಿಕೊಂಡು ಅಡ್ಡಾದಳು. ಗೆಳೆಯರ ಆಗ್ರಹಕ್ಕಾಗಿ ಎಲ್ಲಿ ಹೊರಟೇ ಉಂಡು ಸಿನೇಮಾಕ್ಕೆ ಹೋಗಿದ್ದಾನೇನು? ಇರಬಹುದು. ಒಂದೊಂದು ಸಲ ಅವನಿಗೂ ಮೋಜು ಮಾಡುವ ಲಹರು ಬರುತ್ತದೆ. ಆಕೆ ಬಿಚ್ಚು ಕಣ್ಣಿನಿಂದ ಶೂನ್ಯದತ್ತ ನೋಡುತ್ತ ಯೋಚಿಸಿದಳು. ಮಿರಜಿಯಲ್ಲಿದ್ದಾಗ ಎಷ್ಟೊಂದು ಸುಖದಿಂದ ಚಕ್ಕಂದದಿಂದ ಇರುತ್ತಿದ್ದ! ಈಗ ಅವನಿಗೂ ಕೆಲಸ ಬಹಳ ಬೀಳುತ್ತದೆ. ಒಮ್ಮೊಮ್ಮೆ ಬೇಜಾರಾಗುತ್ತದೆ. ಅಂದು ಆತ ತನ್ನೊಡನೆ ಕೂಡ ಮಾತನಾಡುವುದಿಲ್ಲ. ಮಾಳಿಗೆಯತ್ತ ನೋಡುತ್ತ ಹಾಗೇ ಮಲಗಿ ಬಿಡುತ್ತಾನೆ, ತನ್ನನ್ನೂ ಮರೆತು. ಅವನ ಕಣ್ಣಂಚು ಹಸಿಯಾದದ್ದು ಆ ಮಂದ ಬೆಳಕಿನಲ್ಲೂ ಕಾಣುತ್ತದೆ. ಪಾಪ, ಎಷ್ಟು ಕಷ್ಟ...!

ಕಲಕಲ ಬಾಯಿ ಮಾಡುತ್ತ ಹುಡುಗರ ಗುಂಪೊಂದು ಬೀದಿಗುಂಟ ಹೋದದ್ದು ಕೇಳಿದಾಗ ರೋಶನ್‌ಗನ್ನಿಸಿತು. ಸಿನೇಮಾ ಬಿಟ್ಟಿತು. ಇನ್ನು ಬರಲು ಅಡ್ಡಿಯಿಲ್ಲ. ಮೂರು ನಾಲ್ಕು ಗುಂಪುಗಳು ಹೋದರೂ ಯಾರೂ ತನ್ನ ಬಾಗಿಲು ತಟ್ಟಲಿಲ್ಲ. ರೋಶನ್‌ಗೆ ನಿರಾಶೆಯಾಯಿತು. ಬಹುಶಃ ದೂರದ ಥೇಟರಿಗೆ ಹೋಗಿರಬಹುದು. ಮತ್ತೊಮ್ಮೆ ಆಕೆಗನ್ನಿಸಿತು. ಊರಲ್ಲಿ ಮರಾಠಿ ನಾಟಕದ ಕಂಪನಿ ಬಂದಿದೆ. ನಾಟಕ ಮುಗಿಯುವುದು ಎರಡು ಮೂರು ಗಂಟೆಗಂತೆ! ದೌಲತ್ ಮರಾಠಿ ನಾಟಕಕ್ಕೇನಾದರೂ ಹೋಗಿರಬಹುದೇನು? ಹಂಬಲದ ಪಿಸುಕು ಎಳೆಗೆ ಕಟ್ಟಿದ ನಿರಾಶೆಯ ಕತ್ತಿ ಅವಳ ನೆತ್ತಿಯ ಮೇಲೆ ತೂಗಾಡಿತು. ಒಮ್ಮೆ ಮಲಗಿ, ಒಮ್ಮೆ ಕುಳಿತು ಧೇನಿಸುತ್ತಿದ್ದ ರೋಶನ್‌ಗೆ ಮುಂಜಾವದ ಕೋಳಿ ಕೂಗಿದಾಗ ಮಾತ್ರ ಜೋರಾಗಿ ಅಳು ಬಂತು. ಆಕೆ ಬಿಕ್ಕಿ ಬಿಕ್ಕಿ ಅತ್ತಳು. ಆವನೆಲ್ಲೂ ಹೋಗಿರಲಿಕ್ಕಿಲ್ಲ. ಮನೆಗೆ ಬರುವಾಗ ಟ್ರಕ್ಕಿನ ಅಥವಾ ರಿಕ್ಷಾದ ದಕ್ಕೆ ಹತ್ತಿರಬೇಕು. ಎಲ್ಲಾದರೂ ದವಾಖಾನೆಯಲ್ಲಿ ಹಾಕಿರಬೇಕು. ಅವಳ ಕಾದ ಮನಸ್ಸು ಇಲ್ಲಿಲ್ಲದ ವಿಚಾರ ಹೊಸೆಯಿತು.

ಮುಂಜಾನೆ ಏಳು ಗಂಟೆಗೇ ಆಕೆ ರವಿವಾರ ಪೇಟೆಯಲ್ಲಿಯ ಆ ಗುದಾಮಿಗೆ ಹೋದಳು. ಇನ್ನೂ ಯಾರೂ ಬಂದಿರಲಿಲ್ಲ. ಅಂಗಡಿಗಳ ಕಟ್ಟೆಗಳ ಮೇಲೆ ರಾತ್ರಿಯ ಕುಡಿತದ ಅಮಲು ಇಳಿಯದವರನೇಕರು ಅಸ್ತವ್ಯಸ್ತವಾಗಿ ಪವಡಿಸಿದ್ದರು. ರೋಶನ್‌ಳ ಎದೆ ಝಲ್ಲೆಂದಿತು. ದೌಲತ್‌ನೇನಾದರೂ ಹೀಗೆಯೇ ಕುಡಿದು ಎಲ್ಲಾದರೂ ಬಿದ್ದಿರಬಹುದೇ? ಆಕೆ ತರಕಾರಿ ಮಾರ್ಕೇಟಿನಿಂದ ರವಿವಾರಪೇಟೆ ಕೂಟದ ವರೆಗೆ ಎರಡು ಸಲ ಸುತ್ತಾಡಿದಳು. ಊಂ. ಎಲ್ಲೂ ಇಲ್ಲ. ಬಳ ಬಳ ಮಾಡುತ್ತಿದ್ದ ಕಾಲು ಎಳೆದುಕೊಂಡು ಆಕೆ ಗುದಾಮದ ಕಟ್ಟೆಯ ಹತ್ತಿರ ಕುಕ್ಕರಿಸಿದಳು. ಕಣ್ಣು ಬತ್ತಿ ಹೋಗುತ್ತಿದ್ದವು. ತಲೆ ಜಡವಾಗಿತ್ತು. ಉರಿಯುವ ಕಣ್ಣು ಕಣ್ಣಿಗೆ ಹತ್ತಿದಂತಾಯಿತು. ಆಕೆ ಇನ್ನೂ ಎಷ್ಟು ಹೊತ್ತು ತೂಕಡಿಸುತ್ತಿದ್ದಳೋ?

"ಯಾರವರು? ಬದಿಗೆ ಸರಿಯಿರಿ."

ಬಿಚ್ಚಲಾರದ ಕಣ್ಣು ಬಿಚ್ಚಿ ಆಕೆ ಎದ್ದು ನಿಂತಳು. ಬಾಗಿಲು ಬೀಗ ತೆಗೆಯಲು ಬಂದವನನ್ನು ಆಕೆ ಮೊದಲು ಗುದಾಮಿನಲ್ಲಿ ಇರಲು ಬಂದಾಗ ನೋಡಿದ್ದಳು.

"ದೌಲತ್ ರಾತ್ರಿ ಮನೆಗೆ ಬರಲಿಲ್ಲ" ಆಕೆಗೆ ಇಷ್ಟೇ ಹೇಳಬೇಕಾದರೆ ಎಷ್ಟು ಪ್ರಯಾಸವೆನಿಸಿತು. "ಎಲ್ಲಾದರೂ ಸೂಳೆಯ ಮನೆಗೆ ಹೋಗಿರಬೇಕು" ಆ ಮುದುಕ ಸಹಜವಾಗಿ ಹೇಳಿಬಿಟ್ಟ.

"ಇಲ್ಲ ಅಣ್ಣಾ, ಅವರು ಅಂತಹವರಲ್ಲ" ಆಕೆ ಅಷ್ಟೇ ಪ್ರಯಾಸದಿಂದ ಉಗುಳು ನುಂಗಿ ಹೇಳಿದಳು.

"ಏನು ಹೇಳುತ್ತೀ?" ಆ ಮುದುಕ ತಲೆಯ ಮೇಲಿನ ಮಾಸಿದ ಟೊಪ್ಪಿಗೆ ತೆಗೆದು ಪಟ ಪಟನೆ ತೊಡೆಗೆ ಬಡಿದುಕೊಂಡು ಜಾಡಿಸಿದ. "ಸರಾಯಿ, ಸೂಳೆ, ಮಟಕಾದ ಅಂಕಿಗಳ ಹುಚ್ಚಿಲ್ಲದ ಹಮಾಲಿ (ಕೂಲಿ) ನನಗಿನ್ನೂ ಭೆಟ್ಟಿಯಾಗಿಲ್ಲ." ಅವನ ಆತ್ಮವಿಶ್ವಾಸ ನೋಡಿ ರೋಶನ್‌ಗೆ ಹೊಟ್ಟೆಯಲ್ಲಿ ಕಗ್ಗ ಬಿದ್ದಂತಾಯಿತು. ಅವಳ ಕಾಲು ನಡುಗತೊಡಗಿ ತಾನಿಲ್ಲೆ ಬೀಳುತ್ತೇನೋ ಎನ್ನಿಸಿತು ರೋಶನ್‌ಗೆ.

"ಇನ್ನಾರನ್ನಾದರೂ ಕೇಳಲೇನು?" ಆಕೆ ಜಗುಟು ಆಸೆಯಿಂದ ಕೇಳಿದಳು.

"ಓಹೋ, ಬೇಕಾದಷ್ಟು ಜನರನ್ನು ಕೇಳು" ಆ ಮುದುಕ ದೂರದಲ್ಲಿಯ ಅಂಗಡಿ ತೋರಿಸಿದ. "ಅದೇ ಅಂಗಡಿ ಅಲ್ಲಿ ದೌಲತ್‌ನ ಗೆಳೆಯರಿದ್ದಾರೆ ಸಾಕಷ್ಟು ಜನರು. ಅವರನ್ನು ಕೇಳು. ಯಾವ ಗಲ್ಲಿಗೆ ಯಾವ ಬಾಯಿಯ ಹತ್ತಿರ ಹೋಗಿದ್ದ, ಅದನ್ನೂ ಹೇಳಬಹುದು ಅವರು" ಮುದುಕ ಕುತ್ಸಿತವಾಗಿ ನಕ್ಕಾಗ ನೆಲ ಬಾಯಿ ಬಿಟ್ಟು ತನ್ನನ್ನು ನುಂಗಿದರೆ ಒಳ್ಳೆಯದು ಎನಿಸಿತು ಆಕೆಗೆ.

ಹಾಗೆಯೇ ಆಕೆ ಕಾಲೆಳೆಯುತ್ತ ಅಂಗಡಿಯ ವರೆಗೆ ಹೋದಳು. ಅಲ್ಲಿದ್ದವರು ನಾಲ್ಕು ಜನ. ತುದಿಗುಂಡಿಯ ಮೇಲೆ ಕುಳಿತು ಎಲೆ ಅಡಿಕೆ ವಿನಿಮಯ ಮಾಡಿಕೊಳ್ಳುತ್ತಿದ್ದರು. ಒಬ್ಬ ತನ್ನ ಎಡ ಅಂಗೈ ಮೇಲೆ ತಂಬಾಕು ಸುಣ್ಣ ಮೊಣಿಗೆ ತಿಕ್ಕುತ್ತಿದ್ದ. ರೋಶನ್‌ಗೆ ಸಂಕೋಚವೆನಿಸಿತು. ಆಕೆ ಅಲ್ಲಿಯೇ ನಿಂತಳು. ತಂಬಾಕು ತೀಡುತ್ತಿದ್ದವನ ಲಕ್ಷ ಹೋದಾಗ ಆತ ಅತ್ತಿತ್ತ ನೋಡುತ್ತ ಅವಳು ನಿಂತಲ್ಲಿಗೆ ಬಂದ. "ಏನು, ಬೇಕಿತ್ತೇನು?"

ರೋಶನ್‌ಳಿಗೆ ತಾನು ಗುದಾಮದಲ್ಲಿದ್ದಾಗ ಅವನನ್ನೂ ನೋಡಿದ್ದು ನೆನಪಾಯಿತು.

"ದೌಲತ್ ರಾತ್ರಿ ಮನೆಗೆ ಬರಲಿಲ್ಲ" ಆಕೆ ಶಕ್ಯವಿದ್ದಷ್ಟು ನಿರ್ವಿಕಾರತೆ ಎಳೆದು ತಂದ ದನಿಯಲ್ಲಿ ಹೇಳಿದಳು.

"ಆ?" ಆತ ಹಿಂದಿರುಗಿ ನೋಡಿದ. "ದೌಲತ್ ನಿನ್ನೆ ಸಂಜೆಗೆ...?" ತನ್ನ ಸ್ನೇಹಿತರನ್ನು ಕೇಳಿದಂತೆ ಮಾಡಿದ. ಅಂಗಡಿ ಕಟ್ಟೆಗೆ ಕುಳಿತವರಲ್ಲಿಂದ ಇನ್ನೊಬ್ಬ ಇಳಿದು ಬಂದ.

"ನೀವು ಹೋಗಲಿಲ್ಲವೇ?" ಆತ ಚಕಿತನಾದವನಂತೆ ಕೇಳಿದ. "ಮಿರಜಿಯಲ್ಲಿ ಮುದುಕಿಯ ಮೈಯಲ್ಲಿ ಹುಷಾರಿಲ್ಲವೆಂದು ದೌಲತ್ ನಾಲ್ಕು ಗಂಟೆಗೇ ಇಲ್ಲಿಂದ ಹೋದ"

"ಹಾಂ. ನಿನ್ನೆಯ ಕೂಲಿ ಕೂಡ ತೆಗೆದುಕೊಂಡು ಹೋದ" ಮೊದಲಿನವ ಹೇಳಿದ.

"ಅವನ ಜೊತೆ ಯಾರೋ ಬಂದಿದ್ದರು. ಹೌದಲ್ಲವೇನೋ ಶ್ರೀಪತಿ?"

"ಹಾಂ ಹಾಂ. ತನ್ನ ಸೋದರಮಾವ ಎಂದು ಹೇಳುತ್ತಿದ್ದ" ಎಂದ ಶ್ರೀಪತಿ.

"ನಮಗನ್ನಿಸಿತು ನೀವೂ ಅವನ ಜತೆಗೆ ಹೋಗಿರಬಹುದು."

"ಇಲ್ಲ" ಎಂದಳು ರೋಶನ್ ದನಿ ಬಿಗಿದು. "ಆತುರಿಗೆ ಟ್ರೇನಿಗೆ ಅವಸರವಾಗಿರಬೇಕು."

"ಯಾರಿಂದಲಾದರೂ ಕನಿಷ್ಠ ನಿರೋಪ ಕಳಿಸಬಹುದಾಗಿತ್ತಲ್ಲ?" ಶ್ರೀಪತಿ ಸಹಾನುಭೂತಿಯಿಂದ ಕೇಳಿದ.

"ಅವರು ಹೇಳಬಹುದು. ನಿರೋಪ ತಿಳಿಸಬೇಕಾದವರು ಮರೆತಿರಬಹುದು" ಆಕೆ ಹೇಳಿದಳು.

"ಒಂದೆರಡು ದಿನಗಳಲ್ಲಿ ಬರಬಹುದು. ನೀವೇನೂ ಚಿಂತಿಸಬೇಡಿರಿ" ಶ್ರೀಪತಿ ತಂಬಾಕು ಬಾಯಿಗೆ ಬಿಡುತ್ತಿದ್ದಂತೆ ಹೇಳಿದ.

ಒಂದೆರಡೇಕೆ, ನಾಲ್ಕಾರು ದಿನಗಳಾದರೂ ದೌಲತ್

ಬರಲಿಲ್ಲ. ಎರಡು ಸಾಲಿನ ಪತ್ರವನ್ನೂ ಬರೆಯಲಿಲ್ಲ. ಅವನಿಲ್ಲವೆಂದು ಹಸಿವೆ, ನಿದ್ದೆ, ನೀರಡಿಕೆ ಹಿಂಗಬಹುದೇ?

ಯಂತ್ರವತ್ತಾಗಿ ಮತ್ತೆ ಎಲ್ಲ ಆರಂಭವಾಯಿತು, ಅವೇ ಮನೆಗಳು. ಅವೇ ಪಾತ್ರೆಗಳು, ಆಕೆ ಬೆಳಗುತ್ತಿದ್ದಳು, ಅವು ಮಸಿಯಾಗುತ್ತಿದ್ದವು.

*   *   *   *

ತನಗೆ ಎರಡು ಹೊತ್ತು ಊಟಕ್ಕೆ ಹಾಕಿ ತಿಂಗಳಿಗೆ ಹದಿನೈದು ರೂಪಾಯಿ ಕೊಟ್ಟರೆ ಸಾಕು. ಮನೆಯಲ್ಲಿಯ ಎಲ್ಲ ಕೆಲಸ ಮಾಡುತ್ತೇನೆ. ಅಲ್ಲೇ ಇರುತ್ತೇನೆಂದು ಹೇಳಿದ್ದಕ್ಕೆ ಸುಭದ್ರಾಬೆನ್ ಇಲ್ಲೆನ್ನಲಾರದೆ ಅವರನ್ನು ಕೇಳುತ್ತೇನೆಂದು ಹೇಳತೊಡಗಿ ನಾಲ್ಕು ದಿನಗಳಾದವು. ಅವರಿವರು ಕೊಟ್ಟ ತಂಗಳು ರೊಟ್ಟಿ ಅನ್ನ ಸಾರು ಮನೆಗೆ ತರುತ್ತಿದ್ದಂತೆ ರೋಶನ್ ಯೋಚಿಸುತ್ತಿದ್ದಳು. ನೆತ್ತಿಯ ಮೇಲಿನ ಬಿಸಿಲಿನಂತೆ ಹೊಟ್ಟೆಯು ಚುರುಗುಡುತ್ತಿತ್ತು. ಮೂರು ವಾರಗಳಾಗಿ ಹೋದರೂ ದೌಲತ್ ಬರಲಿಲ್ಲ. ಮುಂದೇನು? ಎನ್ನುವ ಪ್ರಶ್ನೆ ಎಷ್ಟೋ ಸಲ ಅನಪೇಕ್ಷಿತವಾಗಿ ದುತ್ತೆಂದು ಅವಳೆದುರು ನಿಲ್ಲುತ್ತಿತ್ತು, ಆಕೆ ಅದನ್ನೆದುರಿಸುವ ಬದಲು ತನ್ನ ಹಳೆಯ ನೆನಹುಗಳನ್ನು ಕೆದಕುತ್ತಿದ್ದಳು. ತನ್ನ ದೌಲತ್ ಬರಲಾರನೇ? ತನ್ನನ್ನೆಂದಾದರೂ ಮರೆತಾನೆಯೇ? ನೀನು ನನ್ನ ಜೀವನದ ರೋಶನ್ ಎಂದು ಆತ ಹೇಳಿದ್ದ. ಅದಕ್ಕೆ ತಾನು ನೀನು ನಮ್ಮ ಜೀವನದ ದೌಲತ್ತು ಎಂದು ಹೇಳಿದ್ದೆ, ನಾಯಿ ಒಣ ಮೂಳೆ ಕಡಿಯುವಂತೆ ರೋಶನ್ ಅದನ್ನೇ ಅದನ್ನೇ ಸವಿಯುತ್ತಿದ್ದಳು. ಅದನ್ನು ಬಿಟ್ಟರೆ ಆಯುಷ್ಯದಲ್ಲಿ ಇನ್ನೇನಿದೆ?

ಮನೆ ಸಮೀಪಿಸುತ್ತಿದ್ದಂತೆ ಬಾಗಿಲ ಹತ್ತಿರ ಯಾರೋ ಕುಳಿತಂತೆ ಕಂಡಿತು. ಈ ಮಟ ಮಟ ಮಧ್ಯಾಹ್ನದಲ್ಲಿ ತನ್ನ ಬಾಗಿಲಿಗೆ ಯಾರು ಬರಬೇಕು? ಹೆಂಗಸು ಅದೂ ನಡು ವಯಸ್ಸಿನಾಕೆ. ಬೇಗ ಬೇಗ ಹೆಜ್ಜೆ ಹಾಕಿದಳು ರೋಶನ್. "ಅಮ್ಮಿ ಜಾನ್" ಆಕೆಗೆ ಎದೆಯುಕ್ಕಿ ಬಂದಿತು. ಕೈಯಲ್ಲಿಯ ಪಾತ್ರೆಗಳನ್ನು ಕೆಳಗಿಟ್ಟು ಆಕೆ ತಾಯಿಯನ್ನು ಬಿಗಿದಪ್ಪಿದಳು. "ಬಿಟಿಯಾಂ" ಜುಬೇದಾ ಮಗಳ ಬೆನ್ನ ಮೇಲೆ ಕೈಯಾಡಿಸಿದಳು. ಅವಳ ಕೈ ಮೈ ಒತ್ತಿದಳು. ಕಣ್ಣು ಧಾರಾಕಾರವಾಗಿ ಸುರಿಯತೊಡಗಿತು. "ಮಗಳೇ, ಎಷ್ಟು ಸೊರಗಿದ್ದೀ?" ರೋಶನ್ ಅಪ್ಪುಗೆ ಬಿಡಿಸಿಕೊಂಡು ಬಾಗಿಲ ಬೀಗ ತೆಗೆದಳು. ಕವದಿ ಹಾಸಿದಳು. ಹೊರಗಿಟ್ಟ ಪಾತ್ರೆ ತಂದು ಕಿಟಕಿಯ ಬಾಗಿಲು ತೆಗೆದಳು. ತನ್ನ ಕೈ ಚೀಲವನ್ನೆತ್ತಿ ಜುಬೇದಾ ಒಳಗೆ ಬಂದಳು. ಕವದಿಯ ಮೇಲೆ ಕುಳಿತು ಮಗಳ ಸಂಸಾರ ನೋಡಿದಳು. ಮಗಳನ್ನೊಮ್ಮೆ ನೋಡಿದಳು, ದಿಂಡು ಹಾಕಿ ಜೋಡಿಸಿದ ಸೀರೆಯಲ್ಲಿಯ ಎಲುವಿನ ಹಂದರದಂತಿದ್ದ ಮಗಳನ್ನು ನೋಡಿದಾಗ ಅವಳ ದುಃಖ ಮತ್ತೆ ಕಟ್ಟೆಯೊಡೆಯಿತು. "ಮಗಳೇ" ಆಕೆ ಆರ್ದ್ರ ದನಿಯಿಂದ ಕರೆದಾಗ ರೋಶನ್ ಮತ್ತೆ ತಾಯಿಯ ಮಡಿಲು ಸೇರಿದಳು. ಕಣ್ಣ ಬಿಚ್ಚಿದ ಕರು ತಾಯಿಯ ಕೆಚ್ಚಲಿಗೆ ಹಾದಂತೆ ಇಬ್ಬರೂ ಮನಸೋಕ್ತ ಅತ್ತರು.

"ಎಷ್ಟು ಬಡವಾಗಿದ್ದೀ?" ರೋಶನ್ ಕೇಳಿದಳು ತಾಯಿಯನ್ನು. ಜುಬೇದಾ ಉರಿಯುತ್ತಿದ್ದ ಮೂಗು ಒರಸಿಕೊಳ್ಳುತ್ತಿದ್ದಳು.

"ಅಮ್ಮಾ, ನಾನಿಲ್ಲಿದ್ದದ್ದು ನಿನಗೆ ಹೇಗೆ ಗೊತ್ತಾಯಿತು?"

"ದೌಲತ್ ಹೇಳಿದ."



ರೋಶನ್‌ಳ ಎದೆ ಡವಗುಟ್ಟಿತು. "ಅವರಲ್ಲಿ ಭೆಟ್ಟಿಯಾದರು ನಿನಗೆ?"

"ಇನ್ನೆಲ್ಲಿ? ಮಿರಜಿಯಲ್ಲಿ. ಅವನ ಮದುವೆಯಾಯಿತಲ್ಲ?"

ರೋಶನ್ ಎಷ್ಟೋ ಅದುಮಿದರೂ ಶೋಕ ತಡೆಯಲಾಗಲಿಲ್ಲ.

"ಅವರ ಮದುವೆಯಾಯಿತೇ?"

"ಹೌದಮ್ಮ ಹೌದು. ಇಂದು ನಾಲ್ಕು ದಿನಗಳಾದವು. ಅವನು ಅಲ್ಲಿ ಕಂಡ ನಂತರ ನಾನು ಎಷ್ಟು ಸಲ ಯತ್ನಿಸಿದರೂ ಅವನು ಮೋರೆ ತಪ್ಪಿಸಿದ. ನಾನು ಕರೆದರೂ ಓ ಎನ್ನಲಿಕ್ಕಿಲ್ಲ, ಅವನ ಮದುವೆಯಲ್ಲಿ ಮಾತ್ರ ನಾನು ಅವನನ್ನು ಬಿಡಲಿಲ್ಲ. ನಾನು ಹತ್ತು ಸಲ ಕರೆದ ನಂತರ ಬೇಸರದಿಂದ ಒಮ್ಮೆ ಬಂದ. ನಾನು ಅತ್ತು ಅವನನ್ನು ಕೇಳಿದ್ದೆ, ನನ್ನ ಮಗಳನ್ನು ಕೊಂದೆಯೇನಪ್ಪ" ಎಂದು.

"ಅವರೇನೆಂದರು ?"

"ಸುಡು ನಿನ್ನ ಮಗಳನ್ನು," ಎಂದ. "ತನ್ನ ಮರಣದಿಂದ ಆಕೆ ತಾನು ಸಾಯುತ್ತಾಳೆ, ನಾನೇಕೆ ಕೊಲ್ಲಲಿ?" ಎಂದ. ಅವನೇ ಹೀಗೆ ಹೀಗೆ ಹೋಗು ಎಂದ. ನಾನು ಬಂದೆ."

ರೋಶನ್ ತಾಯಿಯ ಮೋರೆ ನೋಡಿದಳು, ಇದೆಲ್ಲ ನಿಜವೇ? ಇರಬಹುದು, ಇಲ್ಲದಿದ್ದರೆ ಹೇಳಿ

ಕಳಿಸಿದವರಂತೆ ಆಕೆ ತನ್ನ ಮನೆಯವರೆಗೆ ಹೇಗೆ ಬರುತ್ತಿದ್ದಳು? ಅಂದರೆ ತನ್ನ ದೌಲತ್ ಇನ್ನೊಬ್ಬಳ ಸೊತ್ತಾದನೇ? ಆಕೆಗರಿವಿಲ್ಲದೆ ಹಲ್ಲು ಬಿಗಿದವು.

"ನಡೆ ಮಗಳೇ, ಸಾಮಾನು ಕಟ್ಟಿಕೋ, ಊರಿಗೆ ಹೋಗೋಣ". ಜುಬೇದಾ ಹೇಳಿದ್ದು ಕೇಳದಂತೆ ರೋಶನ್ ಅತ್ತಿತ್ತ ನೋಡಿದಳು. ತಂದ ತಂಗಳು ಅನ್ನವನ್ನು ಒಂದು ತಟ್ಟೆಯಲ್ಲಿ ಹಾಕಿದಳು. ಇನ್ನೊಂದರಲ್ಲಿ ರೊಟ್ಟಿ ಹಾಕಿದಳು. ಸಾರಿನ ಪಾತ್ರೆ ನಡುವೆ ಇಟ್ಟಳು. "ಅಮ್ಮಾ ರೊಟ್ಟಿ ತಿಂದು ಮಾತನಾಡೋಣ".

ಜುಬೇದಾ ಲೋಟೆಯಲ್ಲಿಯ ನೀರಿನಿಂದ ಕೈಬಾಯಿ ತೊಳೆದುಕೊಂಡಂತೆ ಮಾಡಿದಳು. ರೋಶನ್ ಕೂಡ ಕೈ ತೊಳೆದುಕೊಂಡು ಬಂದಳು. "ಇವೆಲ್ಲಿಯ ರೊಟ್ಟಿ?"

ಬಿರುಸು ರೊಟ್ಟಿ ದವಡೆಯಿಂದ ಅಗಿಯುತ್ತಿದ್ದಂತೆ ಜುಬೇದಾ ಕೇಳಿದಳು. "ನಾನು ಕೆಲಸಕ್ಕೆ ಹೋಗುತ್ತೇನೆ. ಅಲ್ಲಿ ಕೊಡುತ್ತಾರೆ." ರೋಶನ್ ಹೇಳಿದಳು.

"ಕೆಲಸ?" ಜುಬೇದಾಗೆ ಆಚ್ಚರಿಯೆನಿಸಿತು "ಎಂತಹ ಕೆಲಸ?"

ಏನು ಹೇಳಬೇಕೆಂಬುದು ರೋಶನ್‌ಗೆ ಕ್ಷಣಕಾಲ ಹೊಳೆಯಲಿಲ್ಲ. "ಮನೆಗೆಲಸ" ಆಕೆ ಎಂದಳು ತಾಯಿಯತ್ತ ನೋಡಿ. "ನಿನಗೆ ರೊಟ್ಟಿ ಬಿರುಸೆನಿಸುತ್ತಿದ್ದರೆ ನೀರಿನಲ್ಲಿಡು. ಮೆತ್ತಗಾಗುತ್ತದೆ."

"ನಾನು ರೈಲಿನಲ್ಲಿ ತಿಂದೇ ಬಂದೆ. ಹಸಿವೆಯಿಲ್ಲ" ತಾಯಿಗೆ ತನ್ನ ಊಟ ಸೇರಲಿಲ್ಲವೆಂಬುದು ಕ್ಷಣಾರ್ಧದಲ್ಲಿ ತಿಳಿಯಿತು ಮಗಳಿಗೆ. "ಅಮ್ಮಾ, ನಿನಗೆ ಬೇಕೆನಿಸಿದರೆ ಅಕ್ಕಿ ತಂದು ಅನ್ನ ಮಾಡಿಕೊಡುತ್ತೇನೆ" ಆಕೆ ಹೇಳಿದಳು.

"ಬೇಡ ಮಗಳೇ ಬೇಡ", ಆಕೆ ಉಟ್ಟ ಸೀರೆಗೆ ಕೈ ಒರೆಸಿಕೊಂಡು ಚಂಚಿಗೆ ಕೈಹಾಕಿದಳು.

"ಅಮ್ಮಾ, ನೀನು ಸೊರಗಿದ್ದೀ, ಬಹಳ" ವಿಷಯಾಂತರ ಮಾಡಲೆಂದು ರೋಶನ್ ಹೇಳಿದಳು.

"ನಿನ್ನ ಅಬ್ಬಾಜಾನ್ ತೀರಿದ ನಂತರ ನನ್ನ ಊಟವೇ ಕಡಿಮೆಯಾಯಿತು ನೋಡು" ಜುಬೇದಾ ಹೇಳಿದಾಗ ಮಗಳು ಆವಾಕ್ಕಾದಳು. "ಅಬ್ಬಾಜಾನ್ ತೀರಿದರು?" ಕೇಳುವಾಗ ಆಕೆಯ ಗಂಟಲು ಒಣಗಿತ್ತು.

"ನಿನಗೆ ಗೊತ್ತಿಲ್ಲ?"

"ಇಲ್ಲ"

"ಮುಂಬಯಿಯಿಂದ ಟ್ರಕ್ಕು ತೆಗೆದುಕೊಂಡು ಬರುತ್ತಿದ್ದರು. ಕರಾಡದ ಹತ್ತಿರ ತಿರುವಿನಲ್ಲಿ ಸ್ಟೀಯರಿಂಗ್ ರಾಡ್ ಮುರಿಯಿತಂತೆ. ಗಾಡಿ ಹಳ್ಳಕ್ಕೆ ಬಿದ್ದಿತು. ಅವರು ಅಲ್ಲೇ ತೀರಿದರು. ನಾನೂ ಹೋಗಿದ್ದೆ ಕರಾಡಕ್ಕೆ, ಹೆಣ ಮಣ್ಣು ಮಾಡಲು."

ರೋಶನ್ ಮಾತನಾಡಲಿಲ್ಲ ಎಷ್ಟೋ ಹೊತ್ತು. ಜುಬೇದಾ ಉಸಿರು ಹಾಕಿದಳು ನೀಳವಾಗಿ. "ಎಲ್ಲ ಮುಗಿಯಿತು" ಆಕೆ ಎಂದಳು.

ರೋಶನ್‌ಳ ಕಣ್ಣೆದುರು ಬಶೀರ್ ಬೇರೆ ಬೇರೆ ಭಂಗಿಗಳಲ್ಲಿ ಕಾಣಿಸಿಕೊಂಡ. ಚಪ್ಪಲಿ ಹಾಕಿಕೊಂಡು ಸಿನೇಮಾಕ್ಕೆ ಹೊರಟಂತೆ, ಹಲ್ಲಿನಲ್ಲಿ ಸಿಕ್ಕಿದ ಅಡಿಕೆಯನ್ನೋ, ಮಾಂಸದ ತುಂಡನ್ನೋ ಕಡ್ಡಿಯಿಂದ ತೆಗೆಯುತ್ತಿದ್ದಂತೆ, ತನ್ನಿಂದ ಕಾಲೊತ್ತಿಸಿಕೊಳ್ಳುತ್ತಿದ್ದಂತೆ, ಜುಬೇದಾಳೊಡನೆ ಸಲುಗೆ ಗೈಯ್ಯುತ್ತಿದ್ದಂತೆ.

"ಹಾಗಾದರೆ ನೀನು ಮನೆಯಲ್ಲಿ ಒಬ್ಬಳೇ?" ಕೌತುಕ ಸ್ವರದಿಂದ ರೋಶನ್ ಕೇಳಿದಾಗ ಜುಬೇದಾ ಗೋಣು ಹಾಕಿದಳು ಕೌಲೆತ್ತಿನಂತೆ. "ನನಗೆ ಮತ್ತೆ ಯಾರಿದ್ದಾರೆ ಹೇಳು?" ಆಕೆಯ ದನಿ ಸೀಳಿದಂತಾಯಿತು. ಸುತ್ತುವರಿದು ಮಾತು ಅಲ್ಲಿಗೇ ಬಂದಿತೆಂದು ರೋಶನ್ ಮಾತು ಬೆಳೆಸಲಿಲ್ಲ. ಎದ್ದು ಉಳಿದ ಅನ್ನ ಮುಚ್ಚಿಟ್ಟಳು. ನೀರು ಕುಡಿದಳು. "ಅಡ್ಡಾಗು, ಅಮ್ಮ. ಸ್ವಲ್ಪ ವಿಶ್ರಾಂತಿ ತೆಗೆದುಕೊಂಡಂತಾಗುತ್ತದೆ" ರೋಶನ್ ತಾನೇ ಅಡ್ಡಾದಳು ಮೊದಲು ಕವದಿಯ ಮೇಲೆ.

"ಮಗಳೇ, ಊರಿಗೆ ಹೋಗೋಣ ನಡೆ. ಹೀಗೆ ಅನಾಥರಂತೆ ಯಾರದೋ ಮನೆಯ ಕಸಮುಸುರೆ ಮಾಡಿಕೊಂಡು ಎಂಜಲು ಅನ್ನ ತಿಂದುಕೊಂಡು ಇರುವ ಬದಲು, ಅಲ್ಲಿ ನಿನ್ನ ಹಕ್ಕಿನ ಮನೆ ಇದೆ" ಗೋಡೆಗಾತು ಕುಳಿತಂತೆ ಜುಬೇದಾ ಹೇಳಿದಳು.

ರೋಶನ್ ಮಾತನಾಡಲಿಲ್ಲ. "ಮಗಳೇ" ಎಂದು ತಾಯಿ ಕರೆದರೆ ಮಗ್ಗಲು ಬದಲಿಸಿದಳು.

"ನಿನ್ನ ಪರಿಸ್ಥಿತಿ ನನಗೆ ಅರ್ಥವಾಗುತ್ತದೆ. ಆದರೆ ನೀನು ಮಿರಜಿಗೆ ಬಂದರೆ ಮೋರೆ ಕೆಳಗೆ ಹಾಕಬೇಕಾಗುವುದಿಲ್ಲ" ಇಷ್ಟು ಹೇಳಿದರೂ ರೋಶನ್ ಹೊರಳಿ ನೋಡಲಿಲ್ಲ.

"ನೀನು ಮನೆ ಬಿಟ್ಟು ಹೋದೊಡನೆ ದೌಲತ್‌ನ ಬಗ್ಗೆ ವಿಚಾರಿಸಿದವು. ಅವನೂ ಇಲ್ಲವೆಂದ ಬಳಿಕ ತಿಳಿಯಬೇಕಾದುದು ತಿಳಿಯಿತು. ಪೋಲೀಸ್‌ರಿಗೆ ತಕ್ರಾರು ಕೊಡೋಣ ಎಂದೆ ನಾನು. ಬೇಡ ಎಂದರು ನಿನ್ನ ಅಬ್ಬಾಜಾನ್. ಬರಿ ಊರ ತುಂಬೆಲ್ಲ ಬೊಬ್ಬಾಟವಾಗುತ್ತದೆ. ತಾಸಗಾಂವಕ್ಕೆ ನನ್ನ ಅಕ್ಕ ಇದ್ದಾಳೆ. ಆಕೆಯ ಮೈಯಲ್ಲಿ ಸರಿಯಿಲ್ಲ. ಅಲ್ಲಿ ಮಾಡಲು ಮಟ್ಟಲು ಕಳಿಸಿದ್ದೇನೆಂದು ಹೇಳು ಎಂದರು. ಎಷ್ಟೊಂದು ಮುಂಧೋರಣೆ ಅವರದು!" ಜುಬೇದಾ ಮತ್ತೆ ಬಿಕ್ಕಿದಳು, ಗಂಡನ ನೆನಪಿನಿಂದ. "ಊರಲ್ಲಿಯ ಪರಿಚಿತರೆಲ್ಲ ನೀನು ತಾಸಗಾಂವದಲ್ಲಿ ಇದ್ದೀ ಎಂದೇ ತಿಳಿದಿದ್ದಾರೆ."

"ನಾನು ಮಿರಜಿಗೆ ಬರುವುದಿಲ್ಲಮ್ಮ"

"ಏಕೆ? ಇಲ್ಲಿದ್ದುಕೊಂಡು ಏನು ಮಾಡುತ್ತೀ? ನಿನ್ನನ್ನು ಕರೆತಂದವ ನಿನ್ನ ಕೈ ಬಿಟ್ಟು ಬೇರೊಂದು ಹುಡುಗಿಯ ಕೈಗೆ ಕಂಕಣ ಕಟ್ಟಿದ. ಇಲ್ಲಿ ಹೀಗೆ ಕೀಳು ಕೆಲಸ ಮಾಡುತ್ತಾ ಎಂತೋ ಹೊಟ್ಟೆ ತುಂಬಿಕೊಂಡರೆ ಏನು ಸಾಧಿಸಿದ ಹಾಗಾಯಿತು?"

"ಅಲ್ಲಿ ಬಂದಾದರೂ ಏನು ಮಾಡಬೇಕಾಗಿದೆ?"

"ನಾನೊಂದು ಚಿಕ್ಕ ದಿನಸಿ (ಕಿರಾಣಿ) ಅಂಗಡಿ ತೆರೆದಿದ್ದೇನೆ. ಅಲ್ಲಿ ನನಗೆ ನೆರವಾಗು. ಬೀಡಿ ಕಟ್ಟುವ ಕೆಲಸ ಎಷ್ಟೆಂದರೂ ಮಾನದ್ದು. ಅಂಗಡಿಯಲ್ಲಿ ಕುಳಿತು ಬೀಡಿ ಕಟ್ಟಬೇಕು. ಗಿರಾಕಿ ಬಂದಾಗ ಎದ್ದು ಸಾಮಾನು ಕೊಟ್ಟು ಮತ್ತೆ ಕೆಲಸಕ್ಕೆ ಕೂಡ್ರಬೇಕು. ಯಾರೊಬ್ಬರು ಏನೇ ಅನ್ನಬೇಕಾಗಿಲ್ಲ. ನಿನ್ನಷ್ಟಕ್ಕೆ ನೀನು ಸ್ವತಂತ್ರಳು. ಮೇಲಾಗಿ ರೊಟ್ಟಿಗೆ ಹೆಸರಿಡಬಾರದು, ಆದರೆ ನೀನು ತಿನ್ನುವ ರೊಟ್ಟಿ, ರೊಟ್ಟಿಯೇ? ಬಿಕ್ಕೆ ಬೇಡಿ ತಿನ್ನುವವರಿಗೂ ಇದಕ್ಕಿಂತ ಒಳ್ಳೆಯ ಅನ್ನ ಸಿಕ್ಕುತ್ತಿರಬಹುದು."

ರೋಶನ್‌ಗೆ ಎಲ್ಲ ತಿಳಿಯುತ್ತಿತ್ತು. ಆದರೆ ಮರಳಿ ಹೇಗೆ ಹೋಗಬೇಕೆಂದು ಅಭಿಮಾನ ಅಡ್ಡ ಬರುತ್ತಿತ್ತು.

"ಮಿರಜಿಗೆ ಬೇಡವಾದರೆ ಬಿಡು. ಇನ್ನೆಲ್ಲಿಯಾದರೂ ಹೋಗೋಣ: ನಾನೂ ಅಲ್ಲಿ ಬರುತ್ತೇನೆ..." ಜುಬೇದಾ ಪರಿಪರಿಯಾಗಿ ಹೇಳಿದಾಗ ರೋಶನ್ ಎದ್ದಳು. "ನಾನು ತಂದ ಪಾತ್ರೆ ಮರಳಿಕೊಟ್ಟು ಹೇಳಿ ಬರುತ್ತೇನೆ. ನೀನು ಅಲ್ಲಿಯವರೆಗೆ ಸಾಮಾನು ಕಟ್ಟು. ಅಲ್ಲಿ ಹರಕು ಗೋಣಿ ಚೀಲ ಇವೆ. ಆದರಲ್ಲಿ ಪಾತ್ರೆ ಪಗಡಿ ಹಾಕು. ಕವದಿಯ ಸುತ್ತು ಮಾಡಿಸು" ಎಂದು ಆಕೆ ಹೊರಟಿದ್ದಳು.

ಅಂದು ಸಂಜೆಯ ಮೇಲ್‌ನಿಂದ ತಾಯಿ ಮಗಳು ಬೆಳಗಾವಿ ಬಿಟ್ಟರು.

* * * *

"...ಲೂಟಲಿಯಾ ಮಿಲಕೆ ಹುಸ್ನವಾಲೋನೇ, ಕಾಲೆಕಾಲೆ ಬಾಲೋನೇ, ಗೋರೆ ಗೋರೆ ಗಾಲೋನೇ.." ಬೆಳಗಿನಿಂದ ಲೌಡ್‌ಸ್ಪೀಕರಿನಲ್ಲಿ ಆ ಕವ್ವಾಲಿ ಒಂದು ಮೂವತ್ತು ಸಲವಾದರೂ ಕಿರುಚಿರಬೇಕು. ಅದೊಂದೇ ಏಕೆ, ಅಂತಹ ಅನೇಕ ಸಿನೇಮಾ ಗೀತಗಳೂ ಕಿವಿ ಮರಗುಟ್ಟುವವರೆಗೆ ಪ್ರಸರಣಗೊಂಡವು. ಜುಬೇದಾಳ ಮನೆಯ ಹೊರಗಡೆ ಹಂದರ ಹಾಕಲಾಗಿತ್ತು. ಮನೆಗೆ ಒಳಗೆ ಹೊರಗೆ ಸುಣ್ಣ ಹಚ್ಚಲಾಗಿತ್ತು. ಹೊರಗಿನ ಗೋಡೆಯ ಮೇಲೆ "ಮುದ್ದಾಯೀ ಲಾಖ ಬುರಾ ಚಾಹೇ ತೋ: ಕ್ಯಾ ಹೋತಾ ಹೈ, ವಹೀ ಹೋತಾ ಹೈ ಜೋ ಖುದಾ ಮಂಜೂರ ಹೋತಾ ಹೈ" ಎಂದು ಕೆಂಪಕ್ಷರಗಳಲ್ಲಿ ಬರೆಯಲಾಗಿತ್ತು. (ಯಾರು ಎಷ್ಟು ಲಕ್ಷ್ಯ ಕಡೆಗಣಿಸಿದರೇನು, ಖುದಾನಿಗೆ ಪ್ರಿಯವಾದುದೇ ಘಟಿಸುತ್ತದೆ), ಜುಬೇದಾಳ ಮನೆಯ ಹಿಮ್ಮಗ್ಗಲಿಗೆ ಅಗಲ ಬಾಯಿಯ ಕೊಳಗದಪ್ಪಲೆಗಳಲ್ಲಿ ಅನ್ನ ಮಾಂಸ ಬೇಯುತ್ತಿದವು. ಮಕ್ಕಳೆಲ ಹೊಸ ಬಟ್ಟೆ ಹಾಕಿಕೊಂಡು ಒಳಗೆ ಹೊರಗೆ ಓಡಾಡುತ್ತಿದ್ದರು. ಹೊಸ ಸೀರೆಗಳ ವಾಸನೆ ಇದುಗಿತ್ತು. ಒಂದು ಮೂಲೆಯಲ್ಲಿ ಗೆಳತಿಯರ ನಡುವೆ ಕುಳಿತಿದ್ದಳು ರೋಶನ್. ತಾಯಿಯ ಆರೈಕೆ, ಹಿತಮಿತ ತಿನಿಸುಗಳಿಂದಾಗಿ ಆಕೆಯ ಮೈಕೈ ತುಂಬಿಕೊಂಡಿದ್ದವು ಈಗ. ತಿಕ್ಕಿ ತಿಕ್ಕಿ ತೊಳೆದ ಅಂಗೈ ಅಂಗಾಲುಗಳು ಗುಲಾಬಿ ಬಣ್ಣಕ್ಕೇರಿದ್ದವು. ಅವುಗಳ ಮೇಲೆ ಹಾಕಿದ "ಮೆಹಂದೀ"ಯ ಚುಕ್ಕೆಗಳು, ಹಸಿರು ಬಳೆಗಳು, ಕಣ್ಣಿಗೆ ಹಚ್ಚಿದ ದಟ್ಟ ಕಾಡಿಗೆ, ಹಸಿರು ಸೀರೆ, ರವಕೆ, ಕೊರಳಲ್ಲಿ ಹಾಕಿದ ಗೆಜ್ಜೆ-ಟಿಕ್ಕೆಗಳಲ್ಲಿ ರೋಶನ್ ನಿಜಕ್ಕೂ ನವವಧುವಾಗಿದ್ದಳು. ಗೆಳತಿಯರ ವಿನೋದಕ್ಕೆ ನಗುತ್ತಿದ್ದಳು.

ಹೊತ್ತು ಮುಳುಗಿ ಗಂಟೆಯಾದ ನಂತರ ಹೊರಟ ವರನ ಮೆರವಣಿಗೆ ಊರು ಸುತ್ತಿತು. ಪೆಟ್ರೋಮೆಕ್ಸ್ ದೀಪದ ಬೆಳಕಿನಲ್ಲಿ ಬಿಳಿಕುದುರೆಯ ಮೇಲೆ ಕುಳಿತು ಒಂದು ಕೈಯಲ್ಲಿ ಹೂವಿನ ಗುಚ್ಛ, ಇನ್ನೊಂದು ಕೈಯಲ್ಲಿ ನಿಂಬೆ ಹಣ್ಣಿಗೆ ಚುಚ್ಚಿದ ಚೂರಿ ಹಿಡಿದು ಅನವರ್ ಹೊಸ ಊರು ನೋಡುತ್ತಿದ್ದ. ಇಳಿದುಕೊಂಡ ಜಾಗದಿಂದ ಹೊರಟಾಗ ಬಾಯಲ್ಲಿಟ್ಟ ವೀಳ್ಯ ಕರಗಿದಂತೆ ಮತ್ತೆ ಮತ್ತೆ ಮೆಲ್ಲುತ್ತಿದ್ದ. ಎರಡು ಮೊಳ ತುದಿ ಬಿಟ್ಟು ಸುತ್ತಿದ ಸಾಪೆ (ಮುಂಡಾಸು), ಕೊರಳಲ್ಲಿಯ ಟೈ, ಕೋಟು ಪ್ಯಾಂಟು ಕಾಲಿಗೆ ಹಾಕಿದ ಹೊಸ ಬೂಟುಗಳು ಎಲ್ಲವೂ ಅವನಿಗೆ ಎಡಚಾಗಿದ್ದವು. ಸ್ವಚ್ಛ ಬಿಳಿ ಪಾಯಿಜಾಮ, ಕುಡತಾ ಫೆಜ್‌ಕ್ಯಾಪ್ ಸಾಕೆಂದು ಅವನು ಹೇಳಿದ್ದರೂ ಅವನ ಸ್ನೇಹಿತರು, ಆಪ್ತರು ಕೇಳಿರಲಿಲ್ಲ. ಅವರ ಆಗ್ರಹಕ್ಕಾಗಿಯೇನೇ ಅವನಿಗೆ ಹೊಸ ಸೂಟು ಧರಿಸಬೇಕಾಯಿತು. ರಾತ್ರಿ ಎಂಟೂವರೆಯ ಸುಮಾರಕ್ಕೆ ಮೆರವಣಿಗೆ ಜುಬೇದಾಳ ಮನೆಯ ಹತ್ತಿರ ಬಂದಿತು. ಹೊರಗೆ ಕಟ್ಟೆಮಾಡಿ ಹಾಕಿದ ಹಾಸಿಗೆಯ ಮೇಲೆ ದಿಂಬಿಗೆ ಆತು ಕುಳಿತ ಅನವರ್ ಯಾರೋ ಅವಸರದಲ್ಲಿ ಮನೆಯ ಬಾಗಿಲಿಗೆ ಪರದೆ ತಂದು ಕಟ್ಟಿದರು. ಮೆರವಣಿಗೆಯಲ್ಲಿ ಬಂದವರು, ಮದುವೆಗಾಗಿ ಬಂದವರು ಹಂದರದಲ್ಲಿ ಕೆಳಗೆ ಹಾಸಿದ ತಾಡಪತ್ರಿಯ ಮೇಲೆ ಕುಳಿತರು. ಲೌಡ್‌ಸ್ಪೀಕರಿನ ತಾರಸ್ವರವನ್ನೂ ಮೀರು

ವಂತೆ ಅವರಿವರಲ್ಲಿ ಹರಟೆಯಾಯಿತು. ಭೆಟ್ಟಿಮಾಡಿ ಕೊಡುವುದಾಯಿತು. ಒಬ್ಬರ ಕೈ ಇನ್ನೊಬ್ಬರು ತೆಗೆದು ಕೊಂಡು ಚುಂಬಿಸಿ ಆಯಿತು.

ಅನವರನಿಗೆ ಒಳಗಿನಿಂದ ಆಮಂತ್ರಣ ಬಂದಿತು. ಮೌಲವಿಗಳೊಬ್ಬರು ಅವನನ್ನು ಸಮಾರಂಭ ಪೂರ್ವಕ ಒಳಗೆ ಒಯ್ದರು. ಅರಬಿ ಭಾಷೆಯಲ್ಲಾದ ವಿಧಿ ಇಬ್ಬರಿಗೂ ತಿಳಿಯುವಂತಿರಲಿಲ್ಲ. ಉಂಗುರ ವಿನಿಮಯವಾಯಿತು. ವಧುವಿಗೆ ಮಾಹೇರ್ ಕೊಟ್ಟಾಯಿತು. ತಾಳಿ ಕಟ್ಟಿ ಆಯಿತು. ಪರದೆ ದಾಟಿ ವರ ಹೊರಕ್ಕೆ ಬರುತ್ತಿದ್ದಂತೆ ಬ್ಯಾಂಡಿನವರು "ಸಸುರಾಲ್ ಚಲೀ" ಎಂದು ಗತ್ತು ಬಾರಿಸಿವರು. ಕೊರಳಲ್ಲಿ ಮಾಲೆ ಧರಿಸಿದ ಅನವರ್ ಮತ್ತೆ ತನ್ನ ಆಸನದಲ್ಲಿ ಕುಳಿತಾಗ ಹಿರಿಯರು ಮುಂದಾಗಿ ಕಾಣಿಕೆ ಕೊಟ್ಟರು. ಅವರೆಲ್ಲರ ಕೈ ತನ್ನ ಕೈಯಲ್ಲಿ ತೆಗೆದು ಕೊಂಡು ಆದರ ಸೂಚಿಸಿ ಅನವರ್‌ನಿಗೆ ಬೇಜಾರಾಯಿತು. ಬಂದ ಅತಿಥಿಗಳಿಗೆಲ್ಲ ಅತ್ತರು ಹಚ್ಚಿ, ಪನ್ನೀರು ಸಿಡಿಸಿ, ಹೂವಿನ ಗುಚ್ಛ ಕೊಡಲಾಯಿತು.

ಒಳಗೆ ಹೆಂಗಸರು ಹಾಡು ಹೇಳುತ್ತಿದ್ದಂತ ರೋಶನ್ 'ಮಾಹೇದ್'ದ ತಟ್ಟೆಯನ್ನು ಜುಬೇದಾಳ ಕೈಯಲ್ಲಿ ಹಾಕಿದಳು. ಅದರಲ್ಲಿಯ ನೂರರ ಇಪ್ಪತ್ತು ನೋಟುಗಳನ್ನೆಣಿಸಿಕೊಂಡು ಜುಬೇದಾ ಅವುಗಳನ್ನು ತನ್ನ ಪೆಟ್ಟಿಗೆಯಲ್ಲಿ ಹಾಕಿ ಭದ್ರವಾಗಿರಿಸಿದಳು. ಕರಿಯ ಸಾಟೀನಿನ 'ಘೋಷಾ' ತೆಗೆದುಕೊಟ್ಟಳು ಮಗಳಿಗೆ. ಎಲೆ ತಿಂದು ಬಾಯಿ ಕೆಂಪಾದ ಮಗಳತ್ತ ನೋಡಿದಾಗ ಆಕೆಗೆ ಅಭಿಮಾನವೆನಿಸಿತು. ತನ್ನ ಮಗಳು ಅದೆಷ್ಟು ಸುಂದರ ಕಾಣುತ್ತಾಳೆ!

ಮರು ದಿನ ಮಧ್ಯಾಹ್ನ ಟ್ರೇನಿನಲ್ಲಿ ಮಿರಜಿಯಿಂದ ಕೊಲ್ಹಾಪುರಕ್ಕೆ ಹೋಗುವಾಗಲೂ ಅನವರ್‌ನಿಗೆ ಹೀಗೆಯೇ ಎನಿಸುತ್ತಿತ್ತು. ಹೊಸ ಘೋಷಾದಲ್ಲಿ ಅವಗುಂಠಿತಳಾದ ರೋಶನ್‌ಳನ್ನು ಆತ ಮತ್ತೆ ಮತ್ತೆ ನೋಡುತ್ತಿದ್ದ. ಮಾತನಾಡಬೇಕೆನಿಸಿದರೂ ಇಷ್ಟೆಲ್ಲ ಅಪ್ತರು, ಸ್ನೇಹಿತರು ಇರುವಾಗ ಹೇಗೆ ಸಾಧ್ಯ? ಆಗೀಗ ಹೊಳೆಯುವ ಅವಳ ಬೆರಳಿನಲ್ಲಿಯ ಹರಳಿನ ಉಂಗುರ, ಅವಳ ಮುಂಗೈಯಲ್ಲಿಯ ಹಸಿರು ಬಳೆಗಳು ಅವನಲ್ಲಿ ನಾನಾ ಭಾವನೆಗಳನ್ನು ಕೆರಳಿಸುತ್ತಿದ್ದವು.

ರೋಶನ್‌ಳಿಗೆ ಇದಾವುದರ ಪರಿವೆ ಇದ್ದಂತಿರಲಿಲ್ಲ. ಆಕೆಗೆ ಘೋಷಾ ರೂಢಿಯೂ ಇರಲಿಲ್ಲ. ಕಣ್ಣೆದುರಿಗಿನ ಜಾಳಿಗೆಯಲ್ಲಿ ಕಾಣುವಷ್ಟು ಮಾತ್ರ ಅವಳು ನೋಡುತ್ತಿದ್ದಳು.ಆದರೆ ಮನಸ್ಸು?ಅದು ಹಳೆಯ ಹೊಸನೆನಹುಗಳನ್ನು ಪರಚುತ್ತಿತ್ತು. ತಾನೊಮ್ಮೆ ಹೀಗೆಯೇ ಹೊರಟಿದ್ದೆ ಬಸ್ಸಿನಲ್ಲಿ ಪಂಢರಪುರಕ್ಕೆ. ಆಗ ದೌಲತ್ ಏನೊಂದು ಮಾತನಾಡುತ್ತಿದ್ದ ಏನೇನು ಹೇಳುತ್ತಿದ್ದ ಉತ್ಸಾಹದಿಂದ! ಬದಿಗಿದ್ದ ಮುದುಕ ಕೇಳಿದ್ದ "ನಿಮ್ಮ ಬದಿಗೆ ಕುಳಿತವರಾರು?" ಆಕೆಗೆ ನಗು ಬಂದಿತು. ಪುಣ್ಯಕ್ಕೆ ಬುರುಖಾದಿಂದಾಗಿ ಆಕೆ ನಕ್ಕುದು ಯಾರಿಗೂ ಕಾಣಿಸಲಿಲ್ಲ. "ಹುಡುಗೀ, ನೀನೇನಾದರೂ ಅಂದೆಯೇನು?" ಬದಿಗಿನ ಘೋಷಾ ಕೇಳಿತು. ಪುಣ್ಯಕ್ಕೆ ಆಕೆ ಮೂಗಿನೆದುರಿಗಿನ ಚಿಕ್ಕ ಪರದೆಯನ್ನು ತಲೆಯ ಮೇಲೆ ಎಸೆದುಕೊಂಡಿದ್ದಳು. ಅಸಡ್ಡೆಯಿಂದ "ಏನಿಲ್ಲ", ರೋಶನ್ ಅವಸರದಿಂದ ಹೇಳಿದಳು. "ನೀರಡಿಕೆಯಾಗಿರಬೇಕು" ಇನ್ನೊಂದು ಹೆಣ್ಣು ದನಿ ಬಂದಿತು. ಹಾತಕಣಗಲೆ ಸ್ಟೇಶನ್ನಿನಲ್ಲಿ ಕ್ರಾಸಿಂಗಿಗಾಗಿ ಬಂಡಿ ತಡೆದಾಗ ವಧೂವರರಿಗೆ ಗೋಲಸ್ಟಾಟ್, ಉಳಿದವರಿಗೆಲ್ಲ ಚಹ ಆಯಿತು.

ಗಂಡನದೆಂದು ಹೇಳಲಾಗುವ ಮನೆಯ ನಿಜವಾದ ತನ್ನ ಅತ್ತೆ ಫರೀದಾಬೀ ಎಂದು ತಿಳಿಯಲು ರೋಶನ್‌ಗೆ ಕಷ್ಟವಾಗಲಿಲ್ಲ. ಕೊಲ್ಹಾಪುರಕ್ಕೆ ಬಂದ ಮೊದಲ ದಿನ ಆಕೆಯೇ ರೋಶನ್‌ಗೆ ಹೇಳಿದ್ದಳು. "ಅಟ್ಟದ ಮೇಲಿನ ಹಿಂದಿನ ಕೋಣೆ ನಿನ್ನದು"–ಅದೊಂದು ಅಧಿಕಾರವಾಣಿಯೆಂದೆನಿಸಿತ್ತು ರೋಶನ್‌ಗೆ. ಘೋಷಾ ಬಿಚ್ಚಿ ಆಕೆ ನಿರಾಳವಾಗಿ ಉಸಿರು ಎಳೆಯಲು ಅದೊಂದೇ ಜಾಗವಾಗಿತ್ತು. ಅಲ್ಲಿಯ ಪಲಂಗಕ್ಕೆ ಹಾಕಿದ ಮಲ್ಲಿಗೆ ಹೂಗಳ ಜಾಳಿಗೆ ನೋಡಿ ಅವಳೆದೆ ಧಸಕ್ಕೆಂದಿತ್ತು. ಮಕಮಲ್ ಹಾಸಿಗೆ ಹಾಕಿದ ಜೋಡು ಪಲಂಗ. ಅದರ ಬದಿಯ ಸ್ಟ್ಯಾಂಡಿನ ಮೇಲೆ ಊದುಬತ್ತಿಯ ರಕಾನೆಗಳು. ದೊಡ್ಡ ಕನ್ನಡಿಯ ಕಪಾಟು ಅವಳಿಗಾಗಿ ಎಂಬಂತೆ ಕಾದಿದ್ದವು.

"ರೋಶನ್, ನನ್ನ ರೋಶನ್" ಆ ರಾತ್ರಿ ಬಾಗಿಲು ಇಕ್ಕಿದ ಬಳಿಕ ಅನವರ್ ಅವಳನ್ನು ತೆಕ್ಕೆ ಹಾಕಿದ್ದ. ಅವಳು ಅವನ ಹಿಂಸೆಗೆ ಯಾಂತ್ರಿಕವಾಗಿ ತನ್ನ ದೇಹ ಒಪ್ಪಿಸಿದ್ದಳು. ಆತ ಏನೇನೋ ಕತೆ ಹೇಳಿದಾಗ ಅಷ್ಟೇ ನಿರ್ವಿಕಾರಳಾಗಿ ನಕ್ಕಳು. "ನೀನೂ ಏನಾದರೂ ಹೇಳೆಂದು" ಅವನು ಕೆಣಕಿದಾಗ "ನನಗೇನು ಗೊತ್ತು?" ಎಂದು ಆಕೆ ತನ್ನ ಕಾಲೆಡೆ ನೋಡಿದಳು.

ಅನವರ್ ತನ್ನ ಮೊಂಡು ಗಡ್ಡವನ್ನು ನೀವಿಕೊಂಡಿದ್ದ. "ಹಾಹಾ" ಎಂದು ನಕ್ಕು ಮತ್ತೇನೋ ಹೇಳಿದ್ದ. ಬೆಳಕು ಹರಿದರೂ ಕಣ್ಣಿಗೆ ಕಣ್ಣು ಹತ್ತಲಿಲ್ಲ.

"ನಾನು ಕೆಳಗೆ ಹೋಗಿ ಬರುತ್ತೇನೆ" ಆಕೆ ಮೆಲುದನಿಯಿಂದ ಹೇಳಿದಾಗ ಮನಸ್ಸಿಲ್ಲದ ಮನಸ್ಸಿನಿಂದ ಆತ ಆಕೆಯನು ಬಿಟ್ಟ. "ಘೋಷಾ ತೆಗೆದುಕೊಂಡು ಹೋಗು. ಕೆಳಗೆ ಅವರಿವರು ಇರುತ್ತಾರೆ."

ಅಂದರೆ ತನ್ನ ಕೋಣೆ ಬಿಟ್ಟರೆ ಉಳಿದೆಡೆ ಪರದಾ! ಎರಡು ದಿನಗಳಲ್ಲಿ ಆಕೆಗೆ ಅದೂ ರೂಢಿಯಾಯಿತು. ಅತ್ತೆ–ಗಂಡ ಹೇಳಿದಂತೆ ಕೇಳುವುದು, ಹೂಂ ಎನ್ನುವುದು ಇಷ್ಟೇ ಆಕೆ ಮಾಡಬೇಕಾಗಿತ್ತು. ಮದುವೆಗಾಗಿ ಬಂದ ಬೀಗರು ಮರಳಿದ ನಂತರವೂ ಆಕೆಗೆ ಮನೆಯಲ್ಲಿ ವಿಶೇಷ ಕೆಲಸವಿರಲಿಲ್ಲ. ಅಡಿಗೆ, ನೀರು, ಮೇಲು ಕೆಲಸಗಳಿಗೆಲ್ಲ ಜೀನತ್ ಇದ್ದಳು. ಅವಳೇನು ತೊತ್ತೋ, ಸಂಬಳ ಕೊಡುತ್ತಿದ್ದರೋ ರೋಶನ್‌ಗೆ ತಿಳಿಯಲಿಲ್ಲ. ಆದರೆ ಏನು ಕೆಲಸ ಬಿದ್ದರೂ ಅತ್ತೆ "ಜೀನತ್" ಎಂದು ತಾರಸ್ವರದಲ್ಲಿ ಕಿರುಚಿದ್ದು ಕೇಳಿದಾಗ ಆಕೆ ಮನೆ ಕೆಲಸದ ಆಳೆಂಬುದಷ್ಟೇ ಆಕೆಗೆ ತಿಳಿಯಿತು. ಅನವರ್‌ನ ಅಣ್ಣ ರಸೂಲ್ ಬೇರೆ ಮನೆ ಮಾಡಿದ್ದ ಕೊಲ್ಹಾಪುರದಲ್ಲಿಯೇ. ಮಾರ್ಕೆಟ್‌ನಲ್ಲಿ ಅಣ್ಣ ತಮ್ಮಂದಿರಿಬ್ಬರವೂ ಸ್ವತಂತ್ರ ಹಣ್ಣಿನ ಅಂಗಡಿಗಳು. ಫರಿದಾಳೇ ಆ ಅಂಗಡಿ ನಡೆಸುತ್ತಿದ್ದಳಂತೆ, ತನ್ನ ಮದುವೆಗೆ ಮೊದಲು. ಅದು ತಿಳಿದಾಗ ರೋಶನ್‌ಗೆ ಮೋಜೆನಿಸಿತು. ಹರೆಯದವಳಿದ್ದಾಗ ಹಣ್ಣಿನ ಅಂಗಡಿ ನಡೆಸಿದವಳು ಈಗ ಘೋಷಾಗಾಗಿ ಇಷ್ಟು ಅಟ್ಟಹಾಸಪಡುತ್ತಾಳೆ! ಅಥವಾ ಬಹುಶಃ ತನ್ನ ಮಾವ ಹೆಚ್ಚು ಧರ್ಮನಿಷ್ಠರಿದ್ದಿರಬೇಕು. ಜೀವಿಸಿದ್ದಾಗ ಹಾಜ್ ಕೂಡ ಮುಗಿಸಿ ಬಂದ ಪುಣ್ಯಾತ್ಮರು. ಪಡಸಾಲೆಯಲ್ಲಿಯ ಅವರ ಚಿತ್ರಕ್ಕೆ ಈಗಲೂ ದಿನವೂ ಹಾರ ಹಾಕುತ್ತಾರೆ. ಮೈದುನ ಮನ್ಸೂರ್, ನಾದಿನಿ ಶಮ್‌ಶಾದ್ ಇನ್ನೂ ಶಾಲೆಗೆ ಹೋಗುತ್ತಾರೆ. ಶಕ್ಯವಿದ್ದಲ್ಲಿ ಕಣ್ಣು ತೆರೆದು, ಕಿವಿ ತೆರೆದು ರೋಶನ್ ಅವರನ್ನು ಅರ್ಥ ಮಾಡಿಕೊಳ್ಳಲೆತ್ನಿಸುತ್ತಿದ್ದಳು. ತನ್ನ ಅತ್ತೆ ಫರೀದಾ ಹಣ್ಣಿನಂಗಡಿ ನಡೆಸುತ್ತಿದ್ದಾಗ ಆಕೆಯನು ಮದುವೆಯಾದರೆಂದರೆ ತನ್ನ ಮಾವ ಕೂಡ ಅಷ್ಟು ಶ್ರೀಮಂತರಿರಲಾರರು. ಹಾಗಾದರೆ ಇಷ್ಟೊಂದು ದೊಡ್ಡ ಮನೆ, ವಸ್ತ್ರ, ಒಡವೆ ಎಲ್ಲಿಂದ ಬಂದವು, ಮಾವ ಹಾಜ್ ಯಾತ್ರೆ ಹೇಗೆ ಮಾಡಿದರು? ರೋಶನ್ ಕೇಳುವಂತಿರಲಿಲ್ಲ. ಕೇಳಿದರೂ ಯಾರನ್ನು ಕೇಳಬೇಕು? ಗಂಡನನ್ನೇ? ಅವನು ಎಂದೂ ಇಂತಹ ಮಾತು ಹೇಳಿದವನಲ್ಲ. ಜೀನತ್ ತನಗಿಂತ ಸುಮಾರು ಐದಾರು ವರ್ಷ ದೊಡ್ಡವಳಿರಬೇಕು. ಕಾಣಲಿಕ್ಕೂ ಚೆನ್ನಾಗಿದ್ದಾಳೆ. ಇಷ್ಟು ಕೆಲಸ ಮಾಡಿದರೂ ರೂಪ ಮಾಸಿದಂತಿಲ್ಲ. ಅವಳಿಗೆ ಗೊತ್ತಿರಬಹುದು. ಅಥವಾ...ಅಥವಾ ತನಗಾದರೂ ಈ ಕುತೂಹಲವೇಕೆ? ಆಕೆ ಆ ಪ್ರಶ್ನೆ ಅಲ್ಲಿಯೇ ಬಿಟ್ಟಳು.

ಮುಂಜಾವ ಚಹಾ, ನಾಶ್ತಾ ಗಂಡನೊಡನೆ ಮುಗಿಸಿದಳೆಂದರೆ ಮತ್ತೆ ಅಟ್ಟದ ಮೇಲೆ ಬಂದು ಕೂಡ್ರುವುದು, ಊಟದ ಸಮಯದ ವರೆಗೆ. ಗಂಡ ಮಾರ್ಕೆಟ್ಟಿಗೆ ಹೋದವ ಬರಲು ಮಧ್ಯಾಹ್ನ ಒಂದು ಹೊಡೆಯುತ್ತಿತ್ತು. ಊಟ ಮುಗಿಸಿ ನಿದ್ದೆ ಮಾಡಿ ಎದ್ದು ನಮಾಜು ಮಾಡಿ ಆತ ಮತ್ತೆ ಅಂಗಡಿಗೆ ಹೋಗುತ್ತಿದ್ದ. ತಿರುಗಿ ಬರಲು ರಾತ್ರಿ ಒಂಬತ್ತೂವರೆಯೋ ಹತ್ತೋ ಆಗುತ್ತಿತ್ತು. ನಂತರ ಊಟ, ಸ್ವಲ್ಪ ಹರಟೆ ಹೀಗೆ ಮಲಗಲು ಮಧ್ಯ ರಾತ್ರಿಯೇ ಆಗಬೇಕು. ಮನ್‌ಸೂರ್ ಹಾಗೂ ಶಮ್‌ಶಾದ್ ಬೇಗ ಉಂಡು ಮಲಗಿ ಬಿಡುತ್ತಿದ್ದರು. ಹೊರಗೆ ಎಲ್ಲಿ ಹೋಗುವಂತಿಲ್ಲ, ಬರುವಂತಿಲ್ಲ, ರೋಶನ್‌ಗೆ ಕಟ್ಟಿ ಹಾಕಿದಂತಾಯಿತು. ತನ್ನ ಕೋಣೆಯಿಂದ ಕೆಳಗೆ ಬಚ್ಚಲಕ್ಕೆ ಹೋಗಬೇಕಾದರೂ ಪರದೆ ಒಯ್ಯಬೇಕು. ಪಡಸಾಲೆಯಲ್ಲಿ ಬರುವ ಗಂಡಸರು ಹೆಂಗಸರು ಏನು ಕಾರಣ ಬರುತ್ತಾರೆ? ಅವರಿಗೆಲ್ಲ ತನ್ನ ಅತ್ತೆಯೊಡನೆ ಅಷ್ಟು ಸಲುಗೆಯೇ? ಅವರೆದುರು ಆಕೆ ಘೋಷಾ ಇಲ್ಲದೆ ಬರುತ್ತಾಳಲ್ಲ? ಒಂದೆರಡು ಸಲ ರೋಶನ್ ಹಣ ಕೊಡು–ಕೊಳ್ಳುವುದನ್ನು ಕಂಡಳು, ಓಹ್! ಏನಾದರೂ ವ್ಯವಸಾಯವಿರಬಹುದು ಎಂದು ಕೊಂಡಳು. ಮನೆಯಲ್ಲಿಯ ಪಾತ್ರೆಗಳನ್ನು ಯಾವುವಾದರೂ ನಿಮಿತ್ತವಾಗಿ ನೋಡಿದಾಗ ಉರ್ದುವಿನಲ್ಲಿ ಹಾಕಿದ ಬೇರೆ ಬೇರೆ ಹೆಸರುಗಳು ಕಾಣಬೇಕು. ತನ್ನ ಮಾವ ಹಾಜೀ ಅಬ್ದುಲ್ ಲತೀಫ್ ಅವರ ಹೆಸರಿನ ಪಾತ್ರೆಗಳು ಆ ಮಾನದಿಂದ ಕಡಮೆ. ಮರಾಠಿಯಲ್ಲಿ ಹೆಸರು ಹಾಕಿದ ಪಾತ್ರೆಗಳೂ ಇದ್ದವು. ಆದರೆ ಮಿರಜಿಯಲ್ಲಿಯ ಅರಬೀ ಮದರಸಿಯಾದಲ್ಲಿ ಎರಡು ವರ್ಷ ಆಕೆ ಕಲಿತದ್ದು ಉರ್ದೂ ಅಷ್ಟೇ.

ಅಂದು ಜುಮ್ಮಾ. ರೋಶನ್ ತಾನಾಗಿ ಸ್ನಾನ ಮಾಡುತ್ತೇನೆಂದರೆ ಫರೀದಾ ಕೇಳಿರಲಿಲ್ಲ. ಜೀನತ್‌ಳನ್ನು ಕರೆದು "ಈಕೆಗೆ ಸ್ವಚ್ಛವಾಗಿ ಸ್ನಾನಕ್ಕೆ ಹಾಕು" ಎಂದು ಹೇಳಿದಾಗ ಆಕೆ ಉಪಾಯವಿಲ್ಲದೆ ಒಪ್ಪಿಕೊಂಡಳು, ಜೀನತ್ ಮೈಗೆ ಸೀಗೆಕಾಯಿ ಹಚ್ಚಿ ತಿಕ್ಕುತ್ತಿದ್ದಂತೆ ರೋಶನ್ ಕೈಯಲ್ಲಿಯ ನೀರಿನ ತಪ್ಪಲೆಯ ಮೇಲಿನ ಹೆಸರು ಓದಿದಳು ಜೋರಾಗಿ "ಫಿದಾ ಹುಸೇನ್ ಶೌಕತ್ ಅಲ್ಲಿ"

"ಓಹ್ ನೀನು ಓದಬಲ್ಲೆಯೊ?" ಜೀನತ್ ತನ್ನನ್ನು ಮಾತನಾಡಿಸಿದ್ದು ನೋಡಿ ರೋಶನ್‌ಗೆ ಸಂತೋಷವಾಯಿತು. "ಏಕೆ ನಿನಗೆ ಬರುವುದಿಲ್ಲವೇ?" ಆಕೆ ಕೇಳಿದಳು. ಆಕೆ "ಪಚ್" ಮಾಡಿದಳು. "ನನ್ನ ಅಮ್ಮ ನನ್ನನ್ನು ಮದರಸಿಯೂದಲ್ಲಿ ಹಾಕಲೇ ಇಲ್ಲ. ಹುಡುಗಿಯರು ಕಲಿತು ಏನು ಮಾಡಬೇಕಾಗಿದೆ? ಎಂದಳು. "ಹಾಗಾದರೆ ನಿನ್ನನ್ನು ಕೇಳಿ ಉಪಯೋಗವಿಲ್ಲ" ಎಂದಳು ರೋಶನ್, ಹಳೆಯ ಹಲ್ಲುಜ್ಜುವ ಬ್ರಶ್ಶಿನಿಂದ ಉಗುರಿನ ಸಂದಿಯಲ್ಲಿಯ ಹೊಲಸು ತೆಗೆಯುತ್ತ. ಆಕೆಗೆ ನೀರು ಹಾಕುವುದನ್ನು ಬಿಟ್ಟು ಜೀನತ್ ಅವಳ ಮೋರೆ ನೋಡತೊಡಗಿದಳು. ರೋಶನ್‌ಗೆ ತಡೆಯಲಾಗಲಿಲ್ಲ. "ಬೇರೆ ಬೇರೆ ಹೆಸರಿನ ಇಷ್ಟು ದೊಡ್ಡ ಪಾತ್ರೆಗಳು ಹೇಗೆ ನಮ್ಮ

ಲ್ಲಿ ಬಂದಿವೆ?" "ಓಹ್ ಹೀಗೋ?" ಜೀನತ್ ನಕ್ಕಂತೆ ಮಾಡಿದಳು. "ಏನು ಕೇಳುತ್ತೀಯೋ ಎಂದಿದ್ದೆ" ಆಕೆ ಸುಡು ಸುಡುವ ನೀರಿಗೆ ಬೆರಕೆಹಾಕುತ್ತ ನಕ್ಕಳು. "ನಿನಗೇ ತಿಳಿಯುತ್ತದೆ" ಎಂದಳು.

"ನಿನಗೆ ಗೊತ್ತಿದ್ದರೆ ಹೇಳು" "ಊಂಹೂಂ." ಆಕೆ ನೀರು ಸುರಿದಳು. "ಕೆಲಸದಾಕೆಗೆ ಸೊಕ್ಕಾದರೂ ಎಷ್ಟು" ಸಹಜವಾಗಿ ರೋಶನ್ ಅಂದುಬಿಟ್ಟಳು. ಜೀನತ್ ಮಾತನಾಡಲಿಲ್ಲ. ಆಕೆಯ ಸ್ನಾನ ಮುಗಿದ ನಂತರ ಮೈ ಒರೆಸಲು ಪಂಚೆ ತಂದುಕೊಟ್ಟಳು. ತೆಳು ಬಟ್ಟೆಯಿಂದ ಕೂದಲು ಒರೆಸಿದಳು. ಅವಕ್ಕೆ ಸಬ್ಬಸಿಗೆ ಹೊಗೆ ಕೊಟ್ಟಳು. ತಾನು ಸೊಕ್ಕು ಎಂದಿದ್ದಕ್ಕೆ ಆಕೆ ನೊಂದುಕೊಂಡಳೇನೋ ಎಂದು ಮಿಡುಕಿದಳು ರೋಶನ್. ಎರಡು ದಿನ ಅದನ್ನೇ ನೆನೆಸಿಕೊಂಡಳು.

ಅಂದು ಅವಳಿಗೆ ಮುಟ್ಟುವುದಿರಲಿಲ್ಲ. ಹಾಗೆ ಉಳಿದ ವಿಷಯಗಳಲ್ಲಿ ಪಾಲಿಸುವುದಿರದಿದ್ದರೂ ಆ ಕಾಲದಲ್ಲಿ ತನ್ನ ಕೋಣೆಯಲ್ಲಿ ರೋಶನ್ ಕಾಲು ಹಾಕುವಂತಿರಲಿಲ್ಲ. ಅತ್ತೆ ಫರೀದಾ ಮೊದಲ ಸಲವೇ ಹೇಳಿದ್ದಳು. "ಇಂತಹವೆಲ್ಲ ನನಗೆ ಹೇಳಬೇಕು. ನಾನು ಹೇಳಿದಂತೆ ನಡೆಯಬೇಕು."

ಹೀಗಾಗಿ ರೋಶನ್‌ಳ ಕೂಡ್ರುವುದು, ಮಲಗುವುದು ಮುಂದಿನ ಕೋಣೆಯಲ್ಲೇ ಆಗುತ್ತಿತ್ತು. ಮುನ್ನಾದಿನ, ಅಂದರೆ ಮೊದಲನೆಯ ದಿನ, ಮಲಗುವ ವ್ಯವಸ್ಥೆ ಬೇರೆ ಆದಾಗ ಅನವರ್ ಸಿಡಿಮಿಡಿಗೊಂಡಿದ್ದ.

ಮಧ್ಯಾಹ್ನ ಕೆಳಗೆ ಬಚ್ಚಲಿಗೆ ಹೋದವಳು ರೋಶನ್ ತನ್ನ ಕೂಡ್ರುವ ಕೋಣೆಗೆ ಬಂದಳು. ನಾದಿನಿ ಶಮ್‌ಶಾದ್ ಕಲಿಸಿದ ಹೊಸ ಹೆಣಿಕೆಯನ್ನು ಮಾಡತೊಡಗಿದ್ದಳು. ಆಕೆ ಕುಳಿತ ಹಾಗೂ ಗಂಡನ ಕೋಣೆಯ ನಡುವಿನ ಬಾಗಿಲು ಮುಂದಾಗಿತ್ತು. ಒಳಗೆಲ್ಲೋ ಬಳೆಯ ಸದ್ದಾದಂತಾಯಿತು. ರೋಶನ್‌ಗೆ ಮೊದಲು ವಿಶ್ವಾಸವೆನಿಸಲಿಲ್ಲ. ಆಕೆ ಮತ್ತೆ ಉಸಿರು ಕಟ್ಟಿ ಆಲಿಸಿದಳು. ಬಳೆ ಸದ್ದಷ್ಟೇ ಏಕೆ, ತನ್ನ ಗಂಡನ ಅಸ್ಪಷ್ಟ ಮಾತೂ ಆಕೆಗೆ ಕೇಳಿಸಿತು. "ನನ್ನ ಜೀನತ್"ಅಂದರೆ? ಆಕೆಗೆ ಬೆವರು ಬಿಟ್ಟಿತು. "ಯಾರಾದರೂ ನೋಡಬಹುದಲ್ಲ?" ಸಂಶಯವೇ ಇಲ್ಲ. ಜೀನತ್‌ಳ ದನಿ. "ನೋಡಿದರೆ ನೋಡಲಿ. ನನಗೆ ಯಾರ ಹೆದರಿಕೆ?"

"ಅತ್ತೆಯದು?"

"ಹಾಗಾದರೆ ಬಾಗಿಲಿಗೆ ಚಿಲಕ ಹಾಕು."

ಇನ್ನು ಬಾಗಿಲಿಗೆ ಚಿಲಕ ಹಾಕುವಾಗ ಅಕಸ್ಮಾತ್ತಾಗಿ ಜೀನತ್ ತನ್ನನ್ನು ನೋಡಬಹುದೆನ್ನುವ ಸಂಶಯ ಮೂಡಿತು ರೋಶನ್‌ಳ ಮನಸ್ಸಿನಲ್ಲಿ. ಆಕೆ ಹೆಣಿಗೆ ಅಲ್ಲೇ ಬಿಟ್ಟು ಬೆಕ್ಕಿನಂತೆ ಕಾಲು ಹೆಜ್ಜೆಗಳ ಸದ್ದು ಕೂಡ ಮಾಡದೆಯೆ ಅಟ್ಟದಿಂದ ಇಳಿದಳು. ಪಡಸಾಲೆಯಲ್ಲಿ ಯಾರೂ ಇರಲಿಲ್ಲ. ತಲೆ ಬಾಗಿಲು ಇಕ್ಕಿತ್ತು. ನೇರ ಹಿತ್ತಲಿಗೆ ಹೋಗಿ ಸಬ್‌ಜಾದ ಸಸಿಗಳ ಹತ್ತಿರ ಕಲ್ಲ ಮೇಲೆ ಕುಳಿತಳು. ಜೀನತ್ ಯಾರು? ಅವಳೊಬ್ಬ ಯಃಕಶ್ಚಿತ್ ಆಳಾಗಿದ್ದರೆ ತನ್ನ ಗಂಡನೊಡನೆ ಇಷ್ಟು ಸಲುಗೆ ಹೇಗೆ?

ರೋಶನ್ ತುಹೆರ್ (ಶುಭ್ರ ಕಾಲ) ದಲ್ಲಿ ಬಂದೊಡನೆ ಮತ್ತೆ ಒಳಗೆ ಮಲಗತೊಡಗಿದಳು. ಮಧ್ಯದಲ್ಲಿ ಏನೂ ಆಗಿಲ್ಲವೆಂಬಂತೆ ಅನವರ್ ವರ್ತಿಸಿದ. ಜೀನತ್ ಕೂಡ ಅವನತ್ತ ಕಣ್ಣೆತ್ತಿ ನೋಡಲಿಲ್ಲ. ರೋಶನ್‌ಗೆ ತಿಳಿಯುವಂತೆ ಮರು ಶುಕ್ರವಾರ ರೋಶನ್ ತಾನಾಗಿ ಜೀನತ್‌ಗೆ ಹೇಳಿದಳು. "ನನಗೆ ಎಣ್ಣೆ ಹೂಸಿ ನೀರು ಹಾಕುತ್ತೀರಾ?" ಮೊದಲ ಸಲ ಜೀನತ್ ಏಕವಚನದಲ್ಲಿ ಮಾತನಾಡಿದ್ದು ರೋಶನ್‌ಗೆ ಅಚ್ಚರಿಯಾಗಿದ್ದರೆ ಈಗ ಬಹುವಚನದಲ್ಲಿ ತನ್ನನ್ನು ಸಂಬೋಧಿಸಿದ್ದು ಜೀನತ್‌ಗೆ ಆಶ್ಚರ್ಯವೆನ್ನಿಸುವಂತಾಯಿತು.

ಆಕೆ ಕೊಬ್ಬರಿ ಎಣ್ಣೆ ತಪತಪ ತಲೆಗೆ ಹಾಕುತ್ತಿದ್ದಂತೆ ರೋಶನ್‌ಗೆ ಹೇಳಿದಳು. "ನಿನ್ನ ಕೂದಲು ಎಷ್ಟು ಮೊಟಕಾಗಿವೆ."

ಮೊದಲು ಹೀಗಿರಲಿಲ್ಲವೆಂದು ಹೇಳಬೇಕೆನ್ನಿಸಿತು ರೋಶನ್‌ಗೆ. ಮಿರಜಿಯಲ್ಲಿ ತಾಯಿಯ ಮನೆಯಲ್ಲಿದ್ದಾಗ, ಅದೇಕೆ ಬೆಳಗಾವಿಗೆ ಹೋದ ಮೊದಲು ಕೆಲ ದಿನ. ಆದರೆ ಮುಂದೆ? ಅವಳಿಗೆ ದೌಲತ್‌ನ ನೆನಪಾಯಿತು. ಮಿರಜಿಯಲ್ಲಿ ಅವನ ಮನೆಯೆದುರು ನಿಂತಾಗ ನೋಡಿದ ಅವನ ಹೆಂಡತಿಯ ಗುಂಡು ಮೋರೆ ನೆನಪಾಯಿತು. ಆಕೆ ಗೋಣು ಅಲ್ಲಾಡಿಸಿದಳು, ಅವನ್ನೆಲ್ಲ ಬದಿಗೆ ಸರಿಸುವಂತೆ. "ಏನು ಮೊಟಕು ಇಲ್ಲವೇ?" ಜೀನತ್ ಕೇಳಿದಳು. "ಮೊದಲಿನಿಂದಲೂ ಹಾಗೆಯೇ" ರೋಶನ್ ಹೇಳಿದಳು ನಿರ್ವಿಕಾರವಾಗಿ. ಮೈಗೆ ಎಣ್ಣೆ ಹಚ್ಚುತ್ತಿದ್ದಂತೆ ಮಾತ್ರ ಜೀನತ್ ಹೇಳಿದಳು "ನಿನ್ನ ಮೈ ಮಾತ್ರ ಮಿದುವು ಬಹಳ" ನಡುವೆಯೇ ಆಕೆ ಚಿವುಟಿದಳು ಕಣ್ಣು ಮಿಟುಕಿಸಿ. ರೋಶನ್‌ಗೆ ಸಂಕೋಚವೆನಿಸಿತು. "ನನಗೇಕೋ ಕೆಲಸ ಮಾಡಲು ಸೇರುತ್ತದೆ. ಆದರೆ ಯಾರೂ ಕೆಲಸ ಮಾಡಗೊಡುವುದಿಲ್ಲ. ಮಿರಜಿಯಲ್ಲೂ ಅಷ್ಟೆ, ಇಲ್ಲೂ ಅಷ್ಟೆ." ಆಕೆಯೆಂದಳು. "ಇದೇ ಸುಖ" ಎಂದಳು ಜೀನತ್ ಬೆನ್ನು ತಿಕ್ಕುತ್ತ.

"ದುಡಿತದಲ್ಲೇನಿದೆ ಮಣ್ಣು?"

ರೋಶನ್‌ಳ ನಾಲಿಗೆಯತುದಿಯವರೆಗೆ ಬಂದ ಮಾತು ಒಮ್ಮೆ ಹೊರಬಿದ್ದೀತು. "ಹೋದ ಸಲ ನಾನು ಕೆಲಸದಾಕೆ, ಸೊಕ್ಕು ಎಂದೆ. ನೀವು ಕ್ಷಮಿಸಬೇಕು."

"ಅದೇನು, ಗೊತ್ತಿಲ್ಲದೆ ಅಂದೆ ಅಷ್ಟೇ. ಕ್ಷಮಿಸುವುದೇನಿದೆ? ನೀನು ನನ್ನ ತಂಗಿಯ ಸಮಾನ."

ರೋಶನ್‌ಗೆ ಸಿಡಿಲು ಹೊಡೆದಂತಾಯಿತು. ತಾನೇನೋ ಅಭಾವಿತವಾಗಿ, ತನ್ನ ಗಂಡನೊಡನೆಯ ಸಂಬಂಧ ತಿಳಿದು, ಬವಹುವಚನದಲ್ಲಿ ಮಾತನಾಡಿಸಿದರೆ ಈಗ ಈಕೆ ತನ್ನನ್ನು ತಂಗಿ ಎನ್ನುತ್ತಿದ್ದಾಳೆ!

ಬಚ್ಚಲಿನಲ್ಲಿ ನೀರು ಹವಣೆ ಮಾಡುತ್ತಿದ್ದಂತೆ ಜೀನತ್ ನಕ್ಕು ಕೇಳಿದಳು "ಪಾತ್ರೆಗಳ ಹೆಸರಿನ ರಹಸ್ಯ ಬಗೆಹರಿಯಿತೇನು?"

"ನಾನೇನು ಜಾಸೂಸ್ (ಪತ್ತೆದಾರ) ಅಲ್ಲ" ನಕ್ಕಳು ರೋಶನ್. ಅತ್ತಿತ್ತ ನೋಡಿ ಪಿಸುದನಿಯಲ್ಲಿ ಹೇಳುವಂತೆ ಉಸುರಿದಳು ಜೀನತ, "ಅವೆಲ್ಲ ಅಡವು ಬಂದ ಪಾತ್ರೆಗಳು. ನಮ್ಮ ಅತ್ತೆ ಲೇವಾದೇವಿ ಮಾಡುತ್ತಾರೆ. ಪಾತ್ರೆಗಳಷ್ಟೇ ಏಕೆ ಟಾಂಗಾಗಳು, ಕುದುರೆಗಳು, ವಸ್ತು ಒಡವೆಗಳು ಏನೆಲ್ಲ ಅಡವು ಬರುತ್ತವೆ ಅವರಲ್ಲಿ. ಬಿಡಿಸಿಕೊಳ್ಳುವವರೆಷ್ಟು ಜನ?"

"ಅಂದರೆ ಮಾವ ಇದ್ದಾಗಲೂ ಅತ್ತೆ ಇದನ್ನೇ ಮಾಡುತ್ತಿದ್ದರೇ?"

"ಅವರೂ ಅವರೇ. ಇಲ್ಲದಿದ್ದರೆ ಇಷ್ಟೊಂದು ದೊಡ್ಡ ಮನೆ ಹೇಗೆ ಆಗುತ್ತಿತ್ತು? ಬಡಿಗೆ ಬಡ್ಡಿ ಹತ್ತಿ ದುಡ್ಡಿಗೆ ದುಡ್ಡು ಗಂಟಾಯಿತು."

"ಕುರಾನೇ ಶರೀಫ್‌ನಲ್ಲಿ ಬಡ್ಡಿ ತೆಗೆದುಕೊಳ್ಳಬಾರದೆಂದು ಹೇಳಿದ್ದಾರಂತಲ್ಲ? ಮಾವನವರೋ ಹಾಜ್‌ಗೆ ಹೋಗಿ ಬಂದವರು."

ಜೀನತ್ ನಕ್ಕಳು "ನೀನು ಕೇಳಿಲ್ಲವೇನು. ನೂರು ಇಲಿ ಕೊಂದು ಬೆಕ್ಕು ಹಾಜ್‌ಗೆ ಹೊರಟಿತಂತೆ!"

"ಮತ್ತೆ ಮಾವನವರು ಹಣ್ಣಿನ ವ್ಯಾಪಾರ ಮಾಡುತ್ತಿದ್ದರಲ್ಲ?"

"ಅವರು ಕಮಿಶನ್ ಏಜಂಟರಾಗಿದ್ದರು. ಒಂದೆರಡು ಸಲ ಮಾವಿನ ಹಣ್ಣಿನ ವ್ಯಾಪಾರದಲ್ಲಿ ನಷ್ಟ ಉಂಟಾದಾಗ ಹಠಾತ್ತಾಗಿ ಲೇವಾದೇವಿಯಲ್ಲೇ ತೊಡಗಿದರು. ತಮ್ಮ ಅಂಗಡಿ ಇನ್ನೊಬ್ಬನಿಗೆ ಪಾಲಿನಲ್ಲಿ ಕೊಟ್ಟರು."

"ಅತ್ತಿಗೇ" ಶಮ್‌ಶಾದ್ ನೇರ ಬಚ್ಚಲಿಗೇ ಬಂದಳು. ಸೊಂಟಕ್ಕಷ್ಟೇ ಮೊಳ ಬಟ್ಟೆ ಸುತ್ತಿಕೊಂಡಿದ್ದ ರೋಶನ್‌ಗೆ ಲಜ್ಜೆಯೆನಿಸಿತು. "ಶಂಶಾದ್ ಹೀಗೆಲ್ಲ ನೇರ ಬಚ್ಚಲಿಗೆ ಬರಬಾರದು" ಜೀನತ್ ಬಿರುಸಾಗಿ ಹೇಳಿದಳು. "ನಿನ್ನ ಅತ್ತಿಗೆಯ ಸ್ನಾನವಿನ್ನೂ ಮುಗಿದಿಲ್ಲ."

ಅಂದು ಸಂಜೆ ಫರೀದಾ ಸೊಸೆಯನ್ನು ಕರೆಸಿದಳು. "ಜೀನತ್‌ಳೊಡನೆ ಹೆಚ್ಚು ಸಲಿಗೆ ಬೆಳೆಸಬಾರದು. ತಿಳಿಯಿತೇನು?" ರೋಶನ್‌ಳಿಗೆ ಪಿಚ್ಚೆನಿಸಿತು. ಆಕೆ ಕೆಳಗೆ ಮೋರೆ ಹಾಕಿಕೊಂಡು ಮೆಟ್ಟಲೇರಿದಳು. ಅಂದರೆ ನಾದಿನಿಗೆ ಮುಂಜಾವೆ ಬಚ್ಚಲಿನಲ್ಲಿ ಜೀನತ್ ಹೇಳಿದ್ದು, ಇಲ್ಲಿಯವರೆಗೆ ಹೋಯಿತು! ಆಕೆ ಮುಂದಿನ ಕೋಣೆಯಲ್ಲಿ ಶಮ್‌ಶಾದ್ ಇದ್ದಾಳೆಯೋ ಎಂದು ನೋಡಿದಳು ಇದ್ದರೆ ಒಂದು ಮಾತು ಬಿರುಸಾಗಿಯೇ ಕೇಳಬೇಕೆಂದು ಅವಳ ಮನಸ್ಸಾಗಿತ್ತು. ಜೀನತ್ ಅವಳನ್ನು ಗದರಿಸಿದರೆ ತನ್ನ ವಿರುದ್ಧ ದೂರು ಹೇಳುವ ಕಾರಣವೇನು? ಎರಡು ಮೂರು ಸಲ ಆಕೆ ಹೊರಗಿನ ಕೋಣೆಯಲ್ಲಿ ಇಣುಕಿದಳು. ಶಮ್‌ಶಾದ್ ಬಂದಿರಲೇ ಇಲ್ಲ. ಆಕೆ ಮನೆಗೆ ಬಂದಾಗ ಮಾತ್ರ ರೋಶನ್‌ಳ ಕೋಪ ಶಾಂತವಾಗಿತ್ತು. ತಾನು ಹೆಚ್ಚು ಕಡಿಮೆ ಏನೆಂದರೂ ಅತ್ತೆಯವರಿಗೆ ಎಲ್ಲವೂ ಹೋಗುವುದೇ, ಮತ್ತೆ ಅವರೇನಾದರೂ ಹೇಳುವವರೇ. ಎಷ್ಟೆಂದರೂ ಸೊಸೆಗಿಂತ ಮಗಳು ಸಮೀಪದವಳು.

ಗಂಡನೊಡನೆ ರಾತ್ರಿ ಮಲಗಿದಾಗ ಆಕೆ ಸಹಜವಾಗಿ ಕೇಳುವಂತೆ ಕೇಳಿದಳು. "ಈ ಜೀನತ್ ಯಾರು?"

ಅನವರ್ ನೇರ ಉತ್ತರ ಕೊಡಲಿಲ್ಲ.

"ನಿನಗೆ ಏನೆನಿಸುತ್ತದೆ?"

ರೋಶನ್ ಏನು ಉತ್ತರ ಕೊಡಬೇಕು?

ಆದರೂ ಮೋಜಿಗಾಗಿ ಆಕೆ ಹೇಳಿದಳು "ಕೆಲಸದಾಕೆ".

"ಆಹ್, ಹಾಗೆಯೇ ತಿಳಿದು ಬಿಡು" ಆತ ನಕ್ಕು ಮಾತು ಮುಗಿಸಿದ. ಅಂದು ಮುಂಜಾವ ಬಚ್ಚಲಲ್ಲಿ ನಡೆದದ್ದು, ಅತ್ತೆ ಗದರಿಸಿದ್ದು ಹೇಳಬೇಕೇ ಎಂದು ಅವಳ ಮನಸ್ಸು ತವಕಿಸಿತು. ಜೀನತ್ ಕೆಲಸದಾಕೆಯಾಗಿದ್ದರೆ ಶಮ್‌ಶಾದ್‌ಳಿಗೆ ಹಾಗೆ ಹೇಳಬಹುದಿತ್ತೇ? ಅದು ಹೋಗಲಿ, ಹಾಗೆ ಹೇಳಿದ್ದಕ್ಕೆ ಆಕೆಯನ್ನು ಗದರಿಸುವ ಬದಲು ಅತ್ತೆ ತನಗೇಕೆ ಹೇಳಬೇಕು ಹಾಗೆ? ತಾನೇನೂ ಅಂದಿರಲಿಲ್ಲವಲ್ಲ? ಆಕೆಗೆ ಇನ್ನಷ್ಟು ಗೂಢವೆನಿಸಿತು.

* * * *

ರಮಜಾನ್ ತಿಂಗಳು ಆರಂಭವಾಗಿ ವಾರವಾಗಿ ಹೋಗಿತ್ತು. ರೋಶನ್ ಅತ್ತೆಯೊಡನೆ ಕೆಳಗೇ ಮಲಗಬೇಕಾಗಿತ್ತು. "ರೋಜೇವಾಲೊಂಕಾ ಚಮಕಾ ತಾರಾ" "ಆಯಾ ರಮಜಾನಕಾ ಮಹೀನಾ" ಎಂದು ಇಂಪಾದ ಹಾಡು ಹೇಳುತ್ತ ರಾತ್ರಿಯ ಎರಡೂವರೆ ಮೂರು ಗಂಟೆಗೆ ಫಕೀರರು ಬಂದಾಗ ರೋಶನ್‌ಗೆ ಎಚ್ಚರವಾಗಬೇಕು. ಆಗ ತಲೆಬಾಗಿಲು ತೆರೆದೇ ಇರುತ್ತಿತ್ತು. ಅಂದರೆ ಫರೀದಾ ತನಗಿಂತ ಮೊದಲು ಎದ್ದಿದ್ದಾಳೆ. ಫರೀದಾ ಅಷ್ಟೇ ಏಕೆ ಜೀನತ್ ಕೂಡ. ಬಾಗಿಲಿಗೆ ಬಂದ ಯಾವ ಫಕೀರನನ್ನೂ ವಿಮುಖ ಕಳಿಸುವಂತಿಲ್ಲವೆಂದು ಅವರ ಮನೆಯ ಪದ್ಧತಿ. ನಸುಕಿನ ನಾಲ್ಕು ಗಂಟೆಯೊಳ

ಗಾಗಿ ಫಲಾಹಾರ–ಊಟ ಮುಗಿಸಬೇಕು. ಅನವರ್ ಸ್ನಾನ ಮುಗಿಸಿ ಮಶೀದಿಗೆ ಹೋಗಬೇಕು. ಅದೆಲ್ಲ ಅವನಿಗೆ ವಿಶೇಷ ಇಷ್ಟವೆಂದಲ್ಲ. ಆದರೂ ತಾಯಿಯ ಮನಸ್ಸು ಮುರಿಯಲಾರದೆ ಆತ ಏಳುತ್ತಿದ್ದ; ವಿಧಿ ಮುಗಿಸುತ್ತಿದ.

ಇದ್ದಕ್ಕಿದ್ದಂತೆ ಅಂದು ರಾತ್ರಿ ಫರೀದಾ ಎರಡು ಸಲ ಕೂಗಿದಳು. "ಜೀನತ್, ಜೀನತ್" ರೋಶನ್‌ಗೆ ಎಚ್ಚರಾಗಿದ್ದರೂ ಆಕೆಯಿನ್ನೂ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಳು. "ರೋಶನ್" ಎಂದು ಅತ್ತೆ ಕೂಗಿದಾಗ ಮಾತ್ರ ಆಕೆ ಚಟ್ಟನೆ ಎದ್ದಳು. "ರೋಶನ್, ಜೀನತ್‌ಳನ್ನು ನೋಡಿದಿಯೇನು?" "ಇಲ್ಲ" ಎಂದಳು ಸೊಸೆ ತಡವರಿಸಿ.

ಫರಿದಾ ಅಟ್ಟದತ್ತ ಮೋರೆ ಮಾಡಿ ಕೂಗಿದಳು. "ಮಗೂ, ಅನವರ್",

"ಜೀನತ್ ಅಲ್ಲಿ ಬಂದಿದಾಳೆಯೇ?" "ಇಲ್ಲ, ಅಮ್ಮ"

"ಮಗೂ ಶಮ್‌ಶಾದ್, ಮನ್ಸೂರ್, ಜೀನತ್ ಇದ್ದಾಳೆಯೇ?"

"ಇಲ್ಲ. ಅಮ್ಮಿಜಾನ್"

"ಎಲ್ಲಿ ಹೋದಳು ನರಕಕ್ಕೆ?" ಎನ್ನುತ್ತ ಫರೀದಾ ತಲೆ ಬಾಗಿಲು ನೋಡಿದಳು. ಅದು ಆ ಎಂದು ತೆರೆದೇ ಇತ್ತು.

"ಅನವರ್ ಕೆಳಗೆ ಬಾ" ಫರಿದಾ ಗರ್ಜಿಸಿದಳು.

ಅನವರ್ ಅವಸರವಸರವಾಗಿ ಇಳಿದ.

"ಮಗನೇ, ಜೀನತ್ ಇಲ್ಲ" ಫರಿದಾ ಜೋರಾಗಿ ಹೇಳಿದಳು ಏನೋ ಕಳೆದವರಂತೆ.

"ಇಲ್ಲ?" ಆತ ಚಕಿತನಾದ. "ಕಕ್ಕಸು ಬಚ್ಚಲು ನೋಡಿದಿರೇನು?"

"ಎಲ್ಲ ನೋಡಿಯಾಯಿತು" ಫರೀದಾ ಹೇಳಿದಳು. –"ನಾನೇ ಕಕ್ಕಸಿಗೆ ಹೋಗಿದ್ದೆ."

"ಮತ್ತೆ?"

"ಮತ್ತೇನು? ಹೊರಬಾಗಿಲು ತೆರೆದಿದೆ. ಹಕ್ಕಿ ಹಾರಿ ಹೋಗಿದೆ" ಫರಿದಾ ಅಳತೊಡಗಿದಳು.

ರೋಶನ್‌ಗೆ ಯಾವುದೂ ಅರ್ಥವಾಗಲಿಲ್ಲ. ರಾತ್ರಿ ಎರಡೂವರೆ ಗಂಟೆಯ ಸುಮಾರಕ್ಕೆ ಇದೇನು ಗೊಂದಲ? ಜೀನತ್ ಮನೆ ಬಿಟ್ಟು ಹೋಗಬೇಕೆ? ಆಕೆ ಹೋದರೆ ಇವರೇಕೆ ರಾದ್ಧಾಂತ ಮಾಡಬೇಕು? ಬೇರೆ ಕೆಲಸದವರು ಸಿಕ್ಕಲಾರರೇ?

ಫರಿದಾಳ ಅಳುದನಿ ಕೇಳಿ ಬದಿ ಮನೆಯ ಹೆಂಗಸರು ಗುಂಪು ಸೇರಿದರು. ರಮಜಾನ್‌ದಿಂದಾಗಿ ಓಣಿಯಲ್ಲಿಯ ಮುಸಲ್ಮಾನರ ಮನೆಗಳಲ್ಲೆಲ್ಲ ಜಾಗರ ಇತ್ತೇ ಇತ್ತು. "ಏನಾಯಿತು? ಏನಾಯಿತು" ಎಂದು ಬಂದವರೆಲ್ಲ ಕೇಳತೊಡಗಿದಾಗ "ಜೀನತ್ ಓಡಿ ಹೋದಳು, ಮನೆ ಬಿಟ್ಟು ಹೋದಳು" ಎಂದಳು ಫರಿದಾ.

'ಯಾರು ಜೀನತ್?" ಒಬ್ಬ ಹಿರಿ ಹೆಂಗಸು ಕೇಳಿದಳು.

"ಈಕೆಯ ಸೊಸೆ" ಇನ್ನೊಬ್ಬಾಕೆ ಹೇಳಿದ್ದು ರೋಶನ್‌ಳ ಕಿವಿಗೆ ಬಿದ್ದಾಗ ಆಕೆ ಅದನ್ನು ನಂಬದಾದಳು. ಅಥವಾ ತನ್ನ ಭಾವ ರಸೂಲ್‌ನ ಹೆಂಡತಿ ಇರಬೇಕೇನು? ಎಂದುಕೊಂಡಳು. ಹಾಗೇನಿರಲಿಕ್ಕಿಲ್ಲ. ಅವನು ತನ್ನ ಹೆಂಡತಿ ಮಕ್ಕಳೊಡನೆ ಬೇರೆ ಮನೆ ಮಾಡಿಕೊಂಡು ಇದ್ದಾನೆ. ಅವನ ಹೆಂಡತಿ ತಮ್ಮ ಮನೆಯಲ್ಲೇಕೆ ಇರಬೇಕು?... ಆಕೆ ಆ ಗುಂಪಿನಲ್ಲಿಯ ಹೆಂಗಸರು ತಮ್ಮ ತಮ್ಮೊಳಗೆ ಮಾತನಾಡುವುದನ್ನು ಆಲಿಸತೊಡಗಿದಳು.

"...ನಾಲ್ಕು ವರ್ಷಗಳಾದರೂ ಆಕೆಗೆ ಮಕ್ಕಳಾಗಲಿಲ್ಲ. ಅದಕ್ಕೆ ಮಿರಜಿಯಿಂದ ಆಕೆಗೊಂದು ಸವತಿ ತಂದರು."

"ಅಂದರೆ ಈಕೆಗೆ ತಲಾಕ್ (ವಿಚ್ಛೇದನೆ) ಕೊಟ್ಟಿದ್ದರೇನು?"

"ಫರಿದಾ–ಮಾ ಅದಕ್ಕೆ ಹೇಗೆ ಒಪ್ಪಬಹುದು?"

"ಏಕೆ, ಮಾಹೇರ್ ಮರಳಿ ಒಪ್ಪಿಸಿದರೆ ಏಕೆ ತಲಾಕ್ ಕೊಡಬಾರದು?"

"ಆದರೆ ಮಾಹೇರ್ (ತೆರ) ಮರಳಿ ಒಪ್ಪಿಸುವವರು ಯಾರು? ತಂದೆ ತಾಯಿ ತೆಗೆದುಕೊಂಡವರು ತೀರಿ ಹೋದರು. ಅಣ್ಣ ನೋಡಲು ಬರುವುದಿಲ್ಲ..."

ರೋಶನ್‌ಳಿಗೆ ಕಣ್ಣು ತೇವವಾಯಿತು. ಎಲ್ಲರೂ, ತಾನು ಕೂಡ, ಆಕೆಯನ್ನು ಆಳಿನಂತೆ ದುಡಿಸಿಕೊಂಡೆವು. ಆಕೆಯ ತಪ್ಪೇನು? ಮಕ್ಕಳಾಗಲಿಲ್ಲ ಇದೇ. ತಲಾಕ್ ಕೊಡಬೇಕಾದರೆ ಮೊದಲು ಕೊಟ್ಟ ತೆರ ಮರಳಿ




"ಬೇಗ ಮುಂದೆ ಹೋಗಿ ಈ ದಾರೀಲಿ ಮುಂದೆ ಯಾವುದೂ ದೀಪಾವಳಿ ಪ್ರಯುಕ್ತ ಕುಗ್ಗಿಸಿದ ದರದ ಅಂಗಡಿಗಳಿಲ್ಲವೆಂಬುದನ್ನು ಖಾತ್ರಿ ಮಾಡಿಕೊಂಡು ಬಾ ಮರೀ..."

ಕೊಡಬೇಕಂತೆ. ಅಂದರೆ ಇಷ್ಟು ವರ್ಷ ಆಕೆ ಇವರಲ್ಲಿ ದುಡಿದದ್ದು, ತನ್ನ ಗಂಡ ಅವಳೊಡನೆ ಇದ್ದದ್ದು ಎಲ್ಲ ಪುಕ್ಕಟೆಯೇ?

ಪುಕ್ಕಟೆಯೇಕೆ, ಎರಡು ಹೊತ್ತು ಹೊಟ್ಟೆಗೆ ಹಾಕುತ್ತಿದ್ದರಲ್ಲ? ರೋಶನ್‌ಳ ಒಂದು ಮನಸ್ಸು ವಿಕಟವಾಗಿ ನಕ್ಕಿತು. ತಾನು ಹದಿನೈದು ರೂಪಾಯಿ ಸಂಬಳ ಎರಡು ಹೊತ್ತು ಊಟಕ್ಕೆ ಬೆಳಗಾವಿಯಲ್ಲಿ ಸುಭದ್ರಾಬೆನ್‌ಳ ಮನೆಯಲ್ಲಿ ಕೆಲಸಮಾಡಿಕೊಂಡು ಇರಲು ಒಪ್ಪಿರಲಿಲ್ಲವೇನು? ಆದರೇನು ಅಲ್ಲಿ ತಾನು ಸ್ವತಂತ್ರಳಾಗಿದ್ದರೆ ಬೇಡವಾದಾಗ ಬಿಡಬಹುದಾಗಿತ್ತು. ಇಲ್ಲಿ ಆ ಮಾತಿಲ್ಲ. ನಾಲ್ಕರವರೆಗೆ ಹೆಂಡಂದಿರನ್ನು ಮಾಡಿಕೊಳ್ಳುವ ಅಧಿಕಾರ ಗಂಡಸರಿಗೆ ಇದೆ. ಒಂದೇ ಉಸುರಿನಲ್ಲಿ, ಇಬ್ಬರು ಗಂಡಸರ ಸಾಕ್ಷಿಯಲ್ಲಿ, ತಲಾಕ್ ಎಂದು ಮೂರು ಸಲ ಅಂದರೆ ವಿಚ್ಛೇದನೆಯು ಆದಂತೆ. ಅದಕ್ಕೆ ಕಾರಣ ಬೇಕಿಲ್ಲ; ಪರಿಹಾರಬೇಕಿಲ್ಲ. ಹೆಣ್ಣಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ರೋಶನ್ ಯೋಚಿಸುತ್ತ ಕುಳಿತಂತೆ ಬಂದ ಹೆಂಗಸರು ಒಂದೊಂದು ನಿಮಿತ್ತ ಹೇಳಿ ಸುದ್ದಿ ಬೀರಲು ಹೊರಬಿದ್ದದ್ದು ಗೊತ್ತಾಗಲಿಲ್ಲ. ಫರಿದಾಳೇ ಗದರಿಸಿದಳು. "ಇದೇನು ಎದ್ದಾಕೆ ಹೀಗೆ ಕುಳಿತೆ? ಅಡಿಗೆ ಯಾರು ಮಾಡಬೇಕು? ನಾಲ್ಕರೊಳಗಾಗಿ ಊಟ ಹೇಗೆ ಆಗಬೇಕು?" ರೋಶನ್ ಅವಸರದಿಂದ ಎದ್ದಾಕೆ ಅಡಿಗೆಯ ಮನೆಗೆ ಓಡಿದಳು. ಕಟ್ಟೆಯಮೇಲೆ ನೋಡಿದಳು. ಅಡಿಗೆ ಹೆಚ್ಚು ಕಡಿಮೆ ಆದಂತೆಯೇ ಇತ್ತು. ಒಲೆಯಲ್ಲಿ ಇನ್ನೂ ನಿಗಿನಿಗಿ ಕೆಂಡ ಇತ್ತು.

ಅಂದಿನಿಂದ ರೋಶನ್ ಅಡುಗೆ ಕೆಲಸ ವಹಿಸಿದಳು. ಕಸಮುಸುರೆ, ಬಟ್ಟೆ ಒಗೆಯುವುದಕ್ಕೆ ಫರಿದಾ ಕೆಲಸದಾಕೆಯನ್ನು ಗೊತ್ತು ಮಾಡಿದಳು.

ಇದರಿಂದಾಗಿ ರೋಶನ್ ಕೆಳಗೆ ಇರುವುದೇ ಹೆಚ್ಚಾಯಿತು. ಪಡಸಾಲೆಯಲ್ಲಿಯ ಅತ್ತೆಯ ಹಣದ ವ್ಯವಹಾರದ ಮಾತು ಇಚ್ಛೆಯಿಲ್ಲದಿದ್ದರೂ ಕಿವಿಯ ಮೇಲೆ ಬೀಳುತ್ತಿದ್ದವು. ಹಾಗೆ ಕೇಳುವಾಗ ಒಮ್ಮೆ ಆಕೆಗೆ ಎನಿಸಿತು 'ತನ್ನ ಸವತಿ ಜೀನತ್ ಕೂಡ ಅಡುವುನಂತೆಯೇ ಇದ್ದಳು. ಮದುವೆಯಲ್ಲಿ ಮಾಹೇರ್ ಕೊಟ್ಟದ್ದು ಸಾಲ ಎಂದು ತಿಳಿದರೆ ಹುಡುಗಿ ಅಡುವು. ಸಾಲ ತೀರಿಸಬೇಕು. ಹುಡುಗಿ ಒಯ್ಯಬೇಕು. ಅಲ್ಲಿಯವರೆಗೆ ಅವಳ ಹೊಟ್ಟೆ ಬಟ್ಟೆ ನೋಡಿದ್ದಕ್ಕಾಗಿ ಅವಳು ಮನೆಗೆಲಸ ಮಾಡಬೇಕು. ಗಂಡನೆಂಬ ಪುರುಷನ ಸೇವೆಮಾಡಬೇಕು." ರೋಶನ್‌ಳಿಗೆ ವಿಚಿತ್ರವೆನಿಸಿತು. 'ಇದಕ್ಕಿಂತ ನೇರ ಮಾರಾಟ ಎಂದೇಕೆ ತಿಳಿಯಬಾರದು? ಹಣಕೊಟ್ಟು ತಂದ ಹುಡುಗಿಯನ್ನು ಬೇಸರೆನಿಸಿದಾಗ ಸರಳ ಹರಾಜು ಮಾಡಬೇಕು.'

ರೋಶನ್ ಒಮ್ಮೆ ಮೀನು ಕರಿಯುತ್ತಿದ್ದಾಗ ಎಡಗೈ ಮೇಲೆ ಅಕಸ್ಮತ್ತಾಗಿ ಕಾದ ಎಣ್ಣೆ ಸಿಡಿಯಿತು. ಗುಳ್ಳೆಯಾಯಿತು. ಆಕೆ ಹಸಿ ಬಟಾಟೆ ಕೊಯ್ದು ಅದರ ಮೇಲೆ ಒತ್ತಿದಳು. ಆದರೇನೂ ಪ್ರಯೋಜನವಾಗಲಿಲ್ಲ: ನೋವು ಕಡಿಮೆಯಾಗಲಿಲ್ಲ. ಈ ಅವಸರದಲ್ಲಿ ಬಾಣಲೆಯಲ್ಲಿಯ ಮೀನು ಹೊತ್ತಿ ಮನೆಯೆಲ್ಲ ವಾಸನೆಯಾಯಿತು.

"ಏನು ವಾಸನೆ ಇಡುಗಿಸಿದ್ದೀ?" ಎಂದು ಬಂದಳು ಫರಿದಾ. "ಮೀನು ಹೊತ್ತಿತು" ಅಪರಾಧಿ ಸ್ವರದಲ್ಲಿ ಹೇಳಿದಳು ರೋಶನ್. ಅತ್ತೆಯ ಲಕ್ಷ್ಯ ಸೊಸೆಯ ಮುಂಗೈ ಕಡೆಗೆ ಹೋಯಿತು.

"ಅಲ್ಲೇನಾಯಿತು?"

"ಎಣ್ಣೆ ಸಿಡಿಯಿತು."

"ನೀನು ಬಿಡು, ನಾನು ನೋಡಿಕೊಳ್ಳುತ್ತೇನೆ" ಫರೀದಾ ಮುಂದಾದಳು. "ಅಟ್ಟದ ಮೇಲೆ ಶಮ್‌ಶಾದ್‌ಳನ್ನು ಕೇಳು, ಎಲ್ಲೋ ಮುಲಾಮ್ ಇಟ್ಟಿದ್ದಾಳೆ"

ನಾದಿನಿ ಮಲಾಮ್ ಹಚ್ಚಿ ಪಟ್ಟಿ ಕಟ್ಟುತ್ತಿದ್ದಂತೆ ಅವಳ ಲಕ್ಷ್ಯ ಮುಂಗೈ ಮೇಲಿನ ಹಚ್ಚೆ ಬಟ್ಟಿನ ಕಡೆಗೆ ಹೋಯಿತು.

"ಅದೇನು ಅತ್ತಿಗೆ?" ಆಕೆ ಸಹಜವಾಗಿ ಕೇಳಿದಳು.

"ಅದು... ಅದು" ರೋಶನ್ ತತ್ತರಿಸಿದಳು. 'ಅದು ನನ್ನ ಹೆಸರು" ಆಕೆ ಪ್ರಯಾಸದಿಂದ ನಕ್ಕಳು. ಯೋಚಿಸುತ್ತ ನಿದಾನವಾಗಿ ಹೇಳತೊಡಗಿದಳು" "ನಾನೊಮ್ಮೆ ತಪ್ಪಿಸಿಕೊಂಡಿದ್ದೆ ಸಣ್ಣವಳಿದ್ದಾಗ. ಮಿರಜಿಯ ಉರುಸು ಗೊತ್ತಲ್ಲ? ಅದರಲ್ಲಿ. ನಾನೂ ಅಮ್ಮನೂ ಬೇರೆಯಾದೆವು. ನಾನು ಅಳತೊಡಗಿದೆ. ಯಾರೋ ಒಯ್ದು ಪೋಲೀಸ್ ಸ್ಟೇಶನ್‌ನಲ್ಲಿ ಕೂಡ್ರಿಸಿದರು. ಅವರು ನನ್ನ ಹೆಸರು ಕೇಳಿದರೆ ನನಗೆ ಹೇಳಲು ಬರಲಿಲ್ಲ. ಅವರಿಗೆ ಅಮ್ಮನನ್ನು ಶೋಧಿಸಿ ನನ್ನನ್ನು ಒಪ್ಪಿಸಬೇಕಾದರೆ ನಾಲ್ಕಾರು ಗಂಟೆಯಾಯಿತಂತೆ. ಆಗ ಅಮ್ಮ ನನ್ನ ಮುಂಗೈ ಮೇಲೆ ಹೆಸರು ಹಾಕಿಸಿದಳು ಹಚ್ಚೆ ಬಟ್ಟಿನಲ್ಲಿ"

"ಹೇಗೆ ಮುದ್ದಾಗಿವೆ, ಮೂರು ಅಕ್ಷರು ಅಲ್ಲವೇ?"



"ಹೌದು." ಹಚ್ಚಿ ಬಟ್ಟನವರಿಗೆ ಮರಾಠಿ ಬರುತ್ತಿರಲ್ಲಿಲ್ಲ. ಮಿರಜಿಗೆ ಕೆಲಮಟ್ಟಿಗೆ ಕನ್ನಡವೂ ನಡೆಯುತ್ತದೆ. ಅದಕ್ಕೆ ಕನ್ನಡ ಇದರೂ ಇರಲಿ, ಎಂದಳಂತೆ ಅಮ್ಮ".

ಶಮ್‌ಶಾದ್ ಮಲಗಲು ಕುಪ್ಪೆ ತೆಗೆದಿರಿಸಿದಳು. "ನಾನು ಹೋಗಲೇ?" ಎಂದು ಗೆಲುವಿನಲ್ಲಿ ಕೇಳಿದಳು ರೋಶನ್. ಅವಳ ಅಪೇಕ್ಷೆಗೆ ಮೀರಿ ಕತೆ ಸುರಸವಾಗಿತ್ತು. ಇನ್ನೇನು ತನ್ನ ನಾದಿನಿ ಅದನ್ನು ಬೆಳೆಸಲಿಕ್ಕಿಲ್ಲ ಎನ್ನಿಸಿತು ಆಕೆಗೆ.

ಆದರೆ ಆ ಅಪೇಕ್ಷೆ ಸುಳ್ಳಾಯಿತು. ಗಾಯನೋಡುವ ನಿಮಿತ್ತದಿಂದ ಮರುದಿನ ಮಧ್ಯಾಹ್ನ ಫರಿದಾ ಹಚ್ಚಿಬಟ್ಟನ್ನೂ ನೋಡಿದಳು. ರೋಶನ್ ಮತ್ತೆ ಹೇಳಿದ ಕತೆಯನ್ನೆ ಹೇಳಿದಳು, ಚಾಚೂ ತಪ್ಪದೆ.

"ಇಂತಹ ಪ್ರಸಂಗಗಳಲ್ಲಿ ಹೆಸರು ಹಾಕಿಸಿದರೆ ಯಾರಾದರೂ ಪೂರ್ತಿ ಹೆಸರು ಹಾಕಿಸುತ್ತಾರೆ. ಬರಿಯ ಮೂರಕ್ಷರದ ಹೆಸರಿನಿಂದ ಏನು ಪ್ರಯೋಜನ?" ಫರೀದಾಳ ದನಿಯಲ್ಲಿ ಅವಿಶ್ವಾಸದ ಲೇಶವೂ ಇದೆಯೆನ್ನಿಸಿತು ರೋಶನ್‌ಗೆ. ಆದರೆ ಮಾಡುವುದೇನು? ಹಿಡಿದ ಪಟ್ಟು ಬಿಡುವುದು ಹೇಗೆ?

ಆಕೆ ಔಪಚಾರಿಕವಾಗಿ ನಕ್ಕಳು. "ನಾನಾದರೂ ಏನು ಹೇಳಲಿ?"

"ಏನೇನೋ ಒಬ್ಬರ ತಿಳುವಳಿಕೆ" ಫರೀದಾ ಕೂಡ ನಕ್ಕಳು.

ಮಾರನೆಯ ದಿನ ಮಧ್ಯಾಹ್ನ ಫರೀದಾ ಅವಸರದಿಂದ ಕರೆದಳು. "ರೋಶನ್ ಹೊರಗೆ ಬಾ. ಹಾಗೆಯೇ ಬರಬೇಡ ಮತ್ತೆ"

ಅತ್ತೆ ಏಕೆ ಕರೆಸುತ್ತಿದ್ದಾಳೆಂಬುದು ರೋಶನ್‌ಗೆ ಕೂಡಲೆ ತಿಳಿಯಲಿಲ್ಲ. ಆದರೂ ಆಕೆ ಘೋಷಾ ಹೊದ್ದುಕೊಂಡು ಹೊರಗೆ ಬಂದಳು.

"ಈಕೆಯ ಕೈಗೇನಾಗಿದೆ ನೋಡಿರಿ ಡಾಕ್ಟರ್" ಎಂದಳು ಫರಿದಾ. ರೋಶನ್ ನಾಚುತ್ತ ಕೈ ಮುಂದೆ ಮಾಡಿದಳು. "ಗಾಯ ಮಾಯತೊಡಗಿದೆ. ನಾನು ಕೊಟ್ಟ ಪೌಡರು ಇದೆಯಲ್ಲ, ಅದನ್ನು ಹಾಕಿರಿ ಮುಲಾಮ್ ದೊಡನೆ. ಬೇಗ ವಾಸಿಯಾಗುತ್ತದೆ." ಎಂದರು ಆ ಪರಮಪುರುಷ. ಆದರೆ ಕೈ ಬಿಡಲಿಲ್ಲ.

"ಡಾಕ್ಟರ್ ಅದೇನು ಹೆಸರು ಹಾಕಿದ್ದಾರೆ ನೋಡಿರಿ ಮುಂಗೈ ಮೇಲೆ?" ಫರಿದಾ ಕೇಳಿದಾಗ ರೋಶನ್‌ಳಿಗೆ ತಲೆಯ ಮೇಲೆ ಆಕಾಶ ಕಳಚಿ ಬಿದ್ದಂತಾಯಿತು. 'ಅಂದರೆ ಗಾಯ ತೋರಿಸುವುದು ಬರಿಯ ನಿಮಿತ್ತ.' ಆಕೆ ಯೋಚಿಸಿದಳು.

ಅವರು ಬಳೆ ಸರಿಸಿ ನೋಡಿದರು. "ಇದೋ? ದೌಲತ್ ಎಂದು ಬರೆದಿದ್ದಾರೆ." ಫರಿದಾ ಆ ಮಾತು ಅಲ್ಲಿಗೇ ಬಿಟ್ಟಳು. "ಈಕೆಗೆ ಊಟದಲ್ಲಿ ಏನೇನು ಕೊಡಬೇಕು, ಏನೇನು ಕೊಡಬಾರದು?..." ಎಂದು ಕೇಳುತ್ತಿದ್ದಳು. ರೋಶನ್‌ಳ ತಲೆ ಗಿಮಿಗಿಮಿಸತೊಡಗಿತು.

'ಇನ್ನೇನು ಹೇಳುವುದು? ಅವರು ಕೇಳದೆ ಇರುತ್ತಾರೆಯೇ?' ಆಕೆ ಕಂಗಾಲಾದಳು.

ಡಾಕ್ಟರರು ಹೋದೊಡನೆ ಫರಿದಾ ತಲೆಬಾಗಿಲು ಚಿಲುಕ ಹಾಕಿಕೊಂಡಳು. "ಹಾದರಗಿತ್ತೀ. ಈ ದೌಲತ್ ಯಾರು?" ಆಕೆ ಸೊಸೆಯ ಮೇಲೆ ಎರಗಿದಳು. ರೋಶನ್ ಬಾಯಿ ಬಿಡದಾಗ ಆಕೆ ಆರಾಮ ಕುರ್ಚಿಯ ಬಟ್ಟೆಗೆ ಸಿಕ್ಕಿಸಿದ್ದ ಗುಂಡು ಕಟ್ಟಿಗೆ ತೆಗೆದಳು ಎಳೆದು. "ಒಳ್ಳೆಯ ಮಾತಿನಲ್ಲಿ ಹೇಳುತ್ತೀಯೋ ಅಥವಾ?..." ಆದರೂ ರೋಶನ್ ಬಾಯಿ ಬಿಡಲಿಲ್ಲ. "ಮಾತಾಡುವುದಿಲ ಏಕೆ?" ಫರೀದಾ ರಪ್ಪೆಂದು ಅವಳ ಬೆನ್ನಿಗೆ ಹಾಕಿದಳು. "ಅಯ್ಯೋ" ಎಂದು ಒರಲಿದಳು ಸೊಸೆ. "ಹೇಳುತ್ತೀಯೋ ಇಲ್ಲವೋ? ಒದರಿದರೆ ಇನ್ನೆರಡು ಹಾಕೇನು. ತಲೆ ಒಡೆದು ಬಿಟ್ಟೇನು" ರೋಶನ್ ಕೇಳಲಿಲ್ಲ. ಫರೀದಾ ಬಿಡಲಿಲ್ಲ. ಸಿಕ್ಕಸಿಕ್ಕಲ್ಲಿ ಪೆಟ್ಟು ಹಾಕಿದಳು. ಮೂಗಿನ ಸಿಂಬೆ ಒಡೆಯಿತು. ತುಟಿ ಊದಿಕೊಂಡವು. ತಲೆಗೆ ಗುಬುಟಿಗಳಾದವು. ಒಂದೆರಡೆಡೆ ರಕ್ತ ಕೂಡ ಬಂದಿತು. ರಾತ್ರಿ ಮಗ ಅಂಗಡಿಯಿಂದ ಬರುವವರೆಗೆ ಫರೀದಾ ಹಾಗೇ ಕಾದಳು, ಪಂಜರದಲ್ಲಿಯ ಹುಲಿಯಂತೆ ಶತಪಥ ತಿರುಗುತ್ತ. ಮನೆಯಲ್ಲಿ ಕಾಲಿಟ್ಟೊಡನೆ ಅವಳು ಅನವರನನ್ನು ಎಳೆದು ಸೊಸೆ ಬಿದ್ದ ಮೂಲೆಗೆ ಒಯ್ದುಳು. "ನೋಡು ಈ ನಿನ್ನ ಹೆಂಡತಿಯನ್ನು. ಯಾವ ಹಂದಿಯ ಮಗಳೋ?" ಅವನವರ್‌ನಿಗೆ ತಬ್ಬಿಬ್ಬಾಯಿತು. "ಏನಾಯಿತು, ಮೊದಲು ನಿಧಾನವಾಗಿ ಹೇಳು" ಆತ ಸಿಡುಕಿನಿಂದಲೇ ತಾಯಿಗೆ ಹೇಳಿದ.

ಫರಿದಾ ನಡೆದದ್ದು ಹೇಳಿದಾಗ ಅನವರ್ ತಾನು ಕೂಡ ಅವಳ ಮುಂಗೈ ಎತ್ತಿ ನೋಡಿದ. "ಯಾರು ಈ ದೌಲತ್, ಏ ಭೋಸಡೀ?" ಕೇಳುತ್ತಿದ್ದಂತೆ ಅವನ ತಲೆಕಾದಿತು. ಆಕೆ ಉತ್ತರ ಕೊಡದಾದಾಗ ಆತ ತನ್ನ ಕಾಲಲ್ಲಿಯ ಬೂಟು ಎತ್ತಿಕೊಂಡ. ಹೆಂಡತಿಯನ್ನು ಸಿಕ್ಕ ಸಿಕ್ಕಲ್ಲಿ ಕುಟ್ಟಿದ. "ಹೇಳುತ್ತೀಯೋ ಇಲ್ಲವೋ?" ಎಂದು ಹತ್ತು ಸಲ ಕೇಳಿದ. ರೋಶನ್ ಪಿಟ್ಟೆಂದು ಹೇಳಲಿಲ್ಲ. ತಾಯಿ ಮಗ ಬೇಸತ್ತರು. ತಮ್ಮ ಹಸಿದ ಹೊಟ್ಟೆಗಿಷ್ಟು ರೊಟ್ಟಿ ಹಾಕಿದರು. ಪೆಚ್ಚನಂತೆ ನೋಡುತ್ತ ನಿಂತಿದ್ದ ಮನ್ಸೂರ್, ಶಮ್‌ಶಾದ್‌ರೂ ಊಟದ ಶಾಸ್ತ್ರ ಮಾಡಿದರು. ಮಲಗಲು ಹೋದರು.

ಏಟಿನಿಂದ ನುಣ್ಣಗಾಗಿದ್ದ ರೋಶನ್‌ಳ ಶರೀರ ಆ ಮೂಲೆಯಲ್ಲೇ ರಾತ್ರಿಯೆಲ್ಲ ನರಳಿತು. ಮರುದಿನ ಕೆಲಸದಾಕೆಗೆ ರಜೆಯಾಯಿತ್ತು. ಆ ಎಲ್ಲ ಕೆಲಸ ರೋಶನ್‌ಳ ಪಾಲಿಗೆ ಬಂತು. ಇನ್ನು ಆಕೆ ಅಟ್ಟವನ್ನೇರುವ ಪ್ರಮೇಯವೂ ಇರಲಿಲ್ಲ.

ಅಂದು ಮುಂಜಾವದ ಹತ್ತು ಗಂಟೆಗೆ ಪೋಸ್ಟಿನಿಂದ ಬಂದ ಪತ್ರವನ್ನು ಫರಿದಾ ಎರಡು ಮೂರು ಸಲ ತಿರುವಿ ನೋಡಿದಳು. ಆಕೆ ಅಕ್ಷರಶತ್ರು, ಬಹುಸಂಖ್ಯ ಮುಸ್ಲಿಂ ಮಹಿಳೆಯರಂತೆ. ಆದರೆ ಅಕ್ಷರ ಅಪರಿಚಿತವೆನ್ನಿಸಿತು. ಮಗ ಮಧ್ಯಾಹ್ನ ಊಟಕ್ಕೆ ಬಂದಾಗ ಆಕೆ ಅದನ್ನು ಅವನಿಗೆ ತೋರಿಸಿದಳು. ಅವನು ಹಣೆ

ಗಂಟು ಹಾಕಿ ಮನಸ್ಸಿನಲ್ಲೇ ಓದಿಕೊಂಡ. "ಏನು ಇದೆ? ಯಾವಿಂದ ಬಂದಿದೆ?" ಫರಿದಾ ಉತ್ಕಂಠೆಯಿಂದ ಕೇಳಿದಳು.

"ನಿನ ಸೊಸೆಗೆ ಬಂದಿದೆ. ಆಕೆಯ ತವರು ಮನೆಯಿಂದ."

"ಏನು ಬರೆದಿದ್ದಾರೆ?"

"ಓದಿಯೇ ಹೇಳುತ್ತೇನೆ. ಕೇಳು ಅಂ... ನಿನ್ನ ಕಾರ್ಡು ಮುಟ್ಟಿತು. ಅಲ್ಲಿ ನಿನಗೆ ಬಹಳ ತೊಂದರೆಯಾಗುತ್ತದೆ ಎಂದು ಬರೆದಿದ್ದೀ. ಆದರೆ ಅತ್ತೆಯ ಮನೆಯೆಂದರೆ ಕಷ್ಟವಿರುತ್ತದೆ ಎಂಬುದನ್ನು ನೆನಪಿನಲ್ಲಿಡು. ಅವರು ಕೊಟ್ಟ ಮಾಹೇರ್ ವಾಪಸು ಮಾಡಿ ತಲಾಕ್ ತೆಗೆದುಕೊಳ್ಳಬೇಕೆನ್ನುತ್ತೀ. ಆದರೆ ಅವರು ಕೊಟ್ಟ ಹಣದ ಪೈಕಿ ಮದುವೆ ಆಗಿ ಉಳಿದ ಹಣದಲ್ಲಿ ನಾನು ಅಂಗಡಿ ಕಟ್ಟಿಸಿಕೊಂಡಿದ್ದೇನೆ. ಮನೆಯ ಮುಂದೆಯೇ, ಅಂಗಳದಲ್ಲಿ. ಹೀಗಾಗಿ ನನ್ನಲ್ಲಿ ಹಣವಿಲ್ಲ. ಇಲ್ಲಿ ನೀನು ಬಂದಾದರೂ ಏನು ಮಾಡಬೇಕಾಗಿದೆ? ತಲಾಕ್ ತೆಗೆದುಕೊಂಡ ಹೆಣ್ಣಿಗೆ ಸಮಾಜದಲ್ಲಿ ಮಾನವಿಲ್ಲ. ಇಲ್ಲಿಲ್ಲದ ಸುದ್ದಿ ಹಬ್ಬಿಸುತ್ತಾರೆ. ಅದರ ವಿಚಾರ ಮಾಡಬೇಡ. ಸಮಾಧಾನದಿಂದ ಅಲ್ಲಿಯೇ ಇರು. ಇದೇ ಪತ್ರದಲ್ಲಿ ನಿನ ಅತ್ತೆಗೆ ಸಲಾಂ ಹೇಳು."

"ಈಕೆಯ ಸಲಾಮಿಗೆ ಬೆಂಕಿ ಹಾಕು...ರೋಶನ್" ಫರಿದಾ ಕೂಗಿದಳು. ಕೈಒರೆಸಿಕೊಳ್ಳುತ್ತಾ ರೋಶನ್ ಬಂದವಳು ಒಳಬಾಗಿಲು ಮರೆಗೆ ನಿಂತಳು "ಹಾಂ ಜೀ" ಎಂದಳು.

"ನೀನು ನಿನ್ನ ಅಮ್ಮನಿಗೆ–ಆ ಹಂದಿಯ ಮಗಳಿಗೆ ಪತ್ರ ಬರೆದಿದ್ದೆಯೇನು?" ಫರಿದಾ ಗುಡುಗಿದಳು.

ರೋಶನ್ ಮಾತನಾಡಲಿಲ್ಲ. "ಹಾದರಗಿತ್ತೀ, ನಾವು ನಿನ್ನನ್ನು ಕಾಡುತ್ತೇವೇನು?"

"ಏ ಗಯ್ಯಾಳೀ, ಆ ಪತ್ರ ನಿನಗೆ ಬರೆದು ಕೊಟ್ಟವರಾರು?" ಅನವರ್ ಕೇಳಿದ.

"ಮನ್ಸೂರ್ ಮೈದುನ" ರೋಶನ್ ಪುಕ ದನಿಯುಲ್ಲುಸುರಿದಳು.

"ಸುಳ್ಳು, ಈಗ ಅವನು ಮನೆಯಲ್ಲಿಲ್ಲವೆಂದು ಅವನ ಹೆಸರು ಹೇಳಿ ದಾಟಿಕೊಳ್ಳುತ್ತೀಯೇನು?" ಫರಿದಾಳ ಸುಡುಮಾತಿನೆದುರು ಅನವರ್ ತೆಪ್ಪಗೆ ನಿಂತ.

"ನಿಲ್ಲು, ನಿನ್ನನ್ನು ಒಂದು ಕೈ ನೋಡಬೇಕಾಗಿದೆ" ಆಕೆ ಅತ್ತಿತ್ತ ನೋಡುತ್ತ ಅಡಿಗೆ ಮನೆಗೆ ಹೋದಳು. ಕಬಾಬ್ ಸುಡಲು ಒಲೆಯಲ್ಲಿ ಕಬ್ಬಿಣ ಸರಳು ಹಾಕಿದ್ದವು.

ಫರಿದಾ ಒಂದು ಬಟ್ಟೆಯಿಂದ ಕಾದ ಸರಳು ಹಿಡಿದಳು.

"ನಿಜ ಹೇಳು ಯಾರು ಪತ್ರ ಬರೆದುಕೊಟ್ಟರು?" ಅನ್ವರ್ ಕೇಳುತ್ತಿದ್ದಂತೆ ರೋಶನ್ ಅವನೆಡೆ ನೋಡಿ ತೆಪ್ಪಗಾದಳು. ಫರಿದಾ ಕೂಡಲೆ ಕೆಂಪಾದ ಸರಳು ಎತ್ತಿ ಸೊಸೆಯೆಡೆ ಧಾವಿಸಿದಳು. ತೋಳ ಮೇಲೆ ಕುತ್ತಿಗೆಯ ಮೇಲೆ ಬರೆ ಎಳೆದಳು. "ನಿನ್ನ ಮೋರೆಯನ್ನೇ ಸುಡುತ್ತೇನೆ. ನಿನಗೆ ಜನ್ಮದ ನೆನಪು ಉಳಿಯಬೇಕು. ಭೋಸಡೀ, ನಮ್ಮ ವಿರುದ್ಧ ತಕರಾರು ಮಾಡುತ್ತಿಏನು?" ಅತ್ತೆ ನಿರರ್ಗಳವಾಗಿ ಬೈಯುತ್ತಿದ್ದಂತೆ ರೋಶನ್ ಮೋರೆ ಮುಚ್ಚಿಕೊಂಡಳು. ಫರಿದಾ ಮುಂಗೈ ಮೇಲೆಲ್ಲ ಬರೆ ಎಳೆದಳು. ಕಿವಿಗೆ ಹಚ್ಚಿದಳು, ಸರಳು ಆರುವವರೆಗೆ. "ಇನ್ನೂ ಕಾದ ಸರಳು ಇವೆ" ಫರಿದಾ ಗುಡುಗಿದಾಗ ರೋಶನ್ ಅವಳ ಕಾಲು ಬಿದ್ದಳು. "ನೀವು ಮನ್ಸೂರ್ ಮೈದುನನ್ನು ಕೇಳಿರಿ. ನಾನು ಸುಳ್ಳು ಹೇಳುತ್ತಿದ್ದರೆ ನೀವು ನನ್ನನು ಜೀವಂತ ಸುಟ್ಟರೂ ಸರಿ."

"ಯಾರು ಬರೆದರೇನು?" ಅನ್ವರ್ ಕೇಳಿದ. "ನೀನೇ ಹೇಳಿ ಬರೆಸಿದೆಯಲ್ಲ? ಇನ್ನು ನಮ್ಮ ಮಾನವೇನು ಉಳಿಯಿತು? ಹಂದಿಯ ಮಗಳು, ಆ ನಿನ್ನ ತಾಯಿ ಊರ ತುಂಬ ಸುದ್ದಿ ಮಾಡದೇ ಇರುತ್ತಾಳೆಯೇ?"

"ನನ್ನ ತಪ್ಪಾಯಿತು, ಕ್ಷಮಿಸಿರಿ." ರೋಶನ್ ಅಳತೊಡಗಿದಳು. ಫರಿದಾ ಸಲಾಕೆಯನ್ನು ಹೊಡೆಯಲೆಂದು ಎತ್ತಿದಾಗ "ಮೇಲಾಗಿ ಮಾಹೇರ್ ತಿರುಗಿ ಕೊಟ್ಟರೆ ನಿನಗೆ ತಲಾಕ್ ಕೊಡುತ್ತೇನೆಂದು ಯಾರು ಹೇಳಿದರು?" ಅನವರ್ ಅವಳನ್ನು ಬೂಟುಗಾಲಿನಿಂದ ಒದ್ದಾಗ ಬಾಯಿ ರಕ್ತಮಯವಾಯಿತು. "ಕ್ಷಮಿಸಿರಿ ಕ್ಷಮಿಸಿರಿ" ಆಕೆ ಅವನ ತುಮಾನು ಹಿಡಿದು ಬೇಡಿಕೊಂಡಳು. ಅವನು ಎರಡನೆಯ ಸಲ ಒದ್ದದ್ದು ಅವಳ ಕಿವಿಗೇ ಹತ್ತಿತು. ಆಕೆ ಪಿಟ್ಟೆನ್ನಲಿಲ್ಲ. ಅಡಿಗೆ ಮನೆಗೆ ಹೋಗಿ ಬಿಕ್ಕುತ್ತ ತನ್ನ ಕೆಲಸದಲ್ಲಿ ತೊಡಗಿದಳು.

ಬರೆಯ ಗಾಯಗಳ ಮಾದಂತೆ ರೋಶನ್‌ಳ ಮನಸ್ಸು ಮತ್ತೆ ಯೋಚಿಸತೊಡಗಿತು. 'ತನಗಾಗಿ ಕೊಟ್ಟ ಮಾಹೇರ್ ಬಳಸಲು ತಾಯಿಗೇನು ಅಧಿಕಾರ? ತಾನೆಂದರೆ ಉರುಸಿನಲ್ಲಿಯ ದನವೇ? ಆಕೆಗೆ ಬೆಳಗಾವಿಯಲ್ಲಿ ಶೋಧಿಸಿಕೊಂಡು ತಾಯಿ ಮನೆಗೆ ಬಂದುದು ನೆನಪಾಯಿತು. ಅಂದರೆ ಅಲ್ಲಿಯವರೆಗೆ ತಾಯಿ ಬಂದುದು ತನ್ನ ಮಾಹೇರ್ ಮೇಲೆ ಕಣ್ಣಿಟ್ಟೇ? ಹೇಗೆ ಸವಿಸವಿಯಾಗಿ ಕೂಳು ಹಾಕುತ್ತಿದ್ದಳು! ಪ್ರತಿ ಶುಕ್ರವಾರ ಮಂಗಳವಾರ ಎಣ್ಣೆ ಹೂಸಿ ಸ್ನಾನಕ್ಕೆ ಹಾಕುತ್ತಿದ್ದಳು! ಒಂದು ಕೆಲಸಕ್ಕೆ ತನ್ನನ್ನು ಹಚ್ಚುತ್ತಿರಲಿಲ್ಲ. ಅಂಗೈಗೆ ಅಂಗಾಲಿಗೆ ಚೆನ್ನ ತಿಕ್ಕಿ ಮೆತ್ತಗೆ ಮಾಡಿದಳು. ಅದೆಲ್ಲ ಏತಕ್ಕಾಗಿ? ರೋಶನ್‌ಗೆ ದೌಲತ್‌ನ ಮುದುಕಿ ಎಮ್ಮೆ ಮಾರಿದ್ದು ನೆನಪಾಯಿತು. ಹದಿನೈದು ಇಪ್ಪತ್ತು ದಿನ ಹಸಿರು ಹುಲ್ಲು ಹಾಕಿ ಕೊಬ್ಬಿಸಿ ಸಂತೆಯ ದಿನ ನುಣ್ಣಗೆ ಬೋಳಿಸಿ ಎಣ್ಣೆ ಹಚ್ಚಿದಾಗ ಎಮ್ಮೆ ಹೇಗೆ ಕಾಣುತ್ತಿತ್ತು! ಮದುವೆಯ ದಿನ ತಾನೂ ಹಾಗೆಯೇ ಆಗಿದ್ದೆ. ಮಾಹೇರ್ ತೆಗೆದುಕೊಂಡ ಬಳಿಕ ತಾಯಿಯ ಕೆಲಸ ಮುಗಿಯಿತು. ಇಲ್ಲದಿದ್ದರೂ ಆಕೆ ಹಾಗೆಯೇ, ಬಶೀರ್ ಜೀವಿಸಿದ್ದಾಗ ಕೂಡ ತನ್ನನ್ನು ಕಾಲು ಕಸ ಮಾಡಿದ್ದಳು. ಅವರು ಸತ್ತ ಬಳಿಕ ಆಕೆಗೆ ತನ ನೆನಪಾಯಿತು! ತವರು ಮನೆಯ ಹಾದಿ ಹಳಾಯಿತು. ಇನ್ನು ಇವರೋ? ದೈವುಳ್ಳವರು, ಶ್ರೀಮಂತರು, ವಸ್ತು ವಡವೆ ಅಡವಿಟ್ಟು ಹಣ ಕೊಡುವಂತೆ, ಹೆಣ್ಣಿನ ಮೇಲೂ ಹಣ ಕೊಡುತ್ತಾರೆ. ಅಡವಿನ ಪಾತ್ರೆ ಪರಡಿಗಳನ್ನು ಬಳಸುವಂತೆ ಹೆಣ್ಣನ್ನೂ ಬಳಸುತ್ತಾರೆ...' ಪಾತ್ರೆ ಬೆಳಗುತ್ತಿದ್ದಂತೆ, ಬಟ್ಟೆಗೆ ಸಾಬೂನು ಹಚ್ಚುತ್ತಿದ್ದಂತೆ, ಮಾಂಸ ಬೇಯಿಸುತ್ತಿದ್ದಂತೆ ಆಕೆ ಉದಾಸೀನಳಾಗಿ ನೆನೆಯುತ್ತಿದ್ದಳು.

ಕೋಳಿ ಕೂಗಿದಾಗ ದುಡಿತದ ಇನ್ನೊಂದು ದಿನ ಆಕೆಗೆ ಕಾದಿರುತ್ತಿತ್ತು. ಹೊತ್ತೇರಿದಂತೆ ಮೈಮನಸ್ಸು ದಣಿಯುತ್ತಿತ್ತು. ರಾತ್ರಿ ಊಟ ಉಡಿಗೆ ಮುಗಿದಾಗಲೇ ಅವಳಿಗೆ ಬಿಡುವು. ಅಂತಹದರಲ್ಲೂ ಫರಿದಾ ಉರುಸಿಗೆ ಹೋದಾಗ ಎರಡು ರಾತ್ರಿ ಅನವರ್ ಕೆಳಗೇ ಮಲಗಲಿಕ್ಕೆ ಬಂದ.

ಆ ತಿಂಗಳು ಆಕೆ ಹೊರಗಾಗಲಿಲ್ಲ. ಫರಿದಾಳ ಲಕ್ಷ್ಯ ಎಲ್ಲ ವಿಷಯಗಳಂತೆ ಅವಳ ಅನಿಯಮಿತತೆಯ ಕಡೆಗೂ ಇತ್ತು. ಮರು ತಿಂಗಳು ಕೂಡ ಅವಳು ಕೂಡದಿದ್ದಾಗ ಫರಿದಾ ಅವಳನ್ನು ಕರೆದಳು "ಏನೇ ಚಿನಾಲಿ, ಏನು ಮಾಡಿದ್ದೀ?" ರೋಶನ್‌ಗೆ ತಿಳಿಯಲಿಲ್ಲ. "ಏನು ತಪ್ಪಾಯಿತು?" ಆಕೆ ಸಣ್ಣದನಿಯಲ್ಲಿ ನಿದಾನವಾಗಿ ಕೇಳಿದಳು. "ನೀನು ಹೊರಗಾಗಿ ಎಷ್ಟು ದಿನಗಳಾದವು?

ರೋಶನ್ ಅವಾಕ್ಕಾದಳು. ಅವಳಿಗೆ ಇದು ಲಕ್ಷ್ಯದಲ್ಲಿ ಇರಲಿಲ್ಲವೆಂದಲ್ಲ. ತಾನೂ ತೊತ್ತಿನಂತೆ ಕೆಲಸ ಮಾಡಿದರೇನಾಯಿತು? ಅನವರ್‌ನ ಹೆಂಡತಿ ಸುಳ್ಳಲ್ಲವಲ್ಲ? ಮಕ್ಕಳಾಗಲಿಲ್ಲವೆಂದು ಜೀನತ್‌ಳನ್ನು ಬಿಟ್ಟರು, ಅಥವಾ ಬಿಟ್ಟರೆನ್ನುವದಕ್ಕಿಂತ ತನ್ನನ್ನು ತಂದರು. ಇನ್ನು ತನಗೆ ದಿನ ಹೋದರೆ ಅತ್ತೆಗೇಕೆ ರೋಷ ಉಕ್ಕಬೇಕು?

ಆಕೆ ನಿಜ ಅವಧಿ ಹೇಳಿದಳು. "ನಾಚಿಕೆ ಆಗುವುದಿಲ್ಲವೇ, ಮೋರೆ ಎತ್ತಿ ಹೇಳುತ್ತೀ?" ಫರಿದಾ ಫಟ್ಟೆಂದು ಅವಳ ಮೋರೆಗೆ ಹೊಡೆದಳು.

"ಇಷ್ಟು ನಾವು ಕಣ್ಣಿನಲ್ಲಿ ಎಣ್ಣೆ ಹಾಕಿಕೊಂಡು ಜಪ್ಪಿಸಿದರೂ ನೀನು ಹಾದರ ಮಾಡಿದೆಯಲ್ಲ?"

ರೋಶನ್‌ಗೆ ಅಚ್ಚರಿಯಾಯಿತು. "ನಾನು ಅಂತಹದೇನೂ ಮಾಡಿಲ್ಲ."

"ಅಂದರೇನೇ, ಛಾಂಡಾಳೀ?"

ತಾನು ಹೇಳಬೇಕೋ ಬೇಡವೋ ಎಂದು ರೋಶನ್‌ಳ ಚಿತ್ತವೃತ್ತಿ ದೋಲಾಚಲವಾಯಿತು. ಎಂದಿದ್ದರೂ ಹೇಳಲೇ ಬೇಕು.

ಆಕೆ ನಡೆದ ವಿಷಯ ಹೇಳಿದಳು.

"ಆಂ?" ಫರೀದಾ ಚಕಿತಳಾದವಳಂತೆ ಬಾಯಿಯ ಮೇಲೆ ಕೈ ಹಿಡಿದಳು. ರೋಶನ್‌ಳ ವಿವರಣೆ ಅವಳನ್ನು ಅಪ್ರತಿಭಳನ್ನಾಗಿ ಮಾಡಿತ್ತು. ಮಗನನ್ನು ಒಂದು ಮಾತು ಕೇಳುವುದು ಒಳ್ಳೆಯದೆನ್ನಿಸಿತು. ಆಕೆಗೆ ಅಂದು ಮಧ್ಯಾಹ್ನದ ಊಟ ಮುಗಿಸಿ ನಿದ್ದೆ ಮಾಡಿ, ಅನವರ್ ಹೊರಟು ನಿಂತಾಗ ಫರಿದಾ ಅವನನ್ನು ಬದಿಗೆ ಕರೆದಳು. ಅಟ್ಟದತ್ತ ಮೋರೆ ಅಲ್ಲಾಡಿಸಿ ಸನ್ನೆ ಮಾಡಿದಳು. ಆತ ಮುಂದಾಗಿ ಹತ್ತಿದ.

"ಏನು ಅಮ್ಮೀ ಜಾನ್?"

"ಆಕೆ ಹೇಳುತ್ತಾಳೆ ನಿಜವೇನು?" ಎಂದು ಆರಂಭಿಸಿ ಆಕೆ ರೋಶನ್‌ಳ ಮಾತು ಅವನಿಗೇ ಕೇಳಿದಳು, ಕುತ್ಸಿತವಾಗಿ.

"ಇಲ್ಲ ಅಮ್ಮೀಜಾನ್. ನಾನು ಅಂತಹದೇನೂ ಮಾಡಿಲ್ಲ. ನಿನ್ನ ಮಾತು ನನಗೆ ಕಾಯದೆ ಅಮ್ಮೀಜಾನ್, ನಾನು ಬಾ–ಕಾಯದಾ ಹೇಗೆ ನಡೆದೇನು?" ಆತ ತಲೆ ಕೊಡವಿಕೊಂಡು ಹೇಳಿದ.

"ಹಾಗಾದರೆ ಅವಳ ಹೊಟ್ಟೆಯಲ್ಲಿದ್ದದ್ದೇನು?"

"ನನಗಾದರೂ ಏನು ಗೊತ್ತು? ನಾನೇನು ಹಗಲೆಲ್ಲ ಮನೆಯಲ್ಲಿರುತ್ತೇನೆಯೇ? ಹಿತ್ತಿಲ ಕಿರಿಗೋಡೆ ದಾಟಿ ಯಾರಾದರೂ ಬರುತ್ತಿರಬೇಕು."

ಫರಿದಾಳ ಪಿತ್ತ ನೆತ್ತಿಗೇರಿತು. "ರೋಶನ್" ಎಂದು ಕಿರುಚುತ್ತಲೇ ಆಕೆ ಧಾವಿಸಿದಳು. "ನಿನ್ನ ಗಂಡ ಅದೆಲ್ಲ ಸುಳ್ಳು ಎನ್ನುತ್ತಾನೆ."

ರೋಶನ್ ಕತ್ತಲೆಯ ಒಂದು ಮೂಲೆಯಲ್ಲಿ ನಿಂತಳು. ಒಳಮನೆಯಲ್ಲಿ ತಾಯಿಯ ಬೆನು ಗುಂಟ ಅನವರ್‌ನೂ ಇಳಿದ.

"..., ಮಂಗ ಮೊಸರು ತಿಂದು ಆಡಿನ ಬಾಯಿಗೆ ಒರಸಿದಂತೆ ನಿನ್ನ ಪಾಪ ನನ್ನ ಕೊರಳಲ್ಲಿ ಹಾಕುತ್ತೀಯೇನು?" ಆತ ಹೆಂಡತಿಗೆ ಗದರಿಸಿದ. "ಯಾರವನು ನಿನ್ನ ಗೆಳೆಯ?"

ಆತ ತಾಯಿಯತ್ತ ತಿರುಗಿದ. "ಅಮ್ಮೀಜಾನ್, ಅವನು ಆ ಶೇಖಮುನ್ನಿರ್‌ನೇ ಇರಬೇಕು. ನಾನು ಮನೆಯಲ್ಲಿ ಇಲ್ಲದಾಗ 'ಕಾಯದಾ' ಓದಲಿಕ್ಕೆ ಬರುತ್ತಿದ್ದನಲ್ಲ?"

"ಅದಾದರೂ ಯಾರಿಗೆ ಗೊತ್ತು? ಬಿಡಾಡಿ ನಾಯಿಗೇನು ಗೋಡೆಗೊಬ್ಬ ಗೆಳೆಯ" ಎಂದಳು ಮಗನಿದೆ ಫರಿದಾ.

"ಯಾರೇ ಅವನು? ಒದೆಯುತ್ತೇನೆ ನೋಡು ನಿನ್ನ."

ರೋಶನ್ ಮಾತನಾಡಲಿಲ್ಲ. ತನ್ನ ಮಾತಿನ ಮಣ್ಣು ಈ ಮನೆಯಲ್ಲಿ ಹೀರಿದೆ ಎಂದು ಆಕೆಗೆ ಸ್ಪಷ್ಟವಾಯಿತು.

ಆಕೆ ಬಾಯಿ ಬಿಡದಾದಾಗ ಅನವರ್ ಕೆನ್ನೆಗೊಂದು ಬಿಗಿದ. ಆ ಹೊಡೆತಕ್ಕೆ ಆಕೆ ಬಿದ್ದಾಗ ಹೊಟ್ಟೆಯ ಮೇಲೆ ಒದ್ದ ಒಮ್ಮೆ, ಎರಡು ಸಲ, ಅದೂ ಬೂಟುಗಾಲಿನಲ್ಲಿ, ರೋಶನ್‌ಳ ಉಸಿರು ಏರಿತು. ಆಕೆ ವಿಲಿವಿಲಿಗುಟ್ಟುತ್ತ ಅಲ್ಲೇ ಬಿದ್ದಳು. ಅನವರ್ ಸಿಟ್ಟು ಸಿಟ್ಟಿನಲ್ಲಿ ಅಂಗಡಿಗೆ ಹೋದ. ರೋಶನ್‌ಳಿಗೆ ರಕ್ತಸ್ರಾವವಾಗತೊಡಗಿತು. ಆಗ ಮಾತ್ರ ಫರಿದಾಳಿಗೆ ಬೆವರು ಬಿಟ್ಟಿತು. ಇದಾವುದೂ ಮಗನ ಮೇಲೆ ಬರಲಿಕ್ಕಿಲ್ಲವಲ್ಲ? ರೋಶನ್‌ಳ ಮನಸ್ಸಂತೂ ಬಧಿರವಾಗಿತ್ತು. ನೋವಿನಿಂದ ಆಕೆ ಏಳುವಂತೆಯೂ ಇರಲಿಲ್ಲ. ಅನವರ್ ಅಂಗಡಿ ಮುಚ್ಚಿಕೊಂಡು ಬಂದರೂ ರೋಶನ್ ಸುಧಾರಿಸಿಕೊಂಡಿರಲಿಲ್ಲ. ಫರಿದಾ ತಂದುಕೊಟ್ಟ ಚಿಂದಿಗಳೆಲ್ಲ ರಕ್ತಮಯವಾಗಿದ್ದವು...

"ಈಕೆಯನ್ನು ತೆಗೆದುಕೊಂಡು ಏನು ಮಾಡುವುದು ಅಮ್ಮೀಜಾನ್" ಮಗ ಕೇಳಿದ. "ಇನ್ನು ಸುಧಾರಿಸಿಕೊಳ್ಳಲು ಈಕೆಗೆ ತಿಂಗಳೂ ಹತ್ತೀತು. ಆದರೆ ಒಮ್ಮೆ ಜಾಡು ತಪ್ಪಿದ ದನ ಮರಳಿ ಜಾಡು ಹಿಡಿಯುವುದಲ್ಲ."

"ಹಾಗಾದರೇನು ಮಾಡೋಣ?"

"ಮನ್ಸೂರ್ ಶಂಶಾದ್ ಏನು ಮಾಡುತ್ತಿದ್ದಾರೆ?"

"ಅವರಿಬ್ಬರೂ ಮಲಗಿದ್ದಾರೆ ಅಟ್ಟದ ಮೇಲೆ."

ಅನವರ್ ಹಲ್ಲು ಕಚ್ಚಿದ. ಒಳಗಿನಿಂದ ಸೀಮೆ ಎಣ್ಣೆಯ ಡಬ್ಬ ಎತ್ತಿ ತಂದ. ಬೇಡ ಮಗನೇ ಎಂದು ಹೇಳಬೇಕೆಂದು ಫರೀದಾಳ ಜೀವ ಎಳೆಯಿತು. ಆಕೆ ಅವಕ್ಕಾಗಿ ನೋಡುತ್ತಿದ್ದಂತೆ ಆತ ಕೆಳಗೆ ಬಿದ್ದ ರೋಶನ್‌ಳ ಮೈಮೇಲೆಲ್ಲ ಎಣ್ಣೆ ಚಿಮುಕಿಸಿದ. ಸೀರೆ ಮೇಲೆ ತಲೆಯ ಕೂದಲ ಮೇಲೆ, ಎಲ್ಲೆಡೆ ಯಥೇಷ್ಟವಾಗಿ. ಆ ವಾಸನೆಗೆ ರೋಶನ್‌ಳಿಗೆ ಎಚ್ಚರವಾದಂತಾಯಿತು.

"ಏನು ಮಾಡುತ್ತಿದ್ದೀರಿ?" ಆಕೆ ಕೇಳಿದಳು. ಏನೆನಿಸಿತೋ, ತಟ್ಟನೆ ಎದ್ದು ನಿಂತಳು. ಡಬ್ಬದಲ್ಲಿಯ ಮಿಕ್ಕ ಎಣ್ಣೆ ಅವಳ ತಲೆಯ ಮೇಲೆ ಸುರಿದು ಅವಳು ಅತ್ತಿತ್ತ ಓಡುತ್ತಿದ್ದಂತೆ ಅನವರ್ ಅವಳ ಬಟ್ಟೆಗೆ ಉರಿಯುವ ಕಡ್ಡಿ ತಾಕಿಸಿದ. ಮನೆ ಸುಡಬಾರದೆಂದು ಅನವರ್ ಸರಳಿನಿಂದ ಅವಳನ್ನು ತಿವಿದು ಕೆಡವಿದ.

• • • •

ಪೋಲೀಸ್ ಸ್ಟೇಶನ್‌ದ ನಿರೂಪದಂತೆ ತಾಲೂಕಾ ಮೆಜಿಸ್ಟ್ರೇಟರು ಸಿವ್ಹಿಲ್ ಆಸ್ಪತ್ರೆಗೆ ಬಂದಾಗ ರೆಸಿಡೆಂಟ್ ಮೆಡಿಕಲ್ ಆಫೀಸರು ಕೋಣೆಯಲ್ಲಿರಲಿಲ್ಲ. ಮೆಜಿಸ್ಟ್ರೇಟರು ಅಟ್ಟವನ್ನೇರಿ ಎದುರು ಕಂಡ ಮೆಟ್ರನಳನ್ನು ಮಾತನಾಡಿಸಿದರು.

"ಆ ಸುಟ್ಟುಕೊಂಡ ಮುಸಲ್ಮಾನ್ ಹೆಂಗಸು ಎಲ್ಲಿ ಇದ್ದಾಳೆ?"

ಮೆಟ್ರನ್ ದೂರದಲ್ಲೊಂದು ಹಾಲ್ ತೋರಿಸಿದಳು. "ಹಾಲ್ ನಂಬರು ೨೩" ಮೆಜಿಸ್ಟ್ರೇಟರು ಅಲ್ಲಿ ಹೋದಾಗ ಹೊರಗೆ ನರ್ಸ್ ಕಾದಿದ್ದಳು.

ಅವರು ಅದೇ ಪ್ರಶ್ನೆ ಆಕೆಗೆ ಕೇಳಿದರು. "ಏಕೆ? ಆಕೆ ನಿಮ್ಮ ಪೈಕಿ ಏನು?"

"ಅಲ್ಲ, ನಾನು ತಾಲೂಕ ಮೆಜಿಸ್ಟ್ರೇಟ. ಡಾಯಿಂಗ್ ಡಿಕ್ಲರೇಶನ್‌ಗಾಗಿ ಬಂದಿದ್ದೇನೆ."

"ಪೇಶಂಟ್ ಇನ್ನೂ ಶುದ್ಧಿಯ ಮೇಲೆ ಬಂದಿಲ್ಲ"

"ಬರುವ ಸಾಧ್ಯಾಸಾಧ್ಯತೆ?"

"ನಾನೇನು ಹೇಳಲಿ?" ಆಕೆ ಮೃದುವಾಗಿ ನಕ್ಕಳು. "ಆದರೂ ಎಚ್ಚರ ಬರಬಹುದೆನ್ನಿಸುತ್ತದೆ ಅರ್ಧ ಗಂಟೆ–ಗಂಟೆಯೊಳಗಾಗಿ."

"ಹಾಗಾದರೆ ನಾನು ಕೆಳಗೇ ಕಾಯುತ್ತೇನೆ. ಆರ್. ಎಂ. ಓ. ಅವರ ಕೋಣೆಯಲ್ಲಿ. ನೀವು ಯಾರ ಜತೆಯಲ್ಲಾದರೂ ಹೇಳಿ ಕಳಿಸಿರಿ ಎಚ್ಚರ ಬಂದೊಡನೆ."

ಮೆಜಿಸ್ಟ್ರೇಟರು ಹಿಂದಿರುಗಿ ನೋಡದೆ ಬಂದ ದಾರಿಯಿಂದ ಮೆಡಿಕಲ್ ಆಫೀಸರರ ಕೋಣೆ ಸೇರಿದರು.

ಡಾಕ್ಟರರಿನ್ನೂ ಬಂದಿರಲಿಲ್ಲ. ಯಾಂತ್ರಿಕವಾಗಿ ಅವರು ಅಂದಿನ ಸ್ಥಳೀಯ ದಿನಪತ್ರಿಕೆ ಎತ್ತಿದರು. ಮೊದಲ ಪುಟದಲ್ಲಿ ಅದೇ ಸುದ್ದಿ, ಯಾವ ಪತ್ರಿಕೆ ಎತ್ತಿದರೂ.

ಮುನ್ನ ರಾತ್ರಿ ಆಕ್ರೋಶವೊಂದನ್ನು ಕೇಳಿ ಬೀದಿಯಲ್ಲಿಯ ಜನ ಮುತ್ತಿದಾಗ ಬಾಗಿಲು ಗಟ್ಟಿಯಾಗಿಯೇ ಇತ್ತು. ಕೆಲವರು ಬಾಗಿಲು ಬಾರಿಸಿದ್ದರು. ಕೆಲವರು ಕಿಟಕಿಯೇರಿ ಶಟರ್‌ನಲ್ಲಿ ನೋಡಿದರೆ ಒಳಗೆ ಬೆಳಕೇ ಬೆಳಕಾಗಿತ್ತು. ಉರಿಯ ನಾಲಿಗೆ ಕಾಣುತ್ತಿತ್ತು. ಒಬ್ಬಿಬ್ಬರು ಉತ್ಸಾಹದಿಂದ ಸಮೀಪದ ಪೋಲೀಸ್ ಸ್ಟೇಶನ್‌ನಲ್ಲಿ ವರದಿ ಮುಟ್ಟಿಸಿದ್ದರು. ಪೋಲೀಸರು ಬಂದು ತಾಯಿ ಮಗನನ್ನು ಸಂಶಯದಿಂದ ಬಂಧಿಸಿದ್ದರು. ಪಂಚನಾಮೆ ಮಾಡಿದ್ದರು. ರೋಶನ್‌ಳನ್ನು ಆಸ್ಪತ್ರೆಗೆ ಸಾಗಿಸಿದ್ದರು.

ಮೆಜಿಸ್ಟ್ರೇಟರು ಮತ್ತೊಮ್ಮೆ ಆ ಸುದ್ದಿ ಓದಿದರು. "ಎಂತಹ ಜನ!" ಎಂದು ಉಸಿರು ಹಾಕಿದರು. ಆರ್. ಎಂ. ಓ. ಬಂದೊಡನೆ ಅವರ ಜತೆಗೂ ಅದೇ ವಿಷಯ ಚರ್ಚೆಯಾಯಿತು.

"ಅವಳು ಕೂಗಿದ್ದು ಅಟ್ಟದ ಮೇಲಿದ್ದ ಅತ್ತೆ–ಗಂಡ ಅವರಿಗೆ ಹೇಗೆ ತಿಳಿಯಲಿಲ್ಲ? "ಅವರೆಲ್ಲ ಮೇಲೆ ಮಲಗಿದ್ದಾಗ ಆಕೆಯೊಬ್ಬಳೇ ಕೆಳಗೆ ಹೇಗೆ ಬಂದಳು?" ಅವರಿಗೂ ಬಗೆಹರಿಯಲಿಲ್ಲ. ಇದರಂತಹ ಇನ್ನಿತರ ಕೇಸು ಹೇಳುತ್ತಿದ್ದರು ಡಾಕ್ಟರರು, ಮೇಲಿಂದ ನಿರೋಪ ತೆಗೆದುಕೊಂಡು ವಾರ್ಡ್ ಬಾಯ್ ಬಂದಾಗ.

"ನೀವೂ ಬರುತ್ತೀರಾ ಡಾಕ್ಟರ್? ಆ ಪೇಶಂಟ್‌ಗೆ ಎಚ್ಚರ ಬಂದಿದೆಯಂತೆ" ಮೆಜಿಸ್ಟ್ರೇಟರು ಎದ್ದು ನಿಂತೊಡನೆ ಡಾಕ್ಟರರೂ ಅಲ್ಲಿಂದ ಎದ್ದರು. ಇಬ್ಬರೂ ೨೩ ನಂಬರು ಹಾಲಿಗೆ ಬಂದರು. "ಪೇಶಂಟ್ ಎಲ್ಲಿ?" ಮೆಜಿಸ್ಟ್ರೇಟರು ಕೇಳಿದಾಗ ನರ್ಸ್ ದೊಡ್ಡ ಶವ ಪೆಟ್ಟಿಗೆಯಂತಹ ಆಕಾರ ತೋರಿಸಿದಳು. "ಅದರಲ್ಲಿದ್ದಾಳೆ"

"ಮಾತನಾಡುವುದು ಹೇಗೆ?" ಅವರೆಂದರು.

"ಈ ಕಿಂಡಿಯಿಂದ ನೀವು ಮಾತನಾಡಿದ್ದು ಆಕೆಗೆ ಕೇಳಿಸುತ್ತದೆ" ನರ್ಸ್ ಹೇಳಿದಳು.

ಆರ್. ಎಂ. ಓ. ಹಾಗೂ ಮೆಜಿಸ್ಟ್ರೇಟರು ಬದಿಯ ಕುರ್ಚಿಗಳ ಮೇಲೆ ಕುಳಿತರು. "ಮೇಲಿನ ಆವರಣ ತೆಗೆಯಲೇನು?" ಎಂದು ಕೇಳಿದರು ಡಾಕ್ಟರು. "ಆದರೆ ನಿಮಗೆ ನೋಡಲು ಆಗಲಿಕ್ಕಿಲ್ಲ. ಪೇಶಂಟ್‌ಳನ್ನು ಪೂರ್ಣ ವಿವಸ್ತ್ರ ಮಾಡಬೇಕಾಗುತ್ತದೆ ಇಂತಹ ಕೇಸುಗಳಲ್ಲಿ. ಅದರ ಹೊರತು ಔಷಧೋಪಚಾರ ಮಾಡುವಂತಿಲ್ಲ"

"ಏನಾದರೂ ಆಸೆಯಿದೆಯೋ?"

ಡಾಕ್ಟರರು ಗೋಣು ಅಲ್ಲಾಡಿಸಿದರು. ಇಲ್ಲವೆಂಬಂತೆ. "ರೋಶನ್‌ಬೀ" ಮೆಜಿಸ್ಟ್ರೇಟರು ಕರೆದಾಗ ಅಂಗಾಂಗ ಭಗ ಭಗಗುಸುತ್ತಿದ್ದ ರೋಶನ್‌ಗೆ ಕೇಳಿಸಲಿಲ್ಲವೆಂತಲ್ಲ. ಅವಳ ಕೈ ಕಾಲು ಎಲ್ಲವೂ ಕಟ್ಟಿದಂತಿತ್ತು. ಮಗ್ಗುಲಾಗಲೂ ಬರುವಂತಿರಲಿಲ್ಲ. ಕಣ್ಣು ಮುಚ್ಚಿದರೂ ಮುಚ್ಚುತ್ತಿರಲಿಲ್ಲ. "ರೋಶನ್‌ಬೀ" ಮೆಜಿಸ್ಟ್ರೇಟರು ಪುನಃ ಕರೆದರು.

ಅವರ ದನಿ ದೌಲತ್‌ನ ದನಿಯಂತಿದೆಯೆಂದೆನಿಸಿತು ಆಕೆಗೆ. ಆದರೆ ಪೂರ್ತಿ ಹಾಗಲ್ಲ.

"ರೋಶನ್‌ಬೀ" ಮತ್ತೆ ಕರೆ ಬಂದಿತು. "ಹಾಂ" ಎಂದಳಾಕೆ ಕ್ಷೀಣ ದನಿಯಿಂದ.

"ನೀವು ಮಾತನಾಡಬಲ್ಲಿರಾ?" ಉರ್ದುವಿನಲ್ಲಿಯ ಪ್ರಶ್ನೆ.

"ಹಾಂ ಜೀ."

"ನಿಮ್ಮ ಅಪಘಾತದ ಬಗ್ಗೆ ನಿಮಗೇನಾದರೂ ಹೇಳುವುದಿದೆಯೇನು?"

ರೋಶನ್ ಮಾತನಾಡಲಿಲ್ಲ.

"ನಿಮ್ಮನ್ನು ಯಾರು ಸುಟ್ಟರು?"

ರೋಶನ್ ಯೋಚಿಸತೊಡಗಿದಳು. ತನ್ನನ್ನು ಯಾರು ಸುಟ್ಟರು? ಮನಸ್ಸೊಪ್ಪಿಸಿದ ದೌಲತ್ ಮನಸ್ಸು ಸುಟ್ಟ. ಶರೀರವನ್ನೊಪ್ಪಿಸಿದ ಅನವರ್ ಶರೀರ ಸುಟ್ಟ. ಎರಡೂ ತಾನಾಗಿ ಒಪ್ಪಿಸಿದವು.

"ನಿಮ್ಮನ್ನು ಯಾರು ಸುಟ್ಟರು?" ಪ್ರಶ್ನೆ ಮರುಕಳಿಸಿತು.

ಒಮ್ಮೆ ಒಪ್ಪಿಸಿದ ಬಳಿಕ ಅವು ಅವರ ಸೊತ್ತು. ಶರೀರವನ್ನಂತೂ ಮಾಹೇರ್ ಕೊಟ್ಟು ಅನವರ್ ಕೊಂಡು ತೆಗೆದುಕೊಂಡಿದ್ದ. ಅದರ ಮೇಲೆ ಇನ್ನಾರ ಅಧಿಕಾರ?"

"ಯಾರೂ ಇಲ್ಲ" ಆಕೆ ತಟ್ಟನೆ ಹೇಳಿದಳು.

"ಹಾಗಾದರೆ ನಿಮಗೆ ಅಪಘಾತ ಹೇಗೆ ಆಯಿತು?"

ಆದುದನ್ನು ಆದಂತೆ ಹೇಳಬೇಕೇ? ಆದರೆ ಅವೆಲ್ಲ ನಿಮಿತ್ತ. ಅವಳಿಗೆ ಬೆಳಗಾವಿಯಲ್ಲಿ ನೋಡಿದ ಸಿನೇಮಾ ನೆನಪಾಯಿತು. ಅದರಲ್ಲಿ ಲಾಕ್ಷಣಿಕವಾಗಿ ಪತಂಗ ದೀಪದ ಮೇಲೆರಗಿ ತನ್ನನ್ನು ತಾನೇ ಸುಟ್ಟುಕೊಳ್ಳುತ್ತದೆ. ಆ ಪತಂಗದಂತೆ ತಾನೂ......

"ನಾನೇ" ಎಂದಳಾಕೆ ಅಸ್ಪಷ್ಟವಾಗಿ.

ಹೌದು ತಾನೇ ಈ ದುರ್ಘಟನೆಗೆ, ಸಾಧಿಸಿದರೆ, ದುರ್ಮರಣಕ್ಕೆ ಕಾರಣಳು. "ಖುದಾ, ಪರವರ್‌ದಿಗಾರ್" ಆಕೆ ತನ್ನಷ್ಟಕ್ಕೆ ಹೇಳಿಕೊಂಡಳು. "ನಾನು ಪಾಪಿ, ನನ್ನನ್ನು ಕ್ಷಮಿಸು".

ತಾನು ಅನವರ್‌ನ ಹೆಸರು ಹೇಳಿದರೆ ಅವನಿಗೆ ಶಿಕ್ಷೆಯಾದೀತು. ಗಲ್ಲಿನ ಶಿಕ್ಷೆಯೂ ಆದೀತು. ಆದರೆ ಅದರಿಂದ ತನಗೇನು ಲಾಭ? ತನ್ನಲ್ಲಿ ಹೊಸ ಜೀವ ರಸಾಯನ ಹರಿದೀತೇ? ತಾನು ಮಣ್ಣುಪಾಲು ಆದ ಬಳಿಕ ಇತರರಿಗೆ ಏನು ಶಿಕ್ಷೆ ಆಗಿ ಏನು ಪ್ರಯೋಜನ? ಈ ಚಿತ್ರಹಿಂಸೆ ತನಗಾದುದು ಸಾಕು. ಇನ್ನೊಬ್ಬರಿಗೆ ಬೇಡ.

"ಸಾಹೇಬ್" ಆಕೆ ಹೇಳಿದಳು. "ನಾನೇ ಆತ್ಮಹತ್ಯೆಗೆ ಪ್ರಯತ್ನ ಮಾಡಿಕೊಂಡೆ" ●

ಮೀನಾಕ್ಷಿದೇವಿಯ ವಾಸಸ್ಥಾನವಾದ ಮಧುರೆಯನ್ನು ಸುಲ್ತಾನ ನಾಝೀರುದ್ದೀನ ವಶಪಡಿಸಿಕೊಳ್ಳುತ್ತಾನೆ. ಬುಕ್ಕರಾಯನ ಪುತ್ರ ಕಂಪಣ ಸಕಲಸಿದ್ಧತೆಯಿಂದ ಸುಲ್ತಾನನ ಮೇಲೆರಗಿ, ಮೀನಾಕ್ಷಮ್ಮನನ್ನು ಮುಸಲ್ಮಾನರ ಸೆರೆಯಿಂದ ಬಿಡಿಸುತ್ತಾನೆ. ಇನ್ನೇನು ಕಂಪಣ ವಿಜಯೋತ್ಸಾಹದಿಂದ ಮರಳಬೇಕು. ಅಷ್ಟರಲ್ಲಿ ಸುಲ್ತಾನನ ಪ್ರೇಯಸಿ ಮಧಿರೆ ಮೋಸದಿಂದ ಕಂಪಣನನ್ನು ಇರಿದು ಸಾಯಿಸುತ್ತಾಳೆ.
ಕಂಪಣನ ಮಧುರಾ ವಿಜಯ, ಮಧಿರೆಯ ವಿಜಯವಾಗುತ್ತದೆ....

## ಪಾತ್ರ ವಿವರ :

| | | |
|---|---|---|
| ಸುಲ್ತಾನ ನಾಝೀರುದ್ದೀನ | .... | ಮಧುರೆಯ ಸುಲ್ತಾನ |
| ಮಿರ್ಝಾ ಸಾಹೇಬ | .... | ಸುಲ್ತಾನನ ಆಪ್ತಮಿತ್ರ ಹಾಗೂ ಮಂತ್ರಿ |
| ಕುಮಾರ ಕಂಪಣ | .... | ವಿಜಯನಗರದ ಅರಸು ಬುಕ್ಕರಾಯನ ಕುವರ |
| ಗಂಗಾದೇವಿ | .... | ಕಂಪಣನ ಪತ್ನಿ |
| ಗೋಪರಸ<br>ಸೋಮಪ್ಪ<br>ಸಾಳ್ವ ಮಂಗು | .... | ಕಂಪಣನ ಮಂತ್ರಿಗಳು |

[ ನಿವೇದನೆ : ಕಂಪಣನ ಮಧುರಾ ವಿಜಯ ಐತಿಹಾಸಿಕ ಸತ್ಯವಾಗಿದ್ದರೂ, ಇಲ್ಲಿ ನಡೆಯುವ ಘಟನೆಗಳೆಲ್ಲ ಕೇವಲ ಕಾಲ್ಪನಿಕ ]

**ಮಧುರೆಯಲ್ಲಿ ಒಂದು ರಾತ್ರಿ. ಜನರೆಲ್ಲ ಕೂಡಿ ಕಿಲಕಿಲ ನಗುತ್ತಿದ್ದರು. ಮೀನಾಕ್ಷಿ ಮಂದಿರದ ಮಂಗಳವಾದ್ಯಗಳು ಕರ್ಣಗಳಿಗೆ ಅಮೃತಪಾನಮಾಡಿಸುತ್ತಿದ್ದವು. ಈಗ ಅದೆಲ್ಲ ಮಸಣದಂತೆ ಮೌನವಾಗಿದೆ. ತುಂಬಿದ ಚಂದಿರ ಬಾನಿನಲ್ಲಿ ಬೆಳಗುತ್ತಿದ್ದಾನೆ. ತಿಂಗಳ ಬೆಳಕಿನಲ್ಲಿ ಮಧುರೆಯ ಸೌಂದರ್ಯ ಸೂರೆಗೊಂಡಿದೆ. ಆದರೆ...ಆ ಸವಿಯನ್ನು ಸವಿಯಲು ಹೆದರಿ ಜನ ಮನೆಯ ಬಾಗಿಲನ್ನು ಭದ್ರಪಡಿಸಿಕೊಂಡು ಕುಳಿತಿದ್ದಾರೆ. ಈಗ ಯವನರು ಮಧುರೆಯ ಸುಲ್ತಾನರಾಗಿದ್ದಾರೆ. ಅವರು ಜನರಿಗೆ ಯಾವ ಘಳಿಗೆಯಲ್ಲಿ ಎಂತಹ ಮೋಸದ ಬಲೆ ಬೀಸುವರೋ ತಿಳಿಯದು. ಭಯಭೀತ ಬಡ ಹಿಂದು ಪ್ರಜೆಗಳಿಗೆ ರಾಜನಿಲ್ಲ. ಈ ಸಮಯದಲ್ಲಿ ಮಧುರೆಯ ಮುಸಲ್ಮಾನ ಸುಲ್ತಾನ ನಾಝೀರುದ್ದೀನ ತನ್ನ ಆಪ್ತಮಂತ್ರಿ ಮಿರ್ಝಾನೊಡನೆ ಕುದುರೆ ಸವಾರಿ ಹೊರಟಿದ್ದಾನೆ. ಆಗ......**

**ಮಿರ್ಝಾ :** ಹಂ, ಮಧುರೆ ಮೌನವಾಗಿದೆ. ನಿಶ್ಶಬ್ದತೆ ನಮ್ಮನು ಅಣಕಿಸುತ್ತಿದೆಯಲ್ಲವೇ, ಸರ್ಕಾರ.

**ಸುಲ್ತಾನ :** ಹಿಂದುಗಳು ಕಚ್ಚೆದೆಯ ವೀರಾಳುಗಳು. ಆದರೆ ಬೆದರಿದರು ಮಾತ್ರ ಬಾಲ ಮುದುರಿಕೊಂಡ ಬೆಕ್ಕಿನಂತೆ ಕುಳಿತುಬಿಡುತ್ತಾರೆ. ಮೀನಾಕ್ಷಿ ಮಂದಿರಕ್ಕೆಂದು ಅದೆಷ್ಟು ಹಣ, ಹೊನ್ನು ಸುರಿಯುತ್ತಿದರು. ನಾವು ಮಧುರೆಯ ಸುಲ್ತಾನರಾದಾಗಿನಿಂದ ಮಂದಿರದ ಬಾಗಿಲುಗಳು ಮುಚಿಕೊಂಡುಬಿಟ್ಟವೆ

**ಮಿರ್ಝಾ :** ಬಾಗಿಲು ಮುಚ್ಚಿದ್ದಷ್ಟೆ ಅಲ ಸರ್ಕಾರ. ಮಂದಿರದ ಮುಖ್ಯ ಪೂಜಾರಿ ದೇವಿಗೆಂದು, ಅವಳ ಪೂಜೆಗೆಂದು ದಾನವಾಗಿ ಬಂದಿದ್ದ ಹೊಲಗಳನ್ನು ಬಿಕರಿ ಮಾಡಿಬಿಟ್ಟನಂತೆ.

**ಸುಲ್ತಾನ :** ಕಾರಣ?

**ಮಿರ್ಝಾ :** (ನಗುತ್ತ) ಕಾರಣ...ಹ...ಹ...ಕಿರಿಯ ಮಗಳು ಎಂದರೆ ಏಳನೆಯ ಮಗಳ ಮದುವೆಗಂತೆ. ಸಪ್ತ ಕನ್ನೆಯರಂತೆ ಆ ಬ್ರಾಹ್ಮಣನಿಗೆ. ಆರನೆಯವಳ ಮದುವೆ ಕಳೆದ ವರುಷ ಮಾಡಿದಾಗ, ಮನೆಯಲ್ಲಿ ಒಡಕು ಪಾತ್ರ ಸಹ ಉಳಿದಿರಲಿಲ್ಲವಂತೆ. ಈ ವರುಷ ಕೊನೆಯವಳೂ ವಯಸ್ಸಿಗೆ ಬಂದಿದ್ದಳು, ಅವಳ ಮದುವೆ ಮಾಡಲೇಬೇಕಿತ್ತಂತೆ.

**ಸುಲ್ತಾನ :** ಸರಿ. ಬಡಬ್ರಾಹ್ಮಣ...ಪರವಾ ಇಲ್ಲ—ಮಗಳ ಕಲ್ಯಾಣಕಾಗಿ ಮೀನಾಕ್ಷಮ್ಮನ ಆಸ್ತಿ ಉಪಯೋಗಿಸಿಕೊಂಡುಬಿಟ್ಟ. ಆದರೆ ಈ ಬಿಕರಿ ವ್ಯಾಪಾರಕ್ಕೆ ಯಾರು ಅಪ್ಪಣೆ ಕೊಟ್ಟರಂತೆ?

**ಮಿರ್ಝಾ :** ಅಳಿದುಳಿದ ಊರಿಗೆ ಉಳಿದವನೇ ಗೌಡ ಎಂಬಂತೆ ಯಾರೂ ದಿಕ್ಕಿಲ್ಲದೆ ಬಿದ್ದಿರುವ ಈ ಗುಡಿಗೆ ಬಂದವನೇ ಪೂಜಾರಿ; ಇದ್ದವನೇ ಅಧಿಕಾರಿ, ತಾನೇ ಅಧಿಕಾರಿ ಎಂದು ಹೇಳಿ ದುರಾಡಳಿತ ನಡೆಸಿದಾನೆ.

**ಸುಲ್ತಾನ :** ಇದನು ಹತೋಟಿಗೆ ತರಲು ಯಾರೂ ಇಲ್ಲವೆ?

**ಮಿರ್ಝಾ :** ಇಲ್ಲಿ ನಾವು ಇರುವವರೆಗೆ ಯಾವ ಹಿಂದುವೂ ಈ ಹಾಳು ದೇವಾನದ ಸಮೀಪಕೆ ಬರಲಾರ.

**ಸುಲ್ತಾನ :** ಓ... ಹಾಗೋ

**ಮಿರ್ಝಾ :** ಅಲ್ಲಾ ಸರ್ಕಾರ, ಈ ದೇವಸ್ಥಾನವನು ನೆಲಸಮ ಮಾಡಿ ಒಂದು ಮಸೀದೆ ಕಟ್ಟಿಸಿದರೆ ಹೇಗೆ?

**ಸುಲ್ತಾನ :** ಅದನ್ನೀಗ ವಿಚಾರ ಮಾಡಲು ಸಾಧ್ಯವಿಲ್ಲ ಮಿರ್ಝಾ. ದಿಲ್ಲಿಯ ಸಮಾಚಾರವೇನೋ ಗೊತ್ತಿಲ್ಲ. ಇಲ್ಲಿ ನಾವು ಹೆಚ್ಚು ಹೊತ್ತು ಉನ್ಮತ್ತರಾಗಿ ಕೂಡ್ರು

ವಂತಿಲ್ಲ. ಪಂಪಾ ಎಂಬಲ್ಲಿ ಹಿಂದುಗಳು ಹೊಸ ರಾಜ್ಯ ಕಟ್ಟಿಕೊಳ್ಳುತ್ತಿದ್ದಾರೆ. ಬುಕ್ಕರಾಯ ಭೂಪತಿಯಾಗಿದ್ದಾನೆ.

**ಮಿರ್ಝಾ :** (ತಿರಸ್ಕಾರದಿಂದ) ಹೂಂ ಅವು ಯಾವ ಮರದ ಬೇರುಗಳು ಸರ್ಕಾರ?

**ಸುಲ್ತಾನ :** ಅವು ಹೊಯ್ಸಳ ವಂಶದ ಬೇರುಗಳು ಎಂಬುದು ನಿನಗೆ ಗೊತ್ತಿಲ್ಲವೆ? ಬಲ್ಲಾಳನ ವಂಶದ ಕುಡಿಗಳವರು. ಬಲ್ಲಾಳನ ರಾಣಿ ಕಕ್ಕಾಯಿತಾಯಿಗೆ ಸೇರಿದವರು. ಘಟ್ಟದ ಹುಲಿಗಳು; ಮಲೆರಾಜ್ಯದ ಮಲ್ಲರು. ಅವರನ್ನು ನಿರ್ಲಕ್ಷಿಸುವಂತಿಲ್ಲ.

**ಮಿರ್ಝಾ :** ಬಲ್ಲಾಳನನ್ನು ಬಗ್ಗಿಸಿದ ಈ ಬಾಹುಗಳು ಅವನ ಕುನ್ನಿಗಳಿಗೆ ಬೆದರಬಹುದೇ?

**ಸುಲ್ತಾನ :** ಆಲದ ಮರ ಮುಪ್ಪಾದಂತೆ ಅದರ ಟೊಂಗೆಗಳಿಂದ ಬೇರು ಇಳಿಬಿದ್ದು ಮರಕ್ಕೆ ಆಧಾರ ಕೊಡುತ್ತವೆ. ಬೇರುಗಳು ಕೆಳಗಿಳಿದಂತೆ ಮರದ ವಿಸ್ತಾರ ಬೆಳೆಯುತ್ತದೆ. ಈ ಹಿಂದೂ ರಾಜರ ಕಥೆಯೂ ಹೀಗೆಯೇ.

**ಮಿರ್ಝಾ :** ಎಂದರೆ ಈ ಬುಕ್ಕ ಭೂಪತಿ ಸಾಮ್ರಾಜ್ಯ ಕಟ್ಟುವದಕ್ಕೆ ಸಾಹಸ ಮಾಡುವನೆಂಬುದು ನಿಮ್ಮ ಅಭಿಪ್ರಾಯವೇ ಸುಲ್ತಾನ?

**ಸುಲ್ತಾನ :** ಇನ್ನೂ ನನ್ನ ಅಭಿಪ್ರಾಯ ಕೇಳುವಿಯಾ ಮಿರ್ಝಾ? ಇಪ್ಪತ್ತು ವರ್ಷಗಳ ಹಿಂದೆ ಬುಕ್ಕನೊಡನೆ ಆದ ಚಿಕ್ಕ ಯುದ್ಧದಲ್ಲಿ ನಾವು ಮಧುರೆಯನ್ನು ಕಳೆದುಕೊಳ್ಳುವ ಹೊತ್ತು ಬಂದದ್ದನ್ನು ನೀನು ಇಷ್ಟು ಬೇಗ ಮರೆತೆಯಾ?

**ಮಿರ್ಝಾ :** ಒಮ್ಮೆ ಆದಂತೆ ಪುನಃ ಪುನಃ ಆಗುವದೆಂದು ಎಲ್ಲಿ ಹೇಳಿದೆ. ಏನೋ ಅದೊಂದು ವಿಪಘಳಿಗೆಯಿತ್ತು. ಅಲ್ಲಾ ನಮ್ಮ ಮೇಲೆ ದಯೆ ತೋರಿರಲಿಲ್ಲ. ಈ ಹಿಂದೆ ಅದೆಷ್ಟು ಸಲ ನಮಗೇ ಗೆಲುವಾಗಿಲ್ಲ?

**ಸುಲ್ತಾನ :** ನೀನು "ಪುನಃ ಪುನಃ ಆಗುವದಿಲ್ಲ" ಎಂದಂತೆ ನಮಗೆ ಪುನಃ ಪುನಃ ಗೆಲುವೂ ಆಗಲಿಕ್ಕಿಲ್ಲ.

**ಮಿರ್ಝಾ:** ಸುಲ್ತಾನರ ಸಂಶಯ ಭದ್ರ ಬುನಾದಿ ಇಲ್ಲದ ಬಡವೃಕ್ಷದಂತಿದೆ ಎಂದು ನನಗೆ ನಗೆ ಬರುತ್ತದೆ.

**ಸುಲ್ತಾನ :** ನಗಲು ಇದು ಸಮಯವಲ್ಲ ಮಿರ್ಝಾ. ಹರಿಹರ ಬುಕ್ಕ ಬಲ್ಲಾಳನಿಗೆ ಬಲಗೈ ಆಗಿದ್ದರು.

**ಮಿರ್ಝಾ :** ದೇಹ ಬಿದ್ದು ಹೋದ ಮೇಲೆ ಬಲಗೈ ಇದ್ದರೇನು, ಎಡಗೈ ಇದ್ದರೇನು?

**ಸುಲ್ತಾನ :** ರಣರಂಗದಲ್ಲಿ ವೀರನೊಡನೆ ಹೋರಾಡಿದವರಾಡುವ ಮಾತಲ್ಲ ಇದು. ಅನೇಕ ಸಲ ನೀನೇ ನೋಡಿಲ್ಲವೇ. ಗಾಯಗಳಿಂದ ನೆತ್ತರು ಸುರಿಯುತ್ತಾ ಸಾಯುತ್ತ ಬಿದ್ದಿದ್ದ ಯೋಧ ವೈರಿಯನ್ನು ಕಂಡ ತಕ್ಷಣ ಖಡ್ಗ ಬೀಸಿ ಅವನ ಜೀವ ತೆಗೆದುಕೊಳ್ಳುವನು. ನಿಜವಾದ ವೀರ ವೈರಿಯ ಜೀವ ತೆಗೆದುಕೊಂಡು ಅನಂತರ ತಾನು ಸಾಯುತ್ತಾನೆ. ತನ್ನ ದೇಹದಲ್ಲಿರುವ ಕೊನೆಯ ರಕ್ತದ ಹನಿ ಸುರಿಯುವವರೆಗೂ ಕಾದುತ್ತಾನೆ.

**ಮಿರ್ಝಾ :** ಯಾಕೋ ಸುಲ್ತಾನರಿಗೆ ಇಂದು ತುಂಬ ಆವೇಶ ಬಂದಂತಿದೆ.

**ಸುಲ್ತಾನ :** ಹರಿಹರ ಬುಕ್ಕರು ಬಲ್ಲಾಳ ಎಷ್ಟು ವಿಧೇಯರೆಂದರೆ ವಿರೂಪಾಕ್ಷ ಬಲ್ಲಾಳನ ಮರಣದ ನಂತರ ಕೂಡಾ ಇನ್ನೂ ಮಹಾಮಂಡಲೇಶ್ವರ ಎಂದು ಕರೆಸಿಕೊಳ್ಳುತ್ತಿದ್ದಾರೆ. ರಾಜ ಎಂದೆನ್ನಿಸಿಕೊಳ್ಳುವದಿಲ್ಲ. ತಮ್ಮ ಶಾಸನ ಪಡಿಗಳಲ್ಲಿ ವಿರೂಪಾಕ್ಷ ಎಂದರೆ ಒಡೆಯನ ಪ್ರತಿನಿಧಿ ಎಂದು ತಮ್ಮೊಡೆಯನ ಒಪ್ಪ ಹಾಕುವರೇ ವಿನಃ ತಮ್ಮ ದಸ್ಕತ್ತಲ್ಲ. ಚೋಳಮಂಡಲವನ್ನು ಅವರು ಹಾಗೇ ಬಿಡುವರೆಂದು ತಿಳಿದಿರುವೆಯಾ? ಹಿಂದೂ ಧರ್ಮರಕ್ಷಣೆಗೆ ಅವರು ಕಂಕಣ ಕಟ್ಟಿಕೊಂಡು ನಿಂತಿದ್ದಾರೆ.

**ಮಿರ್ಝಾ :** ಅಂತೂ ತಮ್ಮ ಮಾತಿನ ಸರಣಿ ನೋಡಿದರೆ ನಮ್ಮ ಸಿದ್ಧತೆಯಲ್ಲಿ ನಾವಿರಬೇಕು ಎಂದಂತಾಯಿತು.

**ಸುಲ್ತಾನ:** ಕೊನೆಗೊಮ್ಮೆ ನನ್ನ ವಿಚಾರಧಾರೆಯನ್ನು ಅರ್ಥ ಮಾಡಿಕೊಂಡೆಯಲ್ಲಾ ಮಿರ್ಝಾ. ಸಂತೋಷ–ತುಂಬ ಸಂತೋಷ.

**ಮಿರ್ಝಾ:** (ಒಮ್ಮೆಲೇ ಆಶ್ಚರ್ಯದಿಂದ) ಸುಲ್ತಾನ, ಅದೋ ಅಲ್ಲಿ ನೋಡಿರಿ.

**ಸುಲ್ತಾನ:** (ಅಷ್ಟೇ ಶಾಂತವಾಗಿ) ಓ ಮಂದಿರದ ಮೀನಾಕ್ಷಿ ಮೈದಳೆದು ಬಂದಂತೆ ತೋರುತ್ತದೆ, ಅವಳಾರು ಎಂದು ನಿನಗೆ ಗೊತ್ತೆ, ಮಿರ್ಝಾ?

**ಮಿರ್ಝಾ:** ನನಗೆ ಗೊತ್ತಿಲ್ಲ: ನಿಮಗೆ ಬೇಕಿದ್ದರೆ ಹೋಗಿ ಮಾತನಾಡಿಸುವೆ.

**ಸುಲ್ತಾನ:–** ಬೇಡ ಬೇಡ. ನಿನಗೆ ಯಾಕೆ ಸುಮ್ಮನೇ ತೊಂದರೆ? ನಾನೇ ಹೋಗಿ ಮಾತನಾಡಿಸುವೆ. ರಾತ್ರಿ ತುಂಬ ಸಮಯವಾಯಿತು. ನೀನಿನ್ನು ನಿನ್ನ ವಾಸಸ್ಥಾನಕ್ಕೆ ತೆರಳಬಹುದು.

**ಮಿರ್ಝಾ:** ಸರ್ಕಾರರ ಆಜ್ಞೆ, ಸಲಾಂ ಸುಲ್ತಾನ-ಖುದಾವಂದ. (ಹೋಗುವನು)

**ಸುಲ್ತಾನ:** ಸಲಾಂ. (ಖುರಪುಟ ದೂರವಾದಂತೆ ಕೇಳಿ ಬರುವದು) ಶುಭ್ರ ಜ್ಯೋತಿಯಂತೆ ಶೋಭಿಸುವ ನೀನಾರು?

**ಮಧಿರಾ:** ಪಥಿಕಳು.

**ಸುಲ್ತಾನ:** ಆದರೆ...ಮುಂದೆ ಪಥ ಕಷ್ಟಾಗಿದೆ. ಪಥಿಕಳೇ—

**ಮಧಿರಾ:** (ನಗುತ್ತ) ಕಷ್ಟಾಗಿಲ್ಲ. ಇಲ್ಲಿಗೇ ಕೊನೆಗೊಂಡಿತು. ಅರಸುತಿಹ ಲತೆ ಕಾಲಿಗೆ ತೊಡಕಿತು.

**ಸುಲ್ತಾನ:** ಓ...ತಿಂಗಳಿನ ಬೆಳುದಿಂಗಳ ಬೆಳಗಡಲು ಶಾಂತವಾಗಿದ್ದರೂ ಹೃದಯ ಕಡಲು ಅಲ್ಲೋಲ ಕಲ್ಲೋಲವಾಗುತ್ತಿದೆ...ಸುಂದರಾಂಗಿಯ ಶುಭ ನಾಮ?

**ಮಧಿರಾ:** (ಉನ್ಮತ್ತತೆಯ ನಗು ನಗುತ್ತ) ನೀವೇ ಹೇಳಿ ಸುಲ್ತಾನ–

**ಸುಲ್ತಾನ:** ಇಷ್ಟು ಬೇಗ ನನ್ನನ್ನು ಗುರುತಿಸಿದೆಯಾ.

**ಮಧಿರಾ:** ಒಡೆಯನಿಗೆ ತನ್ನ ಎಲ್ಲ ಪ್ರಜೆಗಳ ಗುರುತಿರಲಿಕ್ಕಿಲ್ಲ. ಆದರೆ ಪ್ರಜೆಗಳಿಗೆ ಒಡೆಯನ ಸುಳಿವು ಕಂಡು ಹಿಡಿಯಲು ಕ್ಷಣ ಮಾತ್ರ ಸಾಕು. ದಿನ ನಿತ್ಯ ಮನೆಯ ಉಪ್ಪರಿಗೆಯಿಂದ ತಮ್ಮನ್ನು ನೋಡುತ್ತಿದ್ದೆ. ಈ ದಿನಕ್ಕಾಗಿ, ಈ ಮಿಲನಕ್ಕಾಗಿ ಹಂಬಲಿಸುತ್ತಿದ್ದೆ. ಇಂದು ನನ್ನ ಮೇಲೆ ಅಲ್ಲಾ ದಯದೋರಿದ.

**ಸುಲ್ತಾನ:** ಮದಭರಿತ ಮಧುಭರಿತ ಮೀನಾಕ್ಷಿಯ ಅಕ್ಷಿಗಳಿಗಿಂತಲೂ ಮೋಹಕವಾಗಿರುವ ಈ ಮಧಿರಾಕ್ಷಿಯನ್ನು ಬಂಧಿಸಲು ನನ್ನ ಬಾಹುಗಳು ಹಾತೊರೆಯುತ್ತಿವೆ...ಮಧಿರಾಕ್ಷಿ...

**ಮಧಿರಾ:** (ಅದೇ ಉನ್ಮತ್ತತೆಯ ನಗುನಗುತ್ತ) ಸುಲ್ತಾನ... (ಕುದುರೆಯ ಸಪ್ಪಳ ದೂರವಾದಂತೆ ಕೇಳಿ ಬರುವದು.)

## ದೃಶ್ಯ ೨

[ಬುಕ್ಕರಾಯನ ಕುವರ ಕುಮಾರ ಕಂಪಣ ಮಧುರೆಗೆ ಹೋಗುವ ಸಿದ್ಧತೆಯಲ್ಲಿದ್ದಾನೆ. ತನ್ನ ಪ್ರಿಯ ಪತ್ನಿ ಗಂಗಾ ಹಾಗೂ ಅಪ್ತಮಂತ್ರಿ ಗೋಪರಸ, ಸಾಳ್ವಮಂಗು ಮೊದಲಾದರೊಡನೆ ಮಂತ್ರಾಲೋಚನೆಯ ಮುನ್ನ]

**ಭಟ್ಟಂಗಿಗಳು :** ಸ್ವಸ್ತಿ ಶ್ರೀಮನ್ ಮಹಾ ಮಂಡಲೇಶ್ವರ, ಅರಿರಾಯ ವಿಭಾಡ, ಕೊಟ್ಟ ಭಾಷೆಗೆ ತಪ್ಪದ ರಾಯರ ಗಂಡ, ಪೂರ್ವ, ದಕ್ಷಿಣ, ಪಶ್ಚಿಮ ಸಮುದ್ರಾಧಿಪತಿ. ಶ್ರೀ ವೀರ ಬುಕ್ಕಣ್ಣ ಒಡೆಯರ ಕುಮಾರ ಕಂಪಣೊಡೆಯರಿಗೆ ಭೋ ಪರಾಕ್

**ಸ್ತ್ರೀಯರ ಧ್ವನಿ :** ಕನ್ನಡಮ್ಮನ ಕುವರ, ಕನ್ನಡ ಕುಲದೀಪಕ, ಕರ್ನಾಟಕೋದ್ಧಾರಕ, ಹೊಯ್ಸಳಾನ್ವಯರ ಮೇದಿನೀರಕ್ಷಕ, ಶತ್ರುವಿನಾಶಕ, ಸಾಹಿತ್ಯ ರಸಿಕ, ಕಲಾಪ್ರಿಯ, ವಿನೋದಪ್ರಿಯ ರಸಿಕ ಪ್ರಿಯನ ಪ್ರಿಯಪತ್ನಿ ಜಯತು ಜಯತು ಗಂಗಾದೇವಿಗೆ–

(ಅನಂತರ ಎರಡು ನಿಮಿಷ ನಾಗಸ್ವರ, ನರ್ತನ ವಾದ್ಯಮೇಳ ಕೇಳಿಬರುವದು)

**ಕಂಪಣ :** ನಮ್ಮ ಮುಂದಿನ ಪ್ರಯಾಣಕೆ ಎಲ್ಲ ಸಿದ್ಧವಾಗಿದೆಯೇ, ಗೋಪರಸರೇ?

**ಗೋಪ :** ಹೌದು ಒಡೆಯಾ. ಕಾಲಾಳು, ಅಶ್ವಾರೋಹಿ, ಗಜಾರೋಹಿಗಳೆಲ್ಲ ಸಿದ್ಧರಾಗೇ ಇದ್ದಾರೆ. ಅವರಿಗೆಲ್ಲ ಸಂತೋಷ ವಿನೋದಗೊಳಿಸಲೆಂದು, ನರ್ತಕಿಯರು, ಸಂಗೀತ ಪ್ರವೀಣೆಯರು ಇದ್ದಾರೆ. ಊಟ–ಉಪಚಾರಕ್ಕೆ ಕೊರತೆಯಾಗದಂತೆ ದವಸ ಧಾನ್ಯಗಳು ಕೂಡಿವೆ.

**ಸಾಳ್ವಮಂಗು :** ಶಾಂಭುವರಾಯನ ಸೊಕ್ಕಡಗಿಸಿದ ನಂತರ ನಮ್ಮ ಜನ ಸಂತೋಷ ಸಾಗರದಲ್ಲಿ ತೇಲಾಡುತ್ತಿದ್ದಾರೆ. ಗಂಡರಗೂಳಿ ಮಾರನಾಯಕ ತನ

ಶೌರ್ಯದ ಸುವರ್ಣ ಸಮಯಕ್ಕೆಂದು ಪಂಪಿಯಲ್ಲಿಯ ಬಳಿಯ ಗುಡಿಗೆ ಗೋಪುರ ಕಟ್ಟಿಸುತ್ತಿದ್ದಾನೆ. ಜನರ ಆಮೋದ-ಪ್ರಮೋದಗಳಿಗೆ ಎಣೆಯೇ ಇಲ್ಲ. ಅದೋ ಕೇಳಿ ದೂರದಲ್ಲಿ ಸಂಗೀತ ನರ್ತನ ಕೇಳಿ ಬರುವದು)

**ಕಂಪಣ :** ನಮ್ಮ ಜನ ಅಲ್ಪದರಲ್ಲಿ ಸಂತೋಷಪಡುವವರು.

**ಗಂಗಾ :** ಯಾಕೆ ದೊರೆಗೆ ಸಂತೋಷವಾಗಿಲ್ಲವೇ ಇಂದು.

**ಕಂಪಣ :** ಪತಿಯನ್ನು ಪೂರ್ಣವಾಗಿ ತಿಳಿಯುವದು ಪತ್ನಿಯ ಧರ್ಮ, ಗಂಗಾ.

**ಗಂಗಾ :** ಪ್ರಜೆಗಳ ಸಂತೋಷದಲ್ಲಿ ಭಾಗಿಯಾಗಿ, ಅವರಿಗೆ ಮುಂದಿನ ಯುದ್ಧಕ್ಕೆ ಹೊಸ ಉತ್ಸಾಹ ತುಂಬುವದು ರಾಜಧರ್ಮ ಅಲ್ಲವೇ?

**ಸಾಳ್ವಮಂಗು :** ದೇವಿಯರ ಮಾತು ಸರಿ ಎಂದು ತೋರುತ್ತದೆ ನನಗೆ.

**ಸೋಮಪ್ಪ :** ದೇವಿಯರ ಮಾತಿನಲ್ಲಿ ಸತ್ಯಾಂಶವಿದೆ. ಕಂಪಣ.

**ಕಂಪಣ:** ನೀವೆಲ್ಲ ಹೇಳುವದು ನನಗೂ ಅರ್ಥವಾಗುತ್ತದೆ. ಆದರೆ...

**ಗೋಪರಸ:** ಆದರೆ– ಏನು ದೊರೆ?

**ಕಂಪಣ:** (ನಸುಗೋಪದಿಂದ) ದೊರೆ, ರಾಜಾ ಎಂದು ನನ್ನನ್ನು ಕರೆಯಬೇಡಿರಿ. ಸಾರ್ವಭೌಮ ಮಹಾಮಂಡಲೇಶ್ವರನ ಕುವರ (ದುಃಖಪೂರಿತ ಧ್ವನಿಯಲ್ಲಿ) ನಮ್ಮ ಪೂರ್ವಜರ ಪವಿತ್ರ ಭೂಮಿ, ಹೊಯ್ಸಳ ಅರಸರು ಮೆರೆದ ಈ ನಾಡನ್ನು ಯವನರ ಕೈಯಿಂದ ಬಿಡಿಸಿಕೊಳ್ಳುವವರೆಗೂ ನಾವೆಂದಿಗೂ ರಾಜ, ಮಹಾರಾಜರಾಗಲಾರೆವು. ಮಧುರೆಯಮ್ಮ, ಮೀನಾಕ್ಷಿ ದೇವಿಯ ಕಳಾವಿಹೀನ ಮುಖ ಸೆರೆಯಾಳಿನಂತೆ ಗರ್ಭಗುಡಿಯ ಬಾಗಿಲ ಹಿಂದೆ ಅವಿತುಕೊಂಡಿರುವ ನೋಟ, ಆ ಬಾಗಿಲಿಗೆ ಭದ್ರವಾಗಿ ಬಿಗಿದ ಬೀಗ ಇವನ್ನೆಲ್ಲ ನೆನೆಸಿಕೊಂಡರೆ ಹೃದಯ ಪ್ರತೀಕಾರ ಭಾವನೆಯಿಂದ ತಳಮಳಿಸುತ್ತಿದೆ. ಬಾಹುಗಳಲ್ಲಿ ಬಲವಾಧ ತೀಟೆ ಏಳುತ್ತಿದೆ.

**ಸೋಮಪ್ಪ:** ಅದು ನಮಗೆ ಗೊತ್ತಿಲ್ಲವೇ ಕಂಪಣ? ರಾಜಸೇವೆಯಲ್ಲಿ ಮುಪ್ಪಾಯಿತು ಈ ಜೀವ. ನಿನ್ನ ದೊಡಪ್ಪನಿಂದಲೂ ಸೇವೆ ಸಲ್ಲಿಸುತ್ತ ಬಂದಿದ್ದಾನೆ ಆನೆಗೊಂದಿಯ ಸೋಮಪ್ಪ.

**ಸಾಳ್ವಮಂಗು:** ಶ್ರೀರಂಗದಲ್ಲಿ ಶ್ರೀರಂಗನಾಥನನ್ನು ಮತ್ತೆ ಪ್ರತಿಷ್ಠಾಪಿಸಿ ಪೂಜಿಸಬೇಕು. ರಂಗನಾಥನ ಸುಂದರ ಮೂರ್ತಿಯನು ಮೂರ್ತಿಭಂಜಕರ ಕೈಗೆ ಸಿಕ್ಕದಂತೆ ಕಾಯ್ದುಕೊಂಡು ಬಂದ ವೇದಾಂತದೇಶಿಕನಿಗೆ ಶ್ರೀ ವೈಷ್ಣವರಿಗೆಲ್ಲ ಸಾಕಷ್ಟು ವೃತ್ತಿದಾನಗಳನು ಹಾಕಿಕೊಡಬೇಕು.

**ಗೋಪರಸ:** ಆದರೆ ಇದೇ ಸಮಯಕ್ಕೆ ಶ್ರೀ ವೈಷ್ಣವರಿಗೂ ಜೈನರಿಗೂ ಅನೇಕ ಕಲಹಗಳು ನಡೆಯುತ್ತಿರುವದು ವಿಷಾದದ ಸಂಗತಿ.

**ಕಂಪಣ:** ಮೊನೆ ನಮ್ಮ ತಂದೆಯವರಿಂದ ಬಂದ ಪತ್ರದಲ್ಲಿ ಈ ವಿಷಯವನ್ನು ಒಕ್ಕಣಿಸಿದಾರೆ. ಉಭಯತರಿಗೂ ರಾಜಧಾನಿ ವಿಜಯನಗರಕ್ಕೆ ಬರಹೇಳಿ, ಅವರಿಬ್ಬರೂ ತಮ್ಮ ತಮ್ಮಲ್ಲಿ ಭೇದ ಕಾಣಲಾಗದು ಎಂದು ಒಪ್ಪಂದ ಮಾಡಿಸಿದಾರಂತೆ.

**ಗೋಪರಸ:** ಹೊಯ್ಸಳ ರಾಜ್ಯದ ವಿಷಯವೇನು?

**ಕಂಪಣ:** ಸಧ್ಯ ದೇವರ ದಯೆಯಿಂದ ನಮ್ಮ ತಮ್ಮ ಚಿಕ ಕಂಪಣನ ಮುತ್ಸದಿತನದಿಂದಾಗಿ ಅಲ್ಲಿ ಶಾಂತತೆ ನೆಲೆಸಿದೆ.

**ಸೋಮಪ್ಪ:** ಹೊಯ್ಸಳರ ಈ ರಾಜ್ಯ ನಮ್ಮ ಪೂರ್ವಜರು ಕಟ್ಟಿ ಬೆಳೆಸಿದ ರಾಜ್ಯ. ರಾಮಾನುಜರು ಯವನಿಯ ಪ್ರೇಮಪಾಶದಿಂದ ಬಿಡಿಸಿಕೊಂಡು ಬಂದು ಮತ್ತೆ ಬಾಲಕೃಷ್ಣನನು ಪೂಜಿಸುವಂತೆ ಮಾಡಿದ ತಿರುನಾರಾಯಣಪುರ. ದೋರಸಮುದ್ರ ರಾಜರ ರಾಜಧಾನಿ ಎಲ್ಲವನೂ ಕಾಯುಕೊಳಲೇಬೇಕು ನಾವು.

**ಗೋಪರಸ:** ಶ್ರೀರಂಗನಾಥನ ಮೂರುತಿಯನು ಸಂಜೆಯ ಸಮೀಪದಲ್ಲಿಯ ಒಂದು ಗುಹೆಯಲ್ಲಿ ಸುರಕ್ಷಿತವಾಗಿಟ್ಟುಕೊಂಡಿದ್ದಾರಂತೆ ಹಿಂದೂಜನ.

**ಕಂಪಣ:** ಮಧುರೆಯಿಂದ ಮುಸಲ್ಮಾನರನ್ನು ಹೊಡೆದೋಡಿಸಿದ ನಂತರ ಮತ್ತೆ ಈ ಎಲ್ಲ ಮಂದಿರಗಳಲಿ ಪಂಚಮಹಾವಾದಗಳು ಮೊಳಗುವಂತೆ ಮಾಡುವದು ನಮ ಕರ್ತವ್ಯ.

**ಸೋಮಪ್ಪ:** ಅದೇ ಸಮಯಕೆ ರಂಗನಾಥ ಮೂರ್ತಿಯನು ಕಾಯ್ದುಕೊಂಡು ಬಂದ ವೇದಾಂತದೇಶಿಕನಿಗೆ ಸತ್ಕಾರ ಮಾಡುವುದು ನಮ್ಮ ಆದ್ಯ ಕರ್ತವ್ಯ.

**ಗಂಗಾ:** ಇದನ್ನೆಲ್ಲ ಎಂದೋ ನಿಶ್ಚಯಿಸಿದೆಯಲ್ಲವೇ ಹೃದಯೇಶ್ವರಾ? ಆದರೆ ಈ ಕಾರ್ಯ ಕೈಕೊಳ್ಳುವ ಮುನ್ನ ನಮ್ಮ ಸೇನೆಯನ್ನು ಸಜ್ಜುಗೊಳಿಸಬೇಕು. ಮುಸಲ್ಮಾನರು ಮಹಾ ಕುಹಕಿಗಳು. ಮೋಸದಿಂದ ಮೈಮೇಲೇರಿ ಬರುವರು. ನಮ್ಮ ತಾತ ಬಲ್ಲಾಳನನ್ನು ಅನ್ಯಾಯದಿಂದ ಹೇಗೆ ಇರಿದು ಕೊಂದರು, ಗೊತ್ತಿದೆಯಲ್ಲವೇ ನಿಮಗೆ? ರಾತ್ರಿ ಹಿಂದೂಜನ ಆನಂದೋಲ್ಲಾಸಗಳಲ್ಲಿ ಮೈಮರೆತು ಕುಳಿತಿರುವಾಗ, ಯವನರು ಅಪಜಯದ ಅಂಜಿಕೆಯಿಂದ ಅನ್ಯಾಯವಾಗಿ ಮುತ್ತಿಗೆ ಹಾಕಿ ಮಹಾರಾಜನ ಜೀವ ತೆಗೆದುಕೊಂಡರು. ಇಂತಹ ಸುವರ್ಣಾವಕಾಶ ವೈರಿಗಳಿಗೆ ಮತ್ತೊಮ್ಮೆ ಒದಗದಂತೆ ನೋಡಿಕೊಳ್ಳುವದು ತಮ್ಮ ಧರ್ಮವಲ್ಲವೇ?

**ಕಂಪಣ:** ನಿಜ ಗಂಗಾ, ನೀನು ನನ್ನ ರಾಣಿಯಷ್ಟೇ ಅಲ್ಲ, ನನ್ನ ಆಪ್ತ ಮಂತ್ರಿಗಳಲ್ಲೊಬ್ಬಳು. ನನ್ನ ನಿಜವಾದ ಅರ್ಧಾಂಗಿ. ನನ್ನ ಆಶೆ ಆಕಾಂಕ್ಷೆ ಅಭೀಷ್ಟಗಳ ಆಳವನ್ನರಿತು ಅವುಗಳನ್ನು ನಿಜರೂಪಕ್ಕಿಳಿಸಲು ಮಾರ್ಗವನ್ನು ತೋರುವ ಸೂತ್ರಧಾರಿಣಿ ನೀನು, ನನ್ನ ಹೃದಯೇಶ್ವರಿ.

**ಸಾಳ್ವಮಂಗು:** ರಾಜವಂಶ ಸತ್ಕುಲಪ್ರಸೂತೆ, ಸಾಕ್ಷಾತ್ ವಾಗ್ದೇವಿ ಈ ಗಂಗಾ ಸಕಲಗುಣ ಸಂಪನ್ನೆ.

**ಗೋಪರಸ:** ತಂದೆಗೆ ತಕ್ಕ ಮಗ, ಮಗನಿಗೆ ತಕ್ಕ ಹೆಂಡತಿ. ತಂದೆ ಹೊಯ್ಸಳಾನ್ವಯರ ಮೇದಿನೀಮಂಡಲದ ನಿಜಭುಜ ಮಂಡನವಾದರೆ......

**ಗಂಗಾ:** ಆ ಭುಜಗಳ ಮೇಲಿರುವ ಶಿರವನ್ನಲಂಕರಿಸುವ ಮಣಿಮುಕುಟ ಕಿರೀಟ ಕಂಪಣ.

**ಸೋಮಪ್ಪ:** ಆ ಕಿರೀಟದ ಮೇಲ್ಭಾಗದಲ್ಲಿ ಹೊಳೆವ ರತ್ನ ಗಂಗಾದೇವಿ.

**ಗಂಗಾ :** ಓ! ತಮ್ಮ ಹೊಗಳಿಕೆ ಅತಿಯಾಯಿತು.

**ಕಂಪಣ :** ಈ ಹೊಗಳಿಕೆಯಲ್ಲೇ ಕಾಲ ಕಳೆಯುವಿರೊ ಅಥವಾ ಮಾಡಬೇಕಾದ ಕೆಲಸವನ್ನು...

**ಸಾಳ್ವಮಂಗು :** ಆಜ್ಞೆಗಾಗಿ ದಾರಿ ಕಾಯುತ್ತಿದ್ದೇವೆ ಒಡೆಯಾ.

**ಗೋಪರಸ :** ಒಡೆಯರ ಆಜ್ಞೆ ಶಿರಸಾಮಾನ್ಯ.

**ಗಂಗಾ :** ತಾಳ್ಮೆ ಇರಲಿ ಎಂದು ದೇವರಲ್ಲಿ ಪಾರ್ಥಿಸುವೆ. ಇದೋ ನಾನು ಮಾಡಲಿರುವ ಕೆಲಸ–ಎಲ್ಲ ನರ್ತಕಿಯರನ್ನು ಬರಮಾಡಿ ನಮ್ಮ ಸೈನಿಕರನ್ನು ರಂಜಿಸಲು ಹೇಳುವೆ. ಅಡಿಗೆಯವರಿಂದ ಪಂಚಪಕ್ವಾನ ಭೋಜನ ಯಥೇಚ್ಛವಾಗಿ ನಡೆಸಲು ಆಜ್ಞೆ ಕೊಡುವೆ. ಯುದ್ಧ ಮುಗಿಯುವವರೆಗೂ ಜನರಿಗೆ ಆಮೋದ ಪ್ರಮೋದಗಳತ್ತ ಮನತಿರುಗದಂತೆ ಇಂದು ರಾತ್ರಿ ಮಾತ್ರ ಅವರು ಸಂತೋಷ ಸಾಗರದಲ್ಲಿ ತೇಲಾಡಲಿ

**ಸೋಮಪ್ಪ :** ಕಂಪಣ, ಇದಕ್ಕೆ ಮೊದಲು ನೀನು ಸೈನಿಕರನ್ನು ಯುದ್ಧಕ್ಕೆ ಹುರಿದುಂಬಿಸಬೇಕು. ಅವರ ಕರ್ತವ್ಯದ ಬಗೆಗೆ ನಾಲ್ಕು ಮಾತು ಹೇಳಿ–ಗೆಲ್ಲುವೆವು ಇಲ್ಲವೇ ವೀರರಂತೆ ಮಡಿಯುವೆವು ಎಂದು ಅವರಲ್ಲಿ ವೀರಾವೇಶ ತುಂಬುವಂತೆ ಮಾಡುವದು ನಿನ್ನ ಕೆಲಸ, ಕಂಪಣ. ಭಟರನ್ನು ಕಳುಹಿಸಿ ಸೈನಿಕರಿಗೆಲ್ಲ ಉಪ್ಪರಿಗೆಯ ಕೆಳಗೆ ಕೂಡಲು ಹೇಳು.

**ಗೋಪರಸ :** ನಮ್ಮ ದಂಡು ಸುಲ್ತಾನ ನಾಸಿರುದ್ದೀನನ ಮೇಲೆ ಏರಿ ಬರುವ ಬಗೆಗೆ ಓಲೆ ಕಳುಹಿಸುವೆ. ಸುಲ್ತಾನ ಸುಮ್ಮನೆ ಮಧುರೆ ಬಿಟ್ಟುಕೊಟ್ಟು ಶರಣಾಗತನಾದರೆ ಒಳಿತು, ಇಲ್ಲವಿರೆ ರಕ್ತದ ಕಾಲುವೆ ಹರಿದೀತು ಎಂಬುದು ಒಕ್ಕಣಿಕೆಯ ವಿಷಯವಾಗಬಹುದೇ?

**ಕಂಪಣ :** ಇದಕ್ಕೆ ನಮ್ಮ ಸಂಪೂರ್ಣ ಒಪ್ಪಿಗೆ. ಜನರ ಗದ್ದಲ ಕೇಳಿಬರುವುದು.

**ಸಾಳ್ವಮಂಗು :** ಒಡೆಯನ ದರುಶನಕ್ಕಾಗಿ ಜನರೆಲ್ಲ ಕಾದಿದ್ದಾರೆ.

**ಕಂಪಣ :** ಕನ್ನಡಮ್ಮನ ಕುವರರೆ, ಬಿಲ್ಲಬಲ್ಮೆಯಲ್ಲಿ ಬಲ್ಲಿದ ವೀರಾಳುಗಳೇ, ಶೂರ ಸೈನಿಕರೇ. ವಿರೂಪಾಕ್ಷನ ಕೃಪೆಯಿಂದಲೂ, ಭುವನೇಶ್ವರಿಯ ಕಟಾಕ್ಷದಿಂದಲೂ ಇಲ್ಲಿಯ ವರೆಗೂ ನಮ್ಮ ವಿಜಯಯಾತ್ರೆ ಸುರಳೀತವಾಗಿ ಸಾಗಿತು. ಇದು ವರೆಗೂ ನಾವು ಕಾದುದು ಹಿಂದೂರಾಜರೊಟ್ಟಿಗೆ ವೀರರೊಡನೆ ವೀರರಂತೆ ಕಾದಾಡಿದೆವು; ವಿಜಯಮಾಲೆ ನಮ ಕೊರಳನಲಂಕರಿಸಿದುದರಲ್ಲಿ ಆಶ್ಚರ್ಯವೇನಿಲ್ಲ. ಕನ್ನಡದ ಕೆಚ್ಚೆದೆಯ ಕಲಿಯ ಮುಂದೆ ಅದಾವ ವೈರಿ ನಿಂತಾನು? ನಮ್ಮ ನಿಜವಾದ ಹೋರಾಟ ಇನ್ನು ಮುಂದೆ ಬರಲಿದೆ.

ಮಧುರೆಯ ಮುಸಲ್ಮಾನನ್ನು ಯಮಸದನಕ್ಕಟ್ಟಿ, ಮೀನಾಕ್ಷಿ ಅಮ್ಮನ ಕೈಗೆ ಬಿದ್ದಿರುವ ಸಂಕೋಲೆ ಕಳೆದು ಕಂಕಣ ಕಟ್ಟಬೇಕು. ಅಲ್ಲಿ ಸದಾ ಮಂಗಳ ವಾದ್ಯಗಳು ಮೊಳಗುವಂತೆ ಮಾಡುವುದೇ ನಮ್ಮ ಹೆಗ್ಗುರಿ. ನೀವು ಸಿದ್ಧರಾಗ

ಬೇಕು. ಈ ಮುಸಲ್ಮಾನರು ಮೋಸದ ಮೂಟೆಗಳು ಅವರ ರಾಜ್ಯವಿದ್ದಿರು ವಾಗ ಅಲ್ಲಿನ್ನೂ ಅಜಾಗರೂಕತೆ ಆಗಕೂಡದು. ಹಗಲು ರಾತ್ರಿ ಕಣ್ಣಲ್ಲಿ ಕಣ್ಣಿಟ್ಟು ಕೊಂಡು ಸೈನ್ಯದಲ್ಲಿ ಶಿಸ್ತನ್ನು ಕಾಯ್ದು ಕೊಂಡಿರಿ. ಮಧುರೆ ನಮ್ಮ ಕೈವಶವಾಗಿ ವಿಜಯನಗರದ ವಿಜಯಧ್ವಜ ಮೀನಾಕ್ಷಿ ಮಂದಿರವನ್ನಲಂಕರಿಸುವ ವರೆಗೆ ಎಲ್ಲ ವಿನೋದ ವಿಲಾಸಗಳಿಗೆ ಅಲ್ಪವಿರಾಮ ಕೊಡಿರಿ. ಮಧುರಾ ವಿಜಯದ ನಂತರ ಒಂದು ವಾರದ ವರೆಗೆ ಮಧುರೆಯಲ್ಲಿ ವಿಜಯೋತ್ಸವವನ್ನಾಚರಿಸೋಣ. ಕಾದು ವೆವು ಕೊಲ್ಲುವೆವು, ಜಯಲಕ್ಷ್ಮಿ ನಮ್ಮವಳು ಎಂದು ನೀವೆಲ್ಲ ನನಗೆ ವಚನಕೊಡಿರಿ

**(ಜನರ ಹರ್ಷೋದ್ಗಾರ, ಕಂಪಣೊಡೆಯರಿಗೆ ಜಯವಾಗಲಿ- ಮೀನಾಕ್ಷಮ್ಮ ಬಂಧಮುಕ್ತಳು- ಇತ್ಯಾದಿ ಕೂಗು)**

## ದೃಶ್ಯ ೨

**(ಘಂಟೆ ಜಾಗಟೆಗಳ ಸಪ್ಪಳ, ಮಂತ್ರಪಠನ, ಜನರ ಗದ್ದಲ, ಕಂಪಣೊಡೆಯರಿಗೆ ಜಯವಾಗಲಿ, ಮೀನಾಕ್ಷಿಯಮ್ಮನಿಗೆ ಜಯವಾಗಲಿ- ವಿಜಯನಗರಕ್ಕೆ ಜಯವಾಗಲಿ, ಮೀನಾಕ್ಷಿಯಮ್ಮ ಬಂಧಮುಕ್ತಳು ಇತ್ಯಾದಿ ಹರ್ಷೋದ್ಗಾರ ಜಯೋದ್ಗಾರಗಳು ಕೇಳಿಬರುವವು)**

**ಕಂಪಣ :** ಇಂದು ನನ್ನ ಜನ್ಮ ಸಾರ್ಥಕವಾಯಿತು. ಮುಸಲ್ಮಾನ ಮಣು ಮುಕ್ಕಿದ. ಗುಡ್ಡದಂತಹ ಹೊರೆ ಇಳಿಸಿದಷ್ಟು ಹಗುರವಾಗಿದೆ ಇಂದು ನನ್ನ ತಲೆ, ಮನಸ್ಸು.

**ಸಾಳ್ವಮಂಗು :** ಮೀನಾಕ್ಷಿಯಮ್ಮನ ಮಂದಿರದಲ್ಲಿ ಮತ್ತೆ ವಾದ್ಯ ಮೊಳಗ ತೊಡಗಿದಾಗಿನಿಂದ ಮಧುರೆಯ ವಾತಾವರಣವೇ ಬದಲಾದಂತಿದೆ.

**ಗೋಪರಸ :** ದೇವಿಯ ಮಹಿಮೆ ಅಗಾಧ. ಅಂದು ಬಾಗಿಲು ಮುಚ್ಚುವಾಗ ಹಾಕಿದ ಅರಳುಮಲ್ಲಿಗೆಯ ಮಾಲೆ, ಇನ್ನೂ ದೇವಿಯ ಕೊರಳಲ್ಲಿ ಈಗ ಹಾಕಿದ ಮಾಲೆಯಂತೆ ಕಂಗೊಳಿಸುತ್ತಿದೆ. ಅಂದು ಹಚ್ಚಿದ ನಂದಾದೀವಿಗೆ ನಿಜವಾಗಿಯೂ ನಂದಾದೀವಿಗೆಯಾಗಿ ಇನ್ನೂ ಉರಿಯುತ್ತಿದೆ.

**ಕಂಪಣ :** ದೇವಿಯ ಮಹಿಮೆ ಎಷ್ಟು ಕೊಂಡಾಡಿದರೂ ಕಡಿಮೆಯೇ. ತೀಡಿದ ಗಂಧವಿದ್ದಂತೆ. ಹೇಳಿದಷ್ಟು ಹೆಚ್ಚಾಗುತ್ತದೆ. ದೇವಿ ಜಗನ್ಮಾತೆಯೆಂಬುದು ಅಕ್ಷರಶಃ ನಿಜ.

**ಗಂಗಾ :** ಅಂತಹ ಜಗನ್ಮಾತೆಯ ಅರಳು ಮಲ್ಲಿಗೆ, ಕುಂಕುಮಗಳ ಪ್ರಸಾದ ಪಡೆದ ನಾನೇ ಧನ್ಯಳು.

**ಸೋಮಪ್ಪ :** ಇದೆಲ್ಲ ನಿಜ. ಆದರೆ ಮಾಡಬೇಕಾಗಿದ್ದ ಮುಖ್ಯ ಕೆಲಸವನ್ನೇ ನೀವೆಲ್ಲ ಮರೆತಿರೆಂದು ತೋರುತ್ತದೆ ನನಗೆ.

**ಕಂಪಣ :** ನಾನೇನೂ ಮರೆತಿಲ್ಲ. ಈ ಯುದ್ಧಗಳಲ್ಲಿ ಪ್ರತಿಯೊಬ್ಬ ಯೋಧನಿಗೂ ಆತ ತೋರಿದ ಕಾರ್ಯಕ್ಷಮತೆಗನುಗುಣವಾಗಿ ಬಹುಮಾನ ವಿತರಣೆ ಮಾಡಬೇಕು. ಕಾದು ವೀರಸ್ವರ್ಗವನ್ನೇರಿದವರ ಸ್ಮಾರಕವಾಗಿ ಅವರವರ ಊರುಗಳಲ್ಲಿ ವೀರಗಲ್ಲುಗಳನ್ನು ನಿಲ್ಲಿಸಬೇಕು. ಅಲ್ಲದೇ ನಮ್ಮ ವಿಜಯೋತ್ಸವದ ಸಿದ್ಧತೆ ಮಾಡಬೇಕು.

**ಗಂಗಾ :** ಒಡೆಯ ಮಾತಿಗೆ ಎಂದೂ ವಿರುದ್ಧ ಆಡಿದವಳು ನಾನಲ್ಲ. ಆದರೆ ಈ ಸಂದರ್ಭದಲ್ಲಿ ನನಗೆರಡು ಮಾತು ಹೇಳಬೇಕೆನಿಸುತ್ತದೆ.

**ಕಂಪಣ :** ಹೇಳಬೇಕೆಂಬುದನು ಹೇಳು, ಗಂಗಾ. ನಿನ್ನ ಇಚ್ಛೆಗೆ ನಾನೆಂದಾದರೂ ವಿರುದ್ಧ ಮಾತನಾಡಿದ್ದೇನೆಯೆ?

**ಗಂಗಾ :** ಅದು ನನಗೆ ಗೊತ್ತು. ಆದರೂ ಶುಭಕಾರ್ಯದಲ್ಲಿ...

**ಕಂಪಣ :** (ನಗುತ್ತ) ದೇವಿ...ಜಗನ್ಮಾತೆ–ನಿನ ಮನಸ್ಸಿನಲ್ಲಿದ್ದುದನ್ನು ಹೇಳು, ಕೇಳಲು ನಿನ್ನ ಪ್ರಜೆಗಳೂ, ಈ ದಾಸಾನುದಾಸ ಕಂಪಣನೂ ಆತುರರಾಗಿರುವರು.

**ಗಂಗಾ :** ಯುದ್ಧ ಮುಗಿದು ಇನ್ನೂ ಮೂರು ದಿನಗಳೂ ಕೂಡಾ ಆಗಿಲ್ಲ. ಕಡು ಹಗೆಯನ್ನೇನೋ ನೀವು ಯಮಸದನಕ್ಕಟ್ಟಿದಿರಿ. ಆದರೆ ರಣರಂಗದಲ್ಲಿ ಹರಿದ ರಕ್ತವಿನ್ನೂ ಆರಿಲ್ಲ. ವೈರಿಗಳಲ್ಲಿ ಗಾಯಗೊಂಡವರ ಗಾಯಗಳಿನ್ನೂ ಮಾಯ್ದಿಲ್ಲ.

**ಗೋಪರಸ :** ಎಂದರೆ...ಇದರರ್ಥ?

**ಸೋಮಪ್ಪ :** ಎಂದರೆ ವೈರಿಗಳಲ್ಲಿ ಅಲ್ಲಿ ಇಲ್ಲಿ ಬದುಕಿದ ಒಬ್ಬಿಬ್ಬರು ಸೇಡು ತೀರಿಸಿಕೊಳ್ಳಲು ಹವಣಿಸುತ್ತಾರೆ ಎಂದು ಅರ್ಥ.

**ಸಾಳ್ವಮಂಗು :** ನಮ್ಮ ಜನರು ಒಂದು ಕೂಸು ಕುನ್ನಿಯನ್ನು ಕೂಡಾ ಬಿಡದಂತೆ ವೈರಿಗಳನ್ನು ಕೊಂದು ರಾಶಿ ರಾಶಿ ಒಟ್ಟಿದ್ದನ್ನು ನೀವು ನೋಡಿಲ್ಲವೇ ದೇವಿ?

**ಕಂಪಣ :** ಸುಲ್ತಾನ ನಾಸಿರುದ್ದೀನ, ಅವನ ಮಂತ್ರಿಗಳು, ಮಕ್ಕಳನ್ನೆಲ್ಲ ತುಂಟ ಹುಡುಗರು ನೊಣಗಳನು ಕೊಲ್ಲುವಂತ ಕೊಂದುದು ನಿನಗೆ ತಿಳಿಯದೇ ಗಂಗಾ? ವಿಜಯನಗರದ ವಿಜಯಧ್ವಜ ಮಧುರೆಯ ಮನೆ ಮನೆಯ ಮೇಲೆ ಹಾರಾಡುತ್ತಿರುವದನು ಕಂಡಿಲ್ಲವೇ ಗಂಗಾ?

**ಗಂಗಾ :** ಆದರೂ ಯಾಕೋ ಈ ಸಂದರ್ಭದಲ್ಲಿ ನನ ಬಲಗಣ್ಣು ಹಾರುತ್ತಿದೆ.

**ಕಂಪಣ :** (ನಗುತ್ತ) ನನ ಪತ್ನಿ ಎಂದರೆ ಆಪ್ತ ಮಂತ್ರಿ, ಸಾಕ್ಷಾತ್ ಸರಸ್ವತಿ ಎಂದುಕೊಂಡಿದ್ದೆ. ಆದರೂ ಅವಳಿಗೆ ಶುಭಾಶುಭ ಸಂಕೇತಗಳಲ್ಲಿ ನಂಬಿಗೆ ಇದೆಯೆಂಬುದನು ಕಂಡುಕೊಂಡಿರಲಿಲ್ಲ.

**ಸೋಮಪ್ಪ :** ಕೆಲವೊಮ್ಮೆ ಇಂತಹ ಶುಭಾಶುಭ ಸಂಕೇತಗಳನ್ನು ನಂಬಬೇಕು ಕಂಪಣ. ಅದರಲ್ಲಿ ಬಹುಶಃ ಏನೋ ರಹಸ್ಯವಿದೆ.

**ಗೋಪರಸ :** ಇಲ್ಲಿಯ ವರೆಗೆ ಎಲ್ಲ ಸುರಳೀತವಾಗಿ ಸಾಗಿತು. ಎಲ್ಲವೂ ಒಳ್ಳೆಯದಾಗಿ ಕೊನೆಗಾಣಬೇಕಿದ್ದರೆ ದೇವಿಯವರು ಹೇಳುವಂತೆ ಮುನ್ನೆಚ್ಚರಿಕೆಯಿಂದಿರುವದು ಒಳ್ಳೆಯದೇ ಎಂದು ನನಗೂ ತೋರುತ್ತದೆ.

**ಸೋಮಪ್ಪ :** ಇಲ್ಲಿಂದ ಎಲ್ಲರೂ ಸುರಳೀತವಾಗಿ ಮರಳಿ ಶೋಣಾಚಲದಲ್ಲಿ ತಮ್ಮ ತಂದೆಯವರನ್ನು ಕಂಡು ಅವರ ನೇತೃತ್ವದಲ್ಲಿ ವಿಜಯೋತ್ಸವ ತುಲಾಭಾರ ನೆರವೇರಿಸುವದು ಇನ್ನೂ ಚೆನ್ನು.

**ಕಂಪಣ:** ಆದರೆ ಪ್ರಜೆಗಳನ್ನು ಸಮಾಧಾನ ಪಡಿಸುವ ಬಗೆ? ಅವರು ತಮ್ಮ ಎಲ್ಲ ಆಶೆ, ಆಕಾಂಕ್ಷೆಗಳ ಹಂಗುದೊರೆದು ಜೀವದ ಪರಿವೆ ಇಲ್ಲದೇ ಕಾದಿದ್ದಾರೆ. ಈಗ ಅವರು ಪಂಜರದಿಂದ ಹೊರಬಿದ್ದ ಹಕ್ಕಿಯಂತೆ, ಹಗುರ ಮನಸ್ಸಿನಿಂದ ಹರ್ಷಸಾಗರದಲ್ಲಿ ಓಲಾಡುತ್ತಿದ್ದಾರೆ.

**ಗಂಗಾ:** ಅವರ ಮನ ಒಲಿಸಿ ಅವರನ್ನು ಅರುಣಾಚಲದವರೆಗೂ ಕರೆದೊಯ್ಯುವದು ನನ್ನ ಕರ್ತವ್ಯ. ನನಗೆ ಬಿಡಿರಿ ಆ ಕೆಲಸವನ್ನು. ಆದರೆ, ಇಂದು ನೀವು ಮಾತ್ರ ಯಾರನ್ನೂ ಕಾಣುವ ಕೆಲಸಕ್ಕೆ ಕೈಹಾಕಬೇಡಿರಿ.

**ಕಂಪಣ:** ಹುಚ್ಚು ಮನಸಿನ ಹೆಣ್ಣು– ಗಂಗಾ, ಯಾರಾದರೂ ಬಂದು ನನ್ನನ್ನು ಇರಿದು ಕೊಲ್ಲುವರೆಂಬ ನಿನಗೆ ಭಯವೇ? ಅರಳು ಮಲ್ಲಿಗೆ, ಅರಿಷಿಣ–ಕುಂಕುಮ ಸಿರವಾಗಿರುವಂತೆ ನಿನ್ನ ಮೇಲೆ ಮೀನಾಕ್ಷಿಯ ಕೃಪೆಯಿದೆ.

**ಗಂಗಾ:** ನೀವು ಏನೇ ಹೇಳಿರಿ ಒಡೆಯಾ, ಇಂದು ಮಾತ್ರ ನಾನು ನಿಮ್ಮನ್ನು ಬಂಧನದಲ್ಲಿಡುವೆ.

**ಕಂಪಣ:** (ನಗುತ್ತ ಚೇಷ್ಟೆಯ ಧ್ವನಿಯಲ್ಲಿ) ಹುರ ತೋಳಬಂಧನವೇ–ಸರಿ. ಈ ನಿನ ಕುಡಿನೋಟಗಳಿಂದ ನಾನು ಎಂದೋ ನಿನ ಸೆರೆಯಾಳಾಗಿರುವೆ ಗೊತ್ತೇ?

**ಗಂಗಾ:** (ದೈನ್ಯತೆಯಿಂದ) ಚೇಷ್ಟೆಗೆ ಸಮಯವಲ್ಲ ದೊರೆ, ನನ್ನ ಮಾತನ್ನು ಕೇಳಿರಿ. ಯುದ್ಧಕ್ಕೆ ಸನ್ನದ್ಧರಾಗುವ ಮುನ್ನ ನೀವೇ ಸೈನಿಕರಿಗೆ ಹೇಳಿರಲಿಲ್ಲವೇ 'ಜಾಗರೂಕರಾಗಿರಿ' ಎಂದು. ಈಗ ನೀವೇ ಏಕೆ ಈ ರೀತಿ ಅಜಾಗರೂಕತನ ತೋರುತ್ತಿದ್ದೀರಿ ?

**ಕಂಪಣ:** ಆದರೆ ಗಂಗಾ, ಇದೇನು ಹುಚ್ಚು ಹಿಡಿದಿದೆ ನಿನಗಿಂದು?

**ಗಂಗಾ:** ಅದೇಕೋ ಮನಸ್ಸಿನಲ್ಲಿ ಏನೋ ಒಂದು ಕಳವಳ. ಕಳೆದ ರಾತ್ರಿಯಿಡೀ ಕೆಟ್ಟ ಕನಸು ಕಂಡೆ. ಕೆರಳಿದ ಸರ್ಪವೊಂದು ನಿಮ್ಮ ಮೇಲೇರಿ ಬಂತಾಯಿತು. ಹಸಿದ ಹೆಣ್ಣು ಹುಲಿಯೊಂದು ನಿಮ್ಮ ಮೇಲೆ ಹಾರಿದಂತೆ ಕಂಡೆ.

**ಕಂಪಣ:** ಹುಂ ಅದೆಲ್ಲ ಕನಸು ಗಂಗಾ. ಹುಚ್ಚಿಯಂತಾಡಬೇಡ. ರಾಜ್ಞಿಯ ಗಾಂಭೀರ್ಯ ಎಲ್ಲಿ ಹೋಯಿತು. ನಿನ ಅಭಿಲಾಷೆಯಂತೆ ವಿಜಯೋತ್ಸವವನ್ನು ನಿನ್ನ ಅಜ್ಜ ಬಲ್ಲಾಳನ ಅರಮನೆಯಲ್ಲಿ, ಶೋಣಾಚಲದಲ್ಲಿ ನೆರವೇರಿಸೋಣ. ಆಯಿತೆ ?

**ಸಾಳ್ವಮಂಗ :**
**ಗೋಪರಸ:** } ನಮ್ಮದೂ ಅದೇ ಅಭಿಪ್ರಾಯ.
**ಸೋಮಪ್ಪ:**

**ಕಂಪಣ:** ದೇವಿಯವರ ಮುಖಕಮಲವರಳಲಿ. ನಗುವಿನಾ ಚಿತ್ತ...?

**ಗಂಗಾ:–** (ತನ್ನಷ್ಟಕ್ಕೆ) ಹಾರದಿರು ಹೃದಯವೇ, ಧೈರ್ಯವನ್ನು ತಂದುಕೋ–

ಅಣುಕುಂಗಿ ನಗಲು ಪ್ರಯತ್ನಿಸು. ದೇವೀ ಮೀನಾಕ್ಷಿ. ನಗಲು ನನಗೆ ಧೈರ್ಯ ವನ್ನು ಕೊಡು. ಶಕ್ತಿಯನು ಕೊಡು ಭುವನೇಶ್ವರಿ. (ನಗಲು ಪ್ರಯತ್ನಿಸು ವಳು. ಆದರೆ ಪ್ರಯತ್ನ ಯಶಸ್ವಿಯಾಗುವದಿಲ್ಲ.)

**ಕಂಪಣ:** ಏಕೆ ಗಂಗಾ, ನೀನಿಂದು ಬಳಲಿದಂತಿರುವಿ ಮನಸ್ಸಿನಲ್ಲಿ ಅದೇನೋ ಕೋಲಾಹಲವಿದೆ. ಏನೆಂದು ಹೇಳಬಾರದೇ? ಇದು ನಿನ್ನ ಸ್ವಾಭಾವಿಕ ನಗುವಲ್ಲ.

**ಗಂಗಾ:** ಏನಿಲ್ಲ ದೊರೆ. [ಪ್ರಯತ್ನಿಸಿ] ಇದೋ ನಗುತ್ತಲಿದ್ದೇನೆ.

**ಕಂಪಣ:** ಇದು ನಿನ್ನ ನಿಜವಾದ ನಗುವಲ್ಲ ಗಂಗಾ. ಹಾಳು ಕನಸುಗಳಿಂದ ಇಷ್ಟು ಹೆದರಿರುವೆಯಾ? ಬುಡವಿಲ್ಲದ ಬೆದರಿಕೆ ಅದು. (ಒಳಗೆ ಏನೋ ಗದ್ದಲ ಕೇಳಿಬರುತ್ತದೆ.) ಏನು ಗದ್ದಲವದು ಹೊರಗೆ?

**ಗೋಪರಸ:** ಓರ್ವ ದುಃಖಿತ ಸ್ತ್ರೀ ತಮ್ಮನ್ನು ನೋಡಬೇಕೆನ್ನುತ್ತಿದ್ದಾಳಂತೆ ಆದರೆ ದ್ವಾರಪಾಲಕರು ಅವಳನು ಒಳಗೆ ಬಿಡುತ್ತಿಲ್ಲ.

**ಕಂಪಣ:**– ಏಕೆ?

**ಸಾಳ್ವಮಂಗು**– ದೇವಿಯರ ಆಜ್ಞೆ. ಯಾರಿಗೂ ಒಡೆಯನ ದರುಶನ ಸಾಧ್ಯವಿಲ್ಲ ಎಂದು.

**ಕಂಪಣ**– ನನಗರಿವಿಲ್ಲದಂತೆಯೇ? __

**ಗಂಗಾ:**– ಹೌದು. ಇದೊಂದು ಸಲ ನಾನು ಒಡತಿಯ ಅಧಿಕಾರ ತೋರಿಸಿದೆ. ಎಲ್ಲರಿಗೂ ಆಜ್ಞೆ ಕೊಟ್ಟಿರುವೆ. ಅರಮನೆಯ ಅಡಳಿತಗಾರರ ಹೊರತು ಅನ್ಯರಾರೂ ಇಲ್ಲಿ ಪ್ರವೇಶಿಸಕೂಡದು ಎಂದು ಹೇಳಿರುವೆ.

**ಕಂಪಣ :**– ಅಬ್ಬಾ, ದೇವೀಯರ ಧೈರ್ಯವೇ. ಭಾಪು ಭಾಪು ಗಂಗಾ. ನಿನ್ನಂತೆ ಎಲ್ಲ ಹಿಂದು ಸ್ತ್ರೀಯರೂ ಧೈರ್ಯವಾಗಿ ಮುನ್ನಡೆದರೆ ನಮ್ಮ ರಾಜ್ಯ ಅನ್ಯರ ಪಾಲಾಗುವದಿಲ್ಲ. ಇರಲಿ. ಈಗ ಆ ದುಃಖಿತ ಸ್ತ್ರೀಯನು ನಾನು ನೋಡಲು ನಿನ್ನದೇನೂ ಅಭ್ಯಂತರವಿಲ್ಲವಷ್ಟೆ?

**ಗಂಗಾ :** ಹೂ– ಇದಕ್ಕೂ ನನ್ನ ಅಭ್ಯಂತರ. ಆಗಂತುಕ ಸ್ತ್ರೀ ಇರಲಿ, ಪುರುಷ ನಿರಲಿ. ನೀವು ಯಾರನ್ನೂ ನೋಡಕೂಡದು.

**ಕಂಪಣ :** ಹೀಗೆ ಚಿಕ್ಕಮಕ್ಕಳಂತೆ ಹಟ ಮಾಡಬೇಡ ಗಂಗಾ, ಪ್ರಜೆಗಳ ಸುಖ ದುಃಖ ಕೇಳಿಕೊಂಡು ಅದರಲ್ಲಿ ಭಾಗಿಯಾಗುವದು ಅರಸೊತ್ತಿಗೆಯ ಧರ್ಮ ವಲ್ಲವೇ ಗಂಗಾ.

**ಸೋಮಪ್ಪ :** ಕಂಪಣ ಇದೊಂದು ಸಲ ಗಂಗಾನ ಮಾತು ನಡೆಸಿಕೊಡು. ಅವಳು ನೀರನಿಂದ ಹೊರಬಂದ ಮೀನಿನಂತೆ ಚಡಪಡಿಸುವದನ್ನು ನೋಡಿದರೆ...

**ಕಂಪಣ :** ನೀವೂ ಈ ರೀತಿ ಹೇಳುತ್ತೀರಾ ಸೋಮಪ್ಪಾಜಿ.ತಾತನ ಸಮಾನ ನೀವು ನನಗೆ. "ಪ್ರಜೆಗಳ ಸುಖ ದುಃಖ ಕೇಳದೇ, ಹೆಂಡತಿಯ ಮಾತು ಕೇಳಿ ಮನೆಯಲ್ಲಿ ಕುಳಿತ ಕಂಪಣ" ಎಂದು ಜನ ನಗಲಿಕ್ಕಿಲ್ಲವೇ ನನ್ನ ಬಗೆಗೆ?

**ಗಂಗಾ :** ಅವಳು ಸ್ತ್ರೀ ಎಂದಾಗ, ನನಗೆ ಕನಸಿನಲ್ಲಿ ಕಂಡ ಹಸಿದ ಹೆಣ್ಣು ಹುಲಿಯ ರೂಪ ಕಣ್ಣೆದಿರು ಬಂದು ನಿಲ್ಲುತ್ತಿದೆ.

**ಕಂಪಣ :** ಹುಚ್ಚಿಯಂತೆ ಆಡಬೇಡ ಗಂಗಾ. ಗೋಪರಸರೇ, ಆ ಸ್ತ್ರೀಯನು ಬರಮಾಡಿರಿ.

**ಗಂಗಾ :** (ತನಗಷ್ಟಕ್ಕೆ) ಅಯ್ಯೋ ನನ್ನ ಹೃದಯವೇಕೆ ಹಾರುತ್ತಿದೆ? ಧೈರ್ಯ ವನ್ನೆಲ್ಲ ಕಳಕೊಂಡು ಕುಸಿದು ಬೀಳುವಂತಾಗುತ್ತಿದೆಯಲ್ಲ.

**ಕಂಪಣ :** ಗಂಗಾ, ನಿನಗೆ ಮೈಯಲ್ಲಿ ಸರಿಯಿಲ್ಲದಿದ್ದರ ಹೋಗಿ ವಿಶ್ರಮಿಸಿಕೋ.

**ಗಂಗಾ :** (ಸಾವರಿಸಿಕೊಂಡು) ಇಲ್ಲ ಇಲ್ಲ. ನಾನು ಸೌಖ್ಯವಾಗಿಯೇ ಇರುವೆ ನಾನಿಲ್ಲಿಯೇ ಇರಲು ಇಚ್ಛೆಪಡುವೆ.

**ಗೋಪರಸ :** ಇದೋ ಆಗಂತುಕ ಸ್ತ್ರೀ ತಮ್ಮ ದರ್ಶನಾಪೇಕ್ಷೆಯಾಗಿ ಬಂದಿ ಹಳು.

**ಕಂಪಣ :** ಅವಳಿಗೆ ಬೇಕಾದುದೇನು ಗೋಪರಸರೇ?

**ಗೋಪರಸ :** ಅವಳಿಗೆ ಬೇಕಾದುದು "ಕಂಪಣ" ಅಂತೆ. ಅವಳನ್ನೇ ಕೇಳಿರಿ,

**ಕಂಪಣ :** ತಾಯೀ, ನಿನಗೆ ಬೇಕಾದುದೇನು?

**ಮಧಿರಾ :** ಹುಂ... ನನಗೆ ಬೇಕಾದುದು... ಕಂಪಣ.

**ಕಂಪಣ :** ಪತ್ನಿಯ ವಿನಃ ಅನ್ಯ ಸ್ತ್ರೀಯರೆಲ್ಲ ನನಗೆ ತಾಯಿ—ಸೋದರಿ ಸಮಾನರು.

**ಮಧಿರಾ :** ಮಾತಿನಲ್ಲಿ ಚತುರ ನೀನು ಕಂಪಣ. ಆದರೆ ನನಗೆ ಬೇಕಾದುದು ಕಂಪಣ.

**ಸಾಳ್ವಮಂಗು:** ಕಂಪಣನ ಕಮನೀಯ ರೂಪಕೆ ಮೋಹಗೊಂಡಂತಿದೆ ಈ ಮೋಹನಾಂಗಿ.

**ಗೋಪರಸ:** ಎಷ್ಟು ಧೈರ್ಯ ಇವಳಿಗೆ. ಮೊದಲ ಭೆಟ್ಟಿಯಲ್ಲಿಯೇ ದೊರೆ ಗಳನ್ನು ಕಂಪಣ ಎಂದು ಹೆಸರುಗೊಂಡು ಕರೆಯುತ್ತಾಳೆ.

**ಸೋಮಪ್ಪ:** (ತನಗಷ್ಟಕ್ಕೆ) ಇದರಲ್ಲೇನೋ ಕುಹಕವಿರಲಿಕ್ಕೇಬೇಕು. ಗಂಗಾ ದೇವಿಯ ಭಯಕ್ಕೆ ಅರ್ಥವಿಲ್ಲದೇ ಇಲ್ಲ.

**ಕಂಪಣ :** ಮಂತ್ರಿಗಳೇ, ಸ್ವಲ್ಪ ಸುಮ್ಮನಿರಿ. ಮರ್ಯಾದೆಯ ಮೇರೆ ಮೀರ ಬೇಡಿರಿ. (ಆಗುಂತಕಳನ್ನುದ್ದೇಶಿಸಿ) ಅಮ್ಮಾ, ತಮಗೆ ನಿಜವಾಗಿಯೂ ಬೇಕಾದು ದೇನು ಎಂದು ಹೇಳಬಾರದೇ.

**ಮಧಿರಾ:** ಹೇಳಿದೆನಲ್ಲ ಸ್ಪಷ್ಟವಾಗಿ. ನನಗೆ ಬೇಕಾದುದು ಕಂಪಣ.

**ಗಂಗಾ:** (ಕೋಪದಿಂದ) ಈ ಮಾರಿಯನಾಚೆಗೆ ತಳ್ಳಿರಿ. ಈ ಯವನಿಯ ಮುಖ ದರ್ಶನ ಕೂಡಾ ನನಗೆ ಬೇಡ.

**ಮಧಿರಾ :** (ನಗುತ್ತ) ಯಾಕೆ ಗಂಗಾ. ಸವತಿ ಮಾತ್ಸರ್ಯವೇ?

**ಸೋಮಪ್ಪ :** (ತನ್ನಷ್ಟಕೆ) ಅಬಾ ರಾಕ್ಷಸಿ, ಏನು ಧೈರ್ಯ?

**ಕಂಪಣ :** ತಾಯಿ, ಹಿಂದೂ ಸ್ತ್ರೀಯರ ಹೊರತು ಅನ್ಯರಿಗೆ ನನ್ನ ಅಂತಃಪುರ ದಲ್ಲಿ ಆಶ್ರಯವಿಲ್ಲ. ಅನ್ಯ ಸ್ತ್ರೀಯರೆಲ್ಲ ನನಗೆ ಮಾತೆ–ಸೋದರಿಯರ ಸಮಾನರು.

**ಮಧಿರಾ :** ಹಾಗಿದರೆ...ನಿನಗೆ ನನ್ನಲ್ಲಿ ಮಾತೆಯ ಗೌರವವಿದ್ದರೆ...ನಾನೇ ನಿನ್ನ ಮಾತೆಯಾಗಿದರೆ...ನನ್ನನು ದೂರದಿಂದಲೇ ಮಾತನಾಡಿಸುತ್ತಿದ್ದೆಯಾ? ಆಸನ ದಿಂದಿಳಿದು ಬಂದು ಕೈಹಿಡಿದು ಕುಳ್ಳಿರಿಸಿಕೊಳ್ಳುತ್ತಿದ್ದಿಲ್ಲವೇ ನಿನ್ನ ಪಕ್ಕದಲ್ಲಿ?

**ಗೋಪರಸ :** ಅಬಾ ಮಾಟಗಾರ್ತಿಯೆ! ಎಷ್ಟು ಬೇಗ ಮಾತು ಬದಲಾಯಿ ಸುತ್ತಿರುವೆ?

**ಸಾಳ್ವ :** ಇವಳೊಂದು ಮೋಸದ ಜಾಲ ಬೀಸುತ್ತಿರಬೇಕು.

**ಗಂಗಾ :** ಸ್ವಾಮೀ ದಯವಿಟ್ಟು ಇಲ್ಲಿಂದ ಕದಲಬೇಡಿರಿ. ಈ ಸ್ಥಳ ಬಿಟ್ಟು ಕದ ಲಿದರೆ ನನ್ನಾಣೆ.

**ಮಧಿರಾ :** (ವ್ಯಂಗ್ಯದಿಂದ) ಅಯ್ಯೋ ಗಂಗೆ ಕಂಪಣನ ಕೈ ಹಿಡಿಯಬೇಕೆಂದರೆ ಸವತಿಮಾತ್ಸರ್ಯ. ತಾಯಿಯಾಗಬೇಕೆಂದರೆ ಅತ್ತೆಯ ಅಸೂಯೆ. ವೀರಾಧಿ ವೀರನ ಪತ್ನಿ, ಹೆಸರು ಗಂಗೆ, ಹೃದಯವೈಶಾಲ ಮಾತ್ರ ಸೊನ್ನೆ.

**ಗಂಗಾ :** (ಕೋಪದಿಂದ) ಸ್ವಾಮಿ... ಅಯ್ಯೋ ಕೇಳಲಾರೆ... ಅವಳನು ಅಟ್ಟಿರಾಚೆಗೆ.

**ಮಧಿರಾ :** ಕಂಪಣ, ಮಮತೆಯ ಮಡದಿಯ ಮಾತು ಕೇಳಿಕೊಂಡು ಮಾತೆ ಯನು ದೂರೀಕರಿಸುವೆಯಾ?

**ಕಂಪಣ :** ಅಮ್ಮಾ ನಿಜವಾಗಿ ತಮಗೆ ಬೇಕಾದುದೇನು? ತಿಳಿಸಿರಿ.

**ಮಧಿರಾ :** ಇದೋ ನಿನ್ನ ಪಕ್ಕದಲ್ಲಿರುವ ಆ ಆಸನ, ಮಾತೆಗೆಂದು ಮೀಸಲಾಗಿ ರುವ ಆ ಸ್ಥಾನದಲ್ಲಿ ನನ್ನನ್ನು ಕೈಹಿಡಿದೊಯ್ದು ಕುಳ್ಳಿರಿಸು. ಇದೇ ನನಗೆ ಬೇಕಾದುದು.

**ಸಾಳ್ವಮಂಗು :** ಎಲ್ಲೋ ಹುಚ್ಚು ಹೆಣ್ಣುಮಗಳಿರಬೇಕು.

**ಕಂಪಣ :** ಈ ಅಬಲೆಯ ಆಶೆ ವಿಚಿತ್ರವಾಗಿದೆ.

**ಗೋಪರಸ :** ಇವಳು ಮಾತಿನಲ್ಲಿ ಬಲು ಜಾಣೆ. ಎಚ್ಚರಿಕೆ ಕಂಪಣ.

**ಮಧಿರಾ :** ತಾಯಿ ಎಂಬ ಪ್ರೇಮ ಗೌರವಗಳಿದ್ದರೆ ಸಮೀಪಕ್ಕೆ ಬಂದು ಮಾತ ನಾಡಿಸಬಾರದೇ? ತಾಯಿಯೊಡನೆ ನಿನ್ನ ಅಷ್ಟು ಅಂತಸ್ತೇ?

**ಸೋಮಪ್ಪ :** ಕಂಪಣ, ನೀನಿಲ್ಲಿಂದ ಕದಲಕೂಡದು. ಇದರಲ್ಲೇನೋ ಮೋಸವಿದೆ.

**ಮಧಿರಾ :** ಒಬ್ಬ ಅನಾಥ ಅಬಲೆಗೆ ಹಿಂದುಗಳು ಇಷ್ಟೊಂದು ಹೆದರುವವರೆಂ ದೇನು ನನಗೆ ತಿಳಿದಿರಲಿಲ್ಲ. ನನಗೆ ಎಂತಹ ಹೇಡಿ ಮಗನೆಂದು ಅಸಹ್ಯವೆನಿಸುತ್ತಿದೆ.

**ಕಂಪಣ :** ಅಪ್ಪಾಜಿ, ಇಷ್ಟು ಯುದ್ಧಗಳಲ್ಲಿ ಹೋರಾಡಿದ ಕೆಚ್ಚೆದೆಯ ಕಂಪಣ

ಒಬ್ಬ ಯಕಃಶ್ಚಿತ ಸ್ತ್ರೀಯಿಂದ ಹೇಡಿ ಎನ್ನಿಸಿಕೊಂಡು ಹೇಗೆ ಸುಮ್ಮನಾಗುವಿರಿ ಹೇಳಿರಿ.

**ಸೋಮಪ್ಪ :** ಸಮಯ ನೋಡಿಕೊಂಡು ಸರಿಯಾಗಿ ನಡೆ, ಕಂಪಣ. ಆದರ್ಶಕ್ಕೆ ಬಲಿಯಾಗಬೇಡ.

**ಕಂಪಣ :** ನನ್ನಿಂದಾಗಿ ಇನ್ನು ಮೇಲೆ ಎಲ್ಲ ಹಿಂದುಗಳನ್ನು ಹೀಗಳೆಯುವಂತಾಗುತ್ತದಲ್ಲ.

**ಮಧಿರಾ :–** ರಾಜನಂತೆ ಪ್ರಜೆ. ರಾಜ ಹತ್ತುಪಾಲು ಹೇಡಿ: ಅವನ ಮಂತ್ರಿಗಳು ನೂರು ಪಾಲು ಹೇಡಿಗಳು.

**ಕಂಪಣ–** ಅಬ್ಬಾ, ಕೇಳಲಾರೆ. ಈ ರೀತಿಯ ಅವಮಾನದ ನುಡಿಗಳನ್ನು. ಇದೋ ಅಮ್ಮಾ, ಹಿಂದುಗಳು ಹೇಡಿಗಳಲ್ಲ– ಕೆಚ್ಚೆದೆಯ ವೀರಾಳುಗಳು.

**ಸೋಮಪ್ಪ–** ಕಂಪಣ ಏಳದಿರು...ದುಡುಕಬೇಡ.

**ಕಂಪಣ -** ಇದೋ ನಿನ್ನ ಮಗ ವೀರಾಧಿವೀರ. ಅಮ್ಮಾ ಹೀಗೆ ಬಾ. ಎಲ್ಲಿ ಕೊಡು, ನಿನ ಕೈಯನ್ನು.

**ಮಧಿರಾ–** [ಮಾತಿನ ಧ್ವನಿ ಬದಲಿಸಿ] ಅಂ... ಕಂಪಣ ಇಂದು ಮಧುರೆಯಲ್ಲಿ ಜನ ಸಂತೋಷ ಸಾಗರದಲ್ಲಿ ಮುಳು ಮುಳುಗಿ ಏಳುತ್ತಿದ್ದಾರೆ ಗೊತ್ತೆ?

**ಕಂಪಣ-** ಹೌದು. ನಿನ ಕೆಚ್ಚೆದೆಯ ಈ ಕುವರನಿಂದಾಗಿ ಮಧುರೆ ಪರತಂತ್ರದಿಂದ ಬಿಡುಗಡೆ ಹೊಂದಿತು. ಮೀನಾಕ್ಷಿ ಅಮ್ಮನ ಭವ್ಯ ಮಂದಿರದ ಹೆಬ್ಬಾಗಿಲು ತೆರೆಯಿತು. ಅದರೊಡನೆ ಆವಳ ಭಾಗ್ಯವೂ ತೆರೆಯಿತು. ಅಮ್ಮಾ ಕೈ ಕೊಡು. ಹೀಗೆ ಬಾ.

**ಮಧಿರಾ ៖** ಆದರೆ...ನಿನ ಮ್ಮನ ಭಾಗ್ಯ ಮಣ್ಣುಪಾಲಾಯಿತು.

**ಕಂಪಣ ៖** ಎಂದರೆ...

**ಮಧಿರಾ ៖** ಎಂದರೆ...ಮೊನಿನ ಯುದ್ಧದಲ್ಲಿ ನಿನ್ನ ಜನ ನನ್ನ ಪತಿದೇವನನ್ನು ಕೊಂದರು.

**ಕಂಪಣ ៖** ಅಮ್ಮಾ......

**ಮಧಿರಾ ៖** (ಏರಿದ ಧ್ವನಿಯಲ್ಲಿ) ಛೀ–ತಂದೆಯನ್ನು ಕೊಂದು ತಾಯಿಯ ಮಾಂಗಲ್ಯವನ್ನು ಮಣ್ಣುಗೂಡಿಸಿದ ಮಗ ನೀನು. ನನ್ನನ್ನು 'ಅಮ್ಮಾ 'ತಾಯಿ' ಎಂಬ ಪವಿತ್ರ ನುಡಿಗಳಿಂದ ಕರೆಯಬೇಡ.

**ಕಂಪಣ ៖** ಕರ್ತವ್ಯದ ಕರೆಗೆ ಓ ಕೊಟ್ಟು ಈ ಕಾರ್ಯ ಕೈಕೊಂಡೆ.

**ಮಧಿರಾ ៖** (ಅಣಕದಿಂದ) ಓ...ಕರ್ತವ್ಯದ ಕರೆ...!

**ಕಂಪಣ ៖** ನಿನ ಗಂಡನಾದರೂ ವೀರನಂತೆ ಕಾದಿ ಮಡಿದಿರುವ. ನೀನು ವೀರನ ಪತ್ನಿಯಮ್ಮಾ.

**ಮಧಿರಾ ៖** (ಅದೇ ಅಣಕದ ಧ್ವನಿಯಲ್ಲಿ) ಓ ವೀರನ ಪತ್ನಿ. ಕರ್ತವ್ಯದ ಕರೆಗೆ ಓ ಗೊಟ್ಟೆಯೋ ಅಥವಾ ಸೇಡಿನ ಕಿಚ್ಚನೆಬ್ಬಿಸಿ ಸೇಡು ಸಾಧಿಸಿಕೊಂಡಿಯೋ?

**ಕಂಪಣ ៖** ಅಮ್ಮಾ ನೀನು ಮಾತಿನಲ್ಲಿ ಬಹು ಚಾಣಾಕ್ಷಳಿರುವಿ. ಬಹುಶಃ ನೀನು ರಾಜಮನೆತನಕ್ಕೆ ಸೇರಿದವಳಿರಬೇಕು.

**ಮಧಿರಾ ៖** ನಾನಾರೋ ಇದ್ದಿರಬಹುದು. ಅದೆಲ್ಲ ಹಿಂದಿನ ಮಾತು. ಸಧ್ಯಕೆ ನಾನು ಅನಾಥೆ.

**ಕಂಪಣ ៖** ತಾಯೀ. ಈ ಹಿಂದೆ ನಿನ್ನ ಪತಿದೇವನೂ ಇದೇ ರೀತಿ ಅನೇಕ ಹಿಂದೂ ಸ್ತ್ರೀಯರನು ಅನಾಥೆಯರನ್ನಾಗಿ ಮಾಡಿದ. ಅದರ ಪರಿಣಾಮವಾಗಿ ನಾನು ಆತನ ಮೇಲೇರಿ ಬರಬೇಕಾಯಿತು.

**ಮಧಿರಾ ៖** ಓ ಹಾಗೋ. ವಿಷಕ್ಕೆ ವಿಷವೇ ಮದ್ದು. ಸೇಡಿಗೆ ಸೇಡು–ಯುದ್ಧಕ್ಕೆ ಯುದ್ಧ. ರಕ್ತಪಾತಕ್ಕೆ ರಕ್ತಪಾತ. ಮುಯ್ಯಿಗೆ ಮುಯ್ಯಿ, ಜೀವಕ್ಕೆ ಜೀವ ಇದೋ-ಇದೇ ಏನು ನಿನ್ನ ನ್ಯಾಯಬುದ್ಧಿ.

(ಅಡಗಿಸಿಟ್ಟುಕೊಂಡ ಕಿರುಗತ್ತಿಯಿಂದ ಕಂಪಣನನ್ನಿರಿವಳು. ಅಯ್ಯೋ ಎಂದೆನ್ನುತ್ತ ಕಂಪಣ ಬೀಳುವನು. ದೂರದಲ್ಲಿ ಗಂಗಾ ಅಯ್ಯೋ ಎಂದು ಚೀರುವಳು)

**ಸೋಮಪ್ಪ ៖** ಅನ್ಯಾಯ ಅನ್ಯಾಯ. ಆದರ್ಶಕ್ಕೆ ಬಲಿಯಾದೆಯಾ ಕಂಪಣ? ನನಗನಿಸಿತ್ತು, ಇದು ಹೀಗಾಗುವದೆಂದು,

**ಸಾಳ್ವಮಂಗು ៖**
**ಗೋಪರಸ ៖** | ಹಿಡಿಯಿರಿ ಈ ಮಾರಿಯನ್ನು.

**ಮಧಿರಾ ៖** ನೀವೇನೂ ಹಿಡಿಯಲು ಬರುವದು ಬೇಡ. ನನಗೆ ಬೇಕಾಗಿದ್ದುದು ಕಂಪಣ. ಅವನನ್ನು ಬಲಿ ತೆಗೆದುಕೊಂಡೆ. ಇನ್ನು ನನ್ನ ಆತ್ಮಕ್ಕೆ, ನನ್ನ ಹೃದಯೇಶ್ವರನ ಆತ್ಮಕ್ಕೆ ಶಾಂತಿ.

**ಗಂಗಾ ៖** ಥೂ ರಾಕ್ಷಸಿ...ಎಂಥ ಹೇಸಿ ಕೆಲಸ ಮಾಡಿದೆ.

**ಮಧಿರಾ ៖** ಹೂಂ–ನಿನ್ನ ಗಂಡ ಮಾಡಿದರೆ ಅದು ವೀರರ ಕೆಲಸ. ನನ್ನದು ಹೇಸಿ ಕೆಲಸ. ರಣರಂಗದಲ್ಲಿ ನರಳುತ್ತ ಬಿದ್ದಿದ್ದ ಸುಲ್ತಾನರಿಗೆ ನಾನು ವಚನ ಕೊಟ್ಟಿದ್ದೆ, ಈ ಕುನ್ನಿ ಕಂಪಣನ ಕತ್ತು ಮುರಿಯುವೆ ಎಂದು.

**ಗಂಗಾ ៖** ಈ ಯಮದೂತಿಯನ್ನು ಬಂಧಿಸಬಾರದೇ ಮಂತ್ರಿಗಳೆ? ಅವಳನ್ನು ಶೂಲಕ್ಕೇರಿಸಿರಿ... (ಅಳತೊಡಗಿದಳು

**ಮಧಿರಾ ៖** ಹುಷಾರ್, ಯಾರೂ ನನ್ನನ್ನು ಹಿಡಿಯುವದು ಬೇಡ. (ಭಾವನಾ ಪರವಶಳಾಗಿ) ಇದೋ ಹೃದಯೇಶ್ವರಾ. ಸುಲ್ತಾನ ನಿಮ್ಮ ಇಚ್ಛೆಯಂತೆ–ನಾನು ಸೇಡು ತೀರಿಸಿಕೊಂಡೆ. ಕಂಪಣ ಭೂದೇವಿಯನ್ನಪ್ಪಿದ. ನಾನು ಮತ್ತೆ ನಿಮ್ಮ ಮಡಿಗೆಯಲ್ಲಿರಲು ಹಂಬಲಿಸುವೆ. ಇದೋ ನಿಮ್ಮ ಬಾಹು ಬಂಧನಾಕಾಂಕ್ಷಿ ಮಧಿರಾ. ಸೇಡು... ಮಧಿರಾ ವಿಜಯ...ಹ...ಹ...ಮಧಿರಾ ವಿಜಯ. ಇದೋ...ಸ್ವಾಮೀ...ಸುಲ್ತಾನ... ಬರುವೆ (ಎಂದು ಅದೇ ಕಿರುಗತ್ತಿಯಿಂದ ಇರಿದುಕೊಂಡು "ಸುಲ್ತಾನ...ಅಲ್ಲಾ" ಎಂದು ಕೂಗುತ್ತ ಬೀಳುವಳು)

**ಗಂಗಾ ៖** (ವ್ಯಗ್ರವಾಗಿ) ತಲೆಕೆಟ್ಟ ಹೆಣ್ಣು ತಾನೂ ಸತ್ತಳು. ಆದರೆ ಸಾಯುವ ಮೊದಲು ನಮ್ಮನ್ನೆಲ್ಲ ಹಾಳುಮಾಡಿ ಸೇಡು ತೀರಿಸಿಕೊಂಡಳು. ಸೋಮಪ್ಪಾಜಿ ನನ್ನ ಹೃದಯೇಶ್ವರನೇನಾದರೂ ಬದುಕುವಂತಿದೆಯೋ ನೋಡಿರಿ... (ಅಳುವಳು) ಅಮ್ಮಾ ಮೀನಾಕ್ಷಿ ನನ ಮಾಂಗಲ್ಯ ಉಳಿಸು ದೇವಿ...

**ಕಂಪಣ ៖** ಹೆಣ್ಣು ಹೃದಯದ ಹುಚ್ಚು ಹಂಬಲ. ನನ್ನ ಆಸೆ ಬಿಡು ಗಂಗಾ. ನನ ಕೆಲಸ ಕೊನೆಗೊಂಡಿತು.

**ಸೋಮಪ್ಪ ៖** ಆದರ್ಶವಾದಿಯಾಗಿ ಮೂವತ್ತರ ಎಳೆ ಪ್ರಾಯದಲ್ಲಿ ಮೃತ್ಯುವನ್ನಪ್ಪಿದೆಯಾ ಕಂಪಣ.

**ಕಂಪಣ ៖** ಆದರ್ಶವಾದಿಯಾಗಿ ಮರಣಹೊಂದುವದು ಮೇಲು–ಎಲ್ಲರಂತೆ ಸುಮ್ಮನೇ ಸಾಯುವದರಲ್ಲಿ ಅರ್ಥವಿಲ್ಲ. ವೀರಮರಣಕ್ಕಿಂತಲೂ ಶ್ರೇಷ್ಠವಾದುದು ನನ್ನ ಮರಣ.

**ಗಂಗಾ:-** ಈ ಯವನಿಯನ್ನು–ಮುಸಲ್ಮಾನಳನ್ನು ಅಮ್ಮಾ ಎಂದು ಕರೆದಿರಿ. ಆದರೂ ಈ ಬ್ರಹ್ಮಪಿಶಾಚಿ ನಿಮ್ಮ ಜೀವ ತೆಗೆದುಕೊಂಡಳು. [ಅಳುವಳು] ಅಯ್ಯೋ ನನ ಮಾಂಗಲ್ಯ...

**ಕಂಪಣ:-** (ನರಳುತ್ತ) ಅಳಬೇಡ ಗಂಗಾ ... ಅರಳುಮಲ್ಲಿಗೆ ನಿನ ಮಾಂಗಲ್ಯ ಮೀನಾಕ್ಷಮ್ಮನ ಕೊರಳೊಳಗಿನ ಹಾರದಂತೆ ಶೋಭಿಸುವದು ಈಗಲೂ ಸಾಧ್ಯವಿದೆ.

**ಗಂಗಾ:-** (ಅಳುತ್ತಲೇ) ಅಂ...

**ಕಂಪಣ៖-** ನಮ್ಮ ಆದರ್ಶದಾಂಪತ್ಯವನ್ನು ರಸವತ್ತಾಗಿ ವರ್ಣಿಸುತ್ತ, ಪತಿಯ ಶೌರ್ಯದ ಕೃತಿ ಕಣ್ಮುಂದೆ ಕಟ್ಟುವಂತೆ ಕಾವ್ಯ ರಚಿಸು. ಕಂಪರಾಯ ಚರಿತ್ರೆ ಚಿರಾಯುವಾಗುತ್ತದೆ. ಅದೇ ನಿನ್ನ ಮಾಂಗಲ್ಯ– ಮಂಗಳಮಯ ಕೃತಿ. ಆ ಕಾವ್ಯಮಾಲೆ ಮಲ್ಲಿಗೆ ಮಾಲೆಯಂತೆ, ಅರಳು ಮಲ್ಲಿಗೆಯ ಮಾಲೆಯಂತೆ ಶೋಭಿಸುವುದು.

**ಗಂಗಾ:-** (ಅಳುತ್ತಲೇ) ಆಗಲಿ ಹೃದಯೇಶ್ವರಾ.

**ಕಂಪಣ:-** (ನರಳುತ್ತ) ಸೋಮಪ್ಪಾಜೀ...ಗೋಪರಸ...ಎಲ್ಲರೂ ಸುಖವಾಗಿ... ಶೋಣಾಚಲಕ್ಕೆ ಮರಳಿ... ವಿಜಯೋತ್ಸವ...ಅಲ್ಲಿ...ನೆರವೇರಿಸಿರಿ...ಅಳಬೇಡಿರಿ... ವೀರರಂತೆ ಬಂದುದೆಲ್ಲವನು ...ಎದುರಿಸಿರಿ...ಅದೋ ಮೀನಾಕ್ಷಿಯಮ್ಮ... ತನ ಕೈಗಳಿಂದ ಮಗನನ್ನು ಅಪ್ಪಿಕೊಳ್ಳಲು ಬರುತ್ತಿದಾಳೆ...ನಾನು...ಬರುವೆ ಗಂಗಾ...

( ಸ್ತ್ರೀಯರಲ್ಲಿ ಅಳುವ ಧ್ವನಿ ಕೇಳಿ ಬರುವದು. ಗಂಡಸರೆಲ್ಲ ಕಂಪರಾಯ ಚಿರಾಯುವಾಗಲಿ ಎಂದು ಕೂಗುವರು. )



# ಕನ್ನಡ ರಂಗಭೂಮಿ



ಕನ್ನಡ ರಂಗಭೂಮಿಯ ಇತಿಹಾಸ ಹಳೆಯದು; ಹತ್ತೊಂಭತ್ತನೆಯ ಶತಮಾನದಿಂದಲೇ ಅದು ತೊಡಗುತ್ತದೆ. ಗೊಂಬೆಯಾಟ, ಬಯಲಾಟ, ದೊಡ್ಡಾಟ, ಯಕ್ಷಗಾನಗಳಿಂದ ನಮ್ಮ ರಂಗಭೂಮಿ ಇಂದಿನ ಆಧುನಿಕ ರೂಪದ ವರೆಗೂ ನಡೆದು ಬಂದಿದೆ. ಹವ್ಯಾಸಿ ರಂಗಭೂಮಿ-ವೃತ್ತಿರಂಗ ಭೂಮಿ ಹೀಗೆ ಅದು ಕವಲೊಡೆದು ಜನಮನವನ್ನು ರಂಜಿಸತೊಡಗಿತು. ಸಾಮಾಜಿಕ-ಪೌರಾಣಿಕ ನಾಟಕಗಳಿಂದ ಪ್ರಾರಂಭವಾದ ರಂಗಭೂಮಿ ಏಕಾಂಕ ನಾಟಕಗಳನ್ನು, ಇಂದು ಅಸಂಗತ ನಾಟಕಗಳನ್ನು ಕಂಡಿದೆ. ಕನ್ನಡ ರಂಗಭೂಮಿ ಅನೇಕ ಮಹಾಮಹಾ ನಟ-ನಟಿಯರನ್ನು, ನಾಟಕ ಕಾರರನ್ನು, ಕಲಾವಿದರನ್ನು ಬೆಳಕಿಗೆ ತಂದಿತು. ಅವರಿಂದ ನಾನಾ ರೀತಿ ಯಲ್ಲಿ ಸೇವೆಯನ್ನು ಪಡೆಯಿತು. ಕನ್ನಡ ರಂಗಭೂಮಿ ಹೀಗೆ ಬೆಳಗಿದವ ರಿಂದ ಬೆಳೆದು ಬಂದಿತು. ಇಂದು ಹವ್ಯಾಸಿ ಸಂಸ್ಥೆಗಳು ವೃತ್ತಿ ಕಂಪನಿಗಳಿಗೆ ಸರಿಸಮವಾಗಿನಿಂತು ರಂಗಭೂಮಿಯ ಸೇವೆಯಲ್ಲಿ ತೊಡಗಿವೆ. ನಾನಾ ರೀತಿಯ ಪ್ರಯೋಗಗಳನ್ನು ಮಾಡುತ್ತಿವೆ; ರಂಗಸಜ್ಜಿಕೆ, ಅಲಂಕರಣ, ಬೆಳಕು ಇತ್ಯಾದಿ ವಿಷಯಗಳಲ್ಲಿ ಸಾಂಕೇತಿಕತೆಯೂ ಮೂಡಿ ಬರತೊಡ ಗಿದೆ. ಇದರ ಜೊತೆಗೆ ಪ್ರಚಾರಕ್ಕೂ ರಂಗಭೂಮಿ ಪ್ರಯೋಜನಕಾರಿ ಯಾಗಿ ಪರಿಣಮಿಸಿದೆ. ಕನ್ನಡ ರಂಗಭೂಮಿಯ ಈ ಕಥೆ ದೀಪಾ ವಳಿಯ ನಮ್ಮ ವಿಶೇಷ ಕೊಡುಗೆಯಾಗಿ ನಿಮ್ಮೆದುರಿದೆ.

## ದೀಪಾವಳಿಯ ವಿಶೇಷ ಕೊಡುಗೆ

# ಕನ್ನಡ ರಂಗಭೂಮಿಯ ಇತಿಹಾಸ

ಪ್ರೊ। ಎಚ್. ಲಕ್ಷ್ಮೀಂದ್ರಸ್ವಾಮಿ

ಕನ್ನಡ ನಾಟಕಗಳ ಚರಿತ್ರೆ ಇತ್ತೀಚಿನದಾದರೂ ರಂಗಭೂಮಿಯ ಇತಿಹಾಸ ಪ್ರಾಚೀನವಾದದ್ದು. ಹದಿನೇಳನೇ ಶತಮಾನದ ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದ'ವೇ ಈಗ ದೊರೆತಿರುವಂತೆ ಕನ್ನಡದ ಮೊಟ್ಟ ಮೊದಲನೆಯ ನಾಟಕ. ಆದರೆ ಅದಕ್ಕಿಂತ ಬಹುಹಿಂದಿನಿಂದಲೂ, ಕೊನೆಯ ಪಕ್ಷ ನೃಪತುಂಗನ ಕಾಲದಿಂದಲೂ ಕನ್ನಡ ರಂಗಭೂಮಿ ಆಯಾ ಕಾಲಕ್ಕನುಗುಣವಾಗಿ ಜನರ ಕಲಾತ್ಮಕ ಆವಶ್ಯಕತೆಗಳನ್ನು ಪೂರೈಸಿಕೊಂಡು ಬಂದಿರುವುದು ಕಾಣುತ್ತದೆ. ಇದರಲ್ಲಿ ಪ್ರಧಾನವಾಗಿ ಎರಡು ಹಂತಗಳನ್ನು ಕಾಣಬಹುದು. ಒಂದು ಜನ ಸಾಮಾನ್ಯರ ಮಧ್ಯದಲ್ಲಿ ಹುಟ್ಟಿ ಬೆಳೆದು ಬಂದ ರಂಗಭೂಮಿ, ಇನ್ನೊಂದು, ರಾಜರ ಕೃಪಾಶ್ರಯದಲ್ಲಿ ಬೆಳೆದು ಬಂದ ಪ್ರೌಢರಂಗಭೂಮಿ. ಈ ಎರಡನೆಯದು ಸಂಸ್ಕೃತ ನಾಟಕಗಳನ್ನು ಹೆಚ್ಚಾಗಿ ಅವಲಂಬಿಸಿದಂತೆ ತೋರುತ್ತದೆ. ಮೊದಲನೆಯದು ಜಾನಪದ ರಂಗಭೂಮಿ: ಇದು ಯಕ್ಷಗಾನ ಬಯಲಾಟ, ಮೊದಲಾದ ವಿವಿಧ ರೂಪಗಳಿಂದ ಕೂಡಿದ ಕಲಾಮಾಧ್ಯಮ.

'ನಾಟಕ' ಮತ್ತು 'ನಾಟಕಶಾಲೆ' ಈ ಮಾತುಗಳು ಕನ್ನಡ ಸಾಹಿತ್ಯದಲ್ಲಿ ಮತ್ತು ಶಾಸನಗಳಲ್ಲಿ ಕೂಡ ಸಿಕ್ಕುತ್ತವೆ. ಪಂಪ, ನಾಗಚಂದ್ರ, ಭೀಮಕವಿ, ರತ್ನಾಕರ, ಕುಮಾರವ್ಯಾಸ ಮೊದಲಾದ ಅನೇಕ ಕವಿಗಳಲ್ಲಿ 'ನಾಟಕ' ಎಂಬ ಮಾತು ಬಂದರೂ ಅದು ಅನೇಕ ವೇಳೆ ನೃತ್ಯ, ನಾಟ್ಯ, ಎನ್ನುವ ಅರ್ಥದಲ್ಲಿ ಬಂದಿರುವಂತೆ ಕಾಣುತ್ತದೆ. ಆದರೆ ಕ್ರಮೇಣ ಸಂಭಾಷಣೆ ಅಭಿನಯಗಳು ಪ್ರಧಾನವಾದ ನಾಟಕಗಳೂ ರಂಗದ ಮೇಲೆ ಬರತೊಡಗಿದವು. ವಿಜಯನಗರದ ಅರಸರ ಕಾಲದಲ್ಲಿ 'ಪಟ್ಟದ ನಾಟಕ ಶಾಲೆ' ಇದ್ದ ಅಂಶ ತಿಳಿದು ಬರುತ್ತದೆ. ಕೃಷ್ಣದೇವರಾಯನ ಕಾಲದಲ್ಲಿ ಒಮ್ಮೆ ವಿರೂಪಾಕ್ಷನ ಉಪಾಸನೆಯ ವಿಶೇಷ ಚೈತ್ರೋತ್ಸವದಂದು 'ಜಾಂಬವತೀ ಕಲ್ಯಾಣ' ಎಂಬ ಸಂಸ್ಕೃತ ನಾಟಕವನ್ನು ಪಟ್ಟದ ನಾಟಕ ಶಾಲೆಯಲ್ಲಿ ಅಭಿನಯಿಸಲಾಯಿತು. ಇಂತಹ ನಾಟಕಗಳ ಕನ್ನಡ ರೂಪಾಂತರಗಳೂ ರಂಗದ ಮೇಲೆ ಬರುತ್ತಿದ್ದಿರಬಹುದು. ಆದರೆ ಅಂತಹ ಕನ್ನಡ ನಾಟಕಗಳಾವವೂ ಸಿಕ್ಕಿಲ್ಲ.

ಕನ್ನಡ ಕವಿಗಳನೇಕರು ವಿಶೇಷವಾಗಿ ನಾಟ್ಯ ಪ್ರತಿಭೆಯುಳ್ಳವರು; ಉದಾಹರಣೆ ರನ್ನ, ರಾಘವಾಂಕರು. ಅವರ ಗದಾಯುದ್ಧ, ಹರಿಶ್ಚಂದ್ರ ಕಾವ್ಯಗಳ ಮೂಲಹಂದರ ನಾಟಕವೇ ಆಗಿದ್ದಿರಬೇಕೆನ್ನುವಷ್ಟು ಸಹಜವಾಗಿ ಅವು ನಾಟಕಕ್ಕೆ ಹೊಂದಿಕೊಳ್ಳುತ್ತವೆ. ಬಿ. ಎಂ. ಶ್ರೀ ಅವರು ಪರಿವರ್ತಿಸಿದ "ಗದಾಯುದ್ಧ" ನಾಟಕ ರಂಗಭೂಮಿಯ ಮೇಲೆ ತುಂಬಾ ಯಶಸ್ಸನ್ನು ಪಡೆಯಿತು. ಕೇಶಿರಾಜನ ಕೃತಿಗಳಿಂದು ಆತನ ಹೇಳಿಕೆಯಿಂದಲೇ ತಿಳಿದು ಬಂದಿರುವ 'ಚೋಳಪಾಲಕ ಚರಿತಂ' 'ಶ್ರೀ ಚಿತ್ರಮಾಲೆ', 'ಸುಭದ್ರಾಹರಣ', 'ಪ್ರಬೋಧ ಚಂದ್ರ', 'ಕಿರಾತ', ಇವುಗಳಲ್ಲಿ 'ಸುಭದ್ರಾಹರಣ', 'ಪ್ರಬೋಧ ಚಂದ್ರ'ಗಳು ನಾಟಕಗಳಾಗಿರಬೇಕೆಂದು ಗೋವಿಂದ ಪೈಗಳು ಊಹಿಸಿದ್ದಾರೆ. ಆದರೆ ಆ ಕೃತಿಗಳಾವವೂ ಸಿಕ್ಕಿಲ್ಲದಿರುವುದರಿಂದ ಏನನ್ನೂ ನಿರ್ದಿಷ್ಟವಾಗಿ ಹೇಳುವಂತಿಲ್ಲ, ಇಷ್ಟು ಮಾತ್ರ ಹೇಳಬಹುದು; ರಾಜರುಗಳ ಆಶ್ರಯದಲ್ಲಿ ಬಹು ಹಿಂದಿನಿಂದಲೂ ಸಂಸ್ಕೃತ ನಾಟಕಗಳಂತೆ, ಅವುಗಳ ಕನ್ನಡ ರೂಪಾಂತರಗಳೂ ರಂಗಭೂಮಿಯ ಮೇಲೆ ಬರುತ್ತಿದ್ದಿರಬೇಕು. ಅಲ್ಲದೆ ಜಾನಪದ ಕಲಾವಿದರನ್ನು ಕರೆದು ರಾಜರು ಪ್ರೋತ್ಸಾಹಿಸುತ್ತಿದ್ದರು. 'ದಶಾವತಾರ ನಾಟಕ'ವನ್ನು ಜಾನಪದ ಕಲಾವಿದರಿಂದ ಆಡಿಸಿ ಕಂಠೀರವ ನರಸರಾಜ ಒಡೆಯರು ಅವರನ್ನು ಗೌರವಿಸಿದರೆಂಬುದನ್ನು ಗೋವಿಂದ ವೈದ್ಯ ಹೇಳುತ್ತಾನೆ.

ಜಾನಪದ ಕಲೆಯಾಗಿ ಯಕ್ಷಗಾನ ಬಯಲಾಟಗಳು ಬಹಳ ಹಿಂದಿನಿಂದಲೂ ಬೆಳೆದು ಬಂದಿವೆ. ರತ್ನಾಕರವರ್ಣಿ 'ನಾಡಾಡಿಗಳ ನಾಟಕ' ಎನ್ನುವುದು ಇದನ್ನು ಕುರಿತೇ ಇರಬೇಕು. ನಿಜಗುಣ ಶಿವಯೋಗಿಗಳು (೧೫ನೇ ಶತಮಾನ) ವಿವೇಕ ಚಿಂತಾಮಣಿಯಲ್ಲಿ 'ಶುದ್ಧ ದೇಶೀಯ ನಾಟಕ'ಗಳನ್ನು ಹೇಳುತ್ತಾರೆ. ಚಂದ್ರಪ್ರಭ ಪುರಾಣದಲ್ಲಿ ಅಗ್ಗಳ, ಮಲ್ಲಿನಾಥಪುರಾಣದಲ್ಲಿ ಅಭಿನವಪಂಪ 'ಎಕ್ಕಲಗಾಣ' ಎನ್ನುವುದನ್ನಾಗಲೀ, ಕವಿರಾಜ ಮಾರ್ಗದಲ್ಲಿ ಬರುವ 'ನಾಟ್ಯಗರಣ'ವನ್ನಾಗಲೀ, ಈ ಅರ್ಥದಲ್ಲಿ ತಗೆದುಕೊಳ್ಳಬಹುದು. ಸಂಗೀತ ಪ್ರಧಾನವಾದ ನೃತ್ತ ನಾಟಕಗಳ ಅಸ್ತಿತ್ವಕ್ಕೆ ಅನೇಕ ಶಾಸನಗಳೂ ಸಾಕ್ಷಿಯನ್ನೊದಗಿಸುತ್ತವೆ. ಕೊನೆಯಪಕ್ಷ ೭–೮ನೇ ಶತಮಾನಗಳಿಂದಲೂ ಕರ್ನಾಟಕದಲ್ಲಿ ಪ್ರೌಢರಂಗಭೂಮಿಯಂತೆ ಜಾನಪದ ರಂಗಭೂಮಿಯೂ ಬೆಳೆದು ಬಂದಿದೆ. ಧಾರ್ಮಿಕವಿಧಿಗಳಲ್ಲಿ ಹಬ್ಬಹರಿದಿನಗಳಲ್ಲಿ ಇದು ಪ್ರಧಾನಪಾತ್ರ ವಹಿಸುತ್ತಿತ್ತು. ಕರ್ನಾಟಕದ ವಿವಿಧಭಾಗಗಳಲ್ಲಿರುವ ನಾಗ ನೃತ್ಯ, ವೀರಾವಂತರ ಕುಣಿತ, ಭೂತನೃತ್ಯಾದಿಗಳಂತೆ ತೊಗಲು ಬೊಂಬೆ, ಸೂತ್ರದ ಬೊಂಬೆಯ ಆಟಗಳೂ ಇದರ ಬೆಳವಣಿಗೆಗೆ ನೆರವಾದವು.

೧೮ನೇ ಶತಮಾನದಿಂದ ಈಚೆಗೆ ಮಾಧವದಾಸ, ಶಾಂತಯ್ಯ, ಪಾರ್ತಿಸುಬ್ಬ, ಸುಬ್ಬ ಮೊದಲಾದ ಯಕ್ಷಗಾನದ ಲೇಖಕರು ಅನೇಕ ಪೌರಾಣಿಕ ಸನ್ನಿವೇಶಗಳನ್ನು ಕುರಿತು ಯಕ್ಷಗಾನಗಳನ್ನು ರಚಿಸಿದರು. ಕವಿ ಮುದ್ದಣ್ಣನೂ 'ಕುಮಾರ ವಿಜಯ,' 'ರತ್ನಾವಳಿ-ಕಲ್ಯಾಣ' ಮೊದಲಾದ ಅನೇಕ ಕೃತಿಗಳನ್ನು ಬರೆದಿದ್ದಾನೆ. ಯಕ್ಷಗಾನ ಪ್ರದರ್ಶನ, ಪಾತ್ರಧಾರಿಗಳ ವೇಷದಿಂದ ಹಿಡಿದು ಹಾಡು ಕುಣಿತ, ನಿರೂಪಣಾಕ್ರಮ ಚಂಡ ಮದ್ದಳೆ ವಾದ್ಯಗಳವರೆಗೂ ವ್ಯವಸ್ಥಿತವಾದ ರೂಪವನ್ನು ಪಡೆಯಿತು, ಈ ಕ್ರಮದಲ್ಲಿ ಕಂಡುಬರುವ ವ್ಯತ್ಯಾಸಗಳಿಂದ ತೆಂಕುತಿಟ್ಟು, ಬಡುಗುತಿಟ್ಟು, ಎಂದು ಎರಡು ಬಗೆಗಳಾಗಿ ಪರಿಣಮಿಸಿತು. ಅನೇಕ ನುರಿತ ಕಲಾವಿದರು ಇವುಗಳ ಯಶಸ್ಸಿಗೆ ಕಾರಣರಾದರು. ಇಂದೂ ಇದು ಹೊಸಯುಗಕ್ಕನುಗುಣವಾಗಿ ಮುನ್ನಡೆಯಲು ಪ್ರಯತ್ನಿಸುತ್ತಿದೆ.

ಕರ್ನಾಟಕದ ಉತ್ತರಭಾಗದಲ್ಲಿ ಬಯಲಾಟ ಅಥವಾ ಅಟ್ಟದಾಟ ಹೆಚ್ಚು ಪ್ರಚಲಿತವಾಗಿರುವ ಜಾನಪದ ಕಲೆ. ಬಯಲಿನಲ್ಲಿ ಹಲಗೆಗಳಿಂದ ಮೂರು ನಾಲ್ಕು ಅಡಿ ಎತ್ತರವಿರುವ ಅಟ್ಟವನ್ನು ಕಟ್ಟಿ ಅದರ ಮೇಲೆ ಇದನ್ನು ಆಡುವುದರಿಂದ ಈ ಹೆಸರುಗಳು ಬಂದಿವೆ. ದೊಡ್ಡಾಟ, ಮೂಡಲಪಾಯ ಎಂದು ಮುಂತಾಗಿ ಇದನ್ನು ಕರೆಯುವುದುಂಟು. ಯಕ್ಷಗಾನಕ್ಕಿಂತ ಭಿನ್ನವಾದ ನಿರೂಪಣಾಕ್ರಮ, ಕುಣಿತದ ವಿನ್ಯಾಸ ಸಂಭಾಷಣೆಯ ಚಾತುರಗಳು ಇದಕ್ಕಿವೆ. ಪುರಾಣ ಪ್ರಸಂಗಗಳನ್ನು ಜನಮನದಲ್ಲಿ ಬಿತ್ತಿರುವ ಪ್ರಭಾವಶಾಲಿಯಾದ ಕಲಾಮಧ್ಯಮವಾಗಿ ಇದು ಪರಿಣಮಿಸಿದೆ. ಇದರ ವಿವರಗಳಿಗೆ ಹೋದರೆ ರಂಗಭೂಮಿಯ ಇನ್ನೊಂದು ಪ್ರಧಾನವಾದ ವಿಭಾಗದ ಕಡೆಗೆ ಈಗ ತಿರುಗಬಹುದು.

೧೯ನೇ ಶತಮಾನದಲ್ಲಿ ಕನ್ನಡ ರಂಗಭೂಮಿ ಹೊಸ ಚೈತನ್ಯದ ಸ್ಪರ್ಶದಿಂದ ಜಾಗ್ರತಗೊಂಡಿತು. ಉತ್ತರ ಕರ್ನಾಟಕದಲ್ಲಿ ಮತ್ತು ಮೈಸೂರಿನಲ್ಲಿ ಪ್ರಾರಂಭವಾದ ಚಟುವಟಿಕೆಗಳು ನಾಡಿನಾದ್ಯಂತ ವ್ಯಾಪಿಸಿದುವು. ವೃತ್ತಿರಂಗಭೂಮಿ (Professional Stage) ಎಂಬ ಒಂದು ಹೊಸ ಬಗೆಗೆ ಕಾರಣವಾದುವು ಇದರ ಜೊತೆಯಲ್ಲಿ ಹವ್ಯಾಸೀ ರಂಗಭೂಮಿ(Amateur Stage)ಯೂ ಬೆಳೆದು ಬಂದಿತು.

ಹಾಗೆ ನೋಡಿದರೆ ನಮ್ಮಲ್ಲಿ ಮೊದಲಿನಿಂದಲೂ ಇದ್ದದ್ದು ಹವ್ಯಾಸಿ ರಂಗಭೂಮಿಯೆಂದೇ ಹೇಳಬೇಕು. ಬೇರೆ ಬೇರೆ ಉದ್ಯೋಗಗಳಲ್ಲಿ ತೊಡಗಿದವರು ಒಟ್ಟಿಗೆ ಸೇರಿ ಆಗಾಗ ಯಕ್ಷಗಾನಗಳನ್ನೋ ಬಯಲಾಟಗಳನ್ನೋ ಆಡುತ್ತಿದ್ದರು. ಅದನ್ನು ಕಲಿಸುವ ಭಾಗವತರು ಬಹುಶಃ ಅದೇ ವೃತ್ತಿಯವರಾಗಿರುತ್ತಿದ್ದರೆಂದು ತೋರುತ್ತದೆ. ಇನ್ನು ರಾಜಾಶ್ರಯದಲ್ಲಿ ಬೆಳೆದು ಬರುತ್ತಿದ್ದ ರಂಗಭೂಮಿ ಪರಿಮಿತವಾದ ವಲಯಕ್ಕೆ ಸೀಮಿತವಾಗಿತ್ತು. ಮಧ್ಯಮ ವರ್ಗದ ಜನಕ್ಕೆ ಅದು ಎಟುಕದಂತಾಗಿತ್ತು. ಮುಖ್ಯವಾಗಿ ಈ ಮಧ್ಯಮ ವರ್ಗವೇ ವೃತ್ತಿ ರಂಗಭೂಮಿಯ ಏಳಿಗೆಗೆ ಕಾರಣವೆನ್ನಬಹುದು. ಒಂದು ಕಡೆ ಜಾನಪದ ರಂಗಭೂಮಿಯ ಅವಾಸ್ತವಿಕತೆ ಅಸಹಜತೆ ಅತಿರೇಕಗಳು ಅವರಿಗೆ ಅಷ್ಟಾಗಿ ಅಸಾಧ್ಯವಾಗುವಂತಿರಲಿಲ್ಲ. ಇನ್ನೊಂದು ಕಡೆ ರಾಜಾಸ್ಥಾನದ ಪ್ರೌಢ ರಂಗಭೂಮಿ ಅವರಿಗೆ ನಿಲುಕುವಂತಿರಲಿಲ್ಲ. ತಮ್ಮ ಕಲಾತ್ಮಕ ಅಭೀಪ್ಸೆಗಳಿಗೆ ತಕ್ಕಂತೆ ಒಂದು ಮಾಧ್ಯಮವನ್ನು ಅವರು ರೂಪಿಸಿಕೊಳ್ಳಬೇಕಾಯಿತು. ಇದರ ಹಿನ್ನೆಲೆಯಲ್ಲಿ ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗಳ ಪ್ರಭಾವವೂ ಪ್ರಚೋದಕವಾಗಿ ವೃತ್ತಿರಂಗಭೂಮಿಗೆ ಕಾರಣವಾಯಿತೆನ್ನಬಹುದು.

ಇದು ಉತ್ತರ ಕರ್ನಾಟಕ ಮತ್ತು ಮೈಸೂರುಗಳೆರಡರಲ್ಲೂ ಸ್ವಲ್ಪ ಹೆಚ್ಚು ಕಡಿಮೆ ಏಕಕಾಲದಲ್ಲಿ ಸುಮಾರು ೧೯ ನೇ ಶತಮಾನದ ಉತ್ತರಾರ್ಧದಲ್ಲಿ ಪ್ರಾರಂಭವಾಯಿತು. ಮರಾಠಿ ರಂಗಭೂಮಿಯಿಂದ ಮೊದಲ ಪ್ರಚೋದನೆ ಪಡೆದುದನ್ನು ಗಮನಿಸಬಹುದು. ಹಿಂದೆ ಕನ್ನಡ ರಂಗಭೂಮಿಯಿಂದ ಸ್ಫೂರ್ತಿಯನ್ನು ಪಡೆದು ಉಗಮಗೊಂಡ ಮರಾಠಿ ರಂಗಭೂಮಿ ಈ ವೇಳೆಗೆ ಪ್ರಭಾವಶಾಲಿಯಾಗಿ ಬೆಳೆದಿತ್ತು. ಹುಬ್ಬಳ್ಳಿ ಧಾರವಾಡ ಮತ್ತು ಬೊಂಬಾಯಿ ಕರ್ನಾಟಕದ

ಎಲ್ಲ ಭಾಗಗಳಲ್ಲಿಯೂ ಮರಾಠಿ ನಾಟಕಗಳು ಯಶಸ್ವಿಯಾಗುತ್ತಿದ್ದುವು. ಎಲ್ಲಿ ನೋಡಿದರಲ್ಲಿ ಮರಾಠಿ ನಾಟಕಗಳು! ಅವುಗಳ ಪ್ರಾಬಲ್ಯದಲ್ಲಿ ಕನ್ನಡ ರಂಗಭೂಮಿ ಅಡಗಿಹೋಗಿತ್ತು. ಈ ದುಃಸ್ಥಿತಿಯನ್ನು ಹೋಗಲಾಡಿಸಿ ಮತ್ತೊಮ್ಮೆ ಕನ್ನಡ ರಂಗಭೂಮಿ ತಲೆಯೆತ್ತುವಂತೆ ಮಾಡುವ ಪ್ರಯತ್ನ ನಡೆದದ್ದು ಶಾಂತಕವಿಗಳೆಂದು ಪ್ರಸಿದ್ಧವಾಗಿರುವ ಸಕರಿ ಬಾಳಾಚಾರ್ಯರಿಂದ.

೧೮೭೭ ರಲ್ಲಿ ಶಾಂತಕವಿಗಳು ಗದುಗಿನಲ್ಲಿ ಒಂದು ನಾಟಕ ಮಂಡಲಿಯನ್ನು ಪ್ರಾರಂಭಿಸಿದರು: "ಶ್ರೀ ವೀರನಾರಾಯಣ ಪ್ರಾಸಾದಿಕ ಕೃತಪುರ ನಾಟಕ ಮಂಡಲಿ" ಎಂದು ಅದು ಹೆಸರು ಪಡೆಯಿತು. ಗದುಗಿನ ಕೆಲವು ಉತ್ಸಾಹೀ ಕಲಾವಿದರನ್ನು ಸಂಘಟಿಸಿ ಶಾಂತಕವಿಗಳು ತಾನೇ ಬರೆದು ನಿರ್ದೇಶಿಸಿದ "ಉಷಾಹರಣ" ಎಂಬ ನಾಟಕವನ್ನು ಮೊದಲಬಾರಿ ರಂಗಕ್ಕೆ ತಂದರು. ಇದರ ಯಶಸ್ಸಿನಿಂದ ಸ್ಫೂರ್ತಿಗೊಂಡು ಇನ್ನೂ ಎಂಟು ಹತ್ತು ನಾಟಕಗಳನ್ನು ಆಡಿಸಿದರು. ಆ ಭಾಗದ ನಾನಾ ಕಡೆಗಳಲ್ಲಿ ಸಂಚಾರವನ್ನು ಕೈಕೊಂಡು ನಾಟಕಗಳನ್ನು ಆಡತೊಡಗಿದ ಈ ಕಂಪನಿ ಸಾಕಷ್ಟು ಜನಪ್ರಿಯತೆಯನ್ನು ಹಣವನ್ನೂ ಗಳಿಸಿತು. ಮರಾಠಿ ನಾಟಕ ಕಂಪನಿಗಳು ಕರ್ನಾಟಕಕ್ಕೆ ಬರಲು ಹಿಂದೆ ಮುಂದೆ ನೋಡುವಷ್ಟರ ಮಟ್ಟಿಗೆ ಈ ನಾಟಕಗಳು ಪ್ರಚಾರವನ್ನು ಪ್ರಸಿದ್ಧಿಯನ್ನೂ ಪಡೆದುವು. ಶಾಂತಕವಿಗಳು ಆ ಭಾಗದ ರಂಗಭೂಮಿಯ ಜನಕರೆಂಬ ಕೀರ್ತಿಗೆ ಪಾತ್ರರಾದರು.

ಸ್ವಲ್ಪ ಹೆಚ್ಚು ಕಡಿಮೆ ಇದೇ ಕಾಲದಲ್ಲಿಯೆ ಮೈಸೂರಿನಲ್ಲಿಯೂ ರಂಗಭೂಮಿಯ ಪುನರುಜ್ಜೀವನಕ್ಕೆ ನಾಂದಿ ಹಾಡಲಾಯಿತು. ಆಗ ಮೈಸೂರಿನ ಮಹಾರಾಜರಾಗಿದ್ದ ಚಾಮರಾಜ ಒಡೆಯರಿಗೆ ನಾಟಕಾದಿಕಲೆಗಳ ವಿಚಾರದಲ್ಲಿ ತುಂಬಾ ಆಸಕ್ತಿ. ಸಾಂಗ್ಲಿಯಿಂದ ಬಂದ ಮರಾಠಿ ನಾಟಕಕಂಪನಿ ಮತ್ತು ಅನಂತರ ಬಂದ ವಿಕ್ಟೋರಿಯ ಪಾರ್ಸಿ ಕಂಪೆನಿಯವರು ಮಹಾರಾಜರ ಮುಂದೆ ನಾಟಕಗಳನ್ನಾಡಿ ಅವರ ಮೆಚ್ಚುಗೆ ಪಡೆದರು. ಆ ನಾಟಕಗಳನ್ನು ಕಂಡು ಮೈಸೂರಿನ ಕಲಾವಿದರಲ್ಲಿಯೂ ಜಾಗೃತಿಯುಂಟಾಯಿತು. ಅದಕ್ಕೆ ಮಹಾರಾಜರ ಪ್ರೋತ್ಸಾಹವೂ ಸಿಕ್ಕಿತು. ಅದರ ಫಲವಾಗಿ 'ಶಾಕುಂತಲ ಕರ್ನಾಟಕನಾಟ್ಯಸಭಾ' ತಲೆಯೆತ್ತಿತು. ಆಸ್ಥಾನ ವಿದ್ವಾಂಸರಾದ ಅಭಿನವ ಕಾಳಿದಾಸ ಬಸವಪ್ಪ ಶಾಸ್ತ್ರಿಗಳು ಕನ್ನಡಿಸಿಕೊಟ್ಟ ಶಾಕುಂತಲಾ ನಾಟಕದ ಪ್ರದರ್ಶನದೊಂದಿಗೆ ೧೮೮೧ ರಲ್ಲಿ ಅದು ಪ್ರಾರಂಭವಾಯಿತು. ಮರಾಠಿ ನಾಟಕಗಳಿಗೆ ಯಾವ ರೀತಿಯಲ್ಲಿಯೂ ಕಡಿಮೆಯಿಲ್ಲದಂತಹ ರಂಗಸಜ್ಜಿಕೆ ಮತ್ತು ಪ್ರತಿಭಾವಂತ ಕಲಾವಿದರಿಂದ ಕೂಡಿದ ಈ ನಾಟಕ ತುಂಬಾ ಯಶಸ್ಸನ್ನು ಪಡೆಯಿತು, ಜನರ ಮನಸ್ಸನ್ನು ಸೆರೆಹಿಡಿಯಿತು. ಇದರಿಂದ ಪ್ರಚೋದಿತರಾಗಿ ಈ ಕಲಾವಿದರು ಬೆಂಗಳೂರಿಗೂ ಹೋಗಿ ಅಲ್ಲಿ ಅನೇಕ ಪ್ರದರ್ಶನಗಳನ್ನು ಕೊಟ್ಟು ಈ ನಾಟಕ ಸಭೆಯ ಕೀರ್ತಿಯನ್ನು ಮೊಳಗಿಸಿದರು. ೧೮೮೨ ರಲ್ಲಿ ಇದರ ಹೆಸರನ್ನು "ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ" ಎಂದು ಬದಲಾಯಿಸಲಾಯಿತು.

ಚಾಮರಾಜ ಒಡೆಯರು ವಹಿಸಿದ ವಿಶೇಷ ಆಸಕ್ತಿಯ ಫಲವಾಗಿ ರೋಮಿಯೋ ಜೂಲಿಯೆಟ್, ಒಥೆಲ್ಲೋ ಮೊದಲಾದ ಇಂಗ್ಲಿಷ ನಾಟಕಗಳೂ ಭಾಷಾಂತರವಾದುವು. ಇದರ ಜೊತೆಗೆ ಸಂಸ್ಕೃತದ ವಿಕ್ರಮೋರ್ವಶೀಯ, ಚಂಡಕೌಶಿಕ, ರತ್ನಾವಳಿ, ಮೃಚ್ಛಕಟಿಕ ಮೊದಲಾದ ನಾಟಕಗಳನ್ನು ಆಸ್ಥಾನ ಬಿಡಾರಂ ಕೃಷ್ಣಪ್ಪನವರೂ, ನಾಟಕ ಕಂಪನಿಯ ವಿದ್ವಾಂಸರು ಕನ್ನಡಕ್ಕೆ ತಂದರು. ಈ ನಾಟಕ ಸಭೆ ಇವುಗಳನ್ನು ರಂಗದ ಮೇಲೆ ತಂದಿತು. ಈ ನಾಟಕಗಳನ್ನು ಅಭ್ಯಾಸ ಮಾಡಿಸಲು ಆಸ್ಥಾನ ವಿದ್ವಾನ್ ಬಿಡಾರಂ ಕೃಷ್ಣಪ್ಪನವರೂ ನಾಟಕ ಕಂಪನಿಯ ಮೇಲ್ವಿಚಾರಣೆಗೆ ದರ್ಬಾರ ಭಕ್ಷಿಗಳಾದ ಎಚ್ ಲಿಂಗರಾಜ ಅರಸ್ ಅವರೂ, ನಟವರ್ಗದಲ್ಲಿ ಮಂಡ್ಯಂ ರಂಗಾಚಾರ, ಪುಟ್ಟಾರಿ ಶಾಸ್ತ್ರಿ, ಜಂಜೂಟಿ ಶೇಷಗಿರಿರಾವ್ ಮೊದಲಾದ ಪ್ರತಿಭಾವಂತರಾದ ಕಲಾವಿದರೂ ಇದ್ದರೆಂಬುದನ್ನು ನೋಡಿದರೆ ಮಹಾರಾಜರು ಇದರ ವಿಚಾರದಲ್ಲಿ ತೋರಿಸುತ್ತಿದ್ದ ಆಸಕ್ತಿ ಎಷ್ಟೆಂಬುದು ವ್ಯಕ್ತವಾಗುತ್ತದೆ. ೧೮೯೦ ರಲ್ಲಿ ಈ ನಾಟಕಸಭೆ ಧಾರವಾಡ, ಹುಬ್ಬಳ್ಳಿ, ಬೆಳಗಾವ್ ಬಳ್ಳಾರಿ ಮೊದಲಾದ ಕಡೆಗಳಿಗೂ ಹೋಗಿ ಜಯಭೇರಿಯನ್ನು ಬಾರಿಸಿಬಂದಿತು.

ಈ ವೇಳೆಗೆ ಉತ್ತರ ಕರ್ನಾಟಕದಲ್ಲಿ ಶಾಂತಕವಿಗಳಿಂದ ಪ್ರಾರಂಭವಾಗಿದ್ದ ಕೃತಪುರ ನಾಟಕ ಮಂಡಲಿಯು ಅಲ್ಲಿನ ರಂಗಭೂಮಿಯಲ್ಲಿ ಒಂದು ಹೊಸ ಯುಗವನ್ನು ಪ್ರಾರಂಭಿಸಿತ್ತು. ಶಾಂತಕವಿಗಳಿಗಿಂತ ಮೊದಲು ಚುರಮರಿ ಶೇಷಗಿರಿರಾಯರು ನಾಟಕಗಳನ್ನು ಬರೆದಿದ್ದರು. ೧೮೬೯ ರಲ್ಲೇ ಅವರು ಶಾಕುಂತಲ ನಾಟಕವನ್ನು ಭಾಷಾಂತರಿಸಿದ್ದರು. ಆದರೆ ಮೊದಲು ರಂಗದ ಮೇಲೆ ಬಂದದ್ದು ಮಾತ್ರ ೧೯೦೫ ರಲ್ಲಿ, ಶಾಂತಕವಿಗಳ ನಾಟಕಗಳು ರಂಗದ ಮೇಲೆ ಬಂದ ಎಷ್ಟೋ ಕಾಲಾನಂತರ.

'ಕೃತಪುರ ನಾಟಕಮಂಡಲಿ'ಯ ಸಾಧನೆಯಿಂದ ಉತ್ಸಾಹಿತರಾಗಿ ಉತ್ತರ ಕರ್ನಾಟಕದಲ್ಲಿ ಕಲಾವಿದರು ಸಂಘಟಿತರಾದರು. ಅನೇಕ ನಾಟಕ ಕಂಪನಿಗಳು ಧಾರವಾಡ, ರಾಣೆಬೆನ್ನೂರು, ಹಿರೇಕೆರೂರ, ಹುಬ್ಬಳ್ಳಿ, ಲಕ್ಷ್ಮೇಶ್ವರ, ನವಲಗುಂದ ಬಾದಾಮಿ, ರಬಕವಿ ಮೊದಲಾದ ಕಡೆಗಳಲ್ಲಿ ತಲೆಯೆತ್ತಿದುವು. ಆಯಾ ಪರಿಸ್ಥಿತಿಗನುಗುಣವಾಗಿ ಸ್ವಲ್ಪಕಾಲ ಮಾತ್ರ ಬಾಳಿದ ಇವುಗಳಲ್ಲಿ ಹಲಸಿಗಿ ನಾಟಕ ಸಂಘ ಮುಖ್ಯವಾದದ್ದು. ಅವಲಗಟಿ ವೆಂಕಣಾಚಾರ ಅವರ ನೇತೃತ್ವದಲ್ಲಿ ಇದು 'ಶ್ರೀಮತಿ ಪರಿಣಯ', ದ್ರೌಪದಿವಸ್ತ್ರಾಪಹರಣ, 'ಭಸ್ಮಾಸುರ ವಧೆ' ಮೊದಲಾದ ನಾಟಕಗಳನ್ನು ಆಡಿದುದಲ್ಲದೆ ಈ ಸಂಘದ ಕಲಾವಿದರಲ್ಲಿ ಕೆಲವರು ತಮ್ಮ ಪ್ರವಚನಗಳಿಂದಲೂ ಜನರನ್ನು ಆಕರ್ಷಿಸುತ್ತಿದ್ದರು.

ಧಾರವಾಡದ ತಂತುಪುರ ಪುರುಷನಾಟಕ ಮಂಡಲಿಯನ್ನು ಇಲ್ಲಿ ಪ್ರಮುಖವಾಗಿ ಹೆಸರಿಸಬೇಕು, ಕರ್ನಾಟಕದಿಂದ ಹೊರಗೆ ಹೋಗಿ ಮಹಾರಾಷ್ಟ್ರ, ಆಂಧ್ರ ಮೊದಲಾದ ಕಡೆಗಳಲ್ಲಿ ತನ್ನ ಪ್ರಭಾವವನ್ನು ಬೀರಿ ಬಂದ ಮೊಟ್ಟ ಮೊದಲ ನಾಟಕ ಸಂಘ ಇದು. ವಿದ್ಯಾವಂತ ಕಲಾವಿದರಿಂದ ಕೂಡಿದ ಈ ನಾಟಕ ಮಂಡಲಿ ಹೆಚ್ಚು ಕಾಲ ಬದುಕದಿದ್ದರೂ ತನ್ನ ಘನತೆ ಗಾಂಭೀರ್ಯಗಳಿಂದ ಕಲಾಪರಿಣತಿಯಿಂದ ನೆರೆ ನಾಡವರ ಗೌರವನ್ನು ಪಡೆಯಿತು. ಆದರೆ ಅಲ್ಲಲ್ಲಿ ತಲೆಯೆತ್ತಿದ ಅನೇಕ ನಾಟಕ ಸಂಘಗಳ ಸ್ಥಿತಿ ತದ್ವಿರುದ್ಧವಾಗಿತ್ತು. ಹೇಳಿಕೊಟ್ಟ ಮಾತನ್ನು ಗಿಳಿಯಂತೆ ಒಪ್ಪಿಸುವ ಅಕ್ಷರಸ್ಥ ನಟರಿಂದ, ಪಾತ್ರಗಳನ್ನು ಅರ್ಥ ಮಾಡಿಕೊಳ್ಳದ ಅತಿರೇಕದ ಅಭಿನಯಗಳಿಂದ ರಂಗಭೂಮಿ ಶೋಚನೀಯವಾಗಿತ್ತು. ಸುಶಿಕ್ಷಿತರಿಂದ ದೂರ ಸರಿಯತೊಡಗಿತು. ಮರಾಠಿ ನಾಟಕಗಳ ಕಡೆಗೆ ನಮ್ಮ ವಿದ್ಯಾವಂತರ ಒಲವು ಹರಿಯಿತು.

ಇದನ್ನು ತಡೆದು ಕನ್ನಡ ರಂಗಭೂಮಿಯನ್ನು ಮತ್ತೊಮ್ಮೆ ಪುನರುಜ್ಜೀವನಗೊಳಿಸುವ ಪ್ರಯತ್ನದಲ್ಲಿ ಕಾಣುವ ಮೊದಲ ಹೆಸರು "ಭಾರತ ಕಲೋತ್ತೇಜಕ ಸಂಗೀತ ಸಮಾಜ" ೧೮೯೭ ರಿಂದಲೂ ನಾಟಕಗಳನ್ನಾಡುತ್ತಿದ್ದ ಮಡಿಹಾಳಿನ "ಪ್ರಾಚ್ಯ ಕ್ರೀಡ ಸಂವರ್ಧಕ ಮಂಡಲಿಯೇ ಪುನರ್ವ್ಯವಸ್ಥೆಗೊಂಡು ೧೯೦೪ ರಲ್ಲಿ ಈ ಹೆಸರಿನಿಂದ ಕಾರ್ಯೋದ್ಯುಕ್ತವಾಯಿತು. ಚುರುಮುರಿಯವರ 'ಶಾಕುಂತಲ' ಅನುವಾದದ ಪ್ರದರ್ಶನದಿಂದ ಪ್ರಾರಂಭವಾಗಿ ಈ ಮಂಡಲಿ 'ಮೃಚ್ಛಕಟಿಕ', ರಾಮರಾಜ್ಯ ವಿಯೋಗ' 'ಸೌಭದ್ರ' ಮೊದಲಾದ ನಾಟಕಗಳನ್ನು ರಂಗದ ಮೇಲೆ ತಂದಿತು. ಮರಾಠಿ ನಾಟಕಗಳ ಮಟ್ಟಕ್ಕಿಂತ ಯಾವ ರೀತಿಯಲ್ಲಿಯೂ ಕಡಿಮೆಯಿಲ್ಲದ ಕಲಾತ್ಮಕ ವ್ಯವಸ್ಥೆಯನ್ನು ರಂಗ ಸಜ್ಜಿಕೆಗಳನ್ನು ಇದು ಸಾಧಿಸಿತು. ಇನ್ನೊಂದು ಮುಖ್ಯವಾದ ಅಂಶವೆಂದರೆ ಈ ಸಂಸ್ಥೆ ಹಣಕ್ಕಾಗಿ ನಾಟಕಗಳನ್ನು ಅಭಿನಯಿಸಲಿಲ್ಲ. ಈ ಅರ್ಥದಲ್ಲಿ ಇದು ಹವ್ಯಾಸಿ ರಂಗಭೂಮಿಗೆ ನಾಂದಿಯನ್ನು ಹಾಡಿತೆನ್ನಬಹುದು.

ಹೀಗೆ ೨೦ನೇ ಶತಮಾನದ ಪ್ರಾರಂಭದ ದಶಕದಲ್ಲಿ ಚೇತನಗೊಂಡ ರಂಗಭೂಮಿ ಮುಂದೆ ಕೆಲವು ದಶಕಗಳ ಕಾಲ ಉಜ್ವಲವಾಗಿ ಬೆಳೆದು ಬಂದಿತು. ಇಲ್ಲಿ ಮೊದಲು ಹೆಸರಿಸಬಹುದಾದುದೆಂದರೆ ಶಿರಹಟ್ಟಿ ವೆಂಕೋಬರಾಯರಿಂದ ಪ್ರಾರಂಭವಾದ "ಶ್ರೀ ಮಹಾಲಕ್ಷ್ಮಿ ಪ್ರಾಸಾದಿತ ನಾಟಕ ಮಂಡಳಿ" ಇದು ೧೯೦೩ ರಲ್ಲಿಯೇ ಪ್ರಾರಂಭವಾದರೂ ಗಟ್ಟಿಯಾಗಿ ಬೇರೂರಿ ನಾಲ್ಕು ಜನರ ಕಣ್ಣಿಗೆ ಬೀಳುವಂತಾದುದು ೧೯೦೬ರಲ್ಲಿ, ಚುರಮುರಿಯವರಿಂದ ಅನುವಾದಿತವಾದ ಶಾಕುಂತಲವನ್ನೂ ಅಂತೆಯೇ 'ಕಾಳಿದಾಸನ ಚರಿತ್ರೆ' ಮತ್ತು 'ಯುವತಿ ವಿಜಯ' ಎಂಬ ನಾಟಕಗಳನ್ನು ಆಡಿದಾಗ, ಮುಂದೆ ಈ ಕಂಪನಿ ಕರ್ನಾಟಕದ ಅನೇಕ ಭಾಗಗಳಲ್ಲಿ ನಾಟಕಗಳನ್ನು ಪ್ರದರ್ಶಿಸಿತು. ೧೯೧೦ರಲ್ಲಿ ಮೈಸೂರಿಗೂ ಬಂದು ಪುರಭವನದಲ್ಲಿ ನಾಟಕಗಳನ್ನು ಅಭಿನಯಿಸಿದುದು, ಮಹಾರಾಜರ ಗಮನವನ್ನೂ ಸೆಳೆಯಿತು. 'ಕಾಳಿದಾಸ ಚರಿತೆ'ಯನ್ನು ಮಹಾರಾಜರು ಬಹುವಾಗಿ ಮೆಚ್ಚಿ ಆ ಕಲಾವಿದರನ್ನು ಪುರಸ್ಕರಿಸಿದರು. 'ವಿವೇಕೋದಯ' 'ಪ್ರಲ್ಹಾದ ಚರಿತ್ರೆ' ಕೃಷ್ಣಲೀಲಾ ಇತ್ಯಾದಿ ನಾಟಕಗಳಿಂದ ಅನೇಕ ವರ್ಷಗಳ ಕಾಲ ಶಿರಹಟ್ಟಿ ಕಂಪನಿ, ಕರ್ನಾಟಕ ರಂಗಭೂಮಿಯಲ್ಲಿ ಬಹು ಪ್ರಮುಖ ಪಾತ್ರವಹಿಸಿತು. ಇದರ ಒಡೆಯರಾದ ವೆಂಕೋಬರಾಯರು ಪ್ರತಿಭಾವಂತ ಕಲಾವಿದ; ಅಂತೆಯೇ ದಕ್ಷತೆ ವ್ಯವಹಾರ ಕುಶಲತೆಗಳಿಂದ ಕಾರ್ಯವ್ಯವಸ್ಥೆಯನ್ನು ನಿರ್ವಹಿಸುವ ಆಡಳಿತಗಾರರೂ ಆಗಿದ್ದುದು ಕಂಪನಿಯ ಯಶಸ್ಸಿಗೆ ಕಾರಣವಾಯಿತು. ೧೯೩೭ರವರೆಗೂ ಪ್ರಭಾವಶಾಲಿಯಾಗಿ ಬದುಕಿದ ಈ ಶಿರಹಟ್ಟಿ ಕಂಪನಿಯ ಕೊಡುಗೆ ಸ್ಮರಣೀಯವಾದುದು.

ಇದರ ಜೊತೆಯಲ್ಲಿ ಶಿವಮೂರ್ತಿಸ್ವಾಮಿ ಕಣಬರ್ಗಿಮಠ ಇವರ "ಕಾಡಸಿದ್ಧೇಶ್ವರ ಸಂಗೀತ ನಾಟಕ ಮಂಡಲಿ"ಯನ್ನು ಮರೆಯುವಂತಿಲ್ಲ. ರಂಗಸಜ್ಜಿಕೆಯಲ್ಲಿ ಇದು ಸಾಧಿಸಿದ ಪ್ರಗತಿ ಉಲ್ಲೇಖನಾರ್ಹ. ವಿದ್ಯುದ್ದೀಪಗಳನ್ನು ಬಳಸಿದುದು, ಕ್ಷಣಕಾಲದಲ್ಲಿ ದೃಶ್ಯಗಳನ್ನು ಬದಲಿಸಲು ಅನುಕೂಲವಾಗುವಂತೆ ತಿರುಗುವ ರಂಗಭೂಮಿಯ ಜೋಡಣೆ ಇತ್ಯಾದಿ ಪ್ರಯೋಗಗಳಿಂದ ಇದು ಬಹು ಜನಪ್ರಿಯವಾಯಿತು. ಇವರ 'ಶನಿಪ್ರಭಾವ' ನಾಟಕ ಹೊಸ ಶಕವನ್ನೇ ನಿರ್ಮಿಸಿತು. ಶಿರಹಟ್ಟಿ ವೆಂಕೋಬರಾಯರ ಬಳಿಯಲ್ಲಿದ್ದ ವಾಮನರಾಯರು

ವಿಶ್ವಗುಣಾದರ್ಶ ಮಂಡಲಿ'ಯನ್ನು ಸ್ಥಾಪಿಸಿ ಕೆಲವು ವರ್ಷ ನಡೆಸಿದುದೂ ೧೯೨೨ ರಲ್ಲಿ ಈ ಕಂಪನಿ ಮೈಸೂರಿಗೆ ಬಂದು ನಾಲ್ಮಡಿ ಕೃಷ್ಣರಾಜ ಒಡೆಯರಿಂದ ಪುರಸ್ಕೃತರಾದುದೂ ಗಮನಾರ್ಹ ಘಟನೆಗಳು.

ಈ ರಂಗದಲ್ಲಿ ಇನ್ನೊಂದು ಪ್ರಮುಖವಾದ ಘಟನೆಯೆಂದರೆ ಹಲಗೇರಿ ಕಂಪನಿಯ ಸ್ಥಾಪನೆ. ೧೯೧೨ ರಲ್ಲಿ ಹಲಗೇರಿಯ ಉತ್ಸಾಹಿಗಳು ಸಹಕಾರದ ಆಧಾರದ ಮೇಲೆ 'ಶ್ರೀ ಹಾಲಸಿದ್ದೇಶ್ವರ ಸಂಗೀತ ನಾಟಕ ಸಭಾ'ವನ್ನು ಸ್ಥಾಪಿಸಿದರು. ಮುಂದೆ ೧೯೧೮ ರಲ್ಲಿ ದೊಡ್ಡ ಜಟ್ಟಪ್ಪ ಅದರ ನೇತೃತ್ವವನ್ನು ವಹಿಸಿಕೊಂಡ ಮೇಲೆ ಅದರ ಕೀರ್ತಿ ಏರುತ್ತಾ ಹೋಯಿತು. ಮುಖ್ಯವಾಗಿ ಸಾಮಾಜಿಕ ನಾಟಕಗಳೂ ಅಲ್ಲಿ ಬರುವ ಹಾಸ್ಯ ಪ್ರಸಂಗಗಳೂ ಇದರ ಜನಪ್ರಿಯತೆಯನ್ನು ಹೆಚ್ಚಿಸಿದುವು. 'ಕಾಲೇಜ್ ಗರ್ಲ್' 'ಬ್ಲಾಕ್ ಮಾರ್ಕೆಟ್' 'ಪಠಾಣ್ ಪಾಶಾ' ಸ್ತ್ರೀ ಮೊದಲಾದ ಹೆಸರುಗಳೇ ಇದು ಅಳವಡಿಸಿಕೊಂಡ ಸಾಮಾಜಿಕ ಪ್ರಜ್ಞೆಗೆ ಸಾಕ್ಷಿಯಾಗಿವೆ. ಇದರ ಜೊತೆಗೆ ಹೇಮರಡ್ಡಿ ಮಲ್ಲಮ್ಮ, ಪಾದುಕಾ ಪಟ್ಟಾಭಿಷೇಕ, ಚಿತ್ರಾಂಗದಾ, ಟಿಪ್ಪು ಸುಲ್ತಾನ, ಈ ನಾಟಕಗಳನ್ನೂ ಆಡುತ್ತಿದ್ದರು. ಹಾಸ್ಯರಸ ಅಲ್ಲಿಯೂ ಪ್ರಮುಖಸ್ಥಾನ ಪಡೆದಿತ್ತು. ಬಹುಶಃ ಹಾಸ್ಯ ಪ್ರತಿಪಾದನೆ ಹಲಗೇರಿ ಕಂಪನಿಯ ಒಂದು ಕೊಡುಗೆ ಎನ್ನಬಹುದು.

ಒಂದು ಹೊಸ ತಿರುವನ್ನು ಕೊಟ್ಟ ಗರೂಡ ಸದಾಶಿವರಾಯರ "ಶ್ರೀ ದತ್ತಾತ್ರೇಯ ಸಂಗೀತ ನಾಟಕ ಮಂಡಲಿ"ಯನ್ನು ನಾವು ಮರೆಯುವಂತಿಲ್ಲ. ಅಭಿನಯ ಮತ್ತು ಅಭಿರುಚಿಯ ಉನ್ನತ ಮಟ್ಟವನ್ನು ಕಾಯ್ದುಕೊಳ್ಳುವುದಕ್ಕೆ ಸದಾಶಿವರಾಯರು ಬಹಳ ಮಹತ್ವವನ್ನು ಕೊಟ್ಟರು. ಕರ್ನಾಟಕ ಮತ್ತು ಮಹಾರಾಷ್ಟ್ರದ ಹಳ್ಳಿಹಳ್ಳಿಗಳಲ್ಲಿಯೂ ಗರೂಡರ ಕಂಪನಿ ಮನೆಮಾತಾಯಿತು. ಎಚ್ಚಮನಾಯಕ, ಪಾದುಕಾಪಟ್ಟಾಭಿಷೇಕ, ವಿಷಮವಿವಾಹ, ಶಕ್ತಿವಿಲಾಸ, ಕಬೀರದಾಸ, ಶರಣ ಬಸವ, ಈ ಮೊದಲಾದ ನಾಟಕಗಳು ಅವರಿಗೆ ಯಶಸ್ಸನ್ನು ಗಳಿಸಿಕೊಟ್ಟುವು. ೧೯೪೪ ರ ವರೆಗೂ ಉಚ್ಛ್ರಾಯ ಸ್ಥಿತಿಯಲ್ಲಿದ್ದ ದತ್ತಾತ್ರೇಯ ಮಂಡಲಿ ಅನಂತರ ಗರೂಡರ ವೃದ್ಧಾಪ್ಯದಿಂದಾಗಿ ಇಳಿಮುಖವಾಯಿತು. ೨೦ ನೇ ಶತಮಾನದ ಮೂರು ನಾಲ್ಕು ದಶಕಗಳಲ್ಲಿ ಉತ್ತರ ಕರ್ನಾಟಕದಲ್ಲಿ ತಲೆಯೆತ್ತಿದ ಅನೇಕ ಮಂಡಲಿಗಳಲ್ಲಿ ಜಯಕರ್ನಾಟಕ ನಾಟ್ಯ ಮಂಡಲಿ, ವಿಶ್ವರಂಜನ ನಾಟ್ಯ ಕಂಪನಿ, ರಾಮೇಶ್ವರ ನಾಟ್ಯ ಸಂಸ್ಥೆ ಈ ಮೊದಲಾದುವನ್ನು ಹೆಸರಿಸಬಹುದು. ಇತ್ತೀಚಿನ ಸಂಸ್ಥೆಗಳಲ್ಲಿ ಬಹಳ ಮುಖ್ಯವಾದುದೆಂದರೆ ಏಣಗಿ ಬಾಳಪ್ಪನವರ ಕಲಾವೈಭವ ನಾಟ್ಯ ಸಂಘ ಅವರ 'ಬಸವೇಶ್ವರ ನಾಟಕ' ಬಹಳ ಜನಪ್ರಿಯವಾಗಿ ಪರಿಣಮಿಸಿತು.

ಈ ಅವಧಿಯಲ್ಲಿ ಮೈಸೂರಿನಲ್ಲಿಯೂ ಅನೇಕ ವೃತ್ತಿ ನಾಟಕ ಸಂಸ್ಥೆಗಳು ಬೆಳೆದು ರಂಗಭೂಮಿಯ ಇತಿಹಾಸವನ್ನು ಉಜ್ವಲಗೊಳಿಸಿದವು. ಅರಮನೆಯ ನಾಟಕ ಮಂಡಲಿಯ ನಂತರ ಪ್ರಸಿದ್ಧಿಗೆ ಬಂದ ವೃತ್ತಿ ಸಂಸ್ಥೆಗಳಲ್ಲಿ ಮೊಟ್ಟ ಮೊದಲು ಹೆಸರಿಸಬೇಕಾದುದು "ಗುಬ್ಬಿ ಚನ್ನಬಸವೇಶ್ವರ ಕೃಪಾಪೋಷಿತ ನಾಟಕ ಸಂಘ" ತುಮಕೂರು ಜಿಲ್ಲೆಯ ಗುಬ್ಬಿಯಲ್ಲಿ ಕೆಲವು ಉತ್ಸಾಹಿಗಳ ಸಾಮೂಹಿಕ ಪ್ರಯತ್ನದಿಂದ ಪ್ರಾರಂಭವಾಗಿ ಗುಬ್ಬಿ ಚಂದಣ್ಣನವರ ನೇತೃತ್ವದಲ್ಲಿ ಬೆಳೆಯಿತು. ಮುಂದೆ ಇದರ ಕೀರ್ತಿಗೆ ಆಧಾರಸ್ತಂಭವಾದ ಗುಬ್ಬಿ ವೀರಣ್ಣನವರು ಆರು ವರ್ಷದ ಹುಡುಗನಾಗಿರುವಾಗಲೇ ೧೮೯೬ ರಲ್ಲಿ ಇಲ್ಲಿ ಕೆಲಸಕ್ಕೆ ಸೇರಿದರು. ರಂಗಭೂಮಿಯ ಜೊತೆಯಲ್ಲಿಯೇ ಬೆಳೆದ ಅವರು ೧೯೧೭ ರಲ್ಲಿ ಈ ನಾಟಕ ಸಂಸ್ಥೆಯ ಒಡೆತನವನ್ನು ವಹಿಸಿಕೊಂಡರು. ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಇದೊಂದು ಮಹತ್ವದ ಮೈಲುಗಲ್ಲು. ವೀರಣ್ಣನವರಲ್ಲಿ ನಾಟಕ ಸಂಸ್ಥೆಯೊಂದನ್ನು ನಡೆಸುವುದಕ್ಕೆ ಬೇಕಾದ ಎಲ್ಲ ಗುಣಗಳೂ ಅಭಿನಯ ಚಾತುರ್ಯ, ಪ್ರಯೋಗಶೀಲತೆ, ಅದನ್ನು ಕಾರ್ಯಗತಗೊಳಿಸುವ ಎದೆಗಾರಿಕೆ, ದೂರದೃಷ್ಟಿ, ವ್ಯವಹಾರ ಕೌಶಲ್ಯ, ದಕ್ಷ ನಿರ್ದೇಶನ ಆಡಳಿತ ವಿಚಕ್ಷಣತೆ, ಈ ಎಲ್ಲವೂ ಏಕತ್ರ ಸಮಾವೇಶಗೊಂಡುದು ಕನ್ನಡ ರಂಗಭೂಮಿಯ ಭಾಗ್ಯ. ಗುಬ್ಬಿ ಕಂಪನಿಯ ಚರಿತ್ರೆ ಕನ್ನಡ ರಂಗಭೂಮಿಯ ಚರಿತ್ರೆ ಎನ್ನುವಷ್ಟರ ಮಟ್ಟಿಗೆ ಅದು ಬೆಳೆಯಿತು. ಬೆಳ್ಳಾವೆ ನರಹರಿಶಾಸ್ತ್ರಿ, ಭೀಮರಾಜು ಬಿ. ಪುಟ್ಟಸ್ವಾಮಯ್ಯನವರಂತಹ ನಾಟಕಕಾರರನ್ನು ಅದು ಪೋಷಿಸಿತು. ಜಿ. ನಾಗೇಶ್ವರರಾವ್ ಎಂ ವಿ ಸುಬ್ಬಯ್ಯ ನಾಯ್ಡು ಗುರುಮೂರ್ತಪ್ಪ ವ್ಯಾಸರಾವ್ ಸುಂದರಮ್ಮ ಮೊದಲಾದ ಅಸಂಖ್ಯಾತ ಕಲಾವಿದರನ್ನು ರಂಗಭೂಮಿಗೆ ಕೊಟ್ಟಿತು. ವೀರಣ್ಣನವರು ಕುರುಕ್ಷೇತ್ರ ನಾಟಕವನ್ನು ರಂಗದ ಮೇಲೆ ತಂದ ರೀತಿ ಕರ್ನಾಟಕದಲ್ಲಿ ಮಾತ್ರವಲ್ಲ ನೆರೆನಾಡುಗಳಲ್ಲಿಯೂ ರಂಗಭೂಮಿಯ ಅದ್ಭುತ ಸಾಧನೆಗೆ ಅದ್ವಿತೀಯ ನಿದರ್ಶನವಾಗಿ ಪರಿಣಮಿಸಿತು. ಇದರ ಪ್ರಮುಖವಾದ ಸಾಧನೆಗಳನ್ನು ಸ್ಥೂಲವಾಗಿ ಹೇಳುವುದು ಕೂಡಾ ಒಂದು ದೊಡ್ಡ ಲೇಖನವೇ ಆದೀತು.

ಇದರ ಜೊತೆಯಲ್ಲಿಯೇ ಇನ್ನು ಅನೇಕ ನಾಟಕ ಸಂಸ್ಥೆಗಳು ಬೆಳೆದು ಬಂದುವು. ಅವುಗಳಲ್ಲಿ ತನ್ನದೇ ಆದ ಸಾಧನೆಯಿಂದ ಉನ್ನತಸ್ಥಾನವನ್ನು ಪಡೆದುದು ಎ. ವಿ. ವರದಾಚಾರ್ಯರ "ರತ್ನಾವಳಿ ಥಿಯೇಟ್ರಿಕಲ್ ಕಂಪನಿ" ನಾಟಕ ಶಿರೋಮಣಿ ವರದಾಚಾರ್ಯರ ಹೆಸರು ಕನ್ನಡರಂಗಭೂಮಿಯ ಇತಿಹಾಸದಲ್ಲಿ ಅಜರಾಮರವಾದದ್ದು. ಇವರ ಪ್ರಭಾವಕ್ಕೆ ಒಳಗಾಗಿ ತಲೆಯೆತ್ತಿದ ನಾಟಕ ಸಂಸ್ಥೆಗಳಲ್ಲಿ ಎಸ್. ಸುಬ್ಬಣ್ಣನವರ ಚಾಮುಂಡೇಶ್ವರಿ ಕರ್ನಾಟಕ ನಾಟಕ ಸಭಾ ಮಹಮದ ಪೀರರ ಚಂದ್ರಕಲಾ ನಾಟಕ ಮಂಡಳಿಗಳು ಸ್ಮರಣೀಯ. ವರದಾಚಾರ್ಯರಂತೆಯೇ ಮಹಮ್ಮದ್ ಪೀರ್ ಅವರ ಪ್ರತಿಭೆಯೂ ಕನ್ನಡ ರಂಗಭೂಮಿ ಹೆಮ್ಮೆ ಪಡಬಹುದಾದಂತಹುದು. ಎಚ್. ಎಲ್ ಎನ್. ಸಿಂಹರ "ಸಂಸಾರ ನೌಕ"ದಲ್ಲಿ. ಬಿ. ಪುಟ್ಟಸ್ವಾಮಯ್ಯನವರ "ಗೌತಮಬುದ್ಧ"ದಲ್ಲಿ ವಹಿಸಿದ್ದ ನಾಯಕ ಪಾತ್ರಗಳಿಂದ ಪೀರರು ಅಮರರಾಗಿದ್ದಾರೆ. ವಿವರಗಳಿಗೆ ಹೋಗದೆ ಇಲ್ಲಿ ರಂಗಭೂಮಿಯಲ್ಲಿ ಬೆಳೆದು ಬಂದ ಕೆಲವು ಅಪೂರ್ವ ಕಲಾವಿದರನ್ನು ಹೆಸರಿಸಬಹುದಾದರೆ ಎಂ. ಡಿ ಸುಬ್ಬಯ್ಯ ನಾಯ್ಡು, ಆರ್. ನಾಗೇಂದ್ರರಾವ್ ಕೊಟ್ಟೂರಬಸಪ್ಪ, ಸಿ. ಬಿ. ಮಲ್ಲಪ್ಪ, ನಟಭಯಂಕರ ಗಂಗಾಧರರಾವ್, ಕೆ. ಪಿ. ವೆಂಕೋಜಿರಾವ್, ಮರಿರಾವ್ ಎಂ. ವಿ. ರಾಜಮ್ಮ, ಲಕ್ಷ್ಮೀಬಾಯಿ, ಬಿ. ಜಯಮ್ಮ ಈ ಮೊದಲಾದವರು. ಸುಲಭವಾಗಿ ಈ ಸಂಖ್ಯೆಯನ್ನು ಇನ್ನು ಬೆಳೆಸಬಹುದು. ಇವರಲ್ಲಿ ಒಬ್ಬೊಬ್ಬರೂ ತಮ್ಮ ವಿಶಿಷ್ಟತೆಯಿಂದ ರಂಗಭೂಮಿಯನ್ನು ಬೆಳಗಿಸಿದವರು.

ಒಮ್ಮೆ ಇಷ್ಟು ಉಜ್ವಲವಾಗಿ ಬೆಳೆದು ಬಂದ ರಂಗಭೂಮಿ ಇಂದು ಅವಶೇಷ ಮಾತ್ರವಾಗಿ ಉಳಿದಿರುವಂತೆ ತೋರುತ್ತಿದೆ. ಇದಕ್ಕೆ ಸಿನೆಮಾಗಳು ಕಾರಣವೆನ್ನುವುದು ಅಂಶಸತ್ಯ. ಸಿನೆಮಾ ಯುಗದಲ್ಲಿಯೂ ನಾಟಕಗಳು ಮಾತ್ರ ಕೊಡಬಲ್ಲ ವಿಶಿಷ್ಟ ಕಲಾನುಭವ ಇದೆಯೆಂಬುದನ್ನು ನಾಟಕಗಳು ಮನಗಂಡು ಅದಕ್ಕನುಗುಣವಾಗಿ ಆಧುನಿಕ ದೃಷ್ಟಿಯಿಂದ ಬೆಳೆದರೆ ಅವುಗಳ ಭವಿಷ್ಯ ಉಜ್ವಲವಾಗುವುದು ಸಾಧ್ಯ. ಆದರೆ ಸಧ್ಯದಲ್ಲಿ ಆ ಲಕ್ಷಣಗಳು ಕಂಡುಬರುತ್ತಿಲ್ಲ. ಇಂದು ನಮಗೆ ಆಶಾದಾಯಕವಾದ ಭರವಸೆಯನ್ನೀಯುತ್ತಿರುವುದು ಹವ್ಯಾಸಿ ರಂಗಭೂಮಿ.

ವೃತ್ತಿ ನಾಟಕಗಳು ಅತಿ ಸಾಮಾನ್ಯ ದರ್ಜೆಗಿಳಿದುದು ಹವ್ಯಾಸೀರಂಗಭೂಮಿಯ ಬೆಳವಣಿಗೆ ಚಾಲನೆಯನ್ನು ಕೊಟ್ಟಿತೆನ್ನಬಹುದು. ಕೈಲಾಸಂರವರ 'ನಂಕಂಪ್ನಿ' ಕಾರಂತರ 'ನಾಟಕವೆಂಬ ನಾಟಕ', ಶ್ರೀರಂಗರ 'ಸಂಪುಷ್ಟ ರಾಮಾಯಣ'ಗಳು ಕಂಪನಿ ನಾಟಕಗಳ ವೈಚಿತ್ರ್ಯಗಳಿಗೆ ಕನ್ನಡಿ ಹಿಡಿದಿವೆ. ಬುದ್ಧಿಜೀವಿಗಳಿಗೆ ಇವು ತೃಪ್ತಿಯನ್ನು ಕೊಡದೇ ಹೋದಾಗ ಅವರು ಹವ್ಯಾಸಿ ರಂಗಭೂಮಿಯ ಕಡೆಗೆ ತಿರುಗಿದರು.

ಸಾಮಾಜಿಕ ಸಮಾರಂಭಗಳು ಸಾಹಿತ್ಯ ಸಮ್ಮೇಳನಗಳು ಸಭೆಗಳು ಶಾಲಾ ಕಾಲೇಜುಗಳ ಉತ್ಸವಗಳು ನಾಟಕಸ್ಪರ್ಧೆಗಳು ಈ ಮೊದಲಾದ ಸಂದರ್ಭಗಳು ಹವ್ಯಾಸಿ ರಂಗಭೂಮಿಯ ಬೆಳವಣಿಗೆ ಅವಕಾಶ ಕಲ್ಪಿಸಿಕೊಟ್ಟವು. ಇವುಗಳಿಗಾಗಿಯೇ ನಾಟಕಗಳನ್ನು ರಚಿಸುವವರ ಸಂಖ್ಯೆಯೂ ಬೆಳೆಯಿತು. ಕನ್ನಡ ನಾಟಕ ಪಿತಾಮಹ ಕೈಲಾಸಂ ಅವರ ಹೆಸರು ಇಲ್ಲಿ ಮೊದಲು ಉಲ್ಲೇಖಿಸಬೇಕಾದುದು. ಅನಂತರ ಅನೇಕ ನಾಟಕಕಾರರು ಹವ್ಯಾಸಿ ರಂಗಭೂಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡೇ ಬರೆಯತೊಡಗಿದರು ಪಾಶ್ಚಾತ್ಯ ನಾಟಕಗಳ ಪ್ರಭಾವ ಗಾಢವಾಗಿದ್ದರೂ ಅವುಗಳನ್ನು ನಮ್ಮ ಪರಿವೇಶಗಳಿಗೆ ಅನ್ವಯಿಸುವುದರಲ್ಲಿ ಅನೇಕರು ಯಶಸ್ವಿಗಳಾದರು. ಈಗಲೂ ಅಂತಹ ನಾಟಕಕಾರರನೇಕರು ಯಶಸ್ವಿಗಳಾದ ಕೃತಿಗಳನ್ನು ಕೊಡುತ್ತಿದ್ದಾರೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ಸಂಘಟಿತರಾಗುತ್ತಿರುವ ಕಲಾವಿದರಿಂದ ಕಲಾಸಂಘಗಳಿಂದ ಹವ್ಯಾಸಿ ರಂಗಭೂಮಿ ಮುನ್ನಡೆಯುತ್ತಿದೆ. ಇದರ ಅತಿ ಸಂಕ್ಷಿಪ್ತ ವಿವೇಚನೆಗೂ ಇಲ್ಲಿ ಕೈ ಹಾಕಿದೆ. ಒಟ್ಟಿನಲ್ಲಿ ಹೇಳಬಹುದಾದರೆ ನಮ್ಮ ರಂಗಭೂಮಿಯ ಭವಿಷ್ಯಕ್ಕೆ ಊರುಗೋಲಾಗಿದೆ ಇಂದಿನ ಹವ್ಯಾಸೀರಂಗಭೂಮಿ. ಜಾನಪದರಂಗಭೂಮಿಯೂ ಜಾಗ್ರತಗೊಳ್ಳುತ್ತಿದೆ: ವೃತ್ತಿರಂಗಭೂಮಿಯೂ ಹಿಂದಿನ ಉಜ್ವಲ ಪರಂಪರೆಯನ್ನು ಕಂಡು ಎಚ್ಚರಗೊಳ್ಳುವಂತಾದರೆ ಕನ್ನಡ ರಂಗಭೂಮಿ ಮತ್ತೊಮ್ಮೆ ಈ ಮೂರು ಮುಖದಿಂದ ಮುನ್ನಡೆಯುವುದು ಅಸಂಭವವಲ್ಲ. ●



# ಬಯಲಾಟದಿಂದ ಇಂದಿನ ರಂಗಭೂಮಿಗೆ

— ಪ್ರೊ. ಎಂ. ಎಸ್. ಸುಂಕಾಪುರ

> ಮನೋರಂಜನೆಯೊಂದಿಗೆ ನೀತಿಯನ್ನು ಬೋಧಿಸಿ ಜನ ಮನವನ್ನು ತಿದ್ದುವಲ್ಲಿ ಸಹಾಯಕವಾಗಿದ್ದ ಈ ಬಯಲಾಟ ಇಂದು ಕಣ್ಮರೆಯಾಗುತ್ತಲಿದೆ.

ಕಲೆಗಳನ್ನು ಸಾಮಾನ್ಯವಾಗಿ ಎರಡು ವಿಧವಾಗಿ ವಿಂಗಡಿಸುವದುಂಟು: ಒಂದು ದೇಸಿ, ಇನ್ನೊಂದು ಮಾರ್ಗ. ದೇಸಿ ಶ್ರೀಸಾಮಾನ್ಯರ ಸೊತ್ತು; ಮಾರ್ಗ ಪಂಡಿತರ ಪಡಿಮೂಲಿ. ಇವೆರಡೂ ಭಿನ್ನವೆನಿಸಿದರೂ ಒಂದಕ್ಕೊಂದು ವಿರೋಧವಾಗಿಲ್ಲ. ದೇಸಿ ನಿಸರ್ಗದತ್ತ ಕೊಡುಗೆ. ಅದು ಜನತೆಯ ಸ್ವಯಂಸೂರ್ತಿಯಿಂದ ಉದ್ಭವಿಸಿದರೆ, ಮಾರ್ಗ ಶಾಸ್ತ್ರದ ತೊಡಕು ಹಾಕಿಕೊಂಡು ನಿರ್ಮಾಣಗೊಳ್ಳುತ್ತದೆ. ಪ್ರಪಂಚದ ಕಲೆಗಳನ್ನು ಅಭ್ಯಾಸ ಮಾಡಿನೋಡಿದರೆ ಒಂದು ಮಾತು ಸ್ಪಷ್ಟವಾಗುತ್ತದೆ. ಮೊದಮೊದಲು ಹುಟ್ಟಿದ್ದು ದೇಸಿ, ನಂತರ ಆ ದೇಸಿಯೇ ಮಾರ್ಪಟ್ಟು ಮಾರ್ಗವೆನಿಸಿಕೊಂಡಿದೆ. ಸಾಹಿತ, ಸಂಗೀತ, ಮೂರ್ತಿಶಿಲ್ಪ, ಚಿತ್ರ, ಕಸೂತಿ, ರಂಗವಲ್ಲಿ ಮುಂತಾದ ಸ್ವಪ್ರಾತ್ಮಕ ಕಲೆಗಳು ನಮ್ಮಲ್ಲಿ ಮೊದಲಿನಿಂದಲೂ ಇದ್ದುದು ತಿಳಿದುಬಂದಿದೆ. ಅವು ಜನತೆಯ ಮನವನ್ನು ಆಕರ್ಷಿಸಿ ಆನಂದವನ್ನು ನೀಡುತ್ತಲಿವೆ. ಈ ಕಲೆಗಳ ಮೂಲ ತೋಚದು. ಅವು ಬೆಳೆದು ಬಂದ ರೀತಿಯೂ ಮಸಮಸಕು. ಆದರೆ ಈ ಕಲೆಗಳು ಎಲ್ಲೆಲ್ಲಿ, ಯಾವ ರೀತಿಯಲ್ಲಿ ನಿಂತಿವೆ ಎಂಬುದನ್ನು ಗುರುತಿಸಬಹುದಾಗಿದೆ.

ದೇಸೀಯ ಕಲೆಯೇ ಜನಪದ ಕಲೆ. ಅದು ಮೊಟ್ಟಮೊದಲು ಹುಟ್ಟಿದ್ದು ಪ್ರಕೃತಿಯ ಅನುಕರಣದಿಂದ. ಆದ್ದರಿಂದಲೇ ಅದನ್ನು ನೈಸರ್ಗಿಕ ಕಲೆಯೆಂದು ಕರೆಯಲಾಗಿದೆ. ಅದು ಆಯಾ ಜನಾಂಗದ ಭಾವನೆ, ಅಭಿರುಚಿಗೆ ಅನುಗುಣವಾಗಿ ಮಾರ್ಪಾಡು ಹೊಂದಿ ಬೆಳೆದು ಬಂದಿದೆ. ಈ ದೇಸೀಯ ಕಲೆಗೆ ಕಟ್ಟುನಿಟ್ಟು ಹೆಚ್ಚಾಗಲು ಮಾರ್ಗ ಹುಟ್ಟಿಕೊಂಡಿತು. ದೇಸಿಗೆ ಭಾವನೆ ಮೂಲ; ಮಾರ್ಗಕ್ಕೆ ಪ್ರಜ್ಞೆ ಆಧಾರ. ಆದ್ದರಿಂದಲೇ ದೇಸಿ ಸುಲಭವಾಗಿ ಸರಳವಾಗಿ ಕಾಣಿಸುತ್ತದೆ; ಮಾರ್ಗ ಜಟಿಲವಾಗಿ ಕ್ಲಿಷ್ಟವಾಗಿ ತೋರುತ್ತದೆ. ದೇಸಿಯೇ ಆಗಲಿ, ಮಾರ್ಗವೇ ಆಗಲಿ, ಯಾವುದು ತೀವ್ರವಾಗಿ ನೇರ ಪರಿಣಾಮವನ್ನು ಮಾಡುವದೋ ಅದೇ ದಿವ್ಯಕಲೆ ಎನಿಸುವದು. ಮನದ ಪ್ರಚೋದನೆಗೆ ಒಳಪಟ್ಟು ಬೆಳೆದು ಬರುವದೇ ಕಲೆಯ ಗುಣ. ಭಾವನೆ, ಆಸಕ್ತಿ, ಅನುಭವ ಮನಸ್ಸನ್ನು ಪ್ರಚೋದಿಸುವ ಮಹಾಶಕ್ತಿಗಳಾಗಿವೆ. ಆ ಮಾನಸಿಕ ಆವರಣದಲ್ಲಿಯೇ ಪ್ರತಿಯೊಂದು ಕಲೆ ಸಹಜವಾಗಿ ಅರಳಿ ನಿಲ್ಲುತ್ತದೆ.

## ಕಲೆಯ ಉಗಮ

ಕನ್ನಡನಾಡಿನ ಕಲೆಗಳೆಲ್ಲ ಮತಧರ್ಮಗಳ ಆವರಣದಲ್ಲಿಯೇ ಪೋಷಿತಗೊಂಡು ಬೆಳೆದುಬಂದಿವೆ. ಕಲಾಕಾರನ ಹೃದಯದಿಂದ ಹೊರಬರುವ ಚೆಲುವಿನ ಚೈತನ್ಯ ರಸಧಾರೆಯಾಗಿ ಹರಿದಾಗ ಆನಂದ ಮೂಡುತ್ತದೆ. ಈ ಮಾತನ್ನು ಮನದಲ್ಲಿಟ್ಟುಕೊಂಡೇ ನಾವು ನಾನಾ ಬಗೆಯ ಕಲೆಗಳನು ಪರಾಮರ್ಶಿಸುವದು ಒಳಿತು. ಮತಧರ್ಮಗಳಿಂದ ಪ್ರಭಾವಿತವಾದ ನಮ್ಮ ನಂಬಿಗೆ, ಆಚಾರವಿಚಾರಗಳು ನಮ್ಮ ಜನತೆಯ ಸಂಸ್ಕೃತಿಯನ್ನು ಪ್ರಕಟಗೊಳಿಸುತ್ತವೆ. ನಮ್ಮ ನಾಡಿನ ಕಲೆಗಳಲ್ಲಿ ಆ ಶಿಷ್ಟಾಚಾರದ ಸಂಕೇತ, ಆಸೆ, ಗುರಿ ಹುದುಗಿಕೊಂಡಿರುವದುಂಟು. ಬಹುಕಾಲದಿಂದಲೂ ನಡೆದು ಬಂದಿರುವ ಕಲೆಗಳು ನಮ್ಮ ಸುದೀರ್ಘ ಸಂಸ್ಕೃತಿಯ ಅಂಗಗಳು. ಅಂಗಗಳನ್ನು ಬಿಟ್ಟು ಅಂಗಿಯಿಲ್ಲ. ಕಲಾವಿಕಾಸಕ್ಕೆ ಮೂಲ ಕಾರಣ ಪ್ರೇರಣೆ. ಅದಿಲ್ಲದ ಕಲೆ ಸಪ್ಪೆ ಸಪ್ಪೆ.

ನಾಟ್ಯವೊಂದು ಸಾಮೂಹಿಕ ಕಲೆ. ಅನೇಕ ಕಲೆಗಳು ಒಂದುಗೂಡಿ ನಾಟ್ಯವನ್ನು ನಿರ್ಮಿಸಿವೆ. ಈ ನಾಟಕ ಕಲೆಯ ಸ್ವರೂಪ ತಿಳಿಯಬೇಕಾದರೆ ಅದರಲ್ಲಿ ಅಡಕವಾಗಿರುವ ಕಲೆಗಳನ್ನು ಗಮನಿಸಬೇಕು. ಸಂಗೀತವಿಲ್ಲದೆ ಆಟ ಹುಟ್ಟದು, ನಾಟಕ ಬೆಳೆಯದು; ರಂಗಭೂಮಿ ಕಾಣಿಸದು. ಸಂಗೀತದಲ್ಲಿ ನೃತ್ಯ, ಗೀತ, ವಾದ್ಯಗಳ ಸಮ್ಮೇಳನ ಆಗಿದೆ. ನೃತ್ಯ ಮಾನವನ ಪ್ರಥಮ ಕಲೆ. ಮಾನವನು ತನಗೆ ಹರ್ಷವೆನಿಸಿದಾಗ ಮಾಡಿದುದು ಕುಣಿತ. ಆ ಸಮಯಕ್ಕೆ ಆತ ಬಾಯಿ ಬಿಟ್ಟುದೆ ಗೀತ. ಆ ಗೀತ ನೃತ್ಯಕ್ಕೆ ಆತನ ನಿಯತ ಹೆಜ್ಜೆ ತಾಳವಾಗಿ ಪರಿಣಮಿಸಿರಬೇಕು. ತಾಳ ಮೇಳವಾಗಿ ಬಂದಂಥವೇ ವಾದ್ಯಗಳು. ಮಾನವನು ತನ್ನ ತೃಪ್ತಿ–ಅತೃಪ್ತಿ ಆಸೆ-ಆಕಾಂಕ್ಷೆಗಳನ್ನು ಪ್ರಕಟಪಡಿಸುವಲ್ಲಿ ನೃತ್ಯಗೀತ-ವಾದ್ಯ ಸಮ್ಮೇಳನ ನೆರವೇರಿಸುತ್ತ ಬಂದನು. ಮೂಲ ಮಾನವನ ಕುಣಿತದ ಭಂಗಿ ಅವನ ಮನೋಭಾವನೆಗೆ ಹಿಡಿದ ಕನ್ನಡಿ. ಭಾವಕ್ಕೆ ಅನುಗುಣವಾದ ಗತಿ ಅವನ ಕುಣಿತದಲ್ಲಿ ಕಾಣಿಸಲು ಕಾರಣವಿಲ್ಲದಿಲ್ಲ. ಭಾವ ತೀಕ್ಷ್ಣವಾದಾಗ ಕುಣಿತ ಚುರುಕಾಗುತ್ತದೆ. ಭಾವ ಪ್ರಶಾಂತವಾದಾಗ ಕುಣಿತ ಲಾಸ್ಯವಾಗಿ ಮೆರೆಯುತ್ತದೆ. ಕುಣಿತ ಎಂತಹದೇ ಇರಲಿ, ಹೇಗೆ ಇರಲಿ; ಕುಣಿಯುವವನಲ್ಲಿ ಸ್ಫೂರ್ತಿ ಉಂಟಾದಾಗ ಕುಣಿಯುವದೇ ಕಾಯಕವಾಗುತ್ತದೆ. ಒಬ್ಬನ ಕುಣಿತ ಇನ್ನೊಬ್ಬನ ಮೇಲೆ ಪ್ರಭಾವ ಬೀರುತ್ತದೆ. ಪರಸ್ಪರ ಪ್ರಭಾವದಿಂದ ನಿತ್ಯನೂತನವಾಗಿ ಬೆಳೆದಿರುವ ಈ ಆನಂದದಾಯಕ ನೃತ್ಯವೇ ಕಲೆ ಎನಿಸಿಕೊಂಡಿದೆ. ಅದು ಮೊದಲಿಗೆ ಜನಪದ ನೃತ್ಯ ಎನಿಸಿಕೊಂಡಿತು: ನಂತರ ಶಾಸ್ತ್ರದ ಕ್ರಮ ಬೆರೆತು ಇದೇ ಅಭಿಜಾತ ಕಲೆಯಾಗಿ ಕಂಗೊಳಿಸಿತು.

ಜಾನಪದದಲ್ಲಿ ಸಾಮೂಹಿಕ ನೃತ್ಯವೇ ಹೆಚ್ಚು. ಸಮೂಹ ನೃತ್ಯಕ್ಕೆ ಮುಖ್ಯವಾಗಿ ಬೇಕಾದುದು ಹೊಂದಿಕೆ, ತಾಳಮೇಳ. ಈ ಹೊಂದಿಕೆಗೆ ಎಲ್ಲಾದರೂ ಭಂಗ ಬಂದರೆ ಮಾಡಿದೆಲ್ಲ ಕೇಡು. ಜನಪದ ನೃತ್ಯದಲ್ಲಿ ಭಾಗಿಯಾದವನ ವ್ಯಕ್ತಿತ್ವಕ್ಕೆ ಬೆಲೆ ಕಡಿಮೆ. ಅಲ್ಲಿ ನೃತ್ಯಗಾರ ತನ್ನನ್ನೇ ತಾ ಮರೆತು ಕುಣಿತದ ಗುಂಗಿನಲ್ಲಿ, ಸಮೂಹದಲ್ಲಿ ಒಂದಾಗಿ ಬಿಡುತ್ತಾನೆ. ಕುಣಿದದ್ದೆಲ್ಲ ಕುಣಿತವಾಗುತ್ತದೆ. ಭಾವಾವೇಶ ಅದನ್ನು ಹೇಗೋ ಹಿಡಿದು ನಿಲ್ಲಿಸುತ್ತದೆ. ಆದರಿಂದಲೇ ಜನಪದ ನೃತ್ಯ ನಾಡಿನ ಮನೋಭಾವವನು ಕೆರಳಿಸಿ, ಒಕ್ಕಟ್ಟಿನಲ್ಲಿ ಹೊರಳಿಸಿ, ಸಾಮಾಜಿಕ ಸ್ಥಿತಿಗತಿಗಳನು ತಿಳಿಸುವ ಸಾಧನವಾಗಿ ಬಿಡುವದು. ಅದು ಜನತೆಯ ಸೊತ್ತು. ಬಾಳಿನ ಉಸಿರು; ಸಂಸ್ಕೃತಿಯ ಕುರುಹು. ಇಂತಹ ನೃತ್ಯ ಜೀವಂತ ಕಲೆ.

ನೃತ್ಯದೊಡನೆ ಮೇಳವಿಸಿದ ಗೀತ ಭಕ್ತಿಯ ಹೊನಲು. ದೇವನನ್ನೋ, ದೈವವನ್ನೋ ನಂಬಿ ಶ್ರದ್ಧೆಯಿಂದ ಆರಾಧನೆ ಮಾಡುವಲ್ಲಿ ಭಕ್ತಿ ಮೂಡುವದು ಸ್ವಾಭಾವಿಕ. ಆ ಭಕ್ತಿಯ ಆವೇಶದಲ್ಲಿ ಗೀತ ಹಲವಾರು ಮುಖಗಳನು ಧರಿಸಿ ಹೊರಹೊಮ್ಮುತ್ತದೆ. ನೃತ್ಯಗೀತಗಳ ಸಮತೋಲ ಸಮನ್ವಯಕ್ಕೆ ಬೇಕಾದುದು ಶ್ರುತಿ. ಮೊದ ಮೊದಲು ಆ ಕಾರ್ಯವನ್ನು ಸೋರೆ ಕಾಯಿಯ ಪುಂಗಿ ಈಡೇರಿಸಿತು. ಕುಣಿತಗಾರರ ಕೊರಳ ಹಾರ, ಕಾಲಂದುಗೆ. ಕೈ ಬಳೆ ಮುಂತಾದುವು ತಾಳ ಹಾಕುತ್ತ ಬಂದವು. ಅವುಗಳ ಮೇಳಕ್ಕೆ ಪ್ರತಿಯಾಗಿ ವಿವಿಧ ವಾದ್ಯಗಳೂ ಹುಟ್ಟಿಕೊಂಡಿರಲು ಸಾಕು. ಹೀಗೆ ಬೆಳೆದು ನಿಂತುದೇ ಸಂಗೀತ ನೃತ್ಯವೆಂದೂ, ಗೀತನೃತ್ಯವೆಂದೂ, ವಾದ್ಯ ಮೇಳವೆಂದೂ ಬೆಳಕಿಗೆ ಬಂದಿದೆ.

## ವಿವಿಧ ಬಗೆಯ ನೃತ್ಯಗಳು

ಇಂತಹ ನೃತ್ಯಗಳು ಕನ್ನಡನಾಡಿನಲ್ಲಿ ಸಾಕಷ್ಟು ಹುಟ್ಟಿವೆ. ವೈವಿಧ್ಯಪೂರ್ಣವಾಗಿ ಬೆಳೆದು ಬಂದಿದೆ.

ಸಾಮಾನ್ಯ ನೃತ್ಯಗಳು ಎಲ್ಲ ಕಡೆ ಇದ್ದರೂ ಒಂದೊಂದು ಪ್ರದೇಶದಲ್ಲಿ ಒಂದೊಂದು ವಿಶಿಷ್ಟ ರೀತಿಯ ನೃತ್ಯಕ್ಕೆ ಪ್ರಾಶಸ್ತ್ಯ ಸಿಕ್ಕಿದೆ. ಕರಾವಳಿ ಪ್ರದೇಶ ಕೂಟನೃತ್ಯಗಳಿಗೆ ಮೊದಲಿನಿಂದಲೂ ಹೆಸರಾಗಿದೆ. ಅಲ್ಲಿ ಸುಗ್ಗಿಯ ಕುಣಿತಕ್ಕೆ ಅಗ್ರಸ್ಥಾನ. ತುಳುನಾಡಿನಲ್ಲಿ ಭೂತದ ಕುಣಿತಗಳಿಗೆ ಪ್ರಾಧಾನ್ಯವಿದೆ; ಹರಿಜನ ಗಿರಿಜನ ದೆವ್ವದ ಆರಾಧನೆಯ ಸಮಯದಲ್ಲಿ ಕುಣಿಯುತ್ತಾರೆ. ಚಂಡೆಯಂತಹ ತೊಗಲು ವಾದ್ಯ ಈ ಈ ಕುಣಿತಕ್ಕೆ ರೌದ್ರ ಭಾವವನ್ನು ತಂದುಕೊಡುವದು. ನಾಗಮಂಡಲ ನೃತ್ಯ ತುಳುವರ ಕೊಡುಗೆ. ಕಾರವಾರ ಕಡೆಯ ಸುಗ್ಗಿಯ ಕುಣಿತ, ಪಾತರದವರ ಲಾಸ್ಯ, ಮೈಸೂರು ಕಡೆಯ ರಂಗದ ಕುಣಿತ, ಬಯಲು ಸೀಮೆಯ ಪುರವಂತರ ಕುಣಿತ. ಕಲಬುರ್ಗಿಯ ಅಲಾವಿ ನೃತ್ಯ, ಬಳ್ಳಾರಿಯ ಕೋಲಾಟ, ಮನೋಹರವಾಗಿ ಬೆಳೆದು ಬಂದಿವೆ. ಈ ವಿವಿಧ ಬಗೆಯ ನೃತ್ಯಗಳೊಡನೆ ಬರುವ ಗೀತಕ್ಕೆ ವಿವರಣೆಕೊಡುವ ಪ್ರಸಂಗ ಬಂದಲ್ಲೆಲ್ಲ ಬಯಲಾಟದ ಉಗಮವನ್ನು ನಾವು ಅರಿಯುತ್ತೇವೆ. ರಂಗಭೂಮಿಯ ಕಲ್ಪನೆ ಮೂಡುವದಕ್ಕೆ ಎಷ್ಟು ಕಾಲ ಹಿಡಿಯಿತೋ ಹೇಳಲಿಕ್ಕೆ ಆಗದು.

ಹಳ್ಳಿಯ ಗುಡಿಗುಂಡಾರಗಳು ಭಾರತೀಯ ಸಾಸ್ಕೃಂತಿಕ ಚಟುವಟಿಕೆಗಳಿಗೆ ಮೂಲ ಕೇಂದ್ರಗಳಾಗಿವೆ. ಧರ್ಮನೀತಿ, ತತ್ವಗಳ ಪ್ರಸಾರ ಆದುದು ಅಲ್ಲಿಂದಲೇ. ಸಂಗೀತ, ಸಾಹಿತ್ಯ, ಆಟನೋಟ–ಎಲ್ಲವೂ ಹುಟ್ಟಿ ಬೆಳೆಯುವದಕ್ಕೆ ದೇವಸ್ಥಾನ ಸ್ಫೂರ್ತಿ ನೀಡಿದೆ. ಧರ್ಮ ನಮ್ಮ ಸಂಸ್ಕೃತಿಯ ಜೀವ ಜೀವಾಳ. ಅದನ್ನು ಕಟ್ಟಿ ಕಾಪಾಡಿಕೊಳ್ಳಲು ನಮ್ಮ ನಾಡಿನ ಕಲಾಕಾರರು ಹೆಣಗಿದ್ದಾರೆ ಹಾಡಿ, ಕುಣಿದು, ಮಾತಾಡಿ ಅವರು ಜನತೆಯ ಸೇವೆಗಾಗಿ ದುಡಿದಿದ್ದಾರೆ. ಕೀರ್ತನಕಾರರು, ಸಾರುವ ಅಯ್ಯನವರು, ಕರಪಲ್ಲವದ ಕರಪಾಲರು, ಹರಿದಾಸರು, ವೇಷಗಾರರು, ಲಾವಣಿಕಾರರು ವಿವಿಧ ಬಗೆಯಲ್ಲಿ ಧರ್ಮ ಪ್ರಚಾರ ಕೈಕೊಳ್ಳುವ ಪೂರ್ವದಲ್ಲಿ ಈ ದೇವಸ್ಥಾನಗಳಲ್ಲಿಯೇ ತರಬೇತಿ ಹೊಂದಿದರೆಂದು ಹೇಳಿದರೆ ತಪ್ಪಾಗದು.

ದೇವರು ದೊಡ್ಡವರು. ಸಕಲ ಜಗತ್ತನ್ನು ನಿರ್ಮಿಸಿ, ಚರಾಚರ ಸೃಷ್ಟಿಯನ್ನು ರಕ್ಷಿಸಿ, ಭಕ್ತರನ್ನು ಕಾಪಾಡುವದು ದೇವರ ಕಾರ್ಯವೆಂದು ನಮ್ಮ ಜನ ಮೊದಲಿನಿಂದಲೂ ನಂಬಿಕೊಂಡು ಬಂದಿದೆ. ಅಂತಹ ದೇವದೇವನ ತೃಪ್ತಿಗಾಗಿ ನಮ್ಮ ಜನ ಬಲಿದಾನಕ್ಕೂ ಸಿದ್ಧರು. ಅವನನ್ನು ಸಮಾಧಾನ ಪಡಿಸಲು ಪೂಜೆ ಮಾಡಿ, ನೈವೇದ್ಯ ನೀಡಿ, ಹಾಡಿಕುಣಿದು ತಾವೂ ತೃಪ್ತಿ ಪಡೆದರು. ದೇವರಂತೆ ತಾವಾಗಲು ಯತ್ನಿಸಿದರು. ತಮ್ಮಂತೆ ದೇವರೆಂದು ಭಾವಿಸಿದರು. ಅವನೂ ಸಾಮಾನ್ಯರಂತೆ ಸಂಸಾರಿಕನೆಂದು ಬಗೆದು ತಂತಮ್ಮ ಅಭಿರುಚಿಗೆ ತಕ್ಕಂತೆ ಕಥೆ ಕಟ್ಟಿ ಧಾರ್ಮಿಕ ಗ್ರಂಥಗಳ ಸೃಷ್ಟಿ ಮಾಡಿದರು. ಅಂತಹ ದೇವರು ಗುಡಿಯಲ್ಲಿ ಸುಮ್ಮನೆ ಕುಳಿತರೆ ಭಕ್ತರಿಗೆ ಸಮಾಧಾನವಾಗಿರಲಿಕ್ಕಿಲ್ಲ. ದೇವರ ಪ್ರತೀಕವೆನ್ನುವ ಉತ್ಸವ ಮೂರ್ತಿಗಳನ್ನು ನಿರ್ಮಿಸಿ ಅವನ್ನೇ ಹೊತ್ತುಕೊಂಡು ಹಾಡಿ ಕುಣಿದು ತೃಪ್ತಿ ಪಡೆಯತೊಡಗಿರಬೇಕು. ತಮ್ಮ ಕೂಡ ದೇವರೂ ಮಾತಾಡಬಲ್ಲನೆಂಬ ಭಾವನೆಯಿಂದ ಆ ದೇವಮೂರ್ತಿಗಳನ್ನು ಮಾತಾಡಿಸಿ ಉತ್ತರ ಪಡೆಯಲು ಯತ್ನಿಸಿರಬೇಕು. ದೇವಲೋಕ ನರಲೋಕಗಳ ಸಂಬಂಧ ಕಲ್ಪಿಸಿ ಕಥೆ, ಸಂಭಾಷಣೆ, ನೃತ್ಯಗೀತ, ವಾದ್ಯಗಳನ್ನೊಳಗೊಂಡ ಒಂದು ಮೇಳವನ್ನೇ ಕಟ್ಟಿದರು. ಇದರ ಪರಿಣಾಮವಾಗಿ ದೇವರ ಮೂರ್ತಿಗಳು ಗೊಂಬೆಗಳಾಗಿ ಪರಿಣಮಿಸಿ ಹಾಡಿ ಕುಣಿಯ ಹತ್ತಿದವು. ಇತರರೊಡನೆ ಸಂಭಾಷಣೆ ಮಾಡಲು ಅಣಿಯಾದವು. ಇದೇ ಗೊಂಬೆಯಾಟಕ್ಕೆ ಆದಿಯೆನಬೇಕು. ಈ ದೇವರ ಗೊಂಬೆಗಳು ಮಾನವರ ಕೈಗೊಂಬೆ ಆದುದೇನೋ ನಿಜ. ಮಾನವನು ಈ ಗೊಂಬೆಗಳಿಗೆ ಸೂತ್ರ ಹೆಣೆದು ಕುಣಿಸತೊಡಗಿದರೂ, ತಾನೊಬ್ಬ ಪರಮಾತ್ಮನ ಕೈಗೊಂಬೆಯೆಂಬುದನ್ನು ಆತ ಮರೆಯಲಿಲ್ಲ. ಗೊಂಬೆ ಆಡಿಸುವಲ್ಲಿ ಸೂತ್ರ ಮಹತ್ವಪೂರ್ಣವಾದುದು. ಆದ್ದರಿಂದಲೇ ಪರಮಾತ್ಮನಿಗೂ, ಗೊಂಬೆಯಾಟದ ಭಾಗವತನಿಗೂ ಸೂತ್ರಧಾರ ಎನ್ನುವ ಹೆಸರು ಬಳಕೆಗೆ ಬಂದಿತು. ಈ ಪದ ಸಂಸ್ಕೃತ ನಾಟಕಗಳಲ್ಲಿಯೂ ಬಳಕೆಯುಳ್ಳದೆ. ನಿಜವಾಗಿ ಅದು ಸೂತ್ರದ ಆಟವಲ್ಲ. ಆದರೂ ಸೂತ್ರಧಾರ ಬರುತ್ತಾನೆ. ಇದನ್ನು ಗಮನಿಸಿದರೆ ಸಂಸ್ಕೃತ ನಾಟಕಗಳಿಗೆ ಮೂಲ ಪ್ರಚೋದನೆ ನೀಡಿದ್ದು ಗೊಂಬೆಯಾಟವೆಂದು ಹೇಳಬೇಕಾಗುತ್ತದೆ. ಜನಪದ ರಂಗಭೂಮಿಯೇ ಅಭಿಜಾತ ನಾಟಕರಂಗಭೂಮಿಗೆ ಕಾರಣವೆಂಬ ಮಾತನ್ನೂ ಒಪ್ಪಬೇಕಾಗುತ್ತದೆ,




ಈ ಸಲ ದೀಪಾವಳಿ ಹೊಸ ಬಗೆಯಿಂದ ಆಚರಿಸಬೇಕೆಂದು ಪಟಾಕ್ಷಿಹಾರವೇ ಹಾಕಿದ್ದೇನೆ ಸಾರ್, ತಡೆಯಿರಿ ಸ್ವಲ್ಪ ಬೆಂಕಿ ತಾಗಿಸ್ತೇನಿ.

## ವೈಶಿಷ್ಟ್ಯಪೂರ್ಣ ಜನಪದ ರಂಗಮಂಟಪ

ಸೂತ್ರಧಾರನು ಗೊಂಬೆಗಳನ್ನು ಕುಣಿಸುತ್ತ ಗೀತ ಮಾತುಗಳನ್ನು ತಾನೇ ಹೇಳುತ್ತ ಪ್ರಸಂಗ ಬಂದಾಗಲೆಲ್ಲ ಗೊಂಬೆಯ ಕೂಡ ತಾನೂ ಕುಣಿಯುತ್ತಾನೆ. ಕಾಲಕ್ರಮೇಣ ಗೊಂಬೆಗಳ ಸ್ಥಾನದಲ್ಲಿ ತೊಗಲು ಗೊಂಬೆಗಳನ್ನು ನಿಲ್ಲಿಸಿ ಸೂತ್ರಧಾರ ತನ್ನ ಕಾರ್ಯವನ್ನು ಪೂರೈಸಿರಬೇಕು. ದೇವಸ್ಥಾನ ಪ್ರೇಕ್ಷಕರಿಗೆ ಕಿರಿದೆನಿಸಿದಾಗ, ಹೊರಬಯುಲಲ್ಲಿ ಎತ್ತರದ ಅಟ್ಟವನ್ನು ಕಟ್ಟಿ ಈ ಆಟಗಳನ್ನು ನಡೆಸತೊಡಗಿರಬೇಕು. ಅಂದಿನಿಂದ ಈ ಆಟಗಳು ಬಯಲಾಟವೆಂದು ಪ್ರಸಿದ್ಧಿ ಪಡೆದಿವೆ. ಆಟ ಬಯಲಿಗೆ ಬಂದರೂ ಭಾಗವತ ಅರ್ಥಾತ್ ಸೂತ್ರಧಾರ ಗುಡಿಯನ್ನು ಮರೆಯಲಿಲ್ಲ. ಅಟ್ಟವನ್ನೇರುವ ಪೂರ್ವದಲ್ಲಿ ಗುಡಿಯಲ್ಲಿ, ಇಲ್ಲದೆ ಬಣ್ಣದ ಮನೆಯಲ್ಲಿ ಮೊದಲ ಗಣಸ್ತುತಿ ಮಾಡಿ ಬಯಲಾಟ ಸಾಗಿಸುವ ರೂಢಿ ಇಂದಿಗೂ ಇದೆ. ಆಟ ಮುಗಿದ ಮೇಲೆ ಭಾಗವತ ಮಂ

ಮೂಡುತ್ತ ದೇವರ ಗುಡಿಗೆ ಸಾಗುವದು ಸಂಪ್ರದಾಯವಾಗಿದೆ. ಜನಪದ ಆಟಕ್ಕೆ ದೇವಾಲಯವೇ ಮೂಲ ಸ್ಥಾನವೆನ್ನುವದಕ್ಕೆ ಇನ್ನೊಂದು ಕಾರಣ ಕೊಡಬಹುದು. ಆಟದಲ್ಲಿ ದೇವಾಸುರರು, ಸಜ್ಜನ, ದುರ್ಜನರು ಇದ್ದವರೇ. ಗುಡಿಯೊಳಗೆ ದೇವರು ಇದ್ದಾನೆ; ಅವನ ಬಂಧು ಬಳಗ ಇದೆ. ಆ ಪಾತ್ರಗಳು ಪ್ರವೇಶಮಾಡುವಾಗ ಒಳಗಿಂದ ಬರುತ್ತವೆ. ದುಷ್ಟ ರಾಕ್ಷಸ ಪಾತ್ರಗಳು ಹೊರಗಿನಿಂದ ಬಂದು ಅಟ್ಟವನ್ನೇರುತ್ತವೆ. ಈ ಸಂಪ್ರದಾಯವನ್ನು ಇಂದಿಗೂ ಬಯಲಾಟದಲ್ಲಿ ಕಾಣುತ್ತೇವೆ. ಜನಪದ ರಂಗಮಂಟಪ ವೈಶಿಷ್ಟ್ಯಪೂರ್ಣವಾದುದು; ಅದು ಸಂಸ್ಕೃತ ರಂಗಸ್ಥಳಕ್ಕಿಂತಲೂ ಭಿನ್ನವಾಗಿದೆ. ಬಯಲಾಟದ ಅಟ್ಟ ಬಯಲು ನಾಟಕ ಗೃಹದಂತೆ ಇರುತ್ತದೆ. ಬೇಕಾದ ಕಡೆಯಿಂದಲಾದರೂ ಪ್ರೇಕ್ಷಕರು ನೋಡಬಹುದು. ಈ ಅಟ್ಟದ ರಚನೆ ಗ್ರೀಕ ರಂಗಭೂಮಿಗೆ ಸರಿಸಮಾನವಾಗಿದೆ. ಈ ಹೋಲಿಕೆಯ ಮೇಲಿಂದ ವಿಚಾರಿಸಿದರೆ ಕನ್ನಡ ಜನಪದ ಆಟ ಮೂಲ ದ್ರಾವಿಡ ಕಾಲದಿಂದಲೂ ಪ್ರಚಾರದಲ್ಲಿದ್ದು ದ್ರಾವಿಡರೊಡನೆ ಬಳುವಳಿಯಾಗಿ ಪರದೇಶದಿಂದ ಬಂದಿರಬೇಕೆನಿಸುತ್ತದೆ. ಅದು ಏನೇ ಇರಲಿ; ಕನ್ನಡ ಬಯಲಾಟ ಅಭಿಜಾತ ರಂಗಭೂಮಿಗೆ ಆಧಾರವೆನ್ನುವ ಮಾತು ಸ್ಪಷ್ಟ.

ನಿರ್ಜೀವ ಗೊಂಬೆಗಳಿಗಿಂತಲೂ ಸಜೀವ ಮಾನವರೇ ವೇಷಕಟ್ಟಿ, ವಿವಿಧ ಪಾತ್ರಗಳನ್ನು ಧರಿಸಿ ಆಟವಾಡಿದರೆ, ಆಟ ನೋಟಕ್ಕೆ ರಂಗು ಬರಬಲ್ಲುದೆಂಬುದನ್ನು ಆ ಮೇಲೆ ಜನತೆ ಅರಿತಿರಬೇಕು. ಆಗ ಇಂದಿನಂತೆ ಮಾನವರೇ ಪಾತ್ರಧರಿಸಲು ಮುಂದೆ ಬಂದಿರಬೇಕು. ಅಂದಿನಿಂದ ಜನಪದ ರಂಗಭೂಮಿ ವೈವಿಧ್ಯಪೂರ್ಣವಾಗಿ ಬೆಳೆದಿರಲು ಸಾಕು. ಕಾಲಕ್ರಮದಲ್ಲಿ ಎಷ್ಟು ಬಗೆಯ ಆಟಗಳು ಹುಟ್ಟಿಕೊಂಡವೋ ಏನೊ? ಅವುಗಳ ರೀತಿ ನೀತಿಗಳನ್ನು ಅರಿಯಲು ಆಧಾರವಿಲ್ಲ; ಹೊಸ ಹುಟ್ಟಿನೊಂದಿಗೆ ಕೆಟ್ಟುಹೋದ ನಾಟಕ ಪ್ರಕಾರಗಳೆಷ್ಟೊ? ತಿಳಿಯಲು ಲೆಕ್ಕವಿಟ್ಟುದು ಇಲ್ಲ. ಸಧ್ಯಕ್ಕೆ ಮಾತ್ರ ನಮ್ಮ ಕಣ್ಣ ಮುಂದಿರುವ ಆಟದ ಪ್ರಕಾರಗಳನ್ನು ತೋರಿಸಬಹುದು. ಆದರೆ ಅವೂ ಸಹ ವಿಜ್ಞಾನದ ಬಿರುಗಾಳಿಗೆ ಬೆದರಿ ಮಾಯವಾಗುವ ಸ್ಥಿತಿಯಲ್ಲಿವೆ. ಒಂದು ಕಾಲದಲ್ಲಿ ಅವು ಸಾಧಿಸಿದ ಪ್ರಗತಿ ವರ್ಣನಾತೀತ. ಸಂಸ್ಕೃತ ನಾಟಕಗಳು ಸಾಧಿಸದೇ ಇದುದನ್ನು ಈ ಬಯಲಾಟಗಳು ಸಾಧಿಸಿವೆ. ಕನ್ನಡದಲ್ಲಂತೂ ಜಾನಪದ ರಂಗಭೂಮಿಗೇ ಅಗ್ರಸ್ಥಾನವಿತ್ತು. ರಾಜಾಶ್ರಯವೂ ಅದಕ್ಕೇ ಸಿಕ್ಕಿರಬೇಕು. ಈ ಕಾರಣದಿಂದಲೇ ಕನ್ನಡದಲ್ಲಿ ನಾಟಕಗಳು ಹುಟ್ಟಿರಲಿಲ್ಲವೆಂದು ಹೇಳಬಹುದು.

ಕನ್ನಡ ಬಯಲಾಟಗಳಲ್ಲಿ ದೊಡ್ಡಾಟ, ಸಣ್ಣಾಟ ಎಂದು ಎರಡು ಪ್ರಕಾರ ಇವೆ. ದಶಾವತಾರ ಮತ್ತು ಯಕ್ಷಗಾನ ದೊಡ್ಡಾಟದ ಗುಂಪಿಗೆ ಸೇರುತ್ತವೆ; ಉಳಿದ ದಾಸರಾಟ, ಶರಣರಾಟ, ರಾಜಾನಾಟ, ರಾಧಾನಾಟ, ಶ್ರೀ ಕೃಷ್ಣ ಪಾರಿಜಾತ,ಸಂಗ್ಯಾಬಾಳ್ಯಾನ ಆಟ ಮುಂತಾದುವು ಸಣ್ಣಾಟದ ಗುಂಪಿಗೆ ಸೇರುತ್ತವೆ. ಯಾವ ಆಟವೇ ಆಗಿರಲಿ; ಅದು ಶ್ರೀಸಾಮಾನ್ಯರ ಮನೋರಂಜನೆಗೆ ಮೀಸಲಾದುವು. ಮನೋರಂಜನೆ ನೀಡುತ್ತಲೇ ನೀತಿಯನ್ನು ಬೋಧಿಸಿ ಜನಮನವನು ತಿದ್ದಲು ಅವು ಯತ್ನಿಸುತ್ತ ಬಂದಿವೆ.

## ಒಂದೇ ಮರದ ಎರಡು ರೆಂಬೆಗಳು

ಕೆಲವೆಡೆಯಲ್ಲಿ ದಶಾವತಾರದ ಆಟಕ್ಕೆ ದೊಡ್ಡಾಟವೆಂದು ಹೆಸರಿದೆ. ಈ ದೊಡ್ಡಾಟ ಮತ್ತು ಯಕ್ಷಗಾನ ಆಟಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಇವೆರಡೂ ಒಂದೇ ಮರದ ಎರಡು ರೆಂಬೆಗಳಂತೆ ಕಾಣುತ್ತವೆ. ಅವು ಪ್ರಾದೇಶಿಕವಾಗಿ ಬೆಳೆದುದೇ ಅವುಗಳಲ್ಲಿರುವ ಭಿನ್ನತೆಗೆ ಕಾರಣವಾಗಿರಬೇಕು. ಅವು ಹೊರ ಮೈಗೆ ಭಿನ್ನವಾಗಿ ಕಂಡರೂ ಸತ್ವದೃಷ್ಟಿಯಿಂದ ಒಂದೇ ಆಗಿವೆ. ಇವೆರಡೂ ಪ್ರಭೇದಗಳಲ್ಲಿ ವೈಷಮ್ಯಕ್ಕಿಂತ ಸಾಮ್ಯವೇ ಹೆಚ್ಚು. ಪೂರ್ವರಂಗ, ಪಾತ್ರ ಪರಿಚಯ, ವೇಷ ಭೂಷ, ರಸ, ಶೈಲಿ ಎರಡರಲ್ಲಿಯೂ ಒಂದೇ ಬಗೆಯಾಗಿವೆ. ಈ ಆಟಗಳ ವಸ್ತು ವೀರರಸ ಪ್ರಧಾನ. ಬಣ್ಣಗಾರಿಕೆಯಲ್ಲಂತೂ ಏನೂ ವ್ಯತ್ಯಾಸವಿಲ್ಲ. ದೊಡ್ಡಾಟದಲ್ಲಿ ಕಥೆಗಾರ, ಯಕ್ಷಗಾನದಲ್ಲಿ ಭಾಗವತ ಸೂತ್ರಧಾರನ ಕಾರ್ಯ ನಿರ್ವಹಿಸುತ್ತಾರೆ. ಹೆಸರು ಮಾತ್ರ ಭಿನ್ನ; ಕಾರ್ಯವೊಂದೇ. ಎರಡರಲ್ಲಿಯೂ ಹಾಸ್ಯಗಾರ ಇದ್ದಾನೆ– ಒಂದರಲ್ಲಿ ಸಾರಥಿ, ಇನ್ನೊಂದರಲ್ಲಿ ಹನುಮನಾಯಕ.

ಮುಖ್ಯ ವ್ಯತ್ಯಾಸ ಕಾಣುವದು ಹಾಡುಗಾರಿಕೆಯಲ್ಲಿ. ಸಂಗೀತ ಪದ್ಧತಿಯಲ್ಲಿ ಈಗ ಔತ್ತರೇಯ, ದಾಕ್ಷಿಣಾತ್ಯ ಎಂದು ಪ್ರಭೇದಗಳಿರುವಂತೆ, ಪೂರ್ವಕಾಲದಲ್ಲಿ ಯಕ್ಷಗಾನ, ಗಂಧರ್ವಗಾನ ಎಂದು ಇಬ್ಬಗೆಯ ಗಾನಭೇದಗಳು ಪ್ರಚಾರದಲ್ಲಿದ್ದವು. ಕಿನ್ನರರು, ಕಿಂಪುರುಷರು, ಯಕ್ಷರು, ಗಂಧರ್ವರು ದೇವತೆಗಳಲ್ಲಿ ಪ್ರಮುಖ ಪಂಗಡಕ್ಕೆ ಸೇರಿದವರು. ಇವರಿಗೆಲ್ಲ ದೊರೆ ದೇವೇಂದ್ರ. ಆತನು ರಂಭೆ, ಶಚಿಯರನ್ನೊಳಗೊಂಡು ರಾಮಾಯಣ ಕಥೆಯನ್ನು ನಟಿಸಿ ತೋರಿಸಿದನೆಂದು ಶಾಸ್ತ್ರದಲ್ಲಿ ಹೇಳಲಾಗಿದೆ. ಕಿನ್ನರರು, ಕಿಂಪುರುಷರು ವಾದ್ಯ ನುಡಿಸಿದರಂತೆ. ಯಕ್ಷರು, ಗಂಧರ್ವರು ಆ ನಾಟಕದಲ್ಲಿ ಗಾನ ಮಾಡಿದರಂತೆ. ಯಕ್ಷರು ಹಾಡಿದ್ದು ಯಕ್ಷಗಾನ, ಗಂಧರ್ವರು ಹಾಡಿದ್ದು ಗಂಧರ್ವಗಾನ. ಈ ಎರಡೂ ರಾಗರೀತಿಗಳನ್ನು ಬಳಸಿಕೊಂಡು ಮೂಲದ ಬಯಲಾಟ ಭಿನ್ನವಾಗಿರಬೇಕು. ಯಕ್ಷಗಾನ, ದೊಡ್ಡಾಟ ಎನ್ನುವ ಪ್ರಭೇದಗಳು ಒಡಮೂಡಿರಬೇಕು. ಇವೆರಡನ್ನೂ ನಮ್ಮ ಪೂರ್ವದ ಕವಿಗಳು ನಾಳ್ಪಗರಣಗಳೆಂದು ಹೆಸರಿಸಿದ್ದಾರೆ. ಅವರು ಯಕ್ಷಗಾನವನ್ನು 'ಯಕ್ಕಲಗಾಣ'ವೆಂದು ಕರೆದಿದ್ದಾರೆ. ದೊಡ್ಡಾಟದ ಹಾಡುಗಳಲ್ಲಿ ಗಂಧರ್ವಗಾನದ ಅಂಕುರ ಇರುವದನ್ನು ಈಗಲೂ ಕಾಣುತ್ತೇವೆ. ದೊಡ್ಡಾಟ ಇಂದು ಬಯಲು ಸೀಮೆಯನ್ನು ಆಶ್ರಯಿಸಿದ್ದರೆ ಯಕ್ಷಗಾನ ಬಯಲಾಟ ಕರಾವಳಿ ಪ್ರದೇಶದಲ್ಲಿ ತಳವೂರಿದೆ. ಮೊದಮೊದಲು ಇವು ನಾಡಿನ ತುಂಬೆಲ್ಲ ಪಸರಿಸಿದ್ದವು. ಯಕ್ಷಗಾನ ಆಟದಲ್ಲಿ ಹಾಡು ನಿರ್ದಿಷ್ಟ; ದೊಡ್ಡಾಟದಲ್ಲಿ ಮಾತು ನಿರ್ದಿಷ್ಟ. ಮೊದಲನೆಯದರಲ್ಲಿ ಹಾಡಿನಿಂದ ಮಾತು ಬೆಳೆಯುತ್ತದೆ. ಎರಡನೆಯದರಲ್ಲಿ ಮಾತಿನಿಂದ ಹಾಡು ಸಾಗುತ್ತದೆ. ಈ ಆಟಗಳ ಕುಣಿತದಲ್ಲಿಯೂ ವ್ಯತ್ಯಾಸ ಉಂಟಾಗಿದೆ. ಯಕ್ಷಗಾನದ ಕುಣಿತ ಕಥಕ್ಕಳಿಯನ್ನು ಹಿಂಬಾಲಿಸಿದೆ. ದೊಡ್ಡಾಟ ಕೋಲಾಟದ ಹೆಜ್ಜೆಗಳನ್ನು ಅನುಸರಿಸಿದೆ. ವ್ಯತ್ಯಾಸ ಇದ್ದರೂ ಇವೆರಡೂ ನಾಟ್ಯ ಪ್ರಕಾರಗಳು ಚಂಪೂಕಾವ್ಯದಂತೆ ಗಂಭೀರವಾಗಿ ಸಾಗುತ್ತವೆ; ಎಲ್ಲ ಂದದಿಂದಲೂ ಆಡಂಬರದ ಆಟಗಳಿವು. ಚಂಡೆ, ಮದ್ದಲೆಗಳು ಈ ಆಟಕ್ಕೆ ಬೇಕಾದ ವಾದ್ಯಗಳು. ಅವು ಆಡಂಬರದ ಅಟ್ಟಹಾಸ್ಯಕ್ಕೆ ರೌದ್ರಭಾವವನ್ನು ನೀಡುವ ಸಾಧನಗಳಾಗಿವೆ.

ಶ್ರೀ ಕೃಷ್ಣ ಪಾರಿಜಾತ ಕರ್ನಾಟಕದ ಹೆಮ್ಮೆಯ ಬಯಲಾಟ. ಇದನ್ನು 'ಯಕ್ಷಗಾನದ ಮರಿ' ಎಂದು ಕರೆಯಬಹುದಾಗಿದೆ. ಹಾಡಿನ ಧಾಟಿ, ಕುಣಿತದ ಭಂಗಿ, ಮಾತಿನ ತರ್ಕ– ಎರಡರಲ್ಲಿಯೂ ಒಂದೇ ತೆರನಾಗಿವೆ. ಯಕ್ಷಗಾನದಲ್ಲಿ ಗೋಪಾಲರು ಪ್ರಾರಂಭಕ್ಕೆ ಕುಣಿದರೆ ಪಾರಿಜಾತದಲ್ಲಿ ಗೋಪಾಲ ಗೊಲ್ಲತಿಯಯರಾಗಿ ಸಂಭಾಷಣೆ ನಡೆಸುತ್ತಾರೆ. ಕೊರವಂಜಿಯ ಸನ್ನಿವೇಶ ಆಂಧ್ರದ ಪ್ರಭಾವದಿಂದ ಪಾರಿಜಾತದಲ್ಲಿ ಬಂತೆಂದು ಹೇಳುವವರೂ ಇದ್ದಾರೆ. ಏನೇ ಇರಲಿ; ಪಾರಿಜಾತ ಆಟದ ವಸ್ತು, ಜನಜೀವನಕ್ಕೆ ನಿಕಟವರ್ತಿಯಾಗಿ ಇರುವದರಿಂದ ಪ್ರೇಕ್ಷಕರ ಮನವನ್ನು ತೀವ್ರ ಸೂರೆಗೊಳ್ಳುತ್ತದೆ. ಕೃಷ್ಣ ಪಾರಿಜಾತಕ್ಕೆ ಪೈಪೋಟಿಯಾಗಿ ಶಿವಪಾರಿಜಾತ, ವೆಂಕಟೇಶ ಪಾರಿಜಾತ ಹುಟ್ಟಿಕೊಂಡಿದ್ದರೂ ಅವು ಅದರಷ್ಟು ಪ್ರಸಿದ್ಧಿ ಪಡೆದಿಲ್ಲ.

## ಜನಪದ ರಂಗಭೂಮಿಯ ಅವನತಿ !

ಕನ್ನಡ ನಾಡಿನಲ್ಲಿ ದಾಸರೂ ಶರಣರೂ ಹುಟ್ಟಿ ವಿಷ್ಣು, ಶಿವರ ದಾಸಾನುದಾಸರಾಗಿ ಭಕ್ತಿ ಪಂಥವನ್ನು ಬೆಳೆಸಿದ್ದಾರೆ. ತಮ್ಮ ಮತ ಪ್ರಚಾರಕ್ಕಾಗಿ ಅವರು ಬಯಲಾಟವನ್ನು ಉಪಯೋಗಿಸಿಕೊಂಡರು. ಶಿವಶರಣರನ್ನೂ ಹರಿದಾಸರನ್ನೂ ಕುರಿತು ಆಟ ರಚಿಸಿದರು. ಈ ವ್ಯಕ್ತಿಗಳು ಐತಿಹಾಸಿಕ ಪಾತ್ರಗಳಾದುದರಿಂದ ದೊಡ್ಡಾಟದ, ಯಕ್ಷಗಾನದ ಆಡಂಬರ ಇಲ್ಲಿ ಬೇಕಾಗಿರಲಿಲ್ಲ; ಆದ್ದರಿಂದ ಅವರು ಭಕ್ತಿ ಪ್ರವಾಹಕ್ಕೆ ಅನುಗುಣವಾಗಿ ತ್ವರಿತಗತಿಯಲ್ಲಿ ಸಾಗುವ ದಪ್ಪಿನ ಆಟಗಳನು ಹೂಡಿದರು. ವೇಷ–ಭೂಷ, ಹಾಡುಗಾರಿಕೆ, ನೃತ್ಯ ಸಾಮಾನ ಸ್ಥಿತಿಗೆ ಇಳಿಯಬೇಕಾಯಿತು. ಇವನೇ ಜನ ಸಣ್ಣಾಟಗಳೆಂದು ಕರೆದರು. ಮಾಯದೇವಿಯ ಆಟ, ಪುರಂದರ ದಾಸರ ಆಟ ಇಂದಿಗೂ ಈ ಮಾದರಿಯಲ್ಲಿ ಇವೆ. ವಿಕ್ರಮರಾಜನಂತಹ ಐತಿಹಾಸಿಕ ಆಟಗಳೂ ಮುಂದೆ ಬಂದಾಗ ಅವು ರಾಜಾನಾಟ ಎಂದು ಪ್ರಸಿದ್ಧವಾದವು. ಜನಪದ ರಂಗಭೂಮಿ ಜೀವಂತವೆನ್ನುವದಕ್ಕೆ ಸಾಕ್ಷಿಯಾಗಿ ಸಂಗ್ಯಾಬಾಳ್ಯಾನಂತಹ ಸಾಮಾಜಿಕ ಸಣ್ಣಾಟವೂ ಹುಟ್ಟಿಕೊಂಡವು. ಜನತೆಯ ಆಶೆ ಆಕಾಂಕ್ಷೆಗಳನ್ನು ಈಡೇರಿಸಿದವು. ದಾಸರ ಆಟಗಳು ಮೊದಲು ವಿಲಾಸಿ ಆಟಗಳಾಗಿದ್ದರೂ ಕಟ್ಟಕಡೆಗೆ ವೃತ್ತಿವ್ಯವಸಾಯಕ್ಕೆ ಮಾರುಹೋದವು. ಹರದೇಶಿ ನಾಗೇಶಿಯಂತಹ ಲಾವಣಿಯ ಸೆಳವಿಗೆ ಸಿಕ್ಕು ತರ್ಕಮಾಡುವಲ್ಲಿ ಮೀರಿ ನಿಂತವು. ಈ ರಂಗದಲ್ಲಿ ಸ್ತ್ರೀಯರ ಪ್ರವೇಶ ಆಗಿ ಅಶ್ಲೀಲ ತುಂಬಿಕೊಳ್ಳತೊಡಗಿತು. ಈ ಆಟದ ಮಾದರಿಯಲ್ಲಿ ಮರಾಠಿಗರು ರಾಧಾನಾಟ ಬೆಳೆಸಿಕೊಂಡರು. ಆಗ ಜನಪದ ರಂಗಭೂಮಿ ತನ್ನ ಅವನತಿಯನ್ನೇ ಹುಡುಕಾಡಿತೆಂದು ಹೇಳಬೇಕಾಗುತ್ತದೆ. ಇಷ್ಟರಲ್ಲಿಯೇ ಮರಾಠಿಗರು ಕನ್ನಡ ಯಕ್ಷಗಾನವನ್ನು ನೋಡಿ, ಅದರ ಪ್ರಭಾವದಿಂದ ನಾಟಕ ರಚನೆಗೆ ಕೈಹಾಕಿದರು. ಆ ಮಾದರಿಯ ನಾಟಕ ಕನ್ನಡದಲ್ಲಿಯೂ ಕಾಲಿಟ್ಟಿತು. ಜನಪದ ರಂಗಭೂಮಿ ಮೂಲೆಗೆ ಬಿದ್ದು ನಾಟಕ ರಂಗಭೂಮಿಗೆ ಅವಕಾಶ ಮಾಡಿಕೊಟ್ಟಿತೆಂದೇ ಹೇಳಬೇಕು.

ನಮ್ಮ ನಾಡಿನ ಬಯಲಾಟ ಮಾಡಿದ ಸೇವೆ ಅಮೋಘವಾಗಿದೆ. ಪಂಡಿತಪಾಮರರನ್ನು ರಂಜಿಸುವ ಶಕ್ತಿ ಅವಕ್ಕೆ ಇದ್ದುದರಿಂದಲೇ ಹಳಗನ್ನಡದಲ್ಲಿ ಸಂಸ್ಕೃತ ಮಾದರಿಯ ನಾಟಕ ಹುಟ್ಟದೇ ಹೋದುದು ಆಶ್ಚರ್ಯವೇನಲ್ಲ. ಇಂದು ಹೊಸವಾತಾವರಣ ಬಂದಿದೆ. ಬಯಲಾಟ ಮಾಯವಾಗುತ್ತಲಿದೆ; ಕಾಲಾಯ ತಸ್ಮೈ ನಮಃ ●

# ಕವಲು ದಾರಿಯಲ್ಲಿ ವೃತ್ತಿರಂಗಭೂಮಿ

ರಂಗಭೂಮಿಯ ಪ್ರಗತಿಯು ವಿಲಾಸಿ ಮತ್ತು ವೃತ್ತಿ ಈ ಎರಡು ಪ್ರಕಾರಗಳ ಸಂಬಂಧ ಮತ್ತು ಪರಸ್ಪರವಾಗಿ ಒಂದರ ಮೇಲೆ ಮತ್ತೊಂದು ಬೀರುವ ಪ್ರಭಾವವನ್ನು ಅವಲಂಬಿಸಿದೆಯೆಂಬುದನ್ನು ಒಪ್ಪುವುದಾದರೆ ಕಳೆದ ಕೆಲವು ವರ್ಷಗಳಿಂದ ವಿಲಾಸೀ ರಂಗಭೂಮಿಯಲ್ಲಿ ಕಂಡುಬರುತ್ತಿರುವ ತೀವ್ರ ಚಟುವಟಿಕೆ ಹಾಗೂ ವೃತ್ತಿ ರಂಗಭೂಮಿಯನ್ನು ಆವರಿಸಿರುವ ನಿರುತ್ಸಾಹದ ಆಲಸ್ಯ, ಇವು ರಂಗಭೂಮಿಯ ಪ್ರಗತಿಯಲ್ಲಿ ಆಸಕ್ತಿ ಉಳ್ಳವರನ್ನು ಚಕಿತಗೊಳಿಸದಿರಲಾರದು.

ಕೆಲವು ವರ್ಷಗಳ ಹಿಂದೆ ರಾಜ್ಯದ ಮುಖ್ಯ ನಗರಗಳ ನಾಟಕ ಶಾಲೆಗಳಲ್ಲಿ ನಮ್ಮ ಜನಪ್ರಿಯ ನಾಟಕಗಳ ನೂರು ನೂರು ಪ್ರದರ್ಶನಗಳನ್ನು ನಡೆಸಿ ದಾಖಲೆ ಸ್ಥಾಪಿಸಿದ ವೃತ್ತಿ ನಾಟಕ ಸಂಸ್ಥೆಗಳು ಕಳೆದ ೨–೩ ವರ್ಷಗಳಿಂದ ಆ ಪ್ರದೇಶಗಳಲ್ಲಿ ಕಾಣಿಸಿಕೊಳ್ಳುತ್ತಿಲ್ಲ. ಅದರ ಪ್ರತಿಯಾಗಿ ಒಂದೇ ಪ್ರಯೋಗದಲ್ಲಿ ಕೊನೆಗೊಳ್ಳುತ್ತಿದ್ದ ವಿಲಾಸೀ ಸಂಸ್ಥೆಗಳ ನಾಟಕಗಳು ಒಂದೇ ಸಾರಿಗೆ ಅಥವಾ ಕೆಲವು ವಾರಗಳ ಅಂತರದಲ್ಲಿ ಯಶಸ್ವಿಯಾಗಿ ಪುನಃ ಪುನಃ ಪ್ರದರ್ಶಿಸಲ್ಪಡುತ್ತಿವೆ.

ನಗರ ಪ್ರದೇಶಗಳಲ್ಲಿ ನಾಟಕ ಶಾಲೆಗಳ ದುಬಾರಿ ಬಾಡಿಗೆ, ವಾಸದ ಮನೆಗಳ ಅಭಾವ, ಪ್ರಕಟನೆಗಾಗಿ ತಗಲುವ ದುಬಾರಿ ವೆಚ್ಚ, ಇವು ಸ್ವಲ್ಪ ಮಟ್ಟಿಗೆ ಈ ಪರಿಸ್ಥಿತಿಯ ಕಾರಣವಾದರೂ ನಾಗರಿಕ ಪ್ರೇಕ್ಷಕರ ಒಲವು ವೃತ್ತಿ ನಾಟಕಗಳಿಂದ ದೂರವಾಗಿ ಕ್ರಮೇಣ ವಿಲಾಸಿ ನಾಟಕಗಳ ಕಡೆಗೆ ತಿರುಗುತ್ತಿದೆ ಎಂಬ ಸತ್ಯವನ್ನು ಒಪ್ಪಿಕೊಳ್ಳಲೇಬೇಕು. ನಗರ ಪ್ರದೇಶಗಳಲ್ಲಿ ಪ್ರಾರಂಭವಾಗಿರುವ ಈ ಪರಿವರ್ತನೆಯು ಮುಂದಿನ ಕೆಲವು ವರ್ಷಗಳಲ್ಲಿ ಜಿಲ್ಲಾ ತಾಲ್ಲೂಕು ಪ್ರದೇಶಗಳಿಗೆ ಹರಡಿ, ವೃತ್ತಿ ಸಂಸ್ಥೆಗಳಿಗೆ ಜೀವನಾಧಾರವಾದ ಸಾಮಾನ್ಯ ಪ್ರೇಕ್ಷಕ ವರ್ಗವೂ ಈ ಹುಚ್ಚು ಹೊಳೆಯ ಮಹಾಪೂರದಲ್ಲಿ ಕೊಚ್ಚಿ ಹೋಗುವ ಸಂಭವ ಹೆಚ್ಚು ದೂರದಲ್ಲಿ ಇಲ್ಲ. ರಾಜಕೀಯ ರಂಗದ ಈ ಪರಿವರ್ತನೆಯು ಕ್ರಮ ಕ್ರಮವಾಗಿ ಚಿತ್ರ ಸಂಗೀತ ಸಾಹಿತ್ಯ ನಾಟಕ ಮುಂತಾದ ಲಲಿತ ಕಲೆಗಳಿಗೂ ಹರಡುತ್ತಿರುವುದನ್ನು ದೇಶ ವಿದೇಶಗಳಲ್ಲಿ ಕಾಣುತ್ತಿದ್ದೇವೆ.

ಈ ಪರಿಸ್ಥಿತಿಯ ಕಾರಣವೇನು? ಈ ಅಪಾಯಕರ ಬೆಳವಣಿಗೆಯನ್ನು ತಡೆಗಟ್ಟಿ ವೃತ್ತಿ ನಾಟಕಗಳು ತಮ್ಮ ಹಿಂದಿನ ಸ್ಥಾನಮಾನ ಗೌರವಗಳನ್ನು ಪುನಃ ಪಡೆಯಲು ಅನುಸರಿಸಬೇಕಾದ ಕಾರ್ಯ ವಿಧಾನವೇನು? ಎಂಬುದನ್ನು ಈಗ ಯೋಚಿಸಬೇಕಾಗಿದೆ.

## ನಡೆದು ಬಂದ ದಾರಿ

ಈ ಪರಿಸ್ಥಿತಿಯ ಕಾರಣಗಳನ್ನು ಹುಡುಕುವುದರಲ್ಲಿ ಕಳೆದ ಒಂದುನೂರು ವರ್ಷಗಳಲ್ಲಿ ವೃತ್ತಿ ರಂಗಭೂಮಿ ನಡೆದು ಬಂದ ದಾರಿಯನ್ನು ಗಮನಿಸಬೇಕಾಗುತ್ತದೆ. ಹಿಂದಿನಿಂದ ನಮ್ಮಲ್ಲಿ ಪ್ರಚಾರದಲ್ಲಿರುವ ಯಕ್ಷಗಾನ, ಬಯಲಾಟ, ದೊಡ್ಡಾಟ ಮುಂತಾದ ಜಾನಪದ ನಾಟಕ ಪ್ರಕಾರಗಳಲ್ಲಿ ರಂಗಭೂಮಿಯ ಉಗಮವನ್ನು ಕಾಣಬಹುದಾದರೂ ಪ್ರಪ್ರಥಮವಾಗಿ ಅದು ಆರಿಸಿಕೊಂಡ ನಾಟಕಗಳು ಸಂಸ್ಕೃತ ಮೂಲದಿಂದ ಬಂದವುಗಳಾದರೂ, ಪ್ರಯೋಗದಲ್ಲಿ ಅಳವಡಿಸಿಕೊಂಡ ರಂಗಸಜ್ಜಿಕೆ, ವೇಷ ಭೂಷಣಗಳು ಅಭಿನಯ ಇವು ಭಾರತೀಯ ನಾಟ್ಯ ಪದ್ಧತಿಗೆ ಹೊರತಾಗಿ ಪಾಶ್ಚಾತ್ಯ ರಂಗಭೂಮಿಯ ಅನುಕರಣದಲ್ಲಿ ಸಫಲತೆ ಕಾಣುವ ಪ್ರಯತ್ನ ನಡೆಯಿತು. ಈ ಅನಪೇಕ್ಷಿತ, ಅನುಚಿತ ಪ್ರವೃತ್ತಿಯೇ ನಮ್ಮ ರಂಗಭೂಮಿಯ ಸಮಸ್ಯೆಗಳ ಮೂಲವೆಂದರೆ ತಪ್ಪಾಗಲಾರದು. ಈ ಮಾತು ವೃತ್ತಿ ಮತ್ತು ವಿಲಾಸೀ ಈ ಎರಡು ಪ್ರಕಾರಗಳಿಗೂ ಅನ್ವಯಿಸುತ್ತದೆ.

ಸ್ಥಳದಿಂದ ಸ್ಥಳಕ್ಕೆ ಚಲನೆ, ಊಟೋಪಚಾರಗಳು, ಕ್ರೀಡೆ, ಕಾಳಗ, ಮುಂತಾದವು ರಂಗದ ಮೇಲೆ ವಾಸ್ತವಿಕ ವಸ್ತುಗಳ ಉಪಯೋಗವಿಲ್ಲದೆ ಅಭಿನಯದಿಂದಲೇ ನಡೆಯಬೇಕೆಂಬುದು ಭಾರತೀಯ ನಾಟ್ಯ ಪದತಿಯ ತಿರುಳು. ರಂಗಸಜ್ಜಿಕೆಗಾಗಿ ತಿಪ್ಪರಲಾಗ ಹಾಕಿ, ಬೊಂಬಾಯಿ ನಗರದ ಬೀದಿಯಲ್ಲಿ ನಾರದನನ್ನು ಎಳೆ ತಂದು ನಿಲ್ಲಿಸಿ ಹಾಡಿಸುವ ಬಟ್ಟೆ ಕಾಗದಗಳ ಸಹಾಯದಿಂದ ಚಿತ್ರಕಲೆಯ ಅಪಹಾಸ್ಯದಂತೆ ಕಾಣುವ ಮರ ಗಿಡಗಳ ನಡುವೆ ದುಷ್ಯಂತ ಶಕುಂತಲೆಯರು ಪ್ರೇಮಾಲಾಪ ನಡೆಸುವ ರಸಾಭಾಸಕ್ಕೆ ಎಡೆ ಕೊಡದೆ ದೃಶ್ಯವನ್ನು ವರ್ಣಿಸುವ ಕವಿ ವಾಣಿಯಲ್ಲಿ ಹೆಚ್ಚು ಭರವಸೆ ಇಡುವುದು ಭಾರತೀಯ ನಾಟ್ಯ ಕಲೆಯ ವಿಧಾನ. ಈ ಶತಮಾನದ ಮೊದಲ ದಶಕದಲ್ಲಿ ಪ್ರಾರಂಭವಾದ ಈ ಪಾಶ್ಚಾತ್ಯ ಅನುಕರಣ ಪದ್ಧತಿ, ಆ ಮೇಲಿನ ವರ್ಷಗಳಲ್ಲಿ ವ್ಯಾಪಕವಾಗಿ ಬೆಳೆದು, ನಟ ನಾಟಕಗಳನ್ನು ಹಿಂದಕ್ಕೆ ತಳ್ಳಿ ರಂಗಸಜ್ಜಿಕೆಯೇ ನಾಟಕ ಎಂಬ ಆತ್ಮ ವಿನಾಶದ ನಂಬಿಕೆ ಜನರಲ್ಲಿ ಪ್ರಯೋಕ್ತೃಗಳಲ್ಲಿ ತಲೆಯೆತ್ತಿತು. ಅಭಿನಯ ಕಾಣೆಯಾಯಿತು. ನಾಟಕದ ಹಿರಿಮೆ ಮಣ್ಣುಗೂಡಿತು. ಪ್ರಯೋಗದ ಯಶಸ್ಸಿಗೆ ನಟ ನಾಟಕ ಕವಿಗಳಿಗಿಂತ ಚಿತ್ರಕಾರ ದೃಶ್ಯ ಯೋಜಕರ ಪಾತ್ರ ಮುಖ್ಯವೆಂಬ ತಪ್ಪು ಕಲ್ಪನೆ ತಲೆಯೆತ್ತಿತು.

ಈ ಕೆಟ್ಟ ಕನಸಿನಿಂದ ಮೊದಲು ಎಚ್ಚೆತ್ತು ಪ್ರಯೋಗದಲ್ಲಿ ಹೊಸ ಹಾದಿಯನ್ನು ಹುಡುಕುವ ಪ್ರಯತ್ನ ನಡೆಸಿದ್ದು ವಿಲಾಸೀ ಸಂಸ್ಥೆಗಳೆಂಬುದರಲ್ಲಿ ಅಚ್ಚರಿಯೇನೂ ಇರುವುದಿಲ್ಲ. ಹಣ ಗಳಿಸುವ ಲೋಭ ದೃಷ್ಟಿಯಿಲ್ಲದೆ, ಅಲ್ಪ ವೆಚ್ಚದಲ್ಲಿ ನಾಟಕವೊಂದನ್ನು ರಂಗಕ್ಕೆ ತರುವ ಪ್ರವೃತ್ತಿ ಬೆಳೆದಾಗ ಸೃಜನಾತ್ಮಕ ಪ್ರಕೃತಿ Creative activity ಸಹಜವಾಗಿ ಎಚ್ಚರಗೊಳ್ಳುತ್ತದೆ. ಮೊದ ಮೊದಲಿಗೆ ಪಾಶ್ಚಾತ್ಯ ನಾಟಕಗಳ ಕಡೆ ಹರಿದ ದೃಷ್ಟಿ ಈಗೀಗ ಭಾರತೀಯ ನಾಟ್ಯ ಪದ್ಧತಿಯನ್ನು ರಕ್ಷಿಸಿಕೊಂಡು ಬಂದ ಯಕ್ಷಗಾನ ಬಯಲಾಟ, ದೊಡ್ಡಾಟಗಳ ಕಡೆಗೆ ತಿರುಗಿರುವುದು ಶುಭ ಸೂಚಕ.

## ಭಾರತೀಯ ನಾಟ್ಯ ಪದ್ಧತಿ

ಈಗ ವೃತ್ತಿ ರಂಗಭೂಮಿಯ ಮೇಲೆ ಪ್ರದರ್ಶಿತವಾಗುತ್ತಿರುವ ನಾಟಕಗಳು ಪ್ರಯೋಗದ ಮುಖ್ಯಾಂಗಗಳಾದ ರಂಗಸಜ್ಜಿಕೆ, ಅಭಿನಯ, ದೃಶ್ಯ ಯೋಜನೆ, ಸಂಭಾಷಣೆ, ನಾಟ್ಯ, ಸಂಗೀತ, ಇವುಗಳಲ್ಲಿ ಒಂದರಲ್ಲಿಯೂ ಭಾರತೀಯತೆಯನ್ನು ಉಳಿಸಿಕೊಂಡಿಲ್ಲವೆಂದು ವಿಷಾದದಿಂದ ಹೇಳದೆ ವಿಧಿಯಿಲ್ಲ.

ಭಾರತೀಯ ನಾಟ್ಯ ಪದ್ಧತಿಯಲ್ಲಿ ಪಾರ್ಶ್ವಕ್ಕೆ ಸರಿಯುವ ಮುಂದಿನ ಜವಳಿಕೆ ನಾಟಕದ ವಸ್ತುವಿಗೆ ಅನುಗುಣವಾಗಿ ಎಲ್ಲ ದೃಶ್ಯಗಳಿಗೂ ಸಾಮಾನ್ಯವಾದ ಅಲಂಕಾರಗಳಿಂದ ಕೂಡಿದ ಹಿನ್ನೆಲೆಯ ಪರದೆ ಅಥವಾ ಬಾಗಿಲು ಜಾಲಂಧರಿಗಳಿಂದ ಒಂದು ಗೋಡೆ ಇವೆರಡರ ನಡುವೆ ಚಂದ್ರ ಸೂರ್ಯ ಗ್ರಹ ತಾರಕೆಗಳ ಚಿತ್ರಗಳಿಂದ ಅಲಂಕೃತವಾಗಿ ರಂಗದ ಛಾವಣಿಯಂತೆ ಕಾಣುತ್ತಿದ್ದ ಗಗಳಿಕೆ ಇಷ್ಟು ಮಾತ್ರ ಇರುತ್ತಿದ್ದುವು.

ಸುರುಳಿ ಸುತ್ತಿ ಮೇಲೆ ಹೋಗುವ ಪರದೆಗಳು, ಪಾರ್ಶ್ವದ ದೃಶ್ಯ ಪಟ್ಟಿಕೆಗಳು, ವಾಸ್ತವವನ್ನು ವಿಡಂಬಿಸುವ ಅಥವಾ ವಿಕೃತಗೊಳಿಸುವ ಬಣ್ಣದ ಪರದೆಗಳು, ಇದೆಲ್ಲ ಪಾಶ್ಚಾತ್ಯ ರಂಗಭೂಮಿಯಿಂದ ಪಾರ್ಸಿ ನಾಟಕ ಕಂಪನಿಗಳ ಮುಖಾಂತರ ನಾವು ಎರವಾಗಿ ಪಡೆದ ವಸ್ತು

ಪ್ರಾಚೀನ ಕಾಲದಿಂದಲೂ ಮಹತ್ವವನ್ನು ಪಡೆದಿರುವ ನಾಟಕರಂಗ ಈಗೀಗ ಬಹು ಕಷ್ಟ ಕಾಲವನ್ನೆದುರಿಸುತ್ತಲಿದೆ ಅನೇಕ ಮಾರ್ಪಾಡುಗಳು ರಂಗಭೂಮಿಯಲ್ಲಿ ಕಂಡು ಬಂದರೂ ನಮ್ಮ ರಂಗಭೂಮಿ ಬಡವಾಗುತ್ತಿದೆ. ಅದಕ್ಕೆ ಕಾರಣ ರಂಗಸಜ್ಜಿಕೆ, ಅಭಿನಯ, ಅಸ್ಪಷ್ಟ, ಅಸಂಗತ ನಿರೂಪಣೆ, ಇತ್ಯಾದಿ. ಈ ದಿಶೆಯಲ್ಲಿ ವಿಲಾಸೀ ರಂಗಭೂಮಿ ಪ್ರಗತಿಯನ್ನು ಸಾಧಿಸುತ್ತಲಿದೆ. ಆದರೆ ವೃತ್ತಿ ರಂಗಭೂಮಿಯಲ್ಲಿ ಈ ತೆರನಾದ ಸುಧಾರಣೆಗಳು ವಿರಳ. ಪ್ರಕಾಶ ಸಂಯೋಜನೆ, ರಂಗ ಸಂಯೋಜನೆ ಮುಂತಾದವುಗಳ ಅಭಾವದಿಂದ ನಮ್ಮ ವೃತ್ತಿನಾಟಕ ರಂಗ ಈಗ ಕವಲುದಾರಿಯಲ್ಲಿದೆ........

ಗಳು. ಪಾತ್ರೋಚಿತವಾದ ವೇಷ ಭೂಷಣಗಳ ಹೊರತಾಗಿ ವಾಸ್ತವಿಕ ಗೃಹೋಪಕರಣಗಳನ್ನು ರಂಗದ ಮೇಲೆ ತರಲಾಗದೆಂದು ಭರತನು ಹೇಳಿದ್ದಾನೆ.

ಕುಡಿಯುವುದು, ತಿನ್ನುವುದು, ವಾಹನಗಳು ಅಥವಾ ಕಾಲ್ನಡೆಯಿಂದ ಸ್ಥಳದಿಂದ ಸ್ಥಳಕ್ಕೆ ಹೋಗುವುದು, ಪ್ರೇಮ, ಯುದ್ಧ, ಕಲಹ ಮುಂತಾದ ಎಲ್ಲ ಕೃತ್ಯಗಳೂ ನಾಟ್ಯದಿಂದಲೇ ನಡೆಯಬೇಕೆಂಬುದು ಭಾರತೀಯ ನಾಟ್ಯ ಪದ್ಧತಿಯ ಇನ್ನೊಂದು ನಿಬಂಧನೆ. ಇದರಿಂದ ರಂಗದ ಮೇಲೆ ಕಾಣಿಸಿಕೊಳ್ಳುವ ಎಲ್ಲ ಸ್ತ್ರೀ ಪುರುಷರಿಗೆ ಅಭಿನಯ ಶಿಕ್ಷಣ ಅಗತ್ಯವಾಗಿ ದೊರಕುತ್ತಿದ್ದುದರಿಂದ ಪಾತ್ರಧಾರಿಗಳ ರಂಗದ ಮೇಲೆ ನಡೆಯುವುದು, ನಿಲ್ಲುವುದು ಮುಂತಾದ ಸಾಮಾನ್ಯ ಕಾರ್ಯಗಳು ಕಲಾತ್ಮಕವಾಗುತ್ತಿದ್ದವು.

ಪಾತ್ರಗಳ ನಿಷ್ಕ್ರಮಣ ಪ್ರತೀಕಗಳು ದೃಶ್ಯ ಯೋಜನೆಯನ್ನು ಸೂಚಿಸುತ್ತಿದ್ದವು. ಸಂಭಾಷಣೆಯ ಗದ್ಯ ಭಾಗಗಳನ್ನು ಮಾತ್ರ ನಟನು ನುಡಿಯುತ್ತಿದ್ದನು. ಪದ್ಯ ಮತ್ತು ಗೀತ ಭಾಗಗಳನ್ನು ಹಿಮ್ಮೇಳದವರು ಹಾಡುತ್ತಿದ್ದರು. ನಟ ನಟಿಯರು ಆ ಆ ಭಾವಗಳನ್ನು ವ್ಯಕ್ತಪಡಿಸಲು ಕುಣಿಯುತ್ತಿದ್ದರು.

ರಂಗದ ಹಿಂಬದಿಯ ಗೋಡೆಯ ಹತ್ತಿರ ಹಿಮ್ಮೇಳದ ವಾದ್ಯಗಾರರು, ಗಾಯಕ ಗಾಯಕಿಯರು, ಸೂತ್ರಧಾರ ನಟಿ ಮುಂತಾದವರು ಅರ್ಧಚಂದ್ರಾಕೃತಿಯಲ್ಲಿ ನಿಲ್ಲುತ್ತಿದ್ದರು. ಇದರಿಂದ ರಂಗವು ಯಾವಾಗಲೂ ತುಂಬಿದಂತಿದ್ದು ನಾಟಕ ಕಳೆಕಟ್ಟುತ್ತಿತ್ತು.

ವಸ್ತು ಮತ್ತು ಪಾತ್ರಗಳಿಗೆ ತಕ್ಕಂತೆ ಸಂಗೀತವು ಶಾಸ್ತ್ರೀಯವೋ ಜಾನಪದವೋ, ಅಥವಾ ಅವೆರಡರ ಹಿತವಾದ ಮಿಶ್ರಣವೋ ಆಗಿರುತ್ತಿತ್ತು.

ಭರತ ನಾಟ್ಯದ ಅವತರಣಿಕೆಗಳೆಂದು ಹೇಳಬಹುದಾದ ಮೋಹಿನೀ ಆಟ, ಕೂಚಿಪುಡಿ, ಒಡಿಸ್ಸೀ, ಮಣಿಪುರಿ, ಈ ನಾಟ್ಯ ಪ್ರಕಾರಗಳಲ್ಲಿ ಯಕ್ಷಗಾನ, ಬಯಲಾಟ, ದೊಡ್ಡಾಟಗಳ ಜಾನಪದ ನಾಟಕಗಳಲ್ಲಿ ಮೇಲೆ ವಿವರಿಸಿದ ಭಾರತೀಯ ನಾಟ್ಯ ಪದ್ಧತಿಯು ಸಂಪೂರ್ಣವಾಗಿಯೋ ಅಂಶಿಕವಾಗಿಯೋ ಉಳಿದಿರುವುದನ್ನು ನಾವು ಈಗಲೂ ಕಾಣುತ್ತೇವೆ.

ಪಾರಸೀ ನಾಟಕಗಳ ಪ್ರಭಾವದಿಂದ ನಮ್ಮ ವೃತ್ತಿ ನಾಟಕ ಸಂಸ್ಥೆಗಳಲ್ಲಿ ಪ್ರಚಾರಕ್ಕೆ ಬಂದ ಪಾಶ್ಚಾತ್ಯ ನಾಟ್ಯ ಪದ್ಧತಿಯು ಮೊಸಳೆ ಹಿಡಿತದಿಂದ ಬಿಡುಗಡೆ ಹೊಂದಲು ವೃತ್ತಿ ನಾಟಕ ಸಂಸ್ಥೆಗಳು ಕ್ರಮ ಕ್ರಮವಾಗಿ ಭಾರತೀಯ ನಾಟ್ಯ ಪದ್ಧತಿಯನ್ನು ಏಕೆ ಅನುಸರಿಸಬಾರದು ಎಂಬ ಪ್ರಶ್ನೆ ಈ ಸಂದರ್ಭದಲ್ಲಿ ಸಹಜವಾಗಿ ಹುಟ್ಟುತ್ತದೆ.

ಪಾಶ್ಚಾತ್ಯ ನಾಟ್ಯ ಪದ್ಧತಿಯನ್ನು ತಮ್ಮ ಕಲಾಭಿವ್ಯಕ್ತಿಯ ಪರಾಕಾಷ್ಠೆಯೆಂದು ತಿಳಿದಿದ್ದ ವಿಲಾಸಿ ನಾಟಕ ಸಂಸ್ಥೆಗಳು ಅವುಗಳಿಗೆ ನಾಟಕಗಳನ್ನು ಬರೆದು ಕೊಡುವ ನಾಟಕಕಾರರು, ತಾವೇ ರಚಿಸಿಕೊಂಡಿದ್ದ ಭ್ರಮೆಯ ಸುಳಿಯಿಂದ ಹೊರಗೆ ಬಂದು ಭಾರತೀಯ ನಾಟ್ಯ ಪದ್ಧತಿಯ ಅನೇಕ ಅಂಶಗಳನ್ನು ತಮ್ಮ ಪ್ರಯೋಗಗಳಲ್ಲಿ ಅಳವಡಿಸಿಕೊಳ್ಳಲು ಪ್ರಯತ್ನಿಸುತ್ತಿರುವಾಗ ವೃತ್ತಿ ನಾಟಕ ಸಂಸ್ಥೆಗಳೂ ಆ ಮಾರ್ಗವನ್ನು ಏಕೆ ಹಿಡಿಯಬಾರದು?

ನಾಗರಿಕ ಪ್ರೇಕ್ಷಕರ ಅಭಿರುಚಿ, ಆಸಕ್ತಿಗಳು ಈ ಪರಿವರ್ತನೆಗೆ ಅನುಕೂಲವಾಗಿರುವುದರಿಂದ ಈ ಬಗೆಯ ಹೊಸ ಪ್ರಯೋಗಗಳು ಜನಪ್ರಿಯವಾಗುವವೇ? ಎಂದು ಸಂದೇಹ ಪಡಬೇಕಾಗಿಲ್ಲ. ವೃತ್ತಿ ಸಂಸ್ಥೆಗಳಿಗೆ ಈ ಪರಿವರ್ತನೆ ಎಷ್ಟರ ಮಟ್ಟಿಗೆ ಸಾಧ್ಯ ಎಂಬ ವಿಚಾರವನ್ನು ಆ ಸಂಸ್ಥೆಗಳ ದೃಷ್ಟಿಯಿಂದ ಮುಂದೆ ವಿವೇಚಿಸಿದೆ.

## ರಂಗ ಸಜ್ಜಿಕೆ

ರಂಗಸಜ್ಜಿಕೆ ವೈಭವ ಆಡಂಬರಗಳಿಂದ ಕೂಡಿದ್ದರೆ ಮಾತ್ರವೇ ನಾಟಕ ಯಶಸ್ವಿಯಾಗುವುದೆಂಬ ಕಲ್ಪನೆ ಒಂದು ಕಾಲಕ್ಕೆ ವೃತ್ತಿ ಸಂಸ್ಥೆಗಳಿಗಿತ್ತು. ಆದರಿಂದಾಗಿ ಕೆಲವು ಸಂಸ್ಥೆಗಳು ನಟ ನಟಿ ನಾಟಕಗಳನ್ನು ಎರಡನೆಯ ವರ್ಗದ ಪ್ರಜೆಗಳೆಂದು ಪರಗಣಿಸಿ ರಂಗಸಜ್ಜಿಕೆಗಾಗಿ ಅಪಾರ ದ್ರವ್ಯವನ್ನು ವೆಚ್ಚ ಮಾಡಿದುದೂ ಉಂಟು.

ವೈಭವದ ರಂಗಸಜ್ಜಿಕೆ ನಟನ ಪ್ರಾಮುಖ್ಯತೆಯನ್ನು ಕುಂಠಿತಗೊಳಿಸಿ ನಾಟಕದ ಕಲಾಭಿವ್ಯಕ್ತಿಗೆ ಕಂಟಕವಾಗಬಹುದೆಂಬ ಅರಿವು ಈಗೀಗ ಪ್ರಯೋಗಗಳಲ್ಲಿ ಮೂಡುತ್ತಿದೆ. ರಂಗಸಜ್ಜಿಕೆಗೆ ವಿಶೇಷ ಪ್ರಾಮುಖ್ಯತೆ ಕೊಡುತ್ತಿದ್ದ ಪಾಶ್ಚಾತ್ಯ ಪ್ರಯೋಕ್ತೃಗಳಲ್ಲಿ (ಅವರೆಲ್ಲ ವೃತ್ತಿ ರಂಗವನ್ನು ಪ್ರತಿನಿಧಿಸುವವರೇ) ಈಗ ಸರಳ ರೀತಿಯ ಸಾಮಾನ್ಯ ರಂಗಸಜ್ಜಿಕೆಯಲ್ಲಿ, ಅನೇಕ ಸಂದರ್ಭಗಳಲ್ಲಿ ಬೂದು ಅಥವಾ ನೀಲಿ ಬಣ್ಣದ ಒಂದೇ ತೆರೆಯ ಮುಂದೆ ನಾಟಕಗಳನ್ನು ಅಭಿನಯಿಸುವರೆಂದು ಕೇಳಿದ್ದೇನೆ. ವಿಲಾಸ ರಂಗದಲ್ಲಿ ಇಂತಹ ಪ್ರಯೋಗಕ್ಕೆ ಕೆಲವು ಯಶಸ್ವಿ ನಿದರ್ಶನಗಳಿವೆ. ಬೆಂಗಳೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ರವೀಂದ್ರ ಕಲಾಕ್ಷೇತ್ರದ ಹೊರಾಂಗಣದಲ್ಲಿ ಈಚೆಗೆ ಅಭಿನಯಿಸಲ್ಪಟ್ಟ "ಸಂಕ್ರಾಂತಿ", "ಜೋಕುಮಾರ ಚರಿತ್ರೆ" ಮತ್ತು "ಈಡಿಪಸ್" ನಾಟಕಗಳು ಇದಕ್ಕೆ ನಿದರ್ಶನಗಳು.

ರಂಗಸಜ್ಜಿಕೆಯ ಸಹಾಯವಿಲ್ಲದೆ ನಾಟಕಗಳನ್ನು ಅಭಿನಯಿಸುವ ಈ ಭಾರತೀಯ ಸಂಪ್ರದಾಯವನ್ನು ನಮ್ಮ ಜಾನಪದ ಯಕ್ಷಗಾನ ಬಯಲಾಟಗಳು ಇಂದಿಗೂ ಉಳಿಸಿಕೊಂಡು ಬಂದಿವೆ.

ರಚನೆಯಲ್ಲಿ ಬಹಳ ಕ್ಲಿಷ್ಟವೂ ಸಂಕೀರ್ಣವೂ ಆದ ರಂಗಸಜ್ಜಿಕೆ ಬೇಕಾಗುವ ಸನ್ನಿವೇಶಗಳನ್ನು ಯಾವ ಸಜ್ಜಿಕೆಯೂ ಇಲ್ಲದ "ಬೋಳು" ರಂಗದ ಮೇಲೆ ಯಶಸ್ವಿಯಾಗಿ ಅಭಿನಯಿಸಬಹುದೆಂಬುದಕ್ಕೆ "ಸಂಗ್ಯಾ ಬಾಳ್ಯಾ" ಬಯಲಾಟದ ಒಂದು ದೃಶ್ಯ ನಿದರ್ಶನ. ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡಮಿಯು ಈಚೆಗೆ ಬಿಜಾಪುರದಲ್ಲಿ ಏರ್ಪಡಿಸಿದ್ದ ಜಾನಪದ ನಾಟಕೋತ್ಸವದಲ್ಲಿ "ಸಂಗ್ಯಾ ಬಾಳ್ಯಾ" ನಾಟಕ ಪ್ರದರ್ಶನ ನೋಡಿದಾಗ ನಾನು ಆಶ್ಚರ್ಯಚಕಿತನಾದೆ.

ಕಥಾನಾಯಕಿ ತನ್ನ "ಇನಿಯ"ನೊಡನೆ ಮನೆಯೊಳಗೆ ಪ್ರೇಮಾಲಾಪದಲ್ಲಿ ತೊಡಗಿದ್ದಾಗ ಪ್ರವಾಸ ಹೋಗಿದ್ದ ಗಂಡ ಹಿಂದಿರುಗುತ್ತಾನೆ. ಅವನ ಇಬ್ಬರು ಸಹೋದರರು ಅಣ್ಣನಿಗೆ ಮನೆಯಲ್ಲಿ ಏನು ನಡೆಯುತ್ತಿದೆ ಎಂಬುದರ ಸುಳಿವು ಕೊಡುತ್ತಾರೆ. ಕೋಪಗೊಂಡ ಗಂಡ ಕೂಗಾಡಿ ಅರಚಾಡಿ "ಇನಿಯ"ನನ್ನು ಹಿಡಿದು ಹೊಡೆಯಲು ಹವಣಿಸುತ್ತಾನೆ. ಮನೆಯ ಹೊರಗೆ ನಡೆಯುತ್ತಿದ್ದ "ಈ ಹುಯಿಲ"ನ್ನು ಕೇಳಿ ಬೆದರಿದ ಇನಿಯ "ಹೇಗಾದರೂ ನನ್ನ ಪ್ರಾಣವನ್ನು ಉಳಿಸು" ಎಂದು ಅಂಗಲಾಚಿ ನಾಯಕಿಯನ್ನು ಬೇಡುತ್ತಾನೆ. ನಾಯಕಿ ಅವನನ್ನು ಮನೆಯ ಹಿಂದಿನ ಬಾಗಿಲಿಂದ ಪಾರು ಮಾಡುತ್ತಾಳೆ. ತಮ್ಮಂದಿರೊಡನೆ ಗಂಡ ಮನೆಯೊಳಗೆ ಬಂದಾಗ ಅಲ್ಲಿ ಯಾರೂ ಇರುವುದಿಲ್ಲ.

ರಂಗದ ಮೇಲೆ ಪ್ರದರ್ಶಿಸಲು ಅಸಾಧ್ಯವೆಂಬಂತೆ ಕಾಣುವ "ಈ ಸೀನಿಕ್" ಸನ್ನಿವೇಶವನ್ನು ರಂಗಸಜ್ಜಿಕೆಯ ಸಹಾಯವೇ ಇಲ್ಲದೆ ಜಾನಪದ ಕಲಾವಿದರು ಪ್ರೇಕ್ಷಕರ ಮನ ಮುಟ್ಟುವಂತೆ ಅಭಿನಯಿಸಿದುದು ಮೆಚ್ಚುಗೆಯ ವಿಷಯ. ನಮ್ಮ ಯಕ್ಷಗಾನ ಬಯಲಾಟಗಳಲ್ಲಿ ಇಂತಹ ಅನೇಕ ಸಂದರ್ಭಗಳನ್ನು ಗುರುತಿಸಬಹುದೆಂದು ನನ್ನ ನಂಬುಗೆ.

ಬಯಲಾಟದಲ್ಲಿ ಸಾಧ್ಯವಿದ್ದುದು ವೃತ್ತಿರಂಗದಲ್ಲಿ ಸಾಧ್ಯವಿಲ್ಲವೆ?

ಪೌರಾಣಿಕ ಮತ್ತು ಐತಿಹಾಸಿಕ ನಾಟಕಗಳ ರಂಗಸಜ್ಜಿಕೆಗಾಗಿ ವೃತ್ತಿ ಸಂಸ್ಥೆಗಳು ಈಗ ಹೆಚ್ಚು ಹಣ ವೆಚ್ಚ ಮಾಡಬೇಕಾಗುತ್ತದೆ. ಹಾಗೆ ವೆಚ್ಚ ಮಾಡಿದರೂ ಬಹುತೇಕ ಸಂದರ್ಭಗಳಲ್ಲಿ ರಂಗ ಸಜ್ಜಿಕೆ ಕಲಾತ್ಮಕವಾಗದೆ ವಿಮರ್ಶಕರ ಟೀಕೆಗೊಳಗಾದುದನ್ನು ನಾನು ಕಂಡಿದ್ದೇನೆ. ರಂಗ ಸಜ್ಜಿಕೆಯ ರಚನೆಗಾಗಿ ಹಣ ವೆಚ್ಚ ಮಾಡಲು ಸಿದ್ಧವಿಲ್ಲದ ಸಂಸ್ಥೆಗಳು ತಮ್ಮ ಚಟುವಟಿಕೆಗಳನ್ನು ಸಾಮಾಜಿಕ ನಾಟಕಗಳಿಗೆ ಸೀಮಿತಗೊಳಿಸಿದುದೂ ಉಂಟು. ಇದರ ಪರಿಣಾಮವಾಗಿ ಐತಿಹಾಸಿಕ ಮತ್ತು ಪೌರಾಣಿಕ ನಾಟಕಗಳು ವೃತ್ತಿ ರಂಗದಲ್ಲಿ ಈಗ ಹೆಚ್ಚಿಗೆ ಕಾಣಿಸಿಕೊಳ್ಳುತ್ತಿಲ್ಲ.

ಸೂಚ್ಯವಾದ, ಸರಳವಾದ ರಂಗ ಸಜ್ಜಿಕೆಯನ್ನು ರಂಗ ಪ್ರಕಾಶದ ಕಲಾತ್ಮಕ ಸಂಯೋಜನೆಯಿಂದ ಭವ್ಯವಾಗಿ ಕಾಣುವಂತೆ ಮಾಡುವುದು ಸಾಧ್ಯ. ರಂಗ ದೀಪಗಳ ಸಂಯೋಜನೆ ಈಗ ವಿಶಿಷ್ಟ ಕಲೆಯಾಗಿ ರೂಪ ಹೊಂದಿದೆ. ರಂಗಸಜ್ಜಿಕೆಯ ರಚನೆಗಾಗಿ ಹಣ "ಪೋಲು" ಮಾಡುವುದನ್ನು ನಿಲ್ಲಿಸಿ, ರಂಗ ಪ್ರಕಾಶಕ್ಕೆ ಅಗತ್ಯವಾದ ದೀಪೋಪಕರಣಗಳ ಕಡೆಗೆ ಹೆಚ್ಚು ಗಮನ ಕೊಡುವುದು ಈಗ ವೃತ್ತಿರಂಗ ಭೂಮಿಯಲ್ಲಿ ನಡೆಯಬೇಕಾದ ಮೊದಲ ಸುಧಾರಣೆ.

## ಅಭಿನಯ

ಅಭಿನಯದ ವಿಚಾರದಲ್ಲಿಯೂ ಜಾನಪದ ರಂಗಭೂಮಿಯು ವೃತ್ತಿ ರಂಗಭೂಮಿಗೆ ಕೆಲವು ಉಪಯುಕ್ತ ಸಲಹೆಗಳನ್ನು ನೀಡಬಲ್ಲುದು.

ರಂಗಸಜ್ಜಿಕೆಯ ವೈಭವ, ವಿನ್ಯಾಸಗಳಿಗೆ ಮಾರುಹೋದ ಬಹು ಮಂದಿ ನಟರು "ಅಭಿನಯ" ಎನ್ನುವುದನ್ನೇ ಮರೆಯುತ್ತಿದ್ದಾರೆ. ಒಂದು ಕಡೆ ಸಿನಿಮಾ ನಟರನ್ನು ಅನುಕರಿಸುವ ಗೀಳು, ಇನ್ನೊಂದು ಕಡೆ ವಾಸ್ತವಿಕತೆ [Realism]ಯ ಮೋಹ. ಅವರ ಕಲಾಭಿವ್ಯಕ್ತಿಯನ್ನು ಕುಂಠಿತಗೊಳಿಸಿವೆ.

ಭಾರತೀಯ ನಾಟ್ಯ ಪದ್ಧತಿಯು "ವಾಸ್ತವಿಕತೆ"ಯನ್ನು ಕಲಾ ಸಾಧನೆಗಾಗಿ ಅಂಗೀಕರಿಸಿಲ್ಲ. ರಸೋತ್ಪಾದಕವಾದ ವೈಚಿತ್ರ್ಯ ವಿಶೇಷಗಳೇ ಕಲೆಯ ಜೀವಾಳವೆಂಬುದು ಭಾರತದ ಸಿದ್ಧಾಂತ. ನಾಟ್ಯ ಕಲೆಗೂ ಈ ಮಾತು ಅನ್ವಯಿಸುತ್ತದೆ.

ನಟ ವರ್ಗದ ಚಲನ ವಲನಗಳು, ವಾಸ್ತವಿಕತೆಯಿಂದ ವಿಭಿನ್ನವೂ ಕಲಾತ್ಮಕವೂ ಆಗಿರಬೇಕೆಂದು ನಾಟ್ಯ ಶಾಸ್ತ್ರ ಹೇಳುತ್ತದೆ. ನಾಟ್ಯದ ಶಾಸ್ತ್ರೀಯ ರೂಪಗಳಲ್ಲಿ ಯಕ್ಷಗಾನ ಮುಂತಾದ ಜಾನಪದ ನಾಟಕಗಳಲ್ಲಿ ಈ ಅಭಿನಯ ಪದ್ಧತಿ ಈಗಲೂ ಉಳಿದು ಬಂದಿದೆ. ಜಾನಪದ ನಾಟಕಗಳಿಂದ ಪ್ರೇರಣೆ ಪಡೆದ ವೃತ್ತಿ ರಂಗಭೂಮಿ ಆರಂಭಿಕ ದೆಶೆಯಲ್ಲಿ ನಟ ನಟಿಯರ ಪ್ರವೇಶ ನಿಷ್ಕ್ರಮಣಗಳು, ರಂಗದ ಮೇಲೆ ಅವರ ಚಲನ ವಲನಗಳು, ನಾಟ್ಯಾಭಿನಯವನ್ನು ಅನುಸರಿಸುತ್ತಿದ್ದವು. ಪಾಶ್ಚಾತ್ಯ ನಾಟ್ಯ ಪದ್ಧತಿಯಿಂದ ಪ್ರಭಾವಿತರಾದ

ನಟರು, ನಾಟಕಕಾರರು, ನಿರ್ದೇಶಕರು, "ವಾಸ್ತವಿಕತೆಯು ಪ್ರಮಾಯವಾಗಿ ಈಗ ಯೋಗಕ್ಕೆ ತೊಡಗಿದಾಗ ಹಿಂದಿನ ಸಂಪ್ರದಾಯ ಕ್ರಮ ಕ್ರಮವಾಗಿ ಪ್ರಚಾರದಲ್ಲಿರುವ "ನೀರಸಾಭಿನಯ" ಪ್ರಾರಂಭವಾಯಿತು.

"ನೀರಸಾಭಿನಯ" ಎಂದ ಮಾತ್ರಕ್ಕೆ ಓದುಗರು ಬೆಚ್ಚಿ ಬೀಳುವ ಕಾರಣವಿಲ್ಲ. ವೃತ್ತಿರಂಗಭೂಮಿಯಲ್ಲಿ ಖ್ಯಾತಿ ಪಡೆದ ಅಂದಿನ ನಟರೆಲ್ಲರೂ ವರದಾಚಾರ್ ಪೀರ್, ಸಿಂಹ ಮುಂತಾದವರು–ವಾಸ್ತವಿಕತೆಯಿಂದ ದೂರವಾದ "ರಸಾಭಿನಯ"ಕ್ಕೆ ಹೆಸರಾದವರೆಂದು ಇಲ್ಲಿ ನೆನಸಿಕೊಳ್ಳಬೇಕು. ರಂಗ ಪ್ರವೇಶದ ವೈಶಿಷ್ಟ್ಯದಿಂದಲೇ ಪ್ರೇಕ್ಷಕರನ್ನು ಆಕರ್ಷಿಸುವ ಶಕ್ತಿ ಅವರಲ್ಲಿತ್ತು. ಆ ಮಟ್ಟದ ನಟರೊಬ್ಬರೂ ಈಗ ಕಾಣದಿರುವುದು ವೃತ್ತಿ ರಂಗದ ವಿಫಲತೆಯನ್ನು ಸೂಚಿಸುತ್ತದೆ.

ಪೌರಾಣಿಕ ಐತಿಹಾಸಿಕ ನಾಟಕಗಳಲ್ಲಿ ಪಾತ್ರೋಚಿತವಾದ ಗಾಂಭೀರ್ಯ, ಘನತೆ, ಶೌರ್ಯ, ಸಾಹಸಗಳನ್ನು ಸೂಚಿಸುವ ನಡೆ, ನುಡಿ ಮುಖ ಭಂಗಿ, ಅಂಗ ಚಲನೆಗಳು ಅಗತ್ಯ. ಇವುಗಳನ್ನು ಅಭಿನಯದಲ್ಲಿ ಅಳವಡಿಸಿಕೊಳ್ಳುವುದು ದೀರ್ಘಸಾಧನೆಯಿಂದ ಮಾತ್ರವೇ ಸಾಧ್ಯ. ಒಂದಿಷ್ಟು ಅಳತೆ ತಪ್ಪಿದರೂ ಅಭಿನಯವು ಅತಿರೇಕದಂತೆ ಕಂಡು ರಸಾಭಾಸವಾಗುವ ಸಂಭವ ಉಂಟು.

ಪ್ರವೇಶ ನಿಷ್ಕ್ರಮಣಗಳಲ್ಲಿ ರಸೋತ್ಕರ್ಷದ ಸನ್ನಿವೇಶಗಳಲ್ಲಿ ನಾಟ್ಯವನ್ನು ಬಳಸಿಕೊಂಡು ಜಾನಪದ ರಂಗಭೂಮಿಯು ಈ ಸಮಸ್ಯೆಯನ್ನು ಪರಿಹರಿಸಿಕೊಂಡಿದೆ. ಜಾನಪದ ಶೈಲಿಯಲ್ಲಿ ಬರೆಯಲ್ಪಟ್ಟು, ನಾಗರಿಕ ಕಲಾವಿದರಿಂದ ಬೆಂಗಳೂರಲ್ಲಿ ಅಭಿನಯಿಸಲ್ಪಟ್ಟ ಚಂದ್ರಶೇಖರ ಕಂಬಾರರ "ಜೋಕುಮಾರ ಸ್ವಾಮಿ" ಇದಕ್ಕೆ ನಿದರ್ಶನವಾಗಬಲ್ಲುದು. ನಾಟ್ಯೋಚಿತವಾದ ಪ್ರವೇಶ ನಿಷ್ಕ್ರಮಣ ಚಲನವಲನಗಳಿಂದ ಪಾತ್ರಗಳ ಮುಖ್ಯವಾಗಿ ಸ್ತ್ರೀ ಪಾತ್ರಗಳ, ರಸೋತ್ಕರ್ಷ ಆಕರ್ಷಕತೆಗಳು ಹೇಗೆ ಹೆಚ್ಚುವುದೆಂಬುದನು ಈ ಪ್ರಯೋಗದಲ್ಲಿ ಕಾಣಬಹುದಾಗಿತ್ತು. ಸಾಮಾನ್ಯರಂತೆ ಪಂಡಿತ ಪ್ರೇಕ್ಷಕರೂ ಈ ಪ್ರಯೋಗವನು ಮೆಚ್ಚಿಕೊಂಡರೆಂಬುದು ಗಮನಾರ್ಹ.

ಅಭಿನಯದಲ್ಲಿ ನಾಟ್ಯವನ್ನು ಬಳಸಿಕೊಳ್ಳುವುದು ವೃತ್ತಿ ಸಂಸ್ಥೆಗಳಿಗೆ ಸಾಧ್ಯವೇ, ಅದರಿಂದ ಪ್ರದರ್ಶನಗಳು ಉತ್ತಮಗೊಂಡು ಹೆಚ್ಚು ಆಕರ್ಷಕವಾಗುವುದೇ ಎಂಬುದು ಪರ್ಯಾಲೋಚಿಸಬೇಕಾದ ವಿಚಾರ. ಈಗ ನಾವು ವೃತ್ತಿ ರಂಗದ ಮೇಲೆ ಕಾಣುತ್ತಿರುವ ನೀರಸಾಭಿನಯಕ್ಕಿಂತ ಜಾನಪದ ರಂಗದ ನ್ಯಾಯ ವಿಧಾನ ಹೆಚ್ಚು ನಿಕರ್ಷಕವಾಗಬಲ್ಲುದೆಂಬುದು ನನ್ನ ಅಭಿಪ್ರಾಯ.

## ರಂಗ ಸಂಗೀತ

ನಾಟಕದಲ್ಲಿ ಸಂಗೀತ ಇರಲೇಬೇಕು ಎಂಬ ಕಾಲವೂ ಬಂದಿತ್ತು. ಒಂದು ಗೀತವನ್ನೋ ಪದ್ಯವನ್ನೋ ಪತ್ತಾರು ನಿಮಿಷಗಳ ಕಾಲ ಹಾಡಿ ಪ್ರೇಕ್ಷಕರನ್ನು ತಲ್ಲೀನಗೊಳಿಸಬಲ್ಲ ನಟ ನಟಿಯರು ಆಗ ಅನೇಕರಿದ್ದರು. ಹಾಡಬಲ್ಲವರ ಅಭಾವದಿಂದಾಗಿ ವಿಲಾಸಿ ರಂಗದಲ್ಲಿ ಸಂಪೂರ್ಣವಾಗಿ ವೃತ್ತಿ ರಂಗದಲ್ಲಿ ಆಂಶಿಕವಾಗಿ ಸಂಗೀತವು ಅದೃಶ್ಯವಾಗುತ್ತಿದೆ. ನಾಟಕದಲ್ಲಿ ಸಂಗೀತ ಇದ್ದೇ ಇರಬೇಕೆನ್ನುವವರಿಗೂ ಅದರ ಬಳಕೆ ಒಂದು ಸಮಸ್ಯೆಯಾಗಿದೆ. ಈ ವಿಚಾರದಲ್ಲಿ ಜಾನಪದ ರಂಗಭೂಮಿ ಅನುಸರಿಸುತ್ತಿರುವ ಸಂಪ್ರದಾಯ ವೃತ್ತಿ ರಂಗಭೂಮಿಗೆ ಮಾರ್ಗದರ್ಶಕವಾಗಿದೆ.

ಜಾನಪದ ರಂಗದಲ್ಲಿ ಎಲ್ಲ ಗೀತಗಳನ್ನೂ ಅದು ಸಾಮೂಹಿಕವಾಗಲಿ, ಒಬ್ಬನು ಹೇಳುವುದಾಗಲಿ, ಸಂವಾದವಾಗಲಿ, ಸೂತ್ರಧಾರ ಮತ್ತು ಹಿಮ್ಮೇಳದವರು ಹಾಡುತ್ತಾರೆ. ಪಾತ್ರಧಾರಿಗಳು ಅರ್ಥೈಸಿ ಅಭಿನಯಿಸುತ್ತಾರೆ. ಭರತ ನಾಟ್ಯದಲ್ಲಿ ಅದನ್ನು ಅನುಕರಿಸುವ ಜಾನಪದ ನಾಟ್ಯ ರೂಪಕಗಳಲ್ಲಿ ಈಗಲೂ ಪ್ರಚಾರದಲ್ಲಿರುವ ಈ ಸಂಪ್ರದಾಯಕ್ಕೆ ಬಹು ಕಾಲದ ಪ್ರಾಚೀನತೆ ಇರುತ್ತದೆ.

ಪೌರಾಣಿಕ ಮತ್ತು ಐತಿಹಾಸಿಕ ನಾಟಕಗಳಲ್ಲಿ ವೃತ್ತಿ ಸಂಸ್ಥೆಗಳು ಈ ಸಂಪ್ರದಾಯವನ್ನು ಬಳಸಿ


ಮಗು :–ಏನು! ನನ್ನ ತಲೆ ಆಪರೇಶನ್ ಮಾಡಿ ಮೆದುಳು ಹಚ್ಚಿಸುತ್ತೀರಾ? ನನಗೆ ಮೆದುಳೇ ಇಲ್ಲಾಂತ ಮಾಸ್ತರು ಹೇಳ್ತಾರೆ!

ಕೊಳ್ಳುವುದರಿಂದ ಸಂಗೀತದ ಶ್ರಾವ್ಯತೆ ಸ್ಪಷ್ಟತೆಗಳನ್ನು ರಕ್ಷಿಸಿಕೊಳ್ಳುವುದು ಸಾಧ್ಯ. ಪ್ರೇಕ್ಷಕರಲ್ಲಿ ಕೆಲವರಾದರೂ ಅಪೇಕ್ಷಿಸುವ ಸಂಗೀತವೂ ನಾಟಕದಲ್ಲಿದ್ದಂತಾಗುವುದು.

ಹಿಮ್ಮೇಳದವರು ಹಾಡುವಾಗ ಪಾತ್ರಧಾರಿಗಳು ಕುಣಿಯಲೇಬೇಕೆಂಬ ನಿಯಮವೇನೂ ಇರುವುದಿಲ್ಲ. ನಟ ನಟಿಯರು ಸನ್ನಿವೇಶಕ್ಕೆ ಅನುಗುಣವಾಗಿ, ಪ್ರತಿಭೆಯಿಂದ ರಸಭಾವಗಳನ್ನು ವ್ಯಕ್ತಪಡಿಸುವುದೂ ಸಾಧ್ಯ.

ಜಾನಪದ ನಾಟಕಗಳಲ್ಲಿ ಇತ್ತೀಚಿನ ಕೆಲವು ಆಧುನಿಕ ನಾಟಕಗಳಲ್ಲಿ ಭಾಗವತನೊ ಮತ್ತು ಹಿಮ್ಮೇಳದವರೊ ರಂಗದ ಒಂದು ಪಾರ್ಶ್ವದಲ್ಲಿ ನಿಂತು ಅಥವಾ ಕುಳಿತು ಪ್ರೇಕ್ಷಕರಿಗೆ ಪಾತ್ರಗಳ ಪರಿಚಯ ಮಾಡಿಕೊಡುವ ಸಂಪ್ರದಾಯವಿದೆ. ನಾಟಕ ವೀಕ್ಷಕರು ಇದನ್ನು ಮೆಚ್ಚಿಯೂ ಇದ್ದಾರೆ. ವೃತ್ತಿ ಸಂಸ್ಥೆಗಳು ಈ ವಿಧಾನವನ್ನು ರಂಗದ ಮೇಲೆ ತರಲು ಪ್ರಯತ್ನಿಸಬೇಕು.

## ಸಂಭಾಷಣೆ

ಸಾಮಾಜಿಕ ನಾಟಕಗಳಿಗೆ ಆಡು ಭಾಷೆ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಉತ್ತರ ಕರ್ನಾಟಕದ ನಾಟಕ ಸಂಸ್ಥೆಗಳು ಮೈಸೂರು ಕಡೆಯ ಸಂಸ್ಥೆಗಳಿಗಿಂತ ಈ ವಿಚಾರದಲ್ಲಿ ಹೆಚ್ಚು ಮುಂದುವರಿದಿದ್ದಾರೆ, ಆದರೆ ಇತ್ತೀಚೆಗೆ ಪ್ರದರ್ಶಿಸಲ್ಪಡುತ್ತಿರುವ ಕೆಲವು ಸಾಮಾಜಿಕ ನಾಟಕಗಳು ಅಶ್ಲೀಲ ಅಸಂಗತಗಳಿಂದ ಕೂಡಿದ್ದು ವಿದ್ಯಾವಂತ ಪ್ರೇಕ್ಷಕರ ಪ್ರೋತ್ಸಾಹವನ್ನು ಕಳೆದುಕೊಂಡಿವೆ. ಈ ಒಂದು ಲೋಪವನ್ನು ತಿದ್ದಿಕೊಂಡರೆ ಉತ್ತರ ಕರ್ನಾಟಕದ ವೃತ್ತಿ ನಾಟಕ ಸಂಸ್ಥೆಗಳು ಸಾಮಾಜಿಕ ನಾಟಕ ಪ್ರದರ್ಶನದಲ್ಲಿ ಇನ್ನೂ ಹೆಚ್ಚಿನ ವಿಜಯ ಸಾಧಿಸಬಹುದು.

ಐತಿಹಾಸಿಕ ಮತ್ತು ಪೌರಾಣಿಕ ನಾಟಕಗಳ ಭಾಷೆ ಬಹು ಮಟ್ಟಿಗೆ ಗ್ರಾಂಥಿಕವಾಗಿರುವುದು ಅನಿವಾರ್ಯ. ರಂಗದ ಮೇಲೆ ಸಂಭಾಷಣೆ ಗಂಭೀರವೋ, ಸ್ಪಷ್ಟವೋ ಆಗಿರಬೇಕು. ಈ ವಿಚಾರದಲ್ಲಿ ಮೈಸೂರು ಕಡೆಯ ಕಂಪನಿಗಳು ಹೆಚ್ಚು ಗಮನ ಕೊಡುತ್ತಿರುವುದು ಪ್ರಶಂಸಾರ್ಹ. ಗ್ರಾಂಥಿಕ ಭಾಷೆಯನ್ನು ಅರ್ಥವತ್ತಾಗಿ ಭಾವಪೂರ್ಣವಾಗಿ ಪಾತ್ರೋಚಿತವಾಗಿ ಆಡುವುದನ್ನು ಉತ್ತರದ ಸಂಸ್ಥೆಗಳು ಅಭ್ಯಾಸದಿಂದ ಕರಗತ ಮಾಡಿಕೊಳ್ಳಬೇಕಾಗಿದೆ.

## ನಾಟಕಗಳ ಆಯ್ಕೆ ಮತ್ತು ಪ್ರಯೋಗ

ನಾಟಕಗಳನ್ನು ಪ್ರಯೋಗಕ್ಕಾಗಿ ಆರಿಸಿಕೊಳ್ಳುವುದರಲ್ಲಿ ವೃತ್ತಿ ಸಂಸ್ಥೆಗಳ ದೃಷ್ಟಿ ಪ್ರಾದೇಶಿಕ ಪರಿಸರ ಪರಿಚಯಗಳಿಗೆ ಸೀಮಿತವಾಗುತ್ತಿದೆ. ಉತ್ತರದ ಸಂಸ್ಥೆಗಳು ಮೈಸೂರು ಕಡೆಯ ನಾಟಕಗಳನ್ನು ಮೈಸೂರಿನ ಸಂಸ್ಥೆಗಳು ಉತ್ತರದ ಕಡೆಯ ನಾಟಕಗಳನ್ನು ಪ್ರಯೋಗಕ್ಕೆ ಆರಿಸಿಕೊಳ್ಳುವುದು ಈಗ ಅಪರೂಪದ ಘಟನೆಗಳಾಗಿವೆ. ಈ ಪ್ರಾದೇಶಿಕ ಭಾವನೆ ಕೊನೆಗೊಳ್ಳುವುದು ರಂಗಭೂಮಿಯ ಹಿತ ದೃಷ್ಟಿಯಿಂದ ಅಗತ್ಯ.

ಪ್ರಯೋಗಾರ್ಹವಾದ ನಾಟಕಗಳಿಗೆ ಕನ್ನಡದಲ್ಲಿ ಕೊರತೆಯಿಲ್ಲ. ಕಂದಗಲ್ಲರ ಐತಿಹಾಸಿಕ ನಾಟಕಗಳೂ, ಬಳ್ಳಾವೆಯವರ ಪೌರಾಣಿಕ ನಾಟಕಗಳೂ, ಹಿಂದೆ ವೃತ್ತಿ ರಂಗದಲ್ಲಿ ಪ್ರಸಿದ್ಧವಾಗಿದ್ದ ಸದಾರಮೆ, ಬಸಾವಲಿ, ಪ್ರಭಾವತಿ, ಮುಂತಾದ ಜಾನಪದ ರೂಪಕಗಳು, ಈಗಿನ ಯುಗದಲ್ಲಿಯೂ ಜನಪ್ರಿಯವಾಗುವ ಶಕ್ತಿ ಪಡೆದಿವೆ. ಆಧುನಿಕ ಅಭಿರುಚಿಯನ್ನು ಪ್ರತಿನಿಧಿಸುವ ಅನೇಕ ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳು ಕಳೆದೆರಡು ದಶಕಗಳಿಂದ ಕನ್ನಡದಲ್ಲಿ ರಚಿತವಾಗಿವೆ.

ಇವುಗಳಲ್ಲಿ ಪ್ರಯೋಗಕ್ಕೆ ಯಾವ ನಾಟಕವನ್ನೇ ಆರಿಸಿಕೊಳ್ಳಲಿ ಅದನ್ನು ರಂಗಭೂಮಿಗೆ ಅಳವಡಿಸಿಕೊಳ್ಳುವುದರಲ್ಲಿ ಕೆಲವು ಮಾರ್ಪಾಡುಗಳು ಅವಶ್ಯಕವಾಗುವವು. ವಸ್ತುವನ್ನು ಆಧರಿಸಿ ಪ್ರಯೋಗದ ಶೈಲಿಯನ್ನು ನಿರ್ಧರಿಸಬೇಕಾಗುವುದು. ಪಾತ್ರಗಳ ಆಯ್ಕೆ, ಅಭ್ಯಾಸ, ರಂಗ ಸಜ್ಜಿಕೆಯ ರಚನೆ, ಈ ಕಾರ್ಯಗಳು ವೃತ್ತಿ ಸಂಸ್ಥೆಗಳಲ್ಲಿ ಸಮರ್ಪಕವಾಗಿ ನಡೆಯುತ್ತಿಲ್ಲ.

ಸಮರ್ಥ ನಿರ್ದೇಶಕನ ನೇತೃತ್ವದಲ್ಲಿ ನಡೆಯಬೇಕಾದ ಈ ಕಾರ್ಯಗಳು, ಈಗ ಸಂಸ್ಥೆಯ ಯಾದರೊಬ್ಬ ನಟನಿಂದಲೋ, ಅಥವಾ ಪ್ರಯೋಗದ ಪರಿಚಯವೇ ಇಲ್ಲದ ಸಂಸ್ಥೆಯ ಮಾಲಿಕನಿಂದಲೋ ನಾಟಕಕಾರನಿಂದಲೋ ನಡೆಯುತ್ತಿವೆ. ಚಲನ ಚಿತ್ರದಂತೆ ಒಂದು ನಾಟಕದ ಯಶಸ್ಸು ನಿರ್ದೇಶಕನನ್ನು ಅವಲಂಬಿಸಿದೆಯೆಂಬುದನ್ನು ವೃತ್ತಿ ಸಂಸ್ಥೆಗಳು ಅರಿತು, ತಮ್ಮ ಪ್ರಯೋಗ ವಿಧಾನವನ್ನು ಮಾರ್ಪಡಿಸಿಕೊಳ್ಳುವುದರಿಂದ ಮಾತ್ರವೇ ವೃತ್ತಿ ನಾಟಕಗಳು ತಮ್ಮ ಜನಪ್ರಿಯತೆಯನ್ನು ಉಳಿಸಿಕೊಳ್ಳುವುದು ಈಗಿನ ಪರಿಸ್ಥಿತಿಯಲ್ಲಿ ಸಾಧ್ಯವಾಗುತ್ತದೆ. ●

# ವಿಲಾಸಿ ರಂಗಭೂಮಿಯ ಒಲವು ನಿಲವು

— ಎಂ. ವಿ. ಕೃಷ್ಣಸ್ವಾಮಿ

ಇತ್ತೀಚೆಗೆ ವಿಲಾಸಿ ರಂಗಭೂಮಿಯ ಬಗ್ಗೆ ವಿಶೇಷವಾದ ಆಸಕ್ತಿ, ಕುತೂಹಲ ಕೆರಳಿದೆ. ಇದರಿಂದಾಗಿ ಈಗಾಗಲೇ ಈ ವಿಷಯವಾಗಿ ಸಾಕಷ್ಟು ಲೇಖನಗಳು ಬಂದಿವೆ; ಚರ್ಚಾಕೂಟಗಳು ನಡೆದಿವೆ; ವಿಚಾರಗೋಷ್ಠಿಗಳೂ ಸಾಗಿವೆ. ಎಷ್ಟರ ಮಟ್ಟಿಗೆ ಅಂದರೆ ಏನು ಹೇಳಿದರೂ ಅದು ಚರ್ವಿತ ಚರ್ವಣದಂತೆ ತೋರುವಷ್ಟು! ಮಾತು ಬರೆಹ ಸಾಕಾಗಿದೆ. ಬೇಕಾಗಿರುವುದು ಒಂದು ಗುರಿ, ಒಂದು ಯೋಜನೆ, ಏಕ ಮುಖದ ಕಾರ್ಯ ತತ್ಪರತೆ. ಗದ್ದಲದ ಹಳಸಿದ ಘೋಷಣೆಗಳೇ ಜಾಸ್ತಿಯಾಗಿರುವ ಈ ಕಾಲದಲ್ಲಿ, ಈ ಮಾತುಗಳೂ ಅನುಮಾನಾಸ್ಪದವಾಗಬಹುದು. ಆದರೆ ಇವು ಜುಗುಪ್ಸೆ, ಅಥವಾ ಬೇಸರ, ಅಥವಾ ಮುನಿಸಿನ ಮಾತಲ್ಲ. ಕಳಕಳಿಯ ಮಾತು. ರಚನಾತ್ಮಕ ಯೋಜನೆ ಶೀಘ್ರದಲ್ಲೇ ಆಗಿ, ನಮ್ಮ ನಾಡಿನ ಎಲ್ಲ ಕಡೆಗಳಲ್ಲೂ ವಿಲಾಸಿ ರಂಗಭೂಮಿ ಸುಸಂಘಟಿತವಾಗಿ, ಒಂದು ಪರಂಪರೆಯಾಗಿ ಬೆಳೆಯಬೇಕು. ಈ ರೀತಿಯ ಕಾರ್ಯಾರಂಭವಾಗಬೇಕೆಂಬ ದೃಷ್ಟಿಯ ಮಾತು, ನನ್ನದು. ಹೀಗೆ ಹೇಳುವುದಕೆ ಸ್ವಂತ ಅನುಭವದ ಹಿನ್ನೆಲೆಯೂ ಸ್ವಲ್ಪವಿದೆ.

ವಿಲಾಸಿ ರಂಗಭೂಮಿಯ ಅರಿವು, ಪರಿಚಯ ನನಗಾಗಿದ್ದು ೧೯೩೭ರಲ್ಲಿ. ಡಿ. ಬನುಮಯ್ಯ ಹೈಸ್ಕೂಲಿನ (ಮೈಸೂರು) ವಿದ್ಯಾರ್ಥಿಯಾಗಿದ್ದಾಗ. ಆರಂಭ ಇಂಗ್ಲೀಷ್ ನಾಟಕ ಒಂದರಲ್ಲಿ ಪಾತ್ರ. ಫ್ರೆಂಚ್ ನಾಟಕಕಾರ ಮೋಲಿಯೇರ್ ಅವರ Flying doctor ಆಡಿಸಿದವರು ಚೆಲುವಯ್ಯಂಗಾರ್, ಅಲಿಯಾಸ್ ಸಂಪತ್. ಇಂದು ಚಲನ ಚಿತ್ರರಂಗದಲ್ಲೂ ಹೆಸರುಗಳಿಸಿರುವವರು. ಅಂದು ಮೂಡಿದ ಒಲವು ಇನ್ನೂ ಮಾಸಿಲ್ಲ. ಅಂದು ಹಿಡಿದ ಹುಚ್ಚು ಇನ್ನೂ ಬಿಟ್ಟಿಲ್ಲ. ಬಣ್ಣದ ಬದುಕಿನ ಗೀಳು, ಖಯಾಲಿ ಅಂಟಿಕೊಂಡವರಿಗೇ ಗೊತ್ತು, ಅದರ ಮರ್ಮ, ಅದರ ಬಂಧನ! ಅದಂತಿರಲಿ, ಆ ಕಾಲಕ್ಕೆ ಮೈಸೂರು ವಿಶ್ವವಿದ್ಯಾನಿಲಯದ ಯೂನಿಯನ್ನಿನ ನಾಟಕ ಕಾರ್ಯಕಲಾಪಗಳು ವಿಖ್ಯಾತ. ಅಲ್ಲಿಯ ನಾಟಕಕಾರರು. ನಟರೇ. (ಆ ಕಾಲಕೆ ವಿಲಾಸ ರಂಗಭೂಮಿಯಲ್ಲಿ ನಟಿಯರ ಅಭಾವ ತೀವ್ರವಾಗಿಯೇ ಇತ್ತು.) ಅಂದಿನ ರಾಜಧಾನಿಯ ಶಾಲಾ ಕಾಲೇಜುಗಳ ವಿಲಾಸಿ ನಾಟಕ ತಂಡಗಳಿಗೆ ಸ್ಫೂರ್ತಿ, ಪ್ರೋತ್ಸಾಹ, ಮೇಲಂಕ್ತಿ. ಆ ಪರಿಸರದಲ್ಲಿ ಬೆಳೆದ ಅಧ್ಯಾಪಕ ಮತ್ತು ವಿದ್ಯಾರ್ಥಿ ವೃಂದ, ಸುಮಾರು ಹತ್ತು ವರ್ಷಗಳ ಕಾಲ ಅವ್ಯಾಹತವಾಗಿ ಮಹಾರಾಜಾ ಕಾಲೇಜಿನಲ್ಲಿ ವಿಲಾಸಿ ರಂಗಭೂಮಿಯ ಚಟುವಟಿಕೆಯನ್ನು ಬೆಳೆಸಿ, ಬೆಳಗಿಸಿದ್ದನ್ನು ನಾನೇ ಕಣ್ಣಾರೆ ಕಂಡೆ. ನಾಟಕವಿಲ್ಲದ ದಿವಸವಿರಲಿಲ್ಲವೆಂದರೆ ಅನೃತವೂ ಅಲ್ಲ. ಅತಿಶಯೋಕ್ತಿಯೂ ಅಲ್ಲ. ಹಲವಾರು ಭಾಷೆಗಳ– ಇಂಗ್ಲೀಷ್. ಕನ್ನಡ, ಉರ್ದು, ಹಿಂದಿ, ಸಂಸ್ಕೃತನಾಟಕಗಳು– ಹಲವಾರು ರೀತಿಯ– ಅಣು ನಾಟಕ, ಗೀತ ನಾಟಕ ಇತ್ಯಾದಿ ನಾಟಕಗಳ ಪ್ರಯೋಗಗಳು, ಆಗಿದ್ದ ಸೀಮಿತ ರಂಗ ಸೌಲಭ್ಯಗಳಲ್ಲೂ, ಯಶಸ್ವಿಯಾಗಿ; ಉತ್ತಮ ಮಟ್ಟದಲ್ಲೇ ನಡೆಯುತ್ತಿದ್ದುವು.

## ವಿರೋಧೀ ಮನೋಭಾವ

ಆದಾಗ್ಯೂ, ಆ ಕಾಲೇಜಿನ ವಿಲಾಸಿರಂಗಭೂಮಿ ಒಂದು ಪರಂಪರೆಯಾಗಿ ಬೆಳೆಯಲಿಲ್ಲ, ನೆಲಸಲಿಲ್ಲ, ಬೇರೂರಲಿಲ್ಲ. ಕಾರಣ–ಇದು ಕೇವಲ ಪಠ್ಯೇತರ ಕಾರ್ಯಕ್ರಮ, ಕೇವಲ ಅಹನ್ಯಹನಿ ಮನರಂಜನೆಯ ವಿಷಯವೆಂಬ, ಮೂಲತಃ ಭಾವನೆ. ರಂಗಭೂಮಿಗೂ, ಜೀವನಕ್ಕೂ, ಸಮಾಜಕ್ಕೂ ಇರುವ ಇರಬೇಕಾದ ಗಾಢ ಸಂಬಂಧಗಳ ಅರಿವಿಲ್ಲದ್ದು. ಇಂಥ ಅರಿವನ್ನು ಬೋಧಿಸಿ, ಪ್ರಚೋದಿಸಿ, ಮಾರ್ಗದರ್ಶಕರಾಗಿರುವವರಿಲ್ಲದ್ದು ಇದರ ಜೊತೆಗೆ ವಿಲಾಸಿ ರಂಗಭೂಮಿಯ ಅಭಿಮಾನಿಗಳಲ್ಲೂ ವೃತ್ತಿ ರಂಗಭೂಮಿಯ ವಿಷಯದಲ್ಲಿದ್ದ ತಿರಸ್ಕಾರ, ಕೀಳು ಮನೋಭಾವ. ಕಾಲೇಜು ಸಂಘಗಳು ವೃತ್ತಿರಂಗಭೂಮಿಯವರೊಡನೆ ಸಂಪರ್ಕವನ್ನೇ ಇಟ್ಟಿರಲಿಲ್ಲ. ವಿಲಾಸಿ ರಂಗಭೂಮಿಯವರಲ್ಲಿ ತಾವೇ ಉತ್ತಮರು ಎಂಬ ಅಂತರಂಗ ಮನೋಭಾವವೂ ಇತ್ತು. ಈ ರೀತಿಯ ಧೋರಣೆಗೆ, ವರ್ತನೆಗೆ, ಅಂದಿನ ರಾಜಕೀಯ ವಾತಾವರಣವೂ ಕಾರಣವಾಗಿತ್ತು. ಏನೇ ಆಗಲಿ, ವಿಲಾಸಿ ರಂಗಭೂಮಿಯಲ್ಲಿದ್ದ ಉತ್ಸಾಹ, ಸಾಮರ್ಥ್ಯ, ನಾಡಿನಾದ್ಯಂತ ಹರಡಲಾಗಲೀ, ಒಂದು ವಿಶೇಷವಾದ ಸಂಪ್ರದಾಯವಾಗಲೀ ಊರ್ಜಿತವಾಗಲಿಲ್ಲ. ಅಲ್ಲಿ, ಇಲ್ಲಿ ಆಗ ಈಗ ನಡೆದ ಪ್ರಯತ್ನಗಳನ್ನು ನೆನೆಸಿಕೊಂಡರೆ, ಹಳೆಯ ತುರುಬನು ನೆನೆಸಿಕೊಂಡು ಮಾತನಾಡುವ ಪರಿಸ್ಥಿತಿಯಂತಾಗಿದೆ.

ಬೆಂಗಳೂರಿನ ಅಮೆಚೂರ್ ಡ್ರಾಮಾಟಿಕ್ ಅಸೋಸಿಯೇಷನ್ ೧೯೦೯ರಲ್ಲಿ ಹುಟ್ಟಿತು. ೩೦ ವರ್ಷಗಳ ಕಾಲ ಬಳ್ಳಾರಿಯ ರಾಘವಾಚಾರ್, ಕೈಲಾಸಂ ಅಂಥವರ ಸಹವಾಸ, ಸಂಪರ್ಕ ಸ್ಫೂರ್ತಿಯಲ್ಲಿ ವಿಜೃಂಭಿಸಿತು. ನಂತರ ಅದರ ಹೆಸರ ಅರಿವೇ ಜನಗಳಲ್ಲಿ ಇಲ್ಲದಂತೆ ಅಳಿಯಿತು. ಕಾರಣ ನನಗೆ ತಿಳಿಯದು. ಶ್ರೀರಂಗರ ಧಾರವಾಡದ ಪ್ರಯೋಗವೂ ಹೀಗೇ ಕೊನೆಗೊಂಡಿತು. ಪರ್ವತವಾಣಿ, ವೆಂಕಟರಾಂ ಇತ್ಯಾದಿ ಅವರ ಛಾಯಾ ಆರ್ಟಿಸ್ಟ್ಸ್ ಅವರ ಹಣೇಬರಹವೂ ಇದೇ ಆಯಿತು. ಇತ್ತೀಚೆಗೆ ಬೆಂಗಳೂರಿನ ರವಿ ಕಲಾವಿದರ ಸಂಸ್ಥೆ ೨೫ ವರ್ಷಗಳಕಾಲ ಸತತವಾಗಿ, ಸಾಂಗವಾಗಿ, ಸಾಗಿ ಬಂದಿದೆ. ೮೦ ಕ್ಕೂ ಮೀರಿದ ನಾಟಕಗಳ ಪ್ರಯೋಗ, ಸಾವಿರಕೂ ಮೀರಿದ ಪ್ರದರ್ಶನಗಳನು ಬೆಂಗಳೂರಷ್ಟೇ ಅಲ್ಲ, ದೇಶದ ಇತರೆಡೆಗಳಲ್ಲೂ ಕೊಟ್ಟಿದೆ. ಶ್ರೀ ಕೆ.ವಿ.

---

ವಿಲಾಸೀ ರಂಗಭೂಮಿಯ ಬಗ್ಗೆ ಬರೀ ಘೋಷಣೆಮಾಡಿ, ಅದರ ಬಗೆಗೆ ವಿಚಾರಗೋಷ್ಠಿ ಏರ್ಪಡಿಸಿದರೆ ಏನೂ ಗೈದಂತಲ್ಲ. ನಮ್ಮ ರಂಗಭೂಮಿ, ಇಂಗ್ಲೆಂಡಿನ ವೃತ್ತಿ ವಿಲಾಸೀ ರಂಗಭೂಮಿಯಂತಾಗಬೇಕು ಇದಕ್ಕೆ ಸಾರ್ವಜನಿಕರ ಸಹಕಾರ ಬೇಕೇಬೇಕು ಖೋಸ್ಲಾ ಸಮಿತಿಯು ಸಂಗೀತ ನಾಟಕ ಅಕಾಡೆಮಿಗಳ ಬಗ್ಗೆ ಮಾಡಿರುವ ವರದಿಯನ್ನು ಸರಕಾರವು ಒಪ್ಪಬೇಕು.

---

ಅಯ್ಯರ್ ಮತ್ತು ಶ್ರೀ ಬಿ.ಎಸ್. ನಾರಾಯಣರಾವ ಅವರುಗಳ ಮುಖಂಡತ್ವದಲ್ಲಿ ಈ ಯಶಸ್ವಿಯಾದ ಕೆಲಸ ನಡೆದು ಬಂದಿದೆ. ಆದರೆ ಈ ಸಂಸ್ಥೆಯದು ಒಂದು ಕೋಟೆಯೊಳಗಿನ ಜೀವನದಂತೆ ಸಾಗಿ ಆ ಸಂಸ್ಥೆಯ ಅನುಭವ ಪ್ರಭಾವಗಳು ಸುತ್ತಲೂ ಹರಡಲು ಸಾಧ್ಯವಾಗಿಲ್ಲ. ಇತರ ಪ್ರಭಾವಗಳು ಸಂಸ್ಥೆಯನ್ನೂ ಮುಟ್ಟಿಲ್ಲ (ಆದರೆ ಈ ಸಂಸ್ಥೆಯ ಶಿಸ್ತು, ಒಗ್ಗಟ್ಟು, ಕಾರ್ಯ ತತ್ಪರತೆ, ವಿಧೇಯತೆ, ಇತರರಲ್ಲಿ ಅಸೂಯೆಗಿಂತಲೂ, ಅನುಕರಣೆ ಸ್ಪರ್ಧೆಯನ್ನು ಹೆಚ್ಚಿಸಿದ್ದರೆ ವಿಲಾಸಿ ರಂಗಭೂಮಿಯ ಅಭಿವೃದ್ಧಿಗೆ ಬಹಳ ಸಹಾಯಕವಾಗುತ್ತಿತ್ತು. ಎಂದು ನನ್ನ ನಂಬಿಕೆ.)

ನಾಟ್ಯಸಂಘ, ಸಂಗೀತ ನಾಟಕ ಅಕಾಡಮಿ ಸಂಸ್ಥೆಗಳು ಆಂತರಿಕ ರಾಜಕೀಯದಿಂದ ಕುಂಠಿತವಾಗಿ, ವೀರ್ಯ, ಪ್ರಭಾವ ಎರಡೂ ಇಲ್ಲದಂತಾಗಿವೆ.

ಇಂದಿಗೂ ಹಳೆಯ ಕೊರತೆಗಳೇ ಈ ಕ್ಷೇತ್ರವನ್ನು ಕಾಡುತ್ತಿವೆ. ಒಂದು ಉತ್ತಮವಾದ ಪರಂಪರೆಯನ್ನು, ಒಂದು ಶ್ರೇಷ್ಠವಾದ ಸಂಪ್ರದಾಯವನ್ನು ಸಾಧಿಸಬೇಕು, ಬೆಳಸಬೇಕು ಎಂಬ ಮನೋಭಾವದ ಕಾರ್ಪಣ್ಯ, ಪ್ರಯತ್ನದ ಅಭಾವ. ಈ ವಿಷಯದಲ್ಲಿ ಹಿರಿಯರು, ತಿಳಿದವರ ಅಲಕ್ಷ್ಯ, ಅಸಡ್ಡೆ ಇದಕ್ಕೆ ಕಾರಣ. ಮುಖ್ಯವಾಗಿ ಇಂದಿನ ರಾಜಕೀಯ ವಾತಾವರಣದಲ್ಲಿ ಅವರ ಅಸಹಾಯಕತೆ, ಮುಖಂಡರಿಗಳನೂ ಅಜ್ಞಾನಿಗಳನ್ನು ಹಿಮ್ಮೆಟ್ಟಿಸಲು, ಹೋರಾಡುವ ಛಲವಿಲದಿರುವುದು.

## ಇಂಗ್ಲೆಂಡಿನ ರಂಗಭೂಮಿ

ಇಂಗ್ಲೆಂಡಿನ ವೃತ್ತಿ, ವಿಲಾಸಿ ರಂಗಭೂಮಿಯ ಬೆಳವಣಿಗೆ ಚರಿತ್ರೆಗಳನ್ನು ನಾವು ಗಮನಿಸಿದರೆ ನಮ್ಮ ಲೋಪ ದೋಷಗಳ ಅರಿವು ನಮಗೆ ಚೆನ್ನಾಗಿ ಆಗುತ್ತದೆ. ಅಲ್ಲಿ ಆಗಿರುವ ಪ್ರಯತ್ನ, ಸಾಧನೆ, ಪ್ರಗತಿ ಎಲ್ಲವೂ ಸಾರ್ವಜನಿಕರ ಸಾಹಸದಿಂದ, ಬೆಂಬಲದಿಂದ ಶ್ರದ್ಧೆ ಪ್ರಯತ್ನಗಳಿಂದ. ಸರ್ಕಾರದ ಭಿಕ್ಷೆಯಿಂದಲ್ಲ.

ಬ್ರಿಟಿಷ್ ಡ್ರಾಮಾ ಲೀಗ್ ನಂತಹ ಸಂಸ್ಥೆಯನ್ನು ನಾವು ಎಂದಿಗೆ ಸ್ಥಾಪಿಸ ಬಲ್ಲೆವೋ, ಆ ಭಗವಂತನೇ ಬಲ್ಲ!

ನನಗೇ ತಿಳಿದಂತೆ ೨೫ ವರ್ಷಗಳ ಹಿಂದೆಯೇ ಆ ಸಂಸ್ಥೆಯ ಪುಸ್ತಕಾಲಯದಲ್ಲಿ ೫೦,೦೦೦ ಪುಸ್ತಕಗಳಿದ್ದವು. ಪಾತ್ರಗಳೆಷ್ಟೋ ಅಷ್ಟು ನಾಟಕ ಪ್ರತಿಗಳು. ಈ ಪ್ರತಿಗಳನ್ನು ವಿಲಾಸಿ ಸಂಸ್ಥೆಗಳಿಗೆ ಅತಿ ಕಡಿಮೆ ದರದಲ್ಲಿ ಎರವಲಾಗಿ ಕೊಡುತ್ತಿದ್ದರು. ನಾಟಕಗಳನ್ನಾಡುವ ಸಂಸ್ಥೆಗಳ ಉಪಯೋಗಕ್ಕಾಗಿ ನಾಟಕವನ್ನು ಬೋಧಿಸುವ ಶಾಲಾಕಾಲೇಜುಗಳ ಅಧ್ಯಾಪಕರಿಗಾಗಿ, ನಾಟಕಗಳನು ರಚಿಸುವ ವಿಧಾನಗಳ ಬಗ್ಗೆ, ನಾಟಕ ಪ್ರಯೋಗಗಳ ಬಗ್ಗೆ, ನಿರ್ದೇಶದ ಬಗ್ಗೆ, ರಂಗ ನಿರ್ವಹಣೆ ಬಗ್ಗೆ, ನಾಟಕಗಳನ್ನು ಶಿಕ್ಷಣದ ಅಂಗವಾಗಿ ಬೋಧಿಸುವ ಬಗ್ಗೆ ಅತಿ ನುರಿತ ತಜ್ಞರಿಂದ ಶಿಕ್ಷಣದ ವ್ಯವಸ್ಥೆಯಿತ್ತು. ನಮ್ಮ Make up Expert ಬಿ.ಎನ್. ನಾಣಿ, ದೆಹಲಿಯ ನ್ಯಾಶನಲ್ ಸ್ಕೂಲ್ ಆಫ್ ಡ್ರಾಮ ಪ್ರಿನ್ಸಿಪಾಲರಾದ ಅಲ್ಕಾಜಿಯವರು ಅಲ್ಲಿ ತರಬೇತಿ ಪಡೆದವರು.

ವೃತ್ತಿ ರಂಗಭೂಮಿಯಾಗಲೀ, ವಿಲಾಸಿ ರಂಗಭೂಮಿಯಾಗಲೀ ಅಲ್ಲಿಯ ಸಂಸ್ಥೆಗಳು ೫೦ ವರ್ಷಕ್ಕೂ ಮೀರಿದ್ದು ಯಶಸ್ವಿಯಾಗಿ ನಡೆಯಿಸಿಕೊಂಡು ಬಂದಿರುವುದು ರಂಗಭೂಮಿಯ ಅಭಿಮಾನಿಗಳ ನಿಷ್ಕಾಮ ಕರ್ಮ, ಅಪಾರ ಶ್ರದ್ಧೆ.

ನಮ್ಮ ದೇಶದಲ್ಲಿ ಇಂದು ಮರುಭೂಮಿಯಲ್ಲಿ ಓಯಸಿಸ್‌ಗಳಿರುವಂತೆ ಕೆಲವು ಮುಖ್ಯ ನಗರಗಳಲ್ಲಿ ಹಲ ಕೆಲವು ಸಂಸ್ಥೆಗಳಿವೆ.

ಕಲಕತ್ತೆಯಲ್ಲಿ ವಿಲಾಸಿ ರಂಗಭೂಮಿಯ ಬೆಳವಣಿಗೆ ೨೫ ವರ್ಷಗಳಿಗೂ ಹಿಂದಿನಿಂದ ಸಾಗಿ ಬಂದಿದೆ. ೧೯೪೪ರಲ್ಲೇ ಶಂಭುಮಿತ್ರ ಅವರ ಇಂಡಿಯನ್ ಪೀಪಲ್ಸ್ ಥಿಯೇಟರ್ ಆಶ್ರಯದಲ್ಲಿ ತಮ್ಮ ಪ್ರಯತ್ನ ಪ್ರಯೋಗಗಳನ್ನು ಆರಂಭಿಸಿದರು. ಕಳೆದ ಹತ್ತು ವರ್ಷಗಳಲ್ಲಂತೂ ಕಲಕತ್ತೆಯಲ್ಲಿ, ಹೆಚ ಹೆಚ್ಚು ಸುಶಿಕ್ಷಿತರೂ, ಸುಸಂಸ್ಕೃತರೂ ಈ ಕ್ಷೇತ್ರಕ್ಕೆ ಕಾಲಿಟ್ಟು, ರಂಗಭೂಮಿಯ ಕಾರ್ಯಕಲಾಪಗಳನ್ನು ಅತಿಶಯವಾಗಿ ವಿಕಸಿತಗೊಳಿಸಿದ್ದಾರೆ ಶಂಭುಮಿತ್ರ



ಏನೂ ಈ ರೀತಿ ಅಂಗ ಪ್ರದರ್ಶನ ಯಾಕೆ ಅಂತೀಯಾ?
ನೃತ್ಯ ಸೌಂದರ್ಯ ಇರುವದು ಪ್ರದರ್ಶನಕ್ಕೇ!

ಅವರ ಬಹುರೂಪೀ ಸಂಸ್ಥೆ, ಉತ್ಪಲ್ ದತ್ತರ ಲಿಟಲ್ ಥಿಯೇಟರ್ಸ್ ಗ್ರೂಪ್, ಅಜಿತೇಷ್ ಬ್ಯಾನರ್ಜಿಯವರ ನಾಂದಿಕಾರ್ ಸಂಸ್ಥೆ, ಶ್ಯಾಮಾನಂದ್ ಜಲನ್‌ರವರ ಅನಾಮಿಕಾ ಸಂಸ್ಥೆ (ಇದು ಮುಖ್ಯವಾಗಿ ಹಿಂದೀ ನಾಟಕಗಳನ್ನಾಡುವ ಸಂಸ್ಥೆ.) ಹೀಗೆ ಇವೆಲ್ಲವೂ ಅಖಂಡವಾಗಿ ಶ್ರಮಿಸಿ, ಸಾಂಪ್ರದಾಯಕ ನಾಟಕಗಳನ್ನು, ಪ್ರಾಯೋಗಿಕ ನಾಟಕಗಳನ್ನು, ಪಾಶ್ಚಾತ್ಯ ನಾಟಕಗಳನ್ನು ಉತ್ತಮವಾಗಿ ಪ್ರದರ್ಶಿಸಿ, ರಂಗಭೂಮಿಯ ಬೆಳವಣಿಗೆಗೆ, ಪ್ರಾಶಸ್ತ್ಯಕ್ಕೆ ಸೇವೆಯನ್ನು ಸಲ್ಲಿಸಿವೆ, ಮುಖ್ಯಕಾರಣವಾಗಿವೆ.

ದೆಹಲಿಯಲ್ಲಿ ಅಲ್ಕಾಜಿಯವರ ನೇತೃತ್ವದಲ್ಲಿ ನ್ಯಾಷನಲ್ ಸ್ಕೂಲ್ ಆಫ್ ಡ್ರಾಮ, ರಂಗ ಭೂಮಿಯ ಕ್ಷೇತ್ರದಲ್ಲಿ ಒಂದು ಹೊಸ ಆಂದೋಳನವನ್ನೇ ಸಾಧಿಸಿದೆ ಎನ್ನಬಹುದು. ಅಲ್ಲಿಯ ಮುಖ್ಯವಾದ ಸಂಸ್ಥೆಗಳು ಅಭಿಯಾನ್, ಯಾತ್ರಿಕ್ ಮತ್ತು ದಿಶಾಂತರ್. ಕೊನೆಯ ಸಂಸ್ಥೆಯ ಸದಸ್ಯರೆಲ್ಲಾ ಅನೇಕವಾಗಿ ನ್ಯಾಷನಲ್ ಸ್ಕೂಲಿನ ವಿದ್ಯಾರ್ಥಿಗಳು. ಓಂ ಶಿವಪುರಿಯವರ ಪ್ರತಿಭಾಯುತ ನೇತೃತ್ವದಲ್ಲಿ ಮುಂದರಿದಿರುವ ಸಂಸ್ಥೆ ಇದು. ಗಿರೀಶ್ ಕಾರ್ನಾಡರ "ತುಘಲಕ್" ನಾಟಕವನ್ನು ಹಿಂದಿಯಲ್ಲಿ ಯಶಸ್ವಿಯಾಗಿ ಪ್ರದರ್ಶಿಸಿತು. ಈ ತಂಡ ಬೆಂಗಳೂರಿನಲ್ಲಿ ಶ್ರೀರಂಗರ "ಸುನೋ ಜನಮೇಜಯ್" ನಾಟಕವನ್ನೂ "ಬಿಲ್ಲೀ ಚಲೀ ಪಹನ್ ಕೇ ಜೂತಾ" ಎಂಬ ಇನ್ನೊಂದು ನಾಟಕವನ್ನೂ ಪ್ರದರ್ಶಿಸಿತು. ಈ ನಾಟಕಗಳಲ್ಲಿಯ ರಂಗವಿನ್ಯಾಸ, ನಿರ್ದೇಶನ, ನಟನೆ ಎಲ್ಲವೂ ಬಹಳ ಉತ್ತಮವಾಗಿದ್ದುವು.

ಮರಾಠಿ ವಿಲಾಸಿ ರಂಗಭೂಮಿ, ಅಲ್ಲಿಯ ವೃತ್ತಿ ರಂಗಭೂಮಿಗೂ ಒಂದು ನವಚೇತನವನ್ನು ಕೊಟ್ಟಿದೆ. ನಾಟಕ ಕಲೆಯ ವ್ಯಾಸಂಗದಲ್ಲಿ ಹೆಚ್ಚು ಆಸಕ್ತಿ, ನಾಟಕ ಕರ್ತೃಗಳಲ್ಲಿ, ಯುವಕ ತಂಡಗಳಲ್ಲಿ ವಿಶೇಷವಾಗಿ ಮೂಡಿದೆ. ಪು. ಲ. ದೇಶಪಾಂಡೆ, ವಿಜಯ ತೆಂಡುಲ್ಕಾರ್, ಸತ್ಯದೇವ್ ದೂಬೆ, ಜಬ್ಬಾರ್ ಪಟೇಲ್, ವಿಜಯ ಮೆಹ್ತಾ ಅಲ್ಲಿಯ ರಂಗಭೂಮಿಯ ಪ್ರಸಿದ್ಧವಾದ ವ್ಯಕ್ತಿಗಳು.

## ಪ್ರೋತ್ಸಾಹಕ ಸಂಸ್ಥೆಗಳು

ಬೊಂಬಾಯಿ ನಗರದಲ್ಲಿ ಹತ್ತು ವರ್ಷಗಳ ಹಿಂದೆ ಇದ್ದ ಸ್ಥಿತಿಯನ್ನು ನೆನೆಸಿಕೊಂಡರೆ ಇಂದು ಅಲ್ಲಿಯ ವಿಲಾಸಿ ರಂಗಭೂಮಿ ಬಹಳ ಆಶಾದಾಯಕವಾಗಿ ಕುದುರಿದೆ, ಜನಪ್ರಿಯವಾಗಿಯೂ ಬೆಳೆಯುತ್ತಿದೆ. ಪ್ರತಿನಿತ್ಯವೂ ಯಾವುದಾದರೊಂದು ಒಳ್ಳೆಯ ನಾಟಕ ಪ್ರಯೋಗವನ್ನು ನೋಡುವ ಅವಕಾಶ ಏರ್ಪಟ್ಟಿದೆ. ಪ್ರದರ್ಶನಗಳು ವಿಶೇಷತಃ ಗುಜರಾತಿ, ಮರಾಠಿ, ಹಿಂದಿ, ಇಂಗ್ಲಿಷ್ ಭಾಷೆಗಳಲ್ಲಿ ನಡೆಯುತ್ತವೆ.

ಇಷ್ಟೆಲ್ಲಾ ಆದರೂ ನಮ್ಮ ದೇಶದ ವಿಸ್ತೀರ್ಣ, ವೈವಿಧ್ಯಗಳನ್ನು ಯೋಚಿಸಿಕೊಂಡರೆ ಈ ಕ್ಷೇತ್ರವಲ್ಲಿ ಆಗಿರುವ ಕೆಲಸ, ಪ್ರಗತಿ, ಮಹಾನ್ ಸಾಗರದಲ್ಲಿ ಒಂದು ಹನಿ ನೀರು ಬಿದ್ದಂತಿದೆ.

ನಮ್ಮ ಮೈಸೂರು ರಾಜ್ಯದಲ್ಲಿ ವಿಲಾಸಿ ರಂಗಭೂಮಿಯ ಮಾತೆತ್ತಿದರೆ ಬೆಂಗಳೂರು, ಮೈಸೂರು ನಗರಗಳಲ್ಲಿಯ ಚಟುವಟಿಕೆಗಳ ಚರ್ಚೆ ಮಾತ್ರ ಸಾಗುತ್ತಿದೆ. ಇತರ ಎಡೆಗಳಲ್ಲಿ ಏನಾದರೂ ಕೆಲಸ ನಡೆಯುತ್ತಿದೆಯೋ, ಇಲ್ಲವೋ ತಿಳಿಯದಾಗಿದೆ.

ಶಾಲಾ ಕಾಲೇಜುಗಳಲ್ಲಿ, ಫ್ಯಾಕ್ಟರಿ ಮತ್ತಿತರ ಸಂಸ್ಥೆಗಳ ಕಲಾ ಸಂಘಗಳ ಆಶ್ರಯದಲ್ಲಿ ಹಳ್ಳಿಗಳಲ್ಲಿ ನಾಟಕದ ಗುರುಗಳನ್ನು ಗೊತ್ತು ಮಾಡಿಕೊಂಡು ಅಭ್ಯಾಸ ಮಾಡುವ ಪ್ರಯೋಗಗಳೂ, ಇವೆಲ್ಲಾ ವಿಲಾಸಿ ರಂಗಭೂಮಿಯಲ್ಲವೇ?

ಈ ಸಮಗ್ರ ದೃಷ್ಟಿಯಿಂದ ವಿಲಾಸಿ ರಂಗಭೂಮಿಯ ಸಂಘಟನೆಗೆ, ಸಂವರ್ಧನೆಗೆ ಒಂದು ಗುರಿ, ಒಂದು ಯೋಜನೆಯನ್ನು ನಾವು ರೂಪಿಸಿಕೊಳ್ಳಬೇಕು.

ಗುರಿ ನಮ್ಮ ನಾಡಿನಾದ್ಯಂತ, ಕಲಾಪೂರ್ಣವಾದ, ಕಲಾತ್ಮಕವಾದ, ಪ್ರಗತಿಗಾಮಿಯಾದ ವಿಲಾಸಿ ರಂಗಭೂಮಿಯ ಪ್ರಚಾರ ಪ್ರಸಾರ. ವಿಲಾಸಿ ರಂಗಭೂಮಿ ಹರಡಬೇಕು. ಸಾವಿರಾರು ತಂಡಗಳು ಹಬ್ಬಿ, ಪ್ರೇಕ್ಷಕ ವರ್ಗ ಬೆಳೆದು, ರಂಗಭೂಮಿ ಜೀವಂತವಾಗಬೇಕು.

ಇದಕ್ಕೆ ಯೋಜನೆ ಮುಖ್ಯವಾಗಿ, ಬಹು ಮುಖ್ಯವಾಗಿ ಮೊದಲಾಗಿ ಒಂದು ಉತ್ತಮ ಶಿಕ್ಷಣ ಕೇಂದ್ರ ಸ್ಥಾಪಿತವಾಗಬೇಕು. ಕೇಂದ್ರದ ಸಮೇತ ಅಭ್ಯಾಸ

ಪ್ರಯೋಗಗಳಿಗೆ ಒಂದು ಪುಟ್ಟ, ಅಚ್ಚುಕಟ್ಟಾದ ರಂಗ ಮಂದಿರ ಮತ್ತು ಒಳ್ಳೆಯ ಪುಸ್ತಕ ಭಂಡಾರ ಇರಬೇಕು. ನಾಟಕ ರಚನೆ, ನಾಟಕ ನಿರ್ಮಾಣ, ನಟನೆ, ನಾಟಕ ನಿರ್ಮಾಣ ಕಲೆಯ ತಂತ್ರಗಳು ಹೀಗೆ ನಾಟಕ ರಂಗ ಭೂಮಿಯ ಸರ್ವಾಂಗ ಶಿಕ್ಷಣ ಏರ್ಪಾಟಾಗಬೇಕು. ಸುವ್ಯವಸ್ಥಿತವಾದ, ಸುಪುಷ್ಟವಾದ ಬೆಳವಣಿಗೆಗೆ ಇದು ಒಂದೇ ಮಾರ್ಗ. ಈ ಮೂಲ ಶಿಕ್ಷಣವಿಲ್ಲದೆ, ನಾಟಕೋತ್ಸವಗಳಿಂದ, ನಾಟಕ ಸ್ಪರ್ಧೆಗಳಿಂದ ಆಗುವ ಪ್ರಯೋಜನ ಅಷ್ಟಪಷ್ಟೇ.

ಬೆಂಗಳೂರಿನ ರವೀಂದ್ರ ಕಲಾ ಕ್ಷೇತ್ರ ರಾಷ್ಟ್ರ ರಂಗಮಂದಿರವಾಗಬೇಕು. ಅದಕ್ಕೆ ಸೇರಿದಂತೆಯೇ ಶಿಕ್ಷಣ ಕೇಂದ್ರವಾಗಬೇಕು.

ನಮಗೆ ಸ್ವಾತಂತ್ರ್ಯ ಬಂದು ೨೫ ವರ್ಷಗಳಾದುವು. ಕರ್ನಾಟಕ ಏಕೀಕರಣವಾಗಿ ಒಂದೂವರೆ ದಶಕವೇ ಕಳೆದಿದೆ. ಆದಾಗ್ಯೂ ಈ ರೀತಿಯ ರಂಗ ಮಂದಿರ, ಶಿಕ್ಷಣ ಕೇಂದ್ರವಿಲ್ಲದಿರುವುದು ಶೋಚನೀಯವಲ್ಲವೇ? ಇದಕ್ಕೆ ಪ್ರಯತ್ನವೂ ಆಗುತ್ತಿಲ್ಲದಿರುವುದೂ ಮತ್ತು ದುಃಖಕರವಾದ ಸಂಗತಿಯಲ್ಲವೇ?

ವಿಲಾಸಿ ರಂಗಭೂಮಿ ಸುಶಿಕ್ಷಿತ ರೀತಿಯಲ್ಲಿ ಪರಿಷ್ಕೃತವಾದರೆ, ಅದರ ಅಸರೆ, ನೆರವು, ವೃತ್ತಿ ರಂಗಭೂಮಿಗೆ ಆಧಾರವಷ್ಟೇ ಅಲ್ಲ, ಪೋಷಕವೂ ಆಗುತ್ತದೆ.

ಇತ್ತೀಚೆ ಖೋಸ್ಲಾ ಸಮಿತಿಯವರು ಸಂಗೀತ ನಾಟಕ ಅಕಾಡಮಿಗಳ ವಿಷಯದಲ್ಲಿ ಮಾಡಿರುವ ವರದಿಯಲ್ಲಿ ಅವರು ಸೂಚಿಸಿರುವ ಸಲಹೆಗಳನ್ನು ಕಾರ್ಯ ರೂಪಕ್ಕೆ ತಂದರೆ, ರಂಗಭೂಮಿಯ ಉತ್ತಮ ಬೆಳವಣಿಗೆ ಮುಂದಾದರೂ ಸಾಧ್ಯ.

ಮನರಂಜನೆ ತೆರಿಗೆಯ ಆದಾಯದ ಒಂದು ಭಾಗವನ್ನು ಕಲೆಗಳ ಉತ್ತೇಜನಕ್ಕೆ ಮೀಸಲಾಗಿಡುವುದು; ಸುಸಜ್ಜಿತ ರಂಗ ಮಂದಿರಗಳು; ಸಂಗೀತ ಸಭಾ ಗೃಹಗಳ ನಿರ್ಮಾಣ; ಪುಸ್ತಕ ಭಂಡಾರಗಳು ಮತ್ತು ಮ್ಯೂಸಿಯಮ್ ಗಳನ್ನು ಪ್ರತಿ ಕಲೆಯ ಸಂಬಂಧವಾದ ಸಂಶೋಧನೆ, ಅಧ್ಯಯನಕ್ಕೆ ಅನುಕೂಲವಾಗಿ ಸ್ಥಾಪಿಸುವುದು; ಸಮಿತಿಗಳಲ್ಲಿ ತಜ್ಞರು, ಅನುಭವಿಗಳು, ಮುಖ್ಯವಾಗಿ ಕಲೆಯನ್ನು ಉದ್ಯೋಗವಾಗಿಟ್ಟುಕೊಂಡು ಪರಿಶ್ರಮಿಸುತ್ತಿರುವವರನ್ನು ನೇಮಕ ಮಾಡುವುದು, ಕಲಾ ಸೇವೆಗಾಗಿ ಏರ್ಪಟ್ಟ ಸಂಸ್ಥೆಗಳಿಗೆ ಸರ್ಕಾರದ ಗೋಜು ಗೊಡವೆಗಳಿಲ್ಲದೆ ಸ್ವನಿಯಂತ್ರಣದ ಜವಾಬ್ದಾರಿಯನ್ನು ಕೊಡುವುದು; ಇಂತಹ ಸಂಸ್ಥೆಗಳಿಗೆ ವಿದ್ವಾಂಸರನ್ನು ಪಂಡಿತರನ್ನು ಮುಖ್ಯಸ್ಥರಾಗಿ, ಅಧಿಕಾರಿಗಳಾಗಿ ನೇಮಿಸುವುದು; ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸುವುದು; ಈ ಎಲ್ಲ ಕಾರ್ಯಕ್ರಮಗಳ ಏಕೀಕರಣ ಇತ್ಯಾದಿ.

ಆದರೆ ರಾಜಕೀಯವೂ ಹಳೆಯ ಮಠಗಳ ರೀತಿ ಸಾಗುತ್ತಿರುವ ಈ ಕಾಲದಲ್ಲಿ ಈ ರೀತಿಯ ಸುಧಾರಣೆಗಳಾಗುವ ನಂಬಿಕೆ ನನಗಿಲ್ಲ. ಶಾಸಕರು, ಅಧಿಕಾರಿಗಳಾದವರೆಲ್ಲಾ ತಕ್ಷಣವೇ ಪಂಡಿತರೂ ಆಗುತ್ತಾರೆ ಎಂಬ ಸಾಂಪ್ರದಾಯವೇ ಜಾಸ್ತಿಯಾಗಿದೆ.

ಏನೇ ಕೆಲಸವಾಗಬೇಕಾದರೂ ವಿಲಾಸಿ ರಂಗಭೂಮಿಯ ನಿಸ್ಪೃಹರಾದ ಅಭಿಮಾನಿಗಳಿಂದಲೇ ಸಾರ್ವಜನಿಕರ ಬೆಂಬಲದಿಂದಲೆ ಆಗಬೇಕು.

ಈ ದಿಸೆಯಲ್ಲಿ ಪ್ರಯತ್ನ ಹೆಚ್ಚಬೇಕು. ಈಗಾಗಲೇ ಬಂಗಾಳದಲ್ಲಿ ವಿಲಾಸಿ ತಂಡಗಳೆಲ್ಲಾ ಒಂದುಗೂಡಿ, "ಬಾಂಗ್ಲಾ ನಟ ಮಂಚ್ ಪ್ರತಿಷ್ಠಾ ಸಮಿತಿ" ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಸ್ವಾವಲಂಬನೆಯ ಕಾರ್ಯಕ್ರಮವನ್ನು ಕೈಗೊಂಡಿದ್ದಾರೆ. ಮಹಾರಾಷ್ಟ್ರದಲ್ಲೂ ಇದೇ ರೀತಿಯ ಕೆಲಸವನ್ನು ಆರಂಭಿಸುವ ಪ್ರಯತ್ನ ನಡೆದಿದೆ.

ಈಗೀಗ ಬೆಂಗಳೂರಿನಲ್ಲಿ ಅಮೆಚೂರ್ ಡ್ರಾಮಾಟಿಕ್ ಅಸೋಸಿಯೇಷನ್ ಹೆಸರಿನಲ್ಲೇ ಈ ರೀತಿಯ ಯೋಜನೆಯನ್ನು ಮೈಗೂಡಿಸುವ ಸಿದ್ಧತೆಗಳು ನಡೆಯುತ್ತಿವೆ. ಈ ಸಂಸ್ಥೆಗೆ ಕಲಾ ಕ್ಷೇತ್ರದ ಎದುರೇ ಒಳ್ಳೆಯ ಸೈಟು ಇದೆ. ತೆರೆಯ ಮರೆಯಲ್ಲೇ ಶ್ರಮಿಸಿರುವ ಕೆಲವು ನಾಟಕಾಭಿಮಾನಿಗಳ ಪ್ರಯತ್ನದಿಂದ ಸ್ವಲ್ಪ ಹಣವೂ ಸಂಗ್ರಹವಾಗಿದೆ. ವಿಲಾಸಿ ರಂಗಭೂಮಿಯ ಅಭಿಮಾನಿಗಳೆಲ್ಲಾ ತಮ್ಮ ಚಿಕ್ಕ ಪುಟ್ಟ ವ್ಯತ್ಯಾಸ ರಾಜಕೀಯಗಳನ್ನು ಮರೆತು, ಈ ಕೆಲಸಕ್ಕೆ ಹಾಗೂ ವರದಾಚಾರ್ಯರ ಹೆಸರಿನಲ್ಲಿ ನಿರ್ಮಿತವಾಗಿರುವ ರಂಗ ಮಂದಿರವನ್ನು ಒಂದು ಒಳ್ಳೆಯ ನಾಟಕ ಕೇಂದ್ರವಾಗಿ ಮಾಡುವ ಪ್ರಯತ್ನ ಮಾಡಿದರೆ ನಾ ಹೇಳಿದ ಕೆಲವು ಕನಸುಗಳು ನನಸಾಗಬಹುದು.

●



# ರಂಗಭೂಮಿ ಸಮಸ್ಯೆಗಳು

ಶ್ರೀರಂಗ

-೧-

ಸ್ವಾತಂತ್ರ್ಯದ ತರುವಾಯ ಭಾರತದಲ್ಲಿ ಚಲಚಿತ್ರೋದ್ಯಮಕ್ಕೆ ವಿಶೇಷ ಉತ್ತೇಜನ ದೊರೆಯಿತೆಂದು ಹೇಳಬಹುದು. ಕೇಂದ್ರ ಮತ್ತು ರಾಜ್ಯ ಸರಕಾರಗಳು ಒಂದೆಡೆ ಫಿಲ್ಮ್ ಫೈನಾನ್ಸ್ ಕಾರ್ಪೊರೇಶನ್ ಎಂಬ ಸಂಸ್ಥೆಯನ್ನು ರಚಿಸಿ ಉತ್ತಮ ಚಿತ್ರಗಳ ತಯಾರಿಕೆಗೆ ಧನಸಹಾಯವನ್ನು ಒದಗಿಸುವುದು, ಇನ್ನೊಂದೆಡೆ ದೇಶದ ಮತ್ತು ರಾಜ್ಯಗಳ ಮಟ್ಟದಲ್ಲಿ ಚಿತ್ರ, ನಿರ್ದೇಶಕ, ನಟ–ನಟಿ, ಸಂಗೀತ, ಫೋಟೊಗ್ರಾಫಿ ಮುಂತಾದುವುಗಳಿಗೆ ವರ್ಷವರ್ಷಕ್ಕೆ ಪಾರಿತೋಷಕಗಳನ್ನು ಕೊಡುವದು–ಇವು ಎರಡು ಕೈಗಳಿಂದಲೂ ಎಂಬಂತೆ ಸಲ್ಲುತ್ತಿರುವ ಸಕ್ರಿಯ ಪ್ರೋತ್ಸಾಹವನ್ನು ಕೊಡುತ್ತಿವೆ.

ಇದೇ ಅವಧಿಯಲ್ಲಿ ಸಂಗೀತ–ನೃತ್ಯ–ನಾಟಕಗಳ ಬಗ್ಗೆ ಕೇಂದ್ರದಲ್ಲಿ ಮತ್ತು ಅನೇಕ ರಾಜ್ಯಗಳಲ್ಲಿ ಸರಕಾರಗಳು ಅಕಾಡೆಮಿಗಳನ್ನು ರಚಿಸಿ ಈ ಅಕಾಡೆಮಿಗಳ ಮೂಲಕ ಕಲೆಗೆ ಉತ್ತೇಜನವನ್ನು ಕೊಡುತ್ತಿವೆ. ಆದರೆ ಚಲಚ್ಚಿತ್ರಗಳಲ್ಲಿಯಂತೆ ಈ ಕಲೆಗಳಿಗೆ ಕೊಡುವ ಉತ್ತೇಜನಕ್ಕೆ ಯಾವ ನಿಶ್ಚಿತ ಸ್ವರೂಪವಾಗಲಿ, ಸಕ್ರಿಯತೆಯಾಗಲಿ ಬಂದಿಲ್ಲ. ಇದಕ್ಕೆ ಒಂದು ಕಾರಣವೂ ಇದೆ. ಚಲಚ್ಚಿತ್ರಗಳ ಸಂದರ್ಭದಲ್ಲಿ ಕೆಲವೊಂದು ಸಂಸ್ಥೆಗಳು ರಚಿತವಾದಂತೆ, ಈ ಸಂಸ್ಥೆಗಳು ಕ್ರಮೇಣ ತಮ್ಮದೊಂದು ಸಂಘಟನೆಯನ್ನು ಮಾಡಿಕೊಂಡಂತೆ, (ದೃಷ್ಟಾಂತಕ್ಕೆ) ನಾಟಕಗಳ ಬಗ್ಗೆ ನಿರ್ದಿಷ್ಟವಾದ ಪರಿಸ್ಥಿತಿ ಇಲ್ಲ. ಸ್ವಾತಂತ್ರ್ಯದ ಪೂರ್ವದಲ್ಲಿ ಕೆಲವು ರಾಜ್ಯಗಳಲ್ಲಿ ನಾಟಕ ಕಂಪನಿಗಳಿದ್ದುವು. ತರುವಾಯದಲ್ಲಿ ಇವು ಕ್ರಮೇಣ ಮಾಯವಾಗತೊಡಗಿದುವು. ಇದಲ್ಲದೆ ನಾಟಕದಲ್ಲಿ ವಿಲಾಸಿ (amateur) ರಂಗಭೂಮಿಯು ದೇಶದ ಬೇರೆ ಬೇರೆ ರಾಜ್ಯಗಳ ಭಾಷೆಗಳಲ್ಲಿ ನೂರಾರು ಸಂಖ್ಯೆಯಲ್ಲಿ ಬೆಳೆದಿದೆ. ಈ ಕಾರಣಕ್ಕಾಗಿ ಕೇಂದ್ರದಲ್ಲಿಯಾಗಲಿ ರಾಜ್ಯಗಳಲ್ಲಿಯಾಗಲಿ ಸಂಗೀತ ನಾಟಕ ಅಕಾಡೆಮಿಗಳು ಸಲ್ಲಿಸುವ ಸಹಾಯವು ಅವ್ಯವಸ್ಥಿತವಾಗಿ, ಅನಿಯತವಾಗಿ, ಅನಿಶ್ಚಿತವಾಗಿ, ಉದ್ದೇಶರಹಿತವಾಗಿ ಮತ್ತು ಕೊನೆಯದಾಗಿ ಸಾಲದಷ್ಟಾಗಿ ಹಂಚಲ್ಪಡುತ್ತದೆ. ಇದರಿಂದ ಇಂತಹದೊಂದು ವಿಲಾಸಿ ಸಂಸ್ಥೆಯು ಖಂಡಿತವಾಗಿ, ಅಕಾಡೆಮಿಯ ಸಹಾಯದಿಂದ ಪ್ರಗತಿಯನ್ನು ಹೊಂದಿದೆ ಎಂದು ಹೇಳುವಂತಿಲ್ಲ, ಪ್ರಗತಿಗೆ ಅಕಾಡೆಮಿಯ ಸಹಾಯವು ಅಗತ್ಯ ಎಂಬಂತಹ ಪರಿಸ್ಥಿತಿಯೂ ಇಲ್ಲ, ಅನೇಕ ಸಲ ಅನರ್ಹವಾದಲ್ಲಿ ಸಹಾಯವು ದೊರೆಯುವುದು ಆಶ್ಚರ್ಯವಲ್ಲ.

ದುಃಖದ ಮಾತೆಂದರೆ, ಈ ಎಲ್ಲ ಅಕಾಡೆಮಿಗಳು ತಂತಮ್ಮ ಘಟನೆ (Constitution) ಗಳಲ್ಲಿ ಘನವಾದ ಉದ್ದೇಶಗಳನ್ನಿಟ್ಟುಕೊಂಡಿವೆ: ಆದರೆ ಇಂದಿಗೂ ಅದರಲ್ಲಿ ನೂರಕ್ಕೆ ೫೦ರಷ್ಟನ್ನಾದರೂ ಸಾಧಿಸಿವೆಯೆ ಎಂಬುದರ ಬಗೆಗೆ ಸಂಶಯವಿದೆ. ಕೇಂದ್ರ ಅಕಾಡೆಮಿಯೂ ದೆಹಲಿಯಲ್ಲಿ ನಾಟ್ಯ ಶಿಕ್ಷಣ ಸಂಸ್ಥೆಯನ್ನು ನಡೆಸಿದ್ದು; ಅನೇಕ ಅಕಾಡೆಮಿಗಳು 'ಜಾನಪದ ರಂಗಭೂಮಿಗೆ ಪ್ರೋತ್ಸಾಹ' ಎಂಬ ಹೆಸರಿನಿಂದ ಕ್ರಮ ಮತ್ತು ಉದ್ದೇಶಗಳಿಲ್ಲದೆ ಹಳ್ಳಿಗರು ಆಡುವುದನ್ನು, ಕುಣಿಯುವುದನ್ನು, ಹಾಡುವುದನ್ನು ದೆಹಲಿಯಲ್ಲಿಯೂ ಕೆಲಸಲ ವಿದೇಶಗಳಲ್ಲಿಯೂ ತೋರಿಸಿದ್ದು ಇಂತಹ ಕೆಲವು ಕೆಲಸಗಳು ಒಳ್ಳೆಯವಲ್ಲವೆ?–ಎಂದು ಕೆಲವರಿಗೆನ್ನಿಸಬಹುದು. ಹಣದ ವೆಚ್ಚ ಮಾತ್ರ ಆಗಿದೆ; ಆದರೆ ಆ ಬಗ್ಗೆ ಅಭ್ಯಾಸ, ಸಂಶೋಧನೆ, ಭಾರತೀಯ ಭಾಷೆಗಳಲ್ಲಿ ಮತ್ತು ಇಂಗ್ಲೀಷದಲ್ಲಿ ಪ್ರಕಟನೆಗಳು-ಎಷ್ಟಿವೆ? ದೇಶದ್ದಂತೂ ಇರಲಿ, ಒಂದು ರಾಜ್ಯದ ಜಾನಪದ ಕಲೆಗಳ ಬಗೆಗೆ ಅಭ್ಯಾಸಪೂರ್ಣವಾದ, ಸಂಗ್ರಹಾತ್ಮಕವಾದ ಗ್ರಂಥವಿದೆಯೇ? ಅಕಾಡೆಮಿಗಳಲ್ಲದೆ ಬೇರೆ ಯಾರಿಂದ ಈ ಕೆಲಸ ಸಾಧ್ಯ? ಈಗ ನಮ್ಮಲ್ಲಿ ನಾಟಕ ಕಂಪನಿಗಳಿವೆ; ಎಷ್ಟು, ಅವುಗಳ ಪ್ರವೃತ್ತಿ ಎಂಥಹದು, ಅಲ್ಲಿಯ ನಟ-ನಟಿಯರಿಗೆ (ಇದ್ದುದಾದರೆ) ಯೋಗ್ಯತೆ ಎಂತಹದು, ಅವರಿಗೆ ತಮ್ಮ ಕಸಬಿನ ಬಗ್ಗೆ ಶಿಕ್ಷಣ–ಸುಸ್ಥಿರತೆ–ಸಂಘಟನೆ ಇವೆಯೆ; ಅವರ ಬಗ್ಗೆ ಜೀವನಾಂಶಗಳ ಮಾಹಿತಿ ಒಂದೆಡೆ ದೊರೆಯುವುದೆ; ಅವರು ದುಡಿಯುತ್ತಿರುವ ವಾತಾವರಣ ಎಂತಹದು–ಮುಂತಾಗಿ ಯಾವ ಮಾಹಿತಿಯೂ ಎಲ್ಲಿಯೂ ದೊರೆಯುವುದಿಲ್ಲ. ಅದರಂತೆಯೆ ನಮ್ಮಲ್ಲಿ ಪ್ರದರ್ಶನ ಯೋಗ್ಯವಾದ ನಾಟಕಗಳ ಪಟ್ಟಿ; ಜಿಲ್ಲೆಯ ಮಟ್ಟದಲ್ಲಾದರೂ ಕ್ರಮಬದ್ಧವಾಗಿ, ಉದ್ದೇಶಪೂರ್ವಕವಾಗಿ ಅವುಗಳನ್ನು ಪ್ರದರ್ಶಿಸುವ ವಿಲಾಸಿ ಸಂಸ್ಥೆಗಳ ಪಟ್ಟಿ; ಈ ಚಟುವಟಿಕೆಗಳ ಬಗ್ಗೆ ತಿಂಗಳಿಗೊಮ್ಮೆಯಾದರೂ ಸಲಹೆ–ವಿಚಾರ–ವಿಮರ್ಶೆಗಳನ್ನು ಕೊಡುವ ಪ್ರಕಟನೆ– ಇಂತಹ ಯಾವುದೂ ಇಲ್ಲ. ಹಣ ಸಾಲದು ಎಂದು ಅಕಾಡೆಮಿಗಳು; ಅಕಾಡೆಮಿಗಳು ಮಾಡುತ್ತಿವೆ. ಎಂದು ಸರಕಾರಗಳು– ಹೀಗೆ ಎರಡೂ ಕಡೆಗಳಿಂದಲೂ ಇಂತಹ ಯಾವುದೇ ಕೆಲಸಕ್ಕೆ ಸಹಾಯವಾಗಲಿ, ಸಂಘಟನೆಯಾಗಲಿ ದೊರೆಯದೆ ಹೋಗಿದೆ.

-೨-

ಇದೇ ಸಂದರ್ಭದಲ್ಲಿ ಇನ್ನೊಂದು ಮಾತನ್ನು ಹೇಳಬಹುದು, ಸ್ವಾತಂತ್ರ್ಯದ ತರುವಾಯ ನಮ್ಮ ಕಲೆಗಳಿಗೆ ಪ್ರೋತ್ಸಾಹ ದೊರೆಯುತ್ತಿದ್ದು ಅವು ಪ್ರಗತಿಪಥದಲ್ಲಿವೆ ಎಂಬುದು ಉಪಚಾರದ ಮಾತಿನಂತೆ ಎಲ್ಲ ಸಂದರ್ಭಗಳಲ್ಲೂ ಕೇಳಬರುತ್ತಿದೆ. ಆ ಮಾತು ನಿಜವಿದ್ದರೆ ಕೇಂದ್ರ ಸರಕಾರವು ಕೇವಲ ೨೫ ವರ್ಷಗಳಲ್ಲಿ ಎರಡು ವಿಚಾರಣಾ ಸಮಿತಿಗಳನ್ನು ನಿಯಮಿಸುವ ಅಗತ್ಯವೇನಿದ್ದಿತು? 'ಪ್ರೋತ್ಸಾಹ' 'ಪ್ರಗತಿ' ಮುಂತಾದ ಶಬ್ದಗಳು ಸಾಪೇಕ್ಷವಾಗಿವೆ. ಪ್ರೋತ್ಸಾಹಕ್ಕೆ ಒಂದು ಉದ್ದೇಶವಿರುವುದು; ಕಲೆಗಾರರಿಗೆ ನಿವೃತ್ತಿ ವೇತನವನ್ನಾಗಲಿ ಧನಸಹಾಯವನ್ನಾಗಲಿ ಮಾಡಿದರೆ ಕಲೆಗೆ ಪ್ರೋತ್ಸಾಹ ದೊರೆತಂತಾಗಲಿಲ್ಲ; ವರ್ಷಕ್ಕೊಮ್ಮೆ ಆಧುನಿಕ ಯಾಂತ್ರಿಕ ಉಪಕರಣಗಳಿಗಾಗಿ ಯಾವುದೇ ಸಂಸ್ಥೆಗೆ ಇಲ್ಲವೆ ಪ್ರಯೋಗಾತ್ಮಕ ಪ್ರದರ್ಶನ ಎಂದು ಯಾವುದೊ ನಾಟಕ ಪ್ರದರ್ಶನಕ್ಕೆ ಧನಸಹಾಯವನ್ನು ಮಾಡಿದ ಮಾತ್ರಕ್ಕೆ ಕಲೆ ಉತ್ಕರ್ಷವನ್ನು ಹೊಂದಿದಂತಾಗುವುದಿಲ್ಲ; ಕೊಟ್ಟ ಧನಸಹಾಯವು ಗೊತ್ತು ಮಾಡಿದ ಉದ್ದೇಶ ಸಾಧನೆಗೆ ಪೋಷಕವಾಗಬೇಕು; ಹಾಗೆ ಆಗುವುದೆಂಬ ಭರವಸೆ ಮೂಡಿಸುವ ಯೋಗ್ಯತೆ ಆ ಸಂಸ್ಥೆಯಲ್ಲಿರಬೇಕು; ಹಾಗೆ ಆಗಿದೆಯೆ ಇಲ್ಲವೆ ಎಂಬುದನ್ನು ನೋಡಿಕೊಳ್ಳಲು ಅಕಾಡೆಮಿಗೆ ಅವಕಾಶ–ಅಧಿಕಾರಗಳಿರಬೇಕು, ಆದರೆ ಇಲ್ಲಿ ಮುಖ್ಯ ತೊಂದರೆ ಎಂದರೆ ಅಕಾಡೆಮಿಗಳ ರಚನೆ. ಅನೇಕ ಸಲ ಈ ಅಕಾಡೆಮಿಗಳಲ್ಲಿ ಕಲೆಗಾರರಿಗೆ ಸದಸ್ಯತ್ವ ದೊರೆಯುವುದಲ್ಲದೆ ಆ ಕಲೆಯ ತಜ್ಞರಿಗೆ ದೊರೆಯುವುದಿಲ್ಲ, ಇನ್ನು ಕೆಲವು ಸಲ ಯಾವ ಅರ್ಹತೆಯೂ ಇಲ್ಲದೆ 'ವಶೀಲಿ'ಯಿಂದ ಸದಸ್ಯರಾದವರಿರುವರು, ಕಲೆಯನ್ನರಿತೂ ಆ ತಜ್ಞತೆಯಿಂದ ಕಾರ್ಯವನ್ನು ನಡೆಸಬಲ್ಲ, ನಿರ್ದೇಶಿಸಬಲ್ಲ ದಕ್ಷರು ಕಡಿಮೆ ಎಂಬುದು ನಿಜ. ಆದರೆ ಅಂತಹರಿದ್ದಲ್ಲಿ ಅವರ ಮಟ್ಟಿಗೆಯೆ ಕಾರ್ಯನಿರ್ವಾಹಕ ಶಕ್ತಿಯನ್ನು ಬಿಟ್ಟುಕೊಡಬಹುದಲ್ಲ? ಇಂತಹವರ ಸಂಖ್ಯೆ ನಮ್ಮ ಇಡಿಯ ದೇಶದಲ್ಲಿಯೆ ಇದುದಕ್ಕಿಂತಲೂ ಹೆಚ್ಚಾಗಿರುವ ಇಂಗ್ಲೆಂಡಿನ ಆರ್ಟ್ಸ್ ಕೌನ್ಸಿಲ್ ಎಂಬ ಸಂಸ್ಥೆಯಲ್ಲಿ ಸಂಗೀತ, ನೃತ್ಯ, ನಾಟಕ ಮೂರನ್ನೂ ಸೇರಿಸಿ ಕೇವಲ ೧೬ ಜನರ ಒಂದು ಮಂಡಳವಿದೆ. ಅದರಲ್ಲಿ ಮೂರರ ಬಗ್ಗೆಯೂ ೬ ಜನರದೊಂದು ಕಾರ್ಯನಿರ್ವಾಹಕ

ಭವ್ಯ ಹಿನ್ನೆಲೆಯನ್ನು ಹೊಂದಿರುವ ನಮ್ಮ ರಂಗಭೂಮಿ ಇಂದು ಬಡವಾಗುತ್ತಿರುವುದಕ್ಕೆ ಅದು ಎದುರಿಸುತ್ತಿರುವ ಸಮಸ್ಯೆಗಳೇ ಕಾರಣ. ಆ ಸಮಸ್ಯೆಗಳ ಪರಿಹಾರಕ್ಕೆ ನಮ್ಮ ಸರಕಾರ, ಅಕಾಡೆಮಿ ಯಾವ ರೀತಿಯಿಂದ ಶ್ರಮಿಸಬೇಕು, ವೃತ್ತಿನಾಟಕ ಸಂಸ್ಥೆ ಮತ್ತು ವಿಲಾಸಿ ನಾಟ್ಯ ಸಂಸ್ಥೆಗಳು ಉತ್ತಮ ನಾಟಕಗಳನ್ನು ಆಡದಿರುವುದಕ್ಕೆ ಕಾರಣವೇನು, ಉದಯೋನ್ಮುಖ ಕಲಾವಿದ, ನಾಟಕಕಾರ, ನಿರ್ದೇಶಕರಿಗೆ ಅಕಾಡೆಮಿ ಸರಕಾರಗಳು ಸಲ್ಲಿಸಬಹುದಾದ ಸಹಾಯದ ಬಗ್ಗೆ ವಿಶದ ವಿವೇಚನೆ ಇಲ್ಲಿದೆ.........

ಮಂಡಳವಿದ್ದು, ಒಂದೊಂದು ಕಲೆಗೆ ಒಬ ಸಲಹೆಗಾರನಿರುವನು. ಈ ಸಲಹೆಗಾರನಿಗೆ ತಮ್ಮ ಅನುಭವದಿಂದ ಸಹಾಯ ಮಾಡಲು ಒಂದೊಂದು ಕಲೆಗೆ ೨೦ ರಂತೆ ವೈಯಕ್ತಿಕ ಅರ್ಹತೆಗಾಗಿ ನಿಯಮಿಸಲ್ಪಟ್ಟ ಕಲೆಗಾರರಿರುವರು. ಯಾವನೂ ಯಾವ ಸಂಸ್ಥೆಯನ್ನೂ ಪ್ರತಿನಿಧಿಸುವುದಿಲ್ಲ, ಕಲೆಯ ಪ್ರತಿನಿಧಿ ಮಾತ್ರ ಅವನು. ಇದಕ್ಕೂ ಮುಖ್ಯವಾದುದೆಂದರೆ ಆರ್ಟ್ಸ್ ಕೌನ್ಸಿಲ್ ಎಂಬುದು ಪೂರ್ತಿ ಸ್ವಾಯತ್ತ ಸಂಸ್ಥೆ.

ಈಗ 'ಪ್ರಗತಿ' ಎಂಬ ಎರಡನೆಯ ಕಲ್ಪನೆಯ ಬಗೆ ವಿಚಾರ ಮಾಡೋಣ. ದೃಷ್ಟಾಂತಕ್ಕೆ, ನಮ್ಮ ರಂಗಭೂಮಿ–ಅದರಲ್ಲೂ ವಿಲಾಸಿ ರಂಗಭೂಮಿಯು–ಪ್ರಗತಿಯನ್ನು ಹೊಂದುತ್ತಿದೆ ಎಂದು ಸಹಜವಾಗಿಯೆ ಹೇಳುತ್ತೇವೆ. ಹಾಗೆಂದರೇನು? ಪ್ರಗತಿಯು ಮುಂದಿನ ಹೆಜ್ಜೆ ಎನ್ನುವಾಗ ನಮ್ಮ ಹೆಜ್ಜೆ ಇದಕ್ಕೂ ಹಿಂದೆ ಇದ್ದಿತು ಎಂಬುದರ ಸಾಪೇಕ್ಷತೆಯನ್ನು ನಾವು ಸೂಚಿಸುತ್ತೇವೆ. ಆದರೆ 'ಪ್ರಗತಿಯ ಮುಂಚಿತ'ದ ಅವಸ್ಥೆ ಯಾವುದಿದ್ದಿತು ಎಂಬುದರ ಆಭಾಸವಾಗಲಿ ಜ್ಞಾನವಾಗಲಿ ಇದೆಯೆ? ಇದರಂತೆಯೆ, 'ಪ್ರಗತಿ' ಎಂಬುದು ಸಿದ್ಧಿಯಲ್ಲ, ಸಾಧನ ಮಾತ್ರ. ಯಾವ ಗುರಿಗಾಗಿ ನಾವು ಮುಂದೆ ನಡೆಯುತ್ತಿದ್ದೇವೆ? ಅದನ್ನು ಹೇಳುವ ತಜ್ಞ ವಿಮರ್ಶಕರು ಎಲ್ಲಿದ್ದಾರೆ? ಎಷ್ಟು ಜನ? ಪರಂಪರೆಯ, ಸಂಸ್ಕೃತಿಯ ಅಭಿಮಾನದಿಂದ ಮುಂಚಿನದು ಒಳ್ಳೆಯದು ಎಂದು ಒಂದು ವಾದ. ಪ್ರಗತಿಪರ ಎಂದೆನ್ನಿಸುವ ಪಾಶ್ಚಾತ್ಯ ದೇಶಗಳ ಮಾದರಿಯು ಒಳ್ಳೆಯದು ಎಂಬುದು ಇನ್ನೊಂದು ವಾದ. ಆದರೆ ಸಂಸ್ಕೃತಿಯು ಪರಂಪರೆಯಿಂದಲೆ ಬರುವಾಗಲೂ ತತ್ಕಾಲೀನತೆಯು ಪೋಷಕ ಅನುಭವ! ಮತ್ತು ವಿಚಾರಗಳನ್ನು ಮೈಗೂಡಿಸಿಕೊಂಡು ಚಿರಂತನವಾಗಿ ಬೆಳೆಯುತ್ತಲೇ ಇರುವುದು ಎಂಬುದನ್ನು ಒಬ್ಬರು ಅರಿಯರು. ಕಲೆ ಎಂಬುದು ಒಂದು ಜನತೆಯ ಸಾಮಾಜಿಕ ಜೀವನದ ಮೂಲ ತತ್ತ್ವಗಳ ಆಧಾರದ ಮೇಲೆ ಹಳೆಯ ಗಿಡಕ್ಕೆ ಚಿಗುರುವ ಹೊಸ ಹಸರಿನಂತೆ ಸಹಜವಾದುದು ಎಂಬುದನ್ನು ಇನ್ನೊಬ್ಬರು ಅರಿಯರು. ಹಳೆಯ ಗಿಡಕ್ಕೆ ಹೊಸತಾಗಿ ಗೊಬ್ಬರವನ್ನು ಹಾಕುವ ಅಗತ್ಯವಿಲ್ಲ ಎಂದು ಒಬ್ಬರು, ಒಂದು ನೆಲದ ಗೊಬ್ಬರದಲ್ಲಿ ಇನ್ನೊಂದು ನೆಲದ, ಇನ್ನೊಂದು ಗೊಬ್ಬರದಲ್ಲಿಯ ಗಿಡ ಬೆಳೆಯದು ಎಂಬುದೂ ಇನ್ನೊಬ್ಬರಿಗೆ ಗೊತ್ತಿಲ್ಲ: ಹಳೆಯದನ್ನು ಉಳಿಸಲು ಯತ್ನಿಸುವುದು, ಇಲ್ಲವೆ ಅದಕ್ಕೆ ಹೊರಗಿನ ಮುಲಾಮನ್ನು ಹಚ್ಚುವುದು–ಇದು ಇಂದಿನ ನಮ್ಮ 'ಪ್ರಗತಿ' ಕಲ್ಪನೆಯ ಎರಡು ಚಿತ್ರಗಳಾಗಿವೆ.

-೩-

ಸರಕಾರದಿಂದಾಗಲಿ – ಅಕಾಡೆಮಿಗಳಿಂದಲಾಗಲಿ ದೊರೆಯುವ ಸಹಾಯವು ಉದ್ದೇಶ–ಸಫಲತೆಗೆ ಪೋಷಕವಾಗುತ್ತಿಲ್ಲ ಎಂಬುದನ್ನು ಮೇಲೆಯೆ ಸೂಚಿಸಿದ್ದೇನೆ. ಈ ಬಗ್ಗೆ ಆಸಕ್ತಿ ಇದ್ದವರು, ಬಲ್ಲವರು ವಿಚಾರವನ್ನು ಮಾಡಿ ಕಾರ್ಯಪ್ರವೃತ್ತರಾಗುವದು ಅಗತ್ಯವಾಗಿದೆ. ಇಂದು ಚಲಚ್ಚಿತ್ರಗಳ ಪ್ರದರ್ಶನಕ್ಕೆಂದು ರಾಜ್ಯದಲ್ಲಿ ಒಂದೇ ಒಂದು ನಗರದಲ್ಲಿ ಥಿಯೇಟರುಗಳಿದ್ದಂತೆ ನಾಟಕಪ್ರದರ್ಶನಕ್ಕೆ ಇಲ ಎಂಬುದು ಸ್ಪಷ್ಟವಿದ್ದರೂ ಆ ಬಗ್ಗೆ ಸರಕಾರಗಳಾಗಲಿ ಅಕಾಡೆಮಿಗಳಾಗಲಿ ಬಾಯ್ಮಾತಿನದಲ್ಲದೆ ಬೇರೆ ಯಾವ ತರದ ಕೆಲಸವನ್ನು ವಿಚಾರವನ್ನು ಮಾಡಿಲ್ಲ; ಆಗಾಗ ಇವನ್ನು ಖಂಡಿಸುವುದಲ್ಲದೆ ಬೇರೆ ಯಾವ ಕಾರ್ಯವನ್ನು ನಾಟಕ ಸಂಸ್ಥೆಗಳೂ ಮಾಡಿಲ್ಲ. ಎಂದೋ ಒಮ್ಮೆ ರವೀಂದ್ರನಾಥ ಠಾಕೂರರ ಶತಮಾನೋತ್ಸವದ ನಿಮಿತ್ತವಾಗಿ ಕೆಲವು ರಾಜಧಾನಿಗಳಲ್ಲಿ ನಾಟ್ಯಗೃಹಗಳನ್ನು (ಒಂದೊಂದರಂತೆ) ನಿರ್ಮಿಸಲಾಯಿತು; ಆದರೆ ಅವುಗಳ ಉಪಯುಕ್ತತೆಯನ್ನು ನೋಡಿದರೆ ಅವನ್ನು ಇಂದಿನ ರಂಗಭೂಮಿಯ ಅಗತ್ಯಕ್ಕಾಗಿ ನಿರ್ಮಿಸಲಾಯಿತೆ ಇಲ್ಲವೆ ಆಗಿನ ಕೇಂದ್ರ ವಿದ್ಯಾಮಂತ್ರಿಗಳು ಬಂಗಾಲಿಯಾಗಿದ್ದುದಕ್ಕಾಗಿ ನಿರ್ಮಿಸಲಾಯಿತೆ ಎಂದು ಸಂಶಯ ಬರುವಂತಿದೆ. ಒಂದು ಸಾವಿರದಿಂದ ಹತ್ತು ಸಾವಿರ ಪ್ರೇಕ್ಷಕರಿಗೆ ಆಸನಗಳು ಈ ಥಿಯೇಟರುಗಳಲ್ಲಿವೆ. ನೃತ್ಯಕ್ಕೆ ಪ್ರೇಕ್ಷಕರ ಸಂಖ್ಯೆ ದೊಡ್ಡದಿರುವುದು ಸಹಜ, ನಾಟಕಕ್ಕೆ ಅದಕ್ಕಿಂತ, ಸಂಗೀತಕ್ಕೆ ನಾಟಕಕ್ಕಿಂತ ಕಡಿಮೆ ಸಂಖ್ಯೆಯಲ್ಲಿ ಪ್ರೇಕ್ಷಕರು ಕೂಡುವುದೂ ಅಷ್ಟೇ ಸಹಜ. ಈ ಮಾತನ್ನು ಅರಿತುಕೊಂಡ ವಿದೇಶಗಳಲ್ಲಿ ಅಪೆರಾ, ಬ್ಯಾಲೆ ಮತ್ತು ನಾಟಕ ಇವುಗಳಿಗೆ ತಕ್ಕಂತಹ ಥಿಯೇಟರುಗಳಿವೆ. ವೃತ್ತಿನಾಟಕ ಸಂಸ್ಥೆಗಳಿಗೆ ಹೆಚ್ಚು ಸಂಖ್ಯೆಯ ಪ್ರೇಕ್ಷಕರ ಅಗತ್ಯವಿದ್ದರೂ ನೃತ್ಯಕ್ಕಾಗಿ ನೆರೆಯುವಷ್ಟು ಜನ ನೆರೆತರೆ, (ಧ್ವನಿವರ್ಧಕಗಳಿಗಾಗಿ) ಕೇಳಿಸಿದರೂ, ಕಾಣಿಸುವುದು ಸುಲಭವಲ್ಲ. ವಿಲಾಸಿ ಸಂಸ್ಥೆಗಳ ನಾಟಕಕ್ಕೆ ವಿಶಿಷ್ಟ ಕಾರಣಗಳಿಗಾಗಿ ೩೦೦–೪೦೦ ಕ್ಕಿಂತ ಹೆಚ್ಚು ಪ್ರೇಕ್ಷಕರೂ ಬರಲೇಬೇಕಿಲ್ಲ, ಇದಲ್ಲದೆ ಹಣಕ್ಕಾಗಿ ವೃತ್ತಿಸಂಸ್ಥೆಗಳು ಏನನ್ನೇ ಮಾಡಿದರೂ ಕಲೆಯ ಪ್ರಯೋಗವನ್ನೊಳಗೊಂಡ ವಿಲಾಸಿ ಸಂಸ್ಥೆಗಳ ಪ್ರದರ್ಶನಕ್ಕೆ ಧ್ವನಿವರ್ಧಕವು ಸುತರಾಂ ಇಷ್ಟವಲ್ಲ. ಆದರೆ ಇಂದು ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ನಾಟಕ ಪ್ರದರ್ಶನಕ್ಕೆ ಅಯೋಗ್ಯವಾದ ಸಭಾಂಗಣ (hall)ಗಳಲ್ಲಿಯೂ ಧ್ವನಿವರ್ಧಕ. ಪೂರ್ತಿ ತುಂಬಲಾರದ ದೊಡ್ಡ ಪ್ರೇಕ್ಷಾಗೃಹದ ಥಿಯೇಟರಿನಲ್ಲಿಯೂ ಧ್ವನಿವರ್ಧಕ! ಕೇಂದ್ರದಲ್ಲಾಗಲಿ ರಾಜ್ಯದಲ್ಲಾಗಲಿ ಈ ಪ್ರಶ್ನೆಯನ್ನು ಪೂರ್ತಿಯಾಗಿ ವಿಮರ್ಶಿಸಿ ವರದಿ ಇಲ್ಲವೆ ವಿಚಾರಮಾಡಲು ಇಂದಿನವರೆಗೆ (ನನಗೆ ಗೊತ್ತಿದ್ದ ಮಟ್ಟಿಗೆ) ಒಂದು ಸಮಿತಿಯೂ ರಚಿತವಾಗಿಲ್ಲ. ಹೋಗಲಿ, ಸರಕಾರವಾಗಲಿ ಅಕಾಡೆಮಿಗಳಾಗಲಿ ಈ ದೃಷ್ಟಿಯಿಂದ ಒಂದಾದರೂ 'ಮಾದರಿ ನಾಟ್ಯಗೃಹ'ವನ್ನು ರಚಿಸಿವೆಯೆ? ಇದರ ಜೊತೆಗೆ ಯಾರೇ ಎಂತಹದೇ ನಾಟ್ಯಗೃಹವನ್ನು ನಿರ್ಮಿಸುವುದಾದಲ್ಲಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಇಂತಿಷ್ಟು ಪ್ರಮಾಣದಲ್ಲಿ ಧನಸಹಾಯವನ್ನು ಮಾಡುವುವು–ಎಂದು ಹೆಮ್ಮೆಯಿಂದ ಹೇಳವುದು! ಬಜೆಟ್ಟಿನಲ್ಲಿ ಗೊತ್ತುಮಾಡಿದ ಹಣವನ್ನು ವೆಚ್ಚಮಾಡಿದರೆ ಸರಕಾರಕ್ಕೆ ಸಂತೃಪ್ತಿ. ಒಟ್ಟು ಎಂತಹದೆ ಆಗಲಿ, ತನ್ನ ಇಲ್ಲವೆ ಇನ್ನೊಬ್ಬರ ಸ್ಮಾರಕ ಎನಿಸುವಂತೆ ಕಟ್ಟಡವನ್ನು ಕಟ್ಟಿಸಿದರೆ ಸಂಸ್ಥೆಗೆ ಸಂತೃಪ್ತಿ.

ಥಿಯೇಟರುಗಳಿಲ್ಲ ಎಂಬ ಒಂದೇ ಒಂದು ತೊಂದರೆ ಎಂದು ಖಂಡಿತ ತಿಳಿಯಲಾಗದು. ಇಂದು ಸರಕಾರವಾಗಲಿ ಅಕಾಡೆಮಿಗಳಾಗಲಿ ಸಂಸ್ಥೆಗಳು ಪ್ರದರ್ಶಿಸುತ್ತಿರುವ ನಾಟಕಗಳಿಗೆಯೇ ಸಹಾಯವನ್ನು ಕೊಡುವುದು ಅನಿವಾರ್ಯವಾಗಿದೆ (ಪ್ರಚಾರ ನಾಟಕಗಳನ್ನು ಬಿಟ್ಟು). ಸಂಸ್ಥೆಯ ಹೊರತಾಗಿ ಬೇರೆ ಯಾರೂ ಇದನ್ನು ಮಾಡುವುದೂ ಶಕ್ಯವಿಲ್ಲ. ಚಲಚ್ಚಿತ್ರೋದ್ಯಮದಲ್ಲಿ ಒಂದೆಡೆ ನಿರ್ಮಾಪಕನಿರುವನು, ಇನ್ನೊಂದೆಡೆ ಹಂಚಿಕೆದಾರನಿರುವನು. (ಅವರು ಮಾಡುವ ಕೆಲಸ ಸರಿ ಎನ್ನಿಸಲಿ, ಎನ್ನಿಸದಿರಲಿ). ಅವರಿಗೆ ನಿರ್ದೇಶಕ, ನಟ–ನಟಿಯರು, ಚಿತ್ರ ಕಥಾ ಲೇಖಕರು, ಸಂಭಾಷಣವನ್ನು ಬರೆಯುವವರು, ಸಂಗೀತವನ್ನು ರಚಿಸುವವರು; ಈ ಬಗ್ಗೆ ಇಂತಿಂತಹರಿದ್ದಾರೆ ಎಂಬ ಮಾಹಿತಿ ಲಭ್ಯವಿರುವದು. ಆದರೆ ನಾಟಕ ಪ್ರದರ್ಶನದ ಸಂದರ್ಭದಲ್ಲಿ ಇದೊಂದೂ ಇಲ್ಲ. ಸಂಸ್ಥೆಯೆ ನಿರ್ಮಾಪಕ, ಸಂಸ್ಥೆಯೆ ಹಂಚಿಕೆದಾರ, ನಿರ್ದೇಶಕ, ಸಂಸ್ಥೆಯ (ಎಂದರೆ ಅದರ ಸದಸ್ಯರೆ) ನಟ–ನಟಿಯರು, ಎಷ್ಟೋ ಸಲ ಸಂಸ್ಥೆಯೇ ನಾಟಕಕಾರ ಕೂಡ! ಈ ಕಾರಣಕ್ಕಾಗಿ ಒಳ್ಳೆಯ ಇಲ್ಲವೆ ಪ್ರಯೋಗಾತ್ಮಕ ಪ್ರದರ್ಶನಗಳಿಗೆ ಕೈಹಾಕುವ ಸಂಸ್ಥೆಗಳು ತೀರ ವಿರಳ.

-೪-

ಅಕಾಡೆಮಿಗಳು ಈ ಕೆಲಸವನ್ನು ಮಾಡಬೇಕು, ಎರಡು ವಿಧದಲ್ಲಿ. ಒಂದು–ನಾಟಕಕಾರನೊಬ್ಬನು ಅಕಾಡೆಮಿಗೆ ಬರೆಯಬಹುದು, 'ನಾನೊಂದು ನಾಟಕವನ್ನು ಬರೆದಿದ್ದೇನೆ. ಅದನ್ನು ಯಾರಿಂದಾದರೂ ಆಡಿಸಬೇಕಾಗಿದೆ, ನೀವು ಸಹಾಯವನ್ನು ಮಾಡಬೇಕು' ಎಂದು.

ಇಲ್ಲವೆ, ಯಾವನಾದರೂ ಒಬ್ಬ ನಿರ್ಮಾಪಕನಿದ್ದಾನೆ ಎನ್ನೋಣ (ಅಂತಹರು ಯಾರೂ ಇಲ್ಲ. ಚರ್ಚೆಯ ಮಟ್ಟಿಗೆ ಹಾಗೆ ಇಟ್ಟುಕೊಳ್ಳೋಣ) ಅವನು ಅಕಾಡೆಮಿಗೆ ಬರೆಯಬಹುದು 'ನನಗೆ ರಂಗಭೂಮಿಯಲ್ಲಿ ಆಸಕ್ತಿ. ಒಂದು ಒಳ್ಳೆಯ ನಾಟಕವನ್ನು ನನ್ನ ವತಿಯಿಂದ ಪ್ರದರ್ಶಿಸಬೇಕು ಎಂದು ಕೊಂಡಿದೇನೆ, ನನಗೆ ಈ ಸಂದರ್ಭದ ಯಾರದೂ ಪರಿಚಯವಿಲ್ಲ. ನೀವು ಸಹಾಯ ಮಾಡಬೇಕು' ಎಂದು. ಇಂದಿನ ಸಮಯದಲ್ಲಿ 'ಇಂತಹ ಕೆಲಸವನ್ನು ಮಾಡುವುದು ನಮ್ಮ ಸಂಸ್ಥೆಯ ಜವಾಬ್ದಾರಿಯಲ್ಲ' ಎಂದು ಅಕಾಡೆಮಿಗಳು ಬರೆಯುವುದೆ ಹೆಚ್ಚು. ಹಾಗಿದ್ದರೆ ಇದು ಯಾರ ಜವಾಬ್ದಾರಿ? ನಾಟಕಕಾರನದೆ? (೩೦ ವರ್ಷ ಮುಂಚಿತ ಅವನದೆ ಆಗಿತ್ತು, ಅಂದು ಬರೆಯುವವರು ಇಂದಿನಷ್ಟು ಇದ್ದಿರಲಿಲ್ಲ) ತನ್ನ ಹಣವನ್ನೇ ತೊಡಗಿಸಿ ಆಡಿಸಬೇಕು ಎಂಬ ನಾಟಕೋತ್ಸಾಹಿಯದೆ?

ಆದರೆ ಇದಕ್ಕಿಂತ ಹೆಚ್ಚಿನ (ಅಥವಾ ನಿಜವಾದ) ತೊಂದರೆ ಎಂದರೆ ಇಂತಹ ಸಹಾಯವನ್ನು ಮಾಡುವ ಯೋಗ್ಯತೆ ಮೂಲದಲ್ಲಿ ನಮ್ಮ ಅಕಾಡೆಮಿಗಳಿಗೆಯೆ ಇಲ್ಲ. ನಾಟಕಕಾರರ, ನಟರ, ನಿರ್ದೇಶಕನ ವೇಷ-ಭೂಷಣ-ರಂಗಸಜ್ಜಿಕೆಗಳ ತಜ್ಞರ ಹೆಸರು ಕೂಡ ಅಕಾಡೆಮಿಗಳ ಕಚೇರಿಗಳಲ್ಲಿರುವುದಿಲ್ಲ. ವಿಳಾಸಗಳಂತೂ ದೂರದಲ್ಲೆಯೆ.ಹೊಸ ನಾಟಕವಿರಲಿ; ಹಳೆಯ ನಾಟಕಗಳ ಪ್ರತಿಗಳು ಕೂಡ ಅ ಎಡೆಮಿಗಳಲ್ಲಿ ಇರುವುದಿಲ್ಲ.ಇಂದಿನ ನಮ್ಮ ಪರಿಸ್ಥಿತಿಯಲ್ಲಿ ಈ ಮಾಹಿತಿಗಿಂತ ಅಗತ್ಯವಾದುದೆಂದರೆ ಅಕಾಡೆಮಿಗಳು ತಮ್ಮ ಪರವಾಗಿಯೆ ಒಂದೆರಡು ಪ್ರದರ್ಶನ-ಸಂಸ್ಥೆಗಳನ್ನು ಗೊತ್ತು ಮಾಡಿಕೊಂಡಿರಬೇಕು. ನಿರ್ದೇಶಕನಿಂದ ಬಣ್ಣದ ತಜ್ಞನ ವರೆಗೆ ಅಗತ್ಯವಿದ್ದ ಎಲ್ಲ ಕಲೆಗಾರರು ಬೇಕಾದಾಗ ಅಕಾಡೆಮಿಗೆ ಲಭ್ಯರಾಗಿರಬೇಕು. ಇಷ್ಟೇ ಅಲ್ಲ, ಪ್ರದರ್ಶನಕ್ಕೆ ಅನುಕೂಲವಾದ, ಸುಸಜ್ಜಿತವಾದ ಒಂದು ನಾಟ್ಯಗೃಹವು ಅಕಾಡೆಮಿಯ ಅಧೀನದಲ್ಲಿರಬೇಕು. ಇನ್ನೂ ಒಂದು ವಿಷಯ. ಇಂದು ಅನೇಕ ಶಾಲೆ-ಕಾಲೇಜುಗಳ ವಿದ್ಯಾರ್ಥಿಗಳು ವಿಲಾಸಿ ತಂಡಗಳಲ್ಲಿ ಯೋಗ್ಯತೆಯುಳ್ಳ ಕಲೆಗಾರರಾಗಿದ್ದಾರೆ. ಬೇಸಿಗೆಯಲ್ಲಿ ೫-೬ ವಾರಗಳು ಇವರ ರಜಾ ಕಾಲ. ಆದುದರಿಂದ ಬೇಸಿಗೆಯ ಮಟ್ಟಿಗೆ ಇವರನು ಸೇರಿಸಿಕೊಂಡು ಕನಿಷ್ಟ ೫-೬ ತಂಡಗಳಾದರೂ ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ನಾಟಕಗಳನ್ನು ಪ್ರದರ್ಶಿಸುವಂತೆ ಏರ್ಪಾಟನ್ನು ಮಾಡಬಹುದು. ಅಕಾಡೆಮಿಗಳಿಗೆ ಸರಕಾರದಿಂದ ಸಾಕಷ್ಟು ಧನಸಹಾಯ ದೊರಕುವುದಿಲ್ಲ ಎಂಬ ನೆಪ ಹುರುಳಿಲ್ಲದ್ದು. ಕೊಟ್ಟ ಧನಸಹಾಯದಲ್ಲಿ ಇಂತಹ ಉಪಯುಕ್ತ ಕಾರ್ಯವನು ಮಾಡಬಹುದಲ್ಲ? ಆ ಅನುಭವದಿಂದ ಹೆಚ್ಚಿನ ಧನಸಹಾಯವನ್ನು ಬೇಡಬಹುದಲ್ಲ? ಒಂದು ದೃಷ್ಟಿಯಿಂದ ಈ ರಂಗದಲ್ಲಿ ಸರಕಾರಕ್ಕೆ ಉಪಯುಕ್ತ ಸಲಹೆಗಳನ್ನು ಮಾಡುವುದು ಅಕಾಡೆಮಿಗಳ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿದೆ. ಸರಕಾರವು ಕೊಟ್ಟ ಹಣವನ್ನು ಸುಮ್ಮನೆ ಉದ್ದೇಶರಹಿತವಾದ ಕಾರ್ಯಕ್ರಮಗಳಿಂದ ವೆಚ್ಚ ಮಾಡುವುದು ಅಕಾಡೆಮಿಯ ಕರ್ತವ್ಯವೆ ಅಲ್ಲ.

ಈ ಬಗ್ಗೆ ಸರಕಾರದ ಧೋರಣೆಯಲ್ಲಿಯೂ ಒಂದು ಬದಲಾವಣೆಯಾಗುವುದಗತ್ಯವಿದೆ. ಇಂದು ನಮ್ಮ ದೇಶದ ಎಲ್ಲ ಅಕಾಡೆಮಿಗಳು ಹೆಸರಿಗೆ ಸ್ವಾಯತ್ತವೆನ್ನಿಸಿದರೂ ಸರಕಾರಕ್ಕೆ ಪೂರ್ತಿ ಅಧೀನವಾಗಿವೆ. ಅಕಾಡೆಮಿಯ ಉದ್ದೇಶವೆಂದರೆ ಬರೀ ನಾಟಕಗಳ ಪ್ರದರ್ಶನವಲ್ಲ; ಹೀಗಿರುವಾಗಲೂ ಇಂತಹ ಸಂದರ್ಭದಲ್ಲಿ ಇಂತಹ ವ್ಯಕ್ತಿ(ಗಳಿ)ಗಾಗಿ ಒಂದು ಮನೋರಂಜನದ ಕಾರ್ಯಕ್ರಮದ ಏರ್ಪಾಟನು ಮಾಡಬೇಕು — ಎಂದು ಆರ್ಡರ್ ಹೊರಡಿಸುವುದು (ಅನೇಕ ಸಲ ೮-೧೦ ದಿವಸ ಮಾತ್ರ ಮುಂಚಿತ ನಮ್ಮ ಸರಕಾರಗಳ ಪದ್ಧತಿಯಾಗಿದೆ. ಇದರಂತೆಯೆ ಅಕಾಡೆಮಿಗಳಲಿ ಸರಕಾರೀ ನೌಕರರು ಅಧಿಕಾರಿಗಳಾಗಿದ್ದುಕೊಂಡು—ಒಮ್ಮೊಮ್ಮೆ ಬರೀ ಸದಸರಾಗಿ ಸ್ಹಗ ಕೂಡ-ಸರಕಾರೀ ಅಧಿಕಾರದ ದರ್ಪದಲ್ಲಿ ಕಲೆಯ ಜ್ಞಾನವೂ ತಮಗಿದೆ ಎಂಬಂತೆ ವರ್ತಿಸುವರು. ಸಹಾಯಧನವನ್ನು ಕೊಡುವುದೆಂಬುದಕ್ಕೆ ಆಯ-ವ್ಯಯ ಪರಿಶೀಲನೆಯ ಅಧಿಕಾರ ಸರಕಾರಕ್ಕಿರಲಿ. ಸರಕಾರವು ತನ್ನ ಒಬ್ಬ ಪ್ರತಿನಿಧಿಯನು ಕಾರ್ಯನಿರ್ವಾಹಕ ಮಂಡಳದಲ್ಲಿರಿಸಲಿ, ಅದಕ್ಕೆ ವಿರೋಧವಿಲ್ಲ; ವಿರೋಧಸಲ್ಲದು ಕೂಡ. ತಜ್ಞರನ್ನು ನಿಯಮಿಸುವುದಾದಲಿ ಅವರ ತಜ್ಞತೆಯ ಸಲಹೆ-ಸಹಾಯಗಳ ಲಾಭವನ್ನು ಪಡೆಯುವುದಕ್ಕೆ ನಿಯಮಿಸಬೇಕಲ್ಲದೆ ಸರಕಾರದ ಆಜ್ಞೆಯನ್ನು ಕಾರ್ಯಗತ ಮಾಡುವುದಕ್ಕಲ್ಲ.

-೫-

ಸಾಹಿತ್ಯ ಮತ್ತು ಕಲೆಗಳ ಪ್ರೋತ್ಸಾಹಕ್ಕಾಗಿ ಸಹಾಯ ಧನವನು ಕೊಡುವುದೆನ್ನುವಾಗ ನಮ್ಮ ದೇಶದ ವಿಶಿಷ್ಟ ಪರಿಸ್ಥಿತಿಯಲ್ಲಿ ಕೆಲವು ಸಂಗತಿಗಳನು ಗಮನಿಸುವುದು ಅಗತ್ಯವಾಗಿದೆ. ಸದ್ಯದ ಸ್ವಾತಂತ್ರ್ಯ ರಜತೋತ್ಸವದ ದೃಷ್ಟಾಂತವನ್ನು ನೋಡಬಹುದು. ಈ ಉತ್ಸವದ ಅಂಗವಾಗಿ ಸಾಂಸ್ಕೃತಿಕ ಚಟುವಟಿಕೆಗಳನು, ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ. ಒಟ್ಟು ೧೫-೨೦ ದಿನಗಳ ಪೂರ್ವಸಿದ್ಧತೆ, ಲಕ್ಷಾವಧಿ ರೂಪಾಯಿಗಳ ವೆಚ್ಚ! ಸರಕಾರಗಳಿಗಾಗಲಿ ಅಕಾಡೆಮಿಗಳಿಗಾಗಲಿ ಈ ಬಗ್ಗೆ ಇಡಿಯ ವರ್ಷ ಯಾವ ವಿಚಾರವೂ ಇದ್ದಿರಲಿಲ್ಲ. ಸರಕಾರಗಳು ಹಣ ಕೊಟ್ಟಾಗ ನೋಡೋಣ ಎಂದು ಅಕಾಡೆಮಿಗಳು, ಆ ಸಮಯಕ್ಕೆ ಬಂದು ಹಣವನ್ನು ವೆಚ್ಚ ಮಾಡಿದರಾಯಿತು ಎಂದು ಸರಕಾರೀ ಇಲಾಖೆಗಳು ಸ್ವಯಂತೃಪ್ತವಾಗಿರುವುವು: ಕೊನೆಗೆ ಅವಸರದಲ್ಲಿ ರಾಜಧಾನಿಗಳಲ್ಲಿ ಮಂತ್ರಿಗಳ, ಜಿಲ್ಲಾ ಸ್ಥಳಗಳಲ್ಲಿ ಜಿಲ್ಲಾಧಿಕಾರಿಗಳ ಸಮಕ್ಷದಲ್ಲಿ ಒಂದು ಕಾರ್ಯಕ್ರಮವನ್ನು ನಡೆಸುವುದು, ಅದರ ಮಟ್ಟವೇನು, ಭಾಗವಹಿಸುವ ಕಲಾವಿದರ ಸ್ಥಾನಮಾನಗಳೇನು, ಆ ವೆಚ್ಚದಿಂದ ಒಂದು ಕಾರ್ಯಕ್ರಮ ನಡೆದಂತಾಯಿತೆ, ಇಲ್ಲವೆ ಮೂಲೆಮೂಲೆಗಳಲ್ಲಿ ನಾಗರಿಕರಿಗೆ ನಮ್ಮ ಸಂಸ್ಕೃತಿಯ ಪರಿಚಯವಾಗಿ ಆ ಬಗ್ಗೆ ಅಭಿಮಾನ ಮೂಡಿತೆ-ಇಂತಹ ಪ್ರಶ್ನೆಗಳನ್ನು ಕೇಳುವವರು ದೆವ್ವಬಡಕರು (faddists) ಎನಿಸುವರು. ವರ್ಷವಿಡೀ ಹೀಗೆ ನಡೆಯುವ ಅನೇಕ ಸಂದರ್ಭಗಳಿರುವುವು. ಜಿಲಾಧಿಕಾರಿಯೊ ಶಾಸನ ಸಭಾ ಸದಸನೊ, ಒಮ್ಮೊಮ್ಮೆ ಮಂತ್ರಿಯೊ, ಒಂದು ವ್ಯಕ್ತಿಗೆ ಇಲ್ಲವೆ ತಂಡಕ್ಕೆ ಶಿಫಾರಸು ಪತ್ರವನ್ನು ಕೊಟ್ಟರೆ ಸಾಕು, ಯಾವ ತಜ್ಞನ ಅಭಿಪ್ರಾಯವೂ ಬೇಕಿಲ್ಲ, ಸಹಾಯಧನ ದೊರೆಯಿತೆಂದೇ ತಿಳಿಯಬೇಕು.

ಸರಕಾರ ಇಲ್ಲವೆ ಸಾರ್ವಜನಿಕರು ಮಾತ್ರ ಇಂತಹ ತಪ್ಪನೇ ಮಾಡುವರು ಎನ್ನುವ ಹಾಗಿಲ್ಲ. ಕಲಾವಿದರ ತಂಡಗಳೂ ಹೀಗೆಯೆ ವರ್ತಿಸುವುವು. 'ಇಂತಹ ನಾಟಕ. ಇದು ಪ್ರಯೋಗಾತ್ಮಕ. ಇಂತಹರು ನಿರ್ದೇಶಕರು, ಇಂತಹರು ನಟರು. ಆದುದರಿಂದ ನಮಗೆ ಸಹಾಯಧನ ಕೊಡಬೇಕು' ಎಂದು ಹಕ್ಕುಳ್ಳವರಂತೆ ಅನೇಕ ತಂಡಗಳು ವರ್ತಿಸುತ್ತಿವೆ. ಆದರೆ ಇದುವರೆಗೆ ಸರಾಸರಿಯಿಂದ (average) ಹೇಳುವುದಾದರೆ ಒಂದು ನಾಟಕದ ಒಂದು ಪ್ರದರ್ಶನಕ್ಕಿಂತ ಹೆಚ್ಚು ಸಾಹಸ ಮಾಡುವ ಅಭ್ಯಾಸ ಕನ್ನಡ ವಿಲಾಸಿ ತಂಡಗಳಿಗಿಲ್ಲ. ಬಿಮ್ಮ ಮಾಡಿ ಮುಗಿಸಿ ಮರೆಯುವ ಕಾರ್ಯಕ್ರಮಕ್ಕೆ ಸಹಾಯಧನವನ್ನು ಕೊಟ್ಟಲ್ಲಿ ಅದು ಅಪವ್ಯಯ ಎಂದೇ ಹೇಳಬಹುದು. ಬರೀ ವೈಯುಕ್ತಿಕ ಯೋಗ್ಯತೆಯನ್ನವಲಂಬಿಸಿ ಸಹಾಯ ಮಾಡಿದರೆ ಪ್ರಯೋಜನವಿಲ್ಲ. ರಂಗಭೂಮಿಯು ಜಾಗ್ರತವಾಗಿರಬೇಕು. ರಂಗಭೂಮಿಯು ಅಭಿವೃದ್ಧಿ ಹೊಂದಬೇಕು. ರಂಗಭೂಮಿಯು ರಾಜ್ಯದ ಎಲ್ಲ ನಾಗರಿಕರಿಗೆ ಮುಟ್ಟಬೇಕು. ಅದಕಾಗಿ ಆ ಬಗ್ಗೆ ನಿರಪೇಕ್ಷವಾಗಿ, ನಿರಂತರವಾಗಿ, ಸಾಂಘಿಕವಾಗಿ ನಿಯಮಬದ್ಧವಾಗಿ ನಡೆಯುವ ಪ್ರಯತ್ನಗಳಿಗೆ ಮಾತ್ರ ಪ್ರೋತ್ಸಾಹ ದೊರೆಯಬೇಕು. ಆಧುನಿಕ ಕನ್ನಡ ರಂಗಭೂಮಿಯು ರಾಜಧಾನಿಯ ಮಟ್ಟಿಗೆ ಸೀಮಿತವಾಗಿದೆ. ಅಳಿದುಳಿದ ಹತ್ತಾರು ವ್ಯವಸಾಯ ತಂಡಗಳು ಉಪಜೀವಿಕೆಯ ದೃಷ್ಟಿಯಿಂದ ದುಡಿಯುತ್ತಿವೆ. ಹೀಗಿರುವಾಗ ಒಂದು ನಿರ್ದಿಷ್ಟ ಧ್ಯೇಯದಿಂದ ರಂಗಭೂಮಿಯನ್ನು ಸಂಘಟಿತಗೊಳಿಸುವುದಗತ್ಯವಾಗಿದೆ. ಸದ್ಯಕ್ಕೆ ನಮ್ಮ ರಂಗಭೂಮಿಯು ಚಲಚ್ಚಿತ್ರಗಳಲ್ಲಿ ರೂಢವಾದ ಶಬ್ದದಲ್ಲಿ ಹೇಳುವುದಾದರೆ ಸಾಹಸ ( Stunt ) ರಂಗಭೂಮಿಯಾಗಿದೆ. ಆದುದರಿಂದ ಪ್ರೇಕ್ಷಕರಿಗೆ ಆ ಬಗ್ಗೆ ಕುತೂಹಲವಿದ್ದರೂ, ಆದರವಿರುವುದು ಶಕ್ಯವಿಲ್ಲ.

* * * *

ಸಮಸ್ಯೆಗಳ ಪಟ್ಟಿಯನ್ನು ಕೊಡುವುದು ಈ ಲೇಖದ ಉದ್ದೇಶವಲ್ಲ. ಆದರೆ ಅಗತ್ಯವಾಗಿ ವಿಚಾರ ಮಾಡಬೇಕಿದ್ದ ಅನೇಕ ಸಮಸ್ಯೆಗಳಿವೆ ಎಂಬುದನ್ನು ನಾಟಕಾಭಿಮಾನಿಗಳ ಲಕ್ಷ್ಯಕ್ಕೆ ತರುವ ಉದ್ದೇಶದಿಂದ ಕೆಲವನ್ನು ಆಯ್ದು ಇಲ್ಲಿ ಕಾಣಿಸಿದ್ದೇನೆ.

ಇವುಗಳಿಗೆ ಪರಿಹಾರ ದೊರೆಯದ ಹೊರತು ಸರಕಾರದ ಧನಸಹಾಯ, ಉತ್ಸಾಹಿ ವಿಲಾಸಿಗಳ ಪ್ರಯತ್ನ, ಸಾರ್ವಜನಿಕರ ಕುತೂಹಲ ಇವು ಬಂಜರ ಭೂಮಿಯಂತೆ ನಿರರ್ಥಕ ಎಂದು ಸ್ಪಷ್ಟವಾಗಿ ಹೇಳಬಯಸುತ್ತೇನೆ.



# ಪ್ರಚಾರಕ್ಕೂ ರಂಗಭೂಮಿ

— ಡಾ। ಎಚ್. ಕೆ. ರಂಗನಾಥ್

ಮನೋರಂಜನೆಗಾಗಿ ಸಮಾಜ ಸುಧಾರಣೆಗಾಗಿ ಇರುವ ರಂಗಭೂಮಿ ಒಂದು ರೀತಿಯಿಂದ ಪ್ರಚಾರ ರಂಗಭೂಮಿಯೂ ಆಗಿದೆ. ಆದರೆ ಅಂತಹ ಪ್ರಚಾರ ಕಲಾತ್ಮಕವಾಗಬೇಕು. ಆಗ ಮಾತ್ರ ರಂಗಭೂಮಿ ನಿಜವಾದ ಸಾರ್ಥಕತೆಯನ್ನು ಕಂಡುಕೊಳ್ಳುತ್ತದೆ.

ನೊನ್ನೆ ಹೆಸರಾಂತ ಬಯಲಾಟ ತಂಡದ ನಾಯಕರನ್ನು ಕಂಡಾಗ, ಅದೂ ಇದೂ ಮಾತನಾಡುತ್ತ ನಮ್ಮ ಸಮಾಜ ಜೀವನದ ಪಿಡುಗುಗಳಿಂದ ಸರ್ವ ವ್ಯಾಪೀ ಭ್ರಷ್ಟಾಚಾರ, ಜಾತೀಯ ಸಂಘರ್ಷ, ಜನ ಸಂಖ್ಯೆಯ ಬಾಹುಳ್ಯ ಮೊದಲಾದ ವಿಷಯಗಳನು ಅವರ 'ಆಟ'ಗಳಲ್ಲಿ ನಿರೂಪಿಸಿ ಜನತೆಯ ಮನಸ್ಸಿನ ಮೇಲೆ ಬಿಂಬಿಸಲು ಸಾಧ್ಯವಿಲ್ಲವೆ ಎಂದೆ, ಬಿದ್ದೇ ಹೋಗುವಂತೆ ತಲೆ ಅಲ್ಲಾಡಿಸಿದರು. ಅವರ ಉತ್ತರವಾದರೂ ಒಪ್ಪುವಂಥದೇ. "ಇವೆಲ್ಲ ಇಂದಿದ್ದು ನಾಳೆ ಬಿದ್ದು ಹೋಗುವ ಸಮಸ್ಯೆಗಳು. ಅಬ್ಬಾ ಅಂದರೆ ಸಾಮಾಜಿಕ ನಾಟಕಗಳಿಗೆ ವಸ್ತು ಒದಗಿಸಬಹುದು. ನಮ್ಮ ಪ್ರಸಂಗಗಳೆಲ್ಲ ದೇವ-ದೇವತೆಗಳನ್ನು ಕುರಿತು ರಚಿಸಿದಂಥವು. ದುಷ್ಟ ಶಿಕ್ಷಣ-ಶಿಷ್ಟರಕ್ಷಣದಂತಹ ಸಾರ್ವಕಾಲಿಕ ತತ್ವಗಳನ್ನು ಪ್ರತಿಪಾದಿಸುವಂಥವು. ನಮ್ಮ ರಂಗದಲ್ಲಿನ ಪೌರಾಣಿಕ ಪಾತ್ರಗಳು ನಿಮ್ಮ ಇಂದಿನ ಕುಟುಂಬ ಯೋಜನೆಯಂತಹ ಒಂದು ವಿಷಯವನ್ನು ಪರ್ಯಾಯವಾಗಿ ಸೂಚಿಸುವುದೂ ಆಭಾಸ, ಹಾಸ್ಯಾಸ್ಪದ. ಸ್ವಾಮೀ ನಮ್ಮ ಕಲೆಗೆ ಈಗಾಗಲೇ ಆಗಿರುವ ಅಪಚಾರವೇ ಸಾಕಾಗಿದೆ. ದಯವಿಟ್ಟು ನಿಮ್ಮ ಕುಟುಂಬ ಯೋಜನೆಯನ್ನು ಹತ್ತಿರ ತರಬೇಡಿ" ಎಂದು ನಸು ಕೋಪದಿಂದಲೇ ನುಡಿದರು. ಒಪ್ಪುವ ಮಾತು ಎಂದೆ. ಅಲ್ಲಿಗೆ ಬಿಡದೆ, 'ನಮ್ಮ ರಾಮ. ಸೀತೆ, ದ್ರೌಪದಿ, ಭೀಮ, ಹನುಮಂತ, ಪ್ರಹ್ಲಾದರಿರಲಿ, ಯಾವುದೇ ಪಾತ್ರವೂ ಕುಟುಂಬ ಯೋಜನೆಯ ಮಾತನ್ನೇ ಎತ್ತದೆ ತಾವಿರುವ ಕಥೆಯ ಚೌಕಟ್ಟಿನಲ್ಲಿಯೇ ತಮ್ಮ ನಡೆ ನುಡಿಯಿಂದಲೇ ಒಂದು ಮನೆ ಹೇಗಿರಬೇಕು, ಒಬ್ಬ ಮಗ ಹೇಗಿರಬೇಕು ಎಂಬುದನ್ನು ನೋಡಿದವರ ಮನಸ್ಸಿನ ಮೇಲೆ ಅಚ್ಚೊತ್ತುವಂತೆ ಬಿಂಬಿಸಲು ಸಾಧ್ಯವಿಲ್ಲವೆ? ಅಂತಹ ಪ್ರಸಂಗಗಳೂ ಇವೆಯಲ್ಲ. ಅಭಿಮನ್ಯು–" ಎಂದು ಮೊದಲು ಮಾಡಿ ಲಿಸ್ಟ ಕೊಡುವುದರಲ್ಲಿದ್ದೆ. ಅವರು ಮತ್ತೆ ಬಲು ಬಿರುಸಾಗಿ ತಲೆಯನಲ್ಲಾಡಿಸಿ, ನನ್ನ ನಾಲಿಗೆಯನ್ನು ಮೊಟಕು ಮಾಡಿದರು.

"ಹೋಗಲಿ, ರಂಗಕ್ಕೂ ಪ್ರೇಕ್ಷಕರಿಗೂ ಸಂಬಂಧ ಕಲ್ಪಿಸುವ ವಿದೂಷಕ, ಪಾತ್ರ ಪಾತ್ರಗಳಿಗೆ ಗಂಟು ಹಾಕಿ ನಂಟು ಮಾಡುವ ಕೋಡಂಗಿ, ಊರ ಪಟೇಲರ ಹಿತ್ತಲ ತೋಟದ ಬಾಳೆಯ ಗೊನೆಯನ್ನೇ ಕುರಿತು ಆಡುವ ಹನುಮನಾಯಕ, ಹಿಂದು, ಇಂದು, ಮುಂದುಗಳಿಗೆ ಒಂದೇ ಬಂಧ ಹೂಡುವ ಆ ಹಾಸ್ಯಗಾರ,ಅವನೇಕೆ ಇಂದಿನ ಈ ಸಮಸ್ಯೆಗಳನ್ನೆತ್ತಿಕೊಂಡು ಪ್ರೇಕ್ಷಕರನ್ನು ಕುಣಿಸಿ ಆಡಿಸಿ, ಅವರ ಬೆಳಕನ್ನು ಅವರ ಕಣ್ಣಿಗೇ ಸೋಕಿಸುವಂತೆ ಮಾಡಬಾರದು?" ಎಂದೆ. 'ಸಾಧ್ಯವಿಲ್ಲ' ಎನ್ನಬೇಕೆಂದು ಬಾಯಿ ತೆರೆದವರು ಕ್ಷಣ ಕಾಲ ತಡೆದರು. ಯೋಚಿಸಿದರು. "ಇದು ಒಂದು ವೇಳೆ ಸಾಧ್ಯವಾದೀತು" ಎಂದರು. ಮತ್ತೆ ಹತ್ತು ನಿಮಿಷ ಜಿಜ್ಞಾಸೆ ಮೂಡಿದವು.

## ರಂಗಭೂಮಿಯಲ್ಲಿ ಪ್ರಯೋಗಗಳು

ರಂಗಭೂಮಿ ಪ್ರಯೋಗಶೀಲವಾದುದು. ಅನೇಕ ಪ್ರಯೋಗಗಳಿಗೆ ಇಲ್ಲಿ ಆಸ್ಪದವಿರುವುದು; ಪ್ರಯೋಗಗಳು ನಡೆಯುತ್ತಲೇ ಇರುವವು. ಗೊಂಬೆಯಾಟದಿಂದ ಮೊದಲ್ಗೊಂಡು ಇಂದಿನ ಅಸಂಗತ ನಾಟಕಗಳ ವರೆಗೆ ಈ ಬಗೆಯ ಪ್ರಯೋಗ ನಡೆದಿವೆ. ಹವ್ಯಾಸಿ ರಂಗಭೂಮಿ, ವೃತ್ತಿರಂಗಭೂಮಿಗಳಲ್ಲಿ ನಡೆದ ಪ್ರಯೋಗಗಳು. ಪ್ರಚಾರಕ್ಕೂ ರಂಗಭೂಮಿಯನ್ನುಪಯೋಗಿಸಿಕೊಂಡ ಪ್ರಯೋಗ, ತಾಂತ್ರಿಕತೆಯಲ್ಲಿ ಹೊಸತನ ತೋರುತ್ತಿರುವ ಪ್ರಯೋಗ ಹೀಗೆ ರಂಗಭೂಮಿ ಹೊಸ ಹಾದಿಯಲ್ಲಿ ಸಾಗಿಬರತೊಡಗಿದೆ. ವಿವಿಧ ರಂಗಗಳಲ್ಲಿ ನಡೆದ- ನಡೆವ ಪ್ರಯೋಗಗಳನ್ನು ಈ ಮತ್ತು ಮುಂದಿನ ಲೇಖನಗಳು ಸೂಚಿಸುವವು.

ಎಂಥ ಪ್ರಚಾರ ವಿಷಯವನ್ನಾದರೂ ರುಚಿಕಟ್ಟಾದ ಕಲೆಯಾಗಿ ಮಾರ್ಪಡಿಸಲು ರಂಗಸ್ಥಳವಾಗೆ ಅಸಾಧ್ಯ; ಅಂಥ ಗುಣ ಸಾಮರ್ಥ್ಯದಿಂದಲೇ ರಂಗಭೂಮಿಗೆ ನಿತ್ಯ ನಾವೀನ್ಯತೆ; ಕಲಿಯದವನ ವಿಶ್ವವಿದ್ಯಾಲಯ ಎಂಬ ಪಟ್ಟ ಎನ್ನುವ ಮಾತಿಗೆ ಬಂದು ನಿಂತೆವು. ಈ ಮಾತುಕತೆ ನಡೆದ ನಂತರ ಮೂರು ನಾಲ್ಕು ತಿಂಗಳಲ್ಲಿ ಆ ಮೇಳದವರ ಎರಡು ಆಟಗಳನ್ನೂ ನೋಡಿದೆ. ನಾನು ನಿರೀಕ್ಷಿಸಿದ್ದುದಕ್ಕಿಂತ ನಾಲ್ಕು ಹೆಜ್ಜೆ ಮುಂದೆ ಇಟ್ಟುದನ್ನು ಕಂಡು ಆಶ್ಚರ್ಯವಾಯಿತು. ಮೂಲದ ಕತೆಗೆ, ಆಟದ ಸಂಪ್ರದಾಯಕ್ಕೆ ಇನಿತೂ ಅಪಚಾರವಾಗದಂತೆ ಪೌರಾಣಿಕ ಪಾತ್ರಗಳಿಂದಲೇ ಕುಟುಂಬ ಯೋಜನೆಯ ಮಹತಿ ಕುರಿತ ಮಾತುಗಳನ್ನಾಡಿಸಿದ್ದು ಸಂತೋಷದ ಸೋಜಿಗವಾಯಿತು. ಚಕ್ರವ್ಯೂಹದಲ್ಲಿ ಮಡಿದ ಅಭಿಮನ್ಯುವಿನ ಮುಂದೆ ದುರ್ಭರ ಶೋಕದಿಂದ ಕಳವಳಿಸುತ್ತಿದ್ದ ಪಾರ್ಥನನ್ನು ಕೃಷ್ಣ ಸಂತೈಸುತ್ತಿದ್ದ.

"ಹತ್ತು ಹುಟ್ಟುವುದಕ್ಕಿಂತ ಮನೆಯಲ್ಲಿ ಇಂಥದೊಂದು ಮುತ್ತು ಬೆಳಗಬೇಕು. ಅರ್ಜುನಾ! ಎಂಥ ಭಾಗ್ಯವಂತ ತಂದೆ ನೀನು! ಶೌರ್ಯದಲ್ಲಿ ಸಿಂಹದ ಮರಿ ಅವನು. ಹಾಗೆಯೇ ಕಣ್ಣಲ್ಲಿ ಕಣ್ಣಿಟ್ಟು ಬೆಳೆಯಿಸಿದೆ. ನೀನು. ಲೋಕೈಕ ವೀರನೇ ನೀನು ಹೌದು. ಆದರೆ ನಿನ್ನ ಕೀರುತಿಯನ್ನು ಮರೆಯಿಸುವಂತೆ ತನ್ನ ಶೌರ್ಯವನ್ನು ಮೆರೆದಿದ್ದಾನೆ ಅಭಿಮನ್ಯು. ಗುರುವನ್ನು ಮೀರಿಸುವ ಶಿಷ್ಯ ತಂದೆಯನ್ನು ಮೀರಿಸುವಂತಹ ಮಗ ಇವರನ್ನು ಕಾಣುವುದೊಂದು ಚೆಂದ. ಹುಟ್ಟಿದವರೆಲ್ಲ ಸಾಯಲೇಬೇಕಲ್ಲವೆ! ಬಂದರೆ ಇಂಥ ಸಾವು ಬರಬೇಕು. ಮನೆಗೊಬ್ಬ ಮಗನಾಗಿ ಹುಟ್ಟಿ, ಗಂಡು ಹೆಣ್ಣೆನ್ನದೆ ಕಂಡವರೆಲ್ಲ ಮೋಹಗೊಳ್ಳುವಂತೆ ಬೆಳೆದು ಸುಗುಣ ಶೌರ್ಯಗಳ ನಿಧಿಯಾಗಿ ಉಳಿದು ಸತ್ಯವನ್ನುಳಿಸುವ ಸಲುವಾಗಿ ಅಳಿಯಲು ಹಿಂದೆಗೆಯದ ಇಂಥ ವೀರಾಳುವನ್ನು ಯುಗ ಯುಗಗಳು ನೆನೆಯುತ್ತವೆ. ಭಾರತ ದೇಶವನ್ನು ಭಲೇ ಭಲೇ ಎನ್ನುತ್ತವೆ. ಈತ ಮನೆ ಮನೆಗೆ ಆದರ್ಶನಾಗುತ್ತಾನೆ. ಹೇಳ ಹೆಸರಿಲ್ಲದಂತೆ ಹಾಳಾಗಿ ಹೋಗುವ ನೂರು ಹುಳಗಳನ್ನು ಹಡೆದ ಗಾಂಧಾರಿಗಿಂತ–ನಿನ್ನ ಸುಭದ್ರೆ" ಆ ಕೃಷ್ಣ ಹೇಳಿದ ಮಾತುಗಳೆಲ್ಲ ಸರಿ ಎನ್ನಲಾರೆ. ಮಗನ ಹೆಣವನ್ನು ಎದುರಿಗಿಟ್ಟುಕೊಂಡು ಇಂಥ ಮಾತುಗಳನ್ನು ಕೇಳಿದ ಅರ್ಜುನ ಅದು ಹೇಗೆ ಸಮಾಧಾನ ಹೊಂದುತ್ತಾನೋ ತಿಳಿಯದು. ಆದರೆ ಮತ್ತೊಂದು ದೃಷ್ಟಿಯಿಂದ ಆ ಕೃಷ್ಣ ಈ ಕಾಲಕ್ಕೆ ಕಾಂಟೆಂಪೊರರಿ! ಹಳೆಯ ಪಾತ್ರದಲ್ಲಿಯೇ ಹೊಸ ಮಾತುಗಳನ್ನು ಚಿಗುರಿಸಿ ಧ್ವನಿ ಕಾಕುಗಳಿಂದ ಇಂದಿಗೆ ಬೇಕಾದ ಅರ್ಥ ಕೊಡುವುದರಲ್ಲಿಯೇ ಆತನ ಸಾಮರ್ಥ್ಯವಿದೆ. ಎಂತೆಂಥ ಪಾತ್ರಗಳನ್ನು ಇಂದಿನ ರೋಗಗಳಿಗೆ ಮದ್ದು ಕೊಡುವಂತೆ ಅಳವಡಿಸಿಕೊಳ್ಳಲು ಸಾಧ್ಯವಿದೆ. ಹೀಗೆ ಮಾಡುತ್ತ ಬಂದುದರಿಂದಲೇ ನಮ್ಮ ರಂಗಭೂಮಿಗೆ ದೊಡ್ಡ ಬಲ; ಕಟ್ಟಲಾರದ ಚೆಲೆ.

ಹಾಗೆ ನೋಡಿದರೆ ಎಂದಿನಿಂದಲೂ ರಂಗಭೂಮಿ ಒಂದಲ್ಲ ಒಂದು ತತ್ವದ ಪ್ರಚಾರವನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಮಾಡುತ್ತಲೇ ಇದೆ. ಪೌರಾಣಿಕ ಸಂಗತಿಗಳಾದರೂ ಪಾತ್ರಗಳಾದರೂ ಯಾವುದಾದರೊಂದು ತತ್ವಕ್ಕೆ ಅಂಟಿಕೊಂಡೇ ನಿಂತಿರುತ್ತವೆ. ಆ ತತ್ವ ಎದ್ದುನಿಲ್ಲುವುದೋ–ಬಿದ್ದು ಹೋಗುವುದೋ ಎಂಬುದರ ಚಿತ್ರಣವೇ ನಾಟಕ. ಅಂಥ ಚಿತ್ರಣದಲ್ಲಿ, ನೃತ್ಯ, ಅಭಿನಯ, ರಂಗಪರಿಕರಗಳಿಂದ ನೋಟದ ಮೇಲೆ ಮಾಟಬೀಸಿ, ಸಂಗೀತದಿಂದ ಅವನ ಕಿವಿ ತುಂಬಿ, ಆ ನಂತರ ಆ ಗುಂಗಿನಲ್ಲಿ ಕುಳಿತವನ ಒಳಗಣ್ಣು ತೆರೆಯಿಸಿ, ಬಾಳಿಗೆ ಏಚಿತವಾದ ನೀತಿಯನ್ನು ಊಡಿಸುವುದು ಸಾಂಪ್ರದಾಯಿಕ ಕ್ರಮ. ಸತ್ಯ–ಮಿಥ್ಯಗಳ ಸಂಘರ್ಷ ಹಾಗೂ ಸತ್ಯದ ಅಂತಿಮ ವಿಜಯದ ಇಡಿಯ ಚಿತ್ರವನ್ನು ಪ್ರತಿಯೊಂದು ಪೌರಾಣಿಕ ನಾಟಕ ರಂಗದ ಮೇಲೆ ಕಟ್ಟುತ್ತಿತ್ತು. ಅಂಥ ಸಂಘರ್ಷ ನೂರಾರು ನೆಲೆಗಳಲ್ಲಿ, ಸಾವಿರಾರು ಹಂತಗಳಲ್ಲಿ ಮೈದೋರಿಕೊಂಡು 'ಸಾರ್ವಕಾಲಿಕ' ವೆನಿಸಿದ ಮೇಲೆ, ಕಾಲದಿಂದ ಕಾಲಕ್ಕೆ ಸಂಘರ್ಷದ ಬಣ್ಣ ಸ್ವರೂಪಗಳು ಬದಲಾಗತೊಡಗಿದ ಮೇಲೆ, ಅದರ ಚಿತ್ರಣವೂ ಬದಲಾಗ ತೊಡಗಿತು; ರಂಗಭೂಮಿಯ 'ಮುನ್ನಡೆ'ಯನ್ನು ಚಿತ್ರದ ರೀತಿ ತೋರಿಕೊಡುವುದೆಂಬ ನಂಬಿಕೆಯೂ ಬಲಿಯಿತು. ಪೌರಾಣಿಕ ನಾಟಕಗಳಲ್ಲಿನ "ಸಂಘರ್ಷ'ವೇ ಬೇರೊಂದು ರೂಪದಲ್ಲಿ ರೀತಿಯಲ್ಲಿ ಐತಿಹಾಸಿಕ ನಾಟಕದಲ್ಲಿಯೂ, ಸಾಮಾಜಿಕ ನಾಟಕದಲ್ಲಿಯೂ ತೋರಿಕೊಂಡಾಗ, ರಂಗಭೂಮಿ ಅದನ್ನು ಚಿತ್ರಿಸಿದ ಬಗೆ ಬೇರೆಯಾಯಿತು. ಸಂಘರ್ಷದ ಇಡಿಯ ಚಿತ್ರ ಕಾಣದಾಗಿ, ಮೊದಲ ಹೋಳಾದ ಸಮಸ್ಯೆಯನ್ನಷ್ಟೆ ಪ್ರತಿಪಾದಿಸಿ, ಪ್ರೇಕ್ಷಕ ಉತ್ತರವನ್ನು ತನ್ನಲ್ಲಿ ತಾನೆ ಹುಡುಕಿಕೊಳ್ಳುವಂತೆ ಮಾಡುವ ಹೊಸ ಸಂಪ್ರದಾಯವನ್ನು ರಂಗಭೂಮಿ ಮೈಗೂಡಿಸಿಕೊಂಡಿತು. ಒಂದುರೋಗಕ್ಕೆ ಹತ್ತುಬಗೆಯ ಮದ್ದು ಸಾಧ್ಯವೆನ್ನಿಸುವ ರೀತಿ; ನಾಟಕ ನೀಡಿದ ಸಮಸ್ಯೆಗೆ ಪ್ರೇಕ್ಷಕರಲ್ಲಿ ಹತ್ತು ಬಗೆಯ ಪರಿಹಾರ ಹೊಳೆಯುವಂತೆ ಮಾಡುವ ರೀತಿ ಇದು. ಪರಿಹಾರವೇ ನಾಟಕಕಾರನ ಮನಸ್ಸಿನಲ್ಲಿರುವ ಪ್ರಚಾರ. ಇನ್ನೂ ಒಂದು ಹೆಜ್ಜೆ ಮುಂದೆ ಹೋದಾಗ, ರಂಗಭೂಮಿ, ಸಮಸ್ಯೆಯನ್ನೂ ಸಂಪೂರ್ಣವಾಗಿ ಚಿತ್ರಿಸದೆ, ಅದಕ್ಕೆ ಹತ್ತು ಮುಖಗಳಿವೆಯೆಂದು ಹೊಳೆಯಿಸಿ; ಒಂದು ಮುಖವನ್ನು ಮಾತ್ರ ತೋರಿತು; ಪೂರ್ಣಸಮಸ್ಯೆಯನ್ನೂ ಪರಿಹಾರವನ್ನೂ ಪ್ರೇಕ್ಷಕರನೇಕ ಕಲ್ಪಿಸಿಕೊಳ್ಳಬೇಕಾಗಿ ಬಂದ ಕಾಲ, 'ಬುದ್ಧಿಯ ನಾಟಕದ ಕಾಲ'ವೆನಿಸಿಕೊಂಡಿತು. ಇಲ್ಲಿನ ಸಮಸ್ಯೆ, ಪೌರಾಣಿಕ ನಾಟಕದ ಸಮಸ್ಯೆಯಂತೆ ಏಕಮುಖವಾದುದಲ್ಲ; ಪರಿಹಾರವೂ ಒಂದೇ ಅಲ್ಲ. ಸಮಸ್ಯೆಯಲ್ಲಿಯೇ ಪರಿಹಾರವಿದ್ದೀತು; ಅಥವಾ ಪರಿಹಾರದಲ್ಲಿಯೇ ಮತ್ತೊಂದು ಸಮಸ್ಯೆಯ ಮುಖವೇಕೆ ಕಾಣಬಾರದು? ಇಂಥ ಆಧುನಿಕ ನಾಟಕದಲ್ಲಿಯೂ, ನಿರ್ದಿಷ್ಟವಾದ ಪ್ರಚಾರರೇಖೆ ನಿಷ್ಕೃಷ್ಟವಾಗಿ ಹೊಳೆಯುವುದೀಗ ಕುತೂಹಲಕಾರಕವಾದ ಮಾತು.

'ಯಕ್ಷಗಾನದಲ್ಲಿ ಕುಟುಂಬಯೋಜನೆ' ಎಂದರೆ ಹೌಹಾರುವಂತಾಗುತ್ತದೆ ನಿಜ. ಆದರೆ ಪ್ರಚಾರವಾದರೂ ಹತ್ತು ಹಲವಾರು ರೀತಿಗಳಲ್ಲಿ ನಡೆಯಬಹುದಾದ–ನಡೆಯಲೇ ಬೇಕಾದ ವಿಷಯ. ಹದವರಿತು, ಹಿತವಾಗುವಂತೆ, ಪಾತ್ರದ ಅನುಸಂಧಾನಕ್ಕೆ ಊನವಾಗದಂತೆ, ಕೇವಲ ಪರ್ಯಾಯವಾಗಿ ಯಾವುದೇ ವಿಷಯವನ್ನಾದರೂ ವಿವೇಚಿಸಿ ಸೂಚ್ಯವಾಗಿ ಬಿಂಬಿಸಬಹುದಾಗಿದೆ. ಪ್ರೇಕ್ಷಕ, ತನ್ನ ಬುದ್ಧಿಯ ಮಟ್ಟಕ್ಕೆ ತಕ್ಕಂತೆ ಅಲ್ಲಿ ಅರ್ಥಕಂಡುಕೊಳ್ಳುತ್ತಾನೆ. ಮನಸ್ಸಿನ ಮೇಲಾದ ಪರಿಣಾಮದ ಗಾಢತೆಗೆ ಅನುಗುಣವಾಗಿ, ಕಂಡುಕೊಂಡ ನೀತಿಯನ್ನು ಅನುಸರಿಸುತ್ತಾನೆ. ಇಂಥ ಪ್ರಚೋದನೆಯೂ ಪ್ರಚಾರತಾನೇ! ಅದರ ಸಾಧನೆಯಲ್ಲಿ ರಂಗದ ಸಿದ್ಧಿಯಿದೆ.

ಎಂದೇ ಕಾಲದಿಂದ ಕಾಲಕ್ಕೆ ರಂಗಭೂಮಿ, ಅನೇಕ ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು ಅರ್ಥೈಸಿ ತೋರಿತು. ಹಿಂದಿನ ಒಂದುಕಾಲಕ್ಕೆ 'ಮುದುಕನ–ಮದುವೆ'ಯಂತಹ ಕಥಾ ವಸ್ತು ನಮ್ಮ ಜೀವನ್ಮುಕ್ತಳ ನಿರ್ವಿಣ್ಣತೆಯನ್ನು ಸಾರಿದಾಗ ಕೈಕೇ! ಕೇಳಿಗೆ ಸಮಾಜವನ್ನು ತಿವಿದು ಎಚ್ಚರಿಸಿದ ಕೀರ್ತಿ ಪವೀಕ ಮನೆವಾತಿನ 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ', ಗರೂಡರ 'ವಿಷಮ ವಿವಾಹ', ಅ.ನ. ಕೃಷ್ಣರಾಯರ 'ಮದುವೆಯೊ ಮನೆ ಹಾಳೋ' ಮೊದಲಾದ ಕ್ರಾಂತಿಕಾರಕ ನಾಟಕಗಳಿಗೆ ಸಲ್ಲಬೇಕು. ಕುಡಿತದ ದುಷ್ಪರಿಣಾಮವನ್ನು ಕುರಿತು ಮಹಾರಾಷ್ಟ್ರದ ವೃತ್ತಿರಂಗಭೂಮಿ, 'ಏಕಚ್ ಪ್ಯಾಲಾ'ದಂತಹ ರುದ್ರನಾಟಕವನ್ನು ಜನತೆಯ ಮೇಲೆ ಹೂಡಿ ಬಿಟ್ಟಾಗ ಆದ ಪರಿಣಾಮ ಅಗಾಧ. ಆ ನಾಟಕ ಕನ್ನಡದಲ್ಲಿಯೂ ಪ್ರತಿಧ್ವನಿಸಿದಾಗ ಕುಡುಕ ಪಾತ್ರಗಳು ಎಂತೆಂಥ ನಾಟಕದಲ್ಲಿಯೂ ಹುಟ್ಟಿಕೊಂಡವು. ಜಿ.ವಿ. ರಾಮಸ್ವಾಮಿ ಅಯ್ಯಂಗಾರರ 'ಸಿಭಾಗ್ಯಭಾರತಿ'ಯಿಂದ ಹಿಡಿದು, ಹಿರಣ್ಣಯ್ಯನವರ 'ದೇವದಾಸಿ'ಯವರಿಗೆ ಹೆಂಡ ಹೊಳೆಯಾಗಿ ಹರಿದು ಪಾತ್ರಗಳನ್ನು ಕೊಚ್ಚಿಕೊಂಡುಹೋಗಿ, ಕುಡಿತದ ದುಷ್ಪರಿಣಾಮವನ್ನು ಕುರಿತು ಪ್ರಚಾರಮಾಡಿತು. ಹುಯಿಲಗೊಳ ನಾರಾಯಣರಾಯರ 'ಶಿಕ್ಷಣ ಸಂಭ್ರಮ' ದಿಂದ ಕೈಲಾಸಂ ಸೃಷ್ಟಿಸಿದ ಮುದ್ದಣ್ಣನ ವಿದ್ಯಾಭ್ಯಾಸ ಕ್ರಮದ ಚಿತ್ರಣದವರೆಗೆ, ಆ ಒಂದು ಸಂಕ್ರಮಣಕಾಲದಲ್ಲಿ ದಾಸರಾಷ್ಟ್ರವಾಗಿ ನಾವು ತೋರಿದ ಆಂಗ್ಲವಿದ್ಯಾ ಚತುರತೆಯನ್ನು ರಂಗಭೂಮಿ ವಿಡಂಬನಾತ್ಮಕವಾಗಿ ಚಿತ್ರಿಸಿತು. ಶ್ರೀರಂಗರ 'ಹರಿಜನ್ವಾರ್'ದಂತಹ ಅದ್ಭುತ ವಿಶ್ಲೇಷಣ ನಾಟಕವೋ, ಶ್ರೀನಿವಾಸರ 'ತಿರುಪಾಣಿ'ಯಂತಹ ಶ್ರೀಮಂತ ಸಾತ್ವಿಕ ನಾಟಕವೊ ನಾವು ನಮ್ಮೊಡನೆ ಹುಟ್ಟಿದ ಸೋದರನನ್ನು ಅಂತ್ಯಜನೆಂದು ಹೆಸರಿಸಿ ಹೀಗಳೆದು ನಡೆಯಿಸಿಕೊಳ್ಳುತ್ತಿದ್ದ ರೀತಿಯನ್ನು ಎತ್ತಿ ತೋರಿದವು. ಕುವೆಂಪು ಅವರ 'ಬೆರಳ್‌ಗೆ ಕೊರಳ್' 'ಶೂದ್ರ ತಪಸ್ವಿ'ಗಳಲ್ಲಿಯೂ ಅದೇ ಗಾಢ ಸಂವೇದನೆಯ ಅಭಿವ್ಯಕ್ತಿ. ಸಮಾಜದಲ್ಲಿ ದೊಡ್ಡವರೆನ್ನಿಸಿಕೊಂಡವರಲ್ಲಿನ ಸಣ್ಣತನ, ಪೊಳ್ಳುತನ, ಹಾಗೆಯೇ, ಸಣ್ಣವರ ದೊಡ್ಡತನವನ್ನು ತೋರುವಂತಹ ನಾಟಕಗಳಿಗೆ ಕನ್ನಡದಲ್ಲಿ ಕೊರತೆ ಇಲ್ಲ. ಗರೂಡರೂ, ಹಿರಣ್ಣಯ್ಯನವರೂ ಇಂಥ ಪ್ರಭಾವಶಾಲೀ ನಾಟಕಗಳ ಮೆರವಣಿಗೆಯನ್ನೇ ಮಾಡಿದರು. ಮತ್ತೊಂದು ಹೆಜ್ಜೆ ಮುಂದೆ ಹೋಗಿ ದಿಟ್ಟತನದಿಂದ, ಸಮಾಜಘಾತುಕರ ಕೃತ್ರಿಮ ಜೀವನವನ್ನು ಬಯಲುಮಾಡಿ ಸಮಾಜವನ್ನು ಎಚ್ಚರಿಸಿದ ಕೀರ್ತಿ ಯೋಗಾನರಸಿಂಹ ಹಾಗೂ ಮಾಸ್ಟರ್ ಹಿರಣ್ಣಯ್ಯನವರಿಗೆ ಸಲ್ಲಬೇಕು. ಪ್ರಚಾರಕ್ಕೆ ರಂಗ ಅದೆಂಥ ಅದ್ಭುತ ಸಾಧನವೆಂದು ಮತ್ತೆ ಮತ್ತೆ ತೋರಿಕೊಟ್ಟವರು ಅವರು.

ಸಮಾಜದ ದುರದೃಷ್ಟದಿಂದ— ಆದರೆ ರಂಗದ ಅದೃಷ್ಟದಿಂದಲೂ— ನಮ್ಮಲ್ಲಿ ಎಂದಿನಿಂದಲೂ ಸಾಮಾಜಿಕ ಸಮಸ್ಯೆಗಳಿಗೆ ಏನೇನೂ ಕೊರತೆ ಇಲ್ಲ. ಕಾಲದಿಂದ ಕಾಲಕ್ಕೆ ಅಂಥ ಸಮಸ್ಯೆಗಳನ್ನೆತ್ತಿಕೊಂಡು ಭೂತಕನ್ನಡಿ ಹಿಡಿದು ಬೆಳೆಯಿಸಿ ಸಮಾಜದ ಮುಖಕ್ಕೇ ರಾಚುವಂತೆ ಹಿಡಿದ ಕನ್ನಡ ನಾಟಕಗಳ ಸಂಖ್ಯೆ ದೊಡ್ಡದು. ಹಲಗೇರಿ ಕಂಪನಿಯವರು ಅಭಿನಯಿಸುತ್ತಿದ್ದ ಸ್ತ್ರೀ ಬಿ.ಎ, ಚಲ್ತಿದುನಿಯ, ಬ್ಲ್ಯಾಕ್ ಮಾರ್ಕೆಟ್ ಅಂದಿಗೂ ಇಂದಿಗೂ ರಂಜಿಸುವಂಥ ನಾಟಕಗಳು. ಹುಣಸೂರು ಕೃಷ್ಣಮೂರ್ತಿಯವರ 'ಧರ್ಮರತ್ನಾಕರ', ಮಾಸ್ಟರ್ ಹಿರಣ್ಣಯ್ಯನವರ 'ಲಂಚಾವತಾರ' ಅದ್ಭುತವೆನಿಸುವ ಪ್ರಚಾರ ಸತ್ವವುಳ್ಳ ರಂಗನಾಟಕಗಳು. ಆ ಒಂದು ಹಿಂದಿನ ಕಾಲದ ರಂಗನಾಟಕಗಳನ್ನೆ ಹಿಡಿದು ಜಾಲಾಡಿ ನಗೆಯ ಹುಯಿಲೆಬ್ಬಿಸಿ, ಸುಧಾರಿಸಲು ಪ್ರಚಾರಮಾಡಿದ ಕೈಲಾಸಂ ಅವರ 'ನಂಕಂಪ್ನಿ', ಶ್ರೀ ರಂಗರ 'ಸಂಪುಷ್ಟ

ರಾಮಾಯಣ' ಕಾರಂತರ 'ಸುಧಾರಿತ ಸುಭದ್ರ' ಹರಿತ ವಾದ ವಿಡಂಬನೆಯ ಬೀಸುಕೃತಿಗಳು.

ನಮ್ಮ ಸ್ವಾತಂತ್ರ್ಯ ಸಮಯದ ಆ ಸಂಕ್ರಮಣ ಕಾಲದಲ್ಲಿ ಜನತೆಯನ್ನು ಎಚ್ಚರಿಸಿ, ಆಳರಸರಮೇಲೆ ಎತ್ತಿಕಟ್ಟುವ ನಿಷ್ಠ ಪ್ರಚಾರವನ್ನು ನೇರವಾಗಿಯೋ, ಸುತ್ತುಬಳಸಿ ಸೂಚಿಸಿಯೋ ಮಾಡಿದ ಮೊದಲ ಕೃತಿಗಳು ಬಂಗಾಲದಲ್ಲಿ, ಮಹಾರಾಷ್ಟ್ರದಲ್ಲಿ ತೋರಿಕೊಂಡ ಮೇಲೆ ಕನ್ನಡ ರಂಗದಲ್ಲಿಯೂ ಆ ಬಿರುಗಾಳಿ ಬೀಸಿತು. ಖಾಡಿಲ್‌ಕರ್ ಅವರ 'ಕೀಚಕ' ನಾಟಕವನ್ನು ಆಳರಸರು ಪ್ರತಿಬಂಧಿಸಿದ ಕಾಲ ಅದು. ಅದೇ ಸಮಯದಲ್ಲಿ ಜೆಟ್ಟಪ್ಪನವರ ಮಂಡಳಿ 'ಟಿಪ್ಪುಸುಲ್ತಾನ್' ನಾಟಕವನ್ನು ಒಂದೇ ಸಮನೆ ಪ್ರದರ್ಶಿಸಿತು. ಗರೂಡರ 'ಎಚ್ಚಮ ನಾಯಕ', ಗುಬ್ಬಿ ಕಂಪನಿ ಪ್ರದರ್ಶಿಸಿದ 'ಕರ್ನಾಟಕ ಸಾಮ್ರಾಜ್ಯ' (ಮರಾಠಿ ರಂಗದ 'ರಣದುಂದುಭಿ') ಸ್ವಾಮಿನಿಷ್ಠೆ ('ಛತ್ರಪತಿ ಶಿವಾಜಿ'ಯ ಕನ್ನಡ ರೂಪಾಂತರ) ರಾಜಭಕ್ತಿ (ರಾಕ್ಷಸೀ ಮಹತ್ವಾಕಾಂಕ್ಷೆ ನಾಟಕದ ಕನ್ನಡ ರೂಪ) ಮತ್ತೆ ಉತ್ತರ ಕರ್ನಾಟಕದ ಮಂಡಳಿಗಳು ಎಡಬಿಡದೆ ರಂಗದ ಮೇಲೆ ತಂದ 'ಕಿತ್ತೂರು ಚೆನ್ನಮ್ಮ', 'ನರಗುಂದ ಬಂಡಾಯ' 'ಸಂಗೊಳ್ಳಿ ರಾಯಣ್ಣ' 'ಕಿತ್ತೂರ ರುದ್ರಾಂಬೆ' ಮೊದಲಾದ ಸತ್ವಪೂರ್ಣ ಪ್ರಚಾರ ನಾಟಕಗಳು ಆಳರಸರನ್ನು ಕಿರುಗುಟ್ಟಿಸಿದವು. ಗರೂಡರೂ, ಮುಂಡಾಜೆ ರಂಗನಾಥ ಭಟ್ಟರೂ, ಹುಲಿಮನೆ ಸೀತಾರಾಮ ಶಾಸ್ತ್ರಿಗಳೂ, ಸಕ್ರಿಯವಾಗಿ ಆಂದೋಲನದಲ್ಲಿ ಭಾಗವಹಿಸಿದುದಲ್ಲದೆ,ರಂಗದ ಮೂಲಕ ಜನತೆಯನ್ನು ರೊಚ್ಚಿಗೆಬ್ಬಿಸಿ ಆಳರಸರ ಮೇಲೆ ಹಾಯಬಿಟ್ಟವರು. ರಂಗಕ್ಕೊಂದು ನಿರ್ಧಿಷ್ಟವಾದ ಗುರಿಕೊಟ್ಟು ನಡೆಯಿಸಿದ ನೇರರು ಅವರು. ಇಂದು ರೇಡಿಯೋ, ಸಿನಿಮಾ, ವೃತ್ತಪತ್ರಿಕೆಗಳು ಮಾಡುವ ಎಲ್ಲ ಕೆಲಸ ಮುಖ್ಯವಾಗಿ ಪ್ರಚಾರದ ಕೆಲಸ, ಅಂದು ರಂಗಭೂಮಿ ಒಂದೇ ಮಾಡಿತೇನೋ–ದೇಶದ ಲಕ್ಷಲಕ್ಷ ಗ್ರಾಮಾಂತರ ಅನಕ್ಷರಸ್ಥರನ್ನು ಎಚ್ಚರಿಸಿ ಪ್ರಚೋದಿಸಿತೆನೋ ಎನ್ನುವ ಮಟ್ಟಿಗೆ ರಂಗದ ಪಾತ್ರವನ್ನು ಗುರುತಿಸಬಹುದಾಗಿದೆ ಸ್ವಾತಂತ್ರ್ಯ ಸಮರದ ಸಂಧಿಕಾಲದಲ್ಲಿ.

ಹೀಗೆ ರಂಗಭೂಮಿಯು ಹಿಂದೆ ತಾನಾಗಿ ಕೈಗೆತ್ತಿಕೊಂಡ ಹತ್ತು ಹಲವಾರು ಸಮಸ್ಯೆಗಳನ್ನು ಇಂದು ಬಲವಂತದಿಂದ ಅದರ ಕುತ್ತಿಗೆಗೆ ಕಟ್ಟಿ ಪ್ರಚಾರಮಾಡಿಸುವ ಅಗತ್ಯಬಂದಿದೆ. ಕಾರಣವೆಂದರೆ. ಎಂಥ ವಿಷಯದ ಪ್ರಚಾರಕ್ಕೂ–ಅದನ್ನು ಕಲಾತ್ಮಕವಾಗಿ ಮಾಡಿದಾಗ–ರಂಗಭೂಮಿಯಂತಹ ಜೀವಂತ ಮಾಧ್ಯಮ ಬೇರೊಂದು ಇಲ ಎನ್ನುವ ಮಾತು ನಿಜ. ಸಿನೀಮಾ ಜೀವಂತ ಎನಿಸಿದರೂ. ಅನುದಿನದ ಬದಲಾವಣೆಗೆ ಎಂದಿಗೂ ಆಸ್ಪದ ಕೊಡದಂತೆ ಸೆಡೆತುಕೊಂಡ ಮಾಧ್ಯಮ. ರಂಗದ ಅತ್ಯದ್ಭುತಗುಣವೆಂದರೆ ಅದರ ನಿತ್ಯ ನವೀನತೆ. ಒಂದೇ ನಾಟಕದಲ್ಲಿನ ಅದೇ ಪಾತ್ರ, ತನ್ನ ಭೂಮಿಕೆಯನ್ನೂ ಮಾತುಗಳನ್ನೂ ಬದಲಿಸಿ ಅನುದಿನವೂ ಉತ್ತಮಗೊಳಿಸಿಕೊಳ್ಳಲು ಇರುವ ಆಸ್ಪದ ಅಲ್ಲಿ ದೊಡ್ಡದು. ನಮ್ಮ ಜನಜೀವನದಲ್ಲಿನ ಒಂದೊಂದೂ ಸಮಸ್ಯೆ ದಿನಬೆಳಗಾದರೆ ಬಣ್ಣ ಬದಲಾಯಿಸಿ ಹೊಸಹೊಸದಾಗಿ ತೋರಿಕೊಳ್ಳುವ ಈ ಕಾಲದಲ್ಲಿ, ರಂಗಭೂಮಿ, ಸಮಸ್ಯೆಯ ನಿತ್ಯನವೀನ ಚಿತ್ರಣಕ್ಕೆ ಒದಗಿಸುವ ಆಸ್ಪದಕ್ಕಿರುವ ಬೆಲೆ ದೊಡ್ಡದು ಎಂದೇ ಇಂದಿನ ಜಗತ್ತಿನ ಬಹುದೊಡ್ಡ ಪಿಡುಗು ಎನಿಸಿಕೊಂಡಿರುವ ಜನಸಂಖ್ಯೆಯ ಏರಿಕೆಯ ಬಗೆಗೆ ಜನತೆಯ ಹತ್ತು ಹಂತಗಳಲ್ಲಿನ ಬುದ್ಧಿಯನ್ನು ಮುಟ್ಟಿ, ತಿವಿದು ಎಚ್ಚರಿಸುವ ಸಲುವಾಗಿ ರಂಗಭೂಮಿಯನ್ನು ಬಳಸಿಕೊಳ್ಳಲಾಗುತ್ತಿದೆ. ಅನೇಕ ಪ್ರಯೋಗಗಳನ್ನೂ ಮಾಡಿದ ಅನುಭವದಿಂದಾಗಿ ಇಂದು, ಪ್ರಚಾರಕಾರ್ಯವಾದರೂ ಅತ್ಯಂತ ಕಲಾತ್ಮಕ ರಂಗ ಪ್ರಯೋಗವಾಗಬಲ್ಲುದೆಂದು ತೋರಿಕೊಟ್ಟಿದೆ. ಹತ್ತು ಹಲವಾರು ಬಗೆಯ ಕುರ್ಚಿಗಳನ್ನು ತಣಿಸುವ ಸಲುವಾಗಿ ಬೇರೆ ಬೇರೆ ಮನೋರಂಜನ ಪ್ರಕಾರಗಳು 'ಕುಟುಂಬ ಯೋಜನೆ'ಯಂತಹ ಪರಿಹಾರದ ಬಗೆಗೆ ಹತ್ತು ಹಲವಾರು ಬಗೆಯ ಕಾರ್ಯಕ್ರಮಗಳನ್ನು–ಸಾಂಪ್ರದಾಯಿಕ ಮಾಧ್ಯಮಕ್ಕೆ ಏನೂ ಊನವಾಗದ ರೀತಿಯಲ್ಲಿ–ನಿಯೋಜಿಸಿ ಪ್ರದರ್ಶಿಸುತ್ತಿವೆ. ಯಕ್ಷಗಾನ, ಬೊಂಬೆಯಾಟ, ಗಮಕ, ನಾಟಕ, ನೃತ್ಯನಾಟಕ, ಹರಿಕಥೆ, ಲಾವಣಿ, ಗೀತೆ, ಬುರ‍್ರಕಥಾ, ಕೂಚುಮುಡಿ, ಓಟ್ಟಂತುಳ್ಳಲ್, ವಿಥೀಕಥಾ, ವಿಕಟಂ, ಟೇಪ್, ವಿಳ್ಳುಪಾಟ್ಟು ಮೊದಲಾಗಿ, ಸಂಗೀತ ನೃತ್ಯ, ನಾಟಕದ ಅನೇಕ ಬಗೆಯ ರಂಗ ಪ್ರಕಾರಗಳು ಪ್ರಚಾರಕಾರ್ಯದಲ್ಲಿ ಅವಿರತ ತೊಡಗಿವೆ.. ಶ್ರೀರಂಗರಂಥ ಹೆಸರಾಂತ ನಾಟಕಕಾರರೂ ಈ ನಿರ್ದಿಷ್ಟ ಸಮಸ್ಯೆಯನ್ನು ಕುರಿತು ಪ್ರಚಾರಾತ್ಮಕ ನಾಟಕವನ್ನು ರಚಿಸಿದ್ದಾರೆ–

ರಂಗಭೂಮಿ ಎಂದರೆ ಒಂದು ದೃಷ್ಟಿಯಿಂದ ಪ್ರಚಾರ ಭೂಮಿಯೇ ಸರಿ. ಆದರೆ ಅಂತಹ ಪ್ರಚಾರ ಕಲಾತ್ಮಕವಾದಾಗ–ಪ್ರಚಾರ ಎನ್ನುವ ಮಾತನ್ನೇ ಮರೆಯಿಸುವ ಮಟ್ಟಿಗೆ ಕಲಾತ್ಮಕವಾದಾಗ–ಆಗ ಮಾತ್ರ ರಂಗಭೂಮಿ ನಿಜವಾದ ಸಾರ್ಥಕತೆಯನ್ನು ಕಂಡುಕೊಳ್ಳುತ್ತದೆ. ●






ಲಡ್ಡು ಚಂಚದಿಂದ ಬಡಿಸಿದರೆ ....?

# ರಂಗನಾಟಕ ರೇಡಿಯೋ ನಾಟಕ ಮತ್ತು ಚಿತ್ರನಾಟಕ

– ವಿಶ್ವ

ಯಾಂತ್ರೀಕೃತ ಕೃಷಿ Mechanised farming ಇದ್ದಂತೆ ಈಗ ಸಾಹಿತ್ಯಸ್ವರೂಪಕ್ಕೂ ವೈಜ್ಞಾನಿಕ,ಯಾಂತ್ರಿಕ,ತಾಂತ್ರಿಕ ಪ್ರಭಾವಗಳು ಉಂಟಾಗಿ ಸಾಹಿತ್ಯವು ಅದರಲ್ಲಿಯೂ ನಾಟಕವು ಬಗೆ ಬಗೆಯಾಗಿ ರೂಪುಗೊಳ್ಳುತ್ತಲಿದೆ. ಕಂಪನಿಯ ನಾಟಕಗಳು ಒಂದು ನಿಶ್ಚಿತ ರೂಪವನ್ನು ತಾಳುವುದಕ್ಕಿಂತ ಮುಂಚೆ ಬಯಲಾಟಗಳೆ ಜಾನಪದ ಮನರಂಜನೆಗಳಾಗಿದ್ದವು. ಜಾನಪದ ನಾಟಕಗಳು ಗ್ರಂಥಸ್ಥವಾಗಿದ್ದುದು ಕ್ವಚಿತ. ಹಸ್ತಪ್ರತಿಗಳು ಹಸ್ತದಿಂದ ಹಸ್ತಕ್ಕೆ ಹಸ್ತಾಂತರಿತವಾಗುತ್ತಿದ್ದರೂ ಅವು ಪ್ರಕಾಶನ ಪಡೆಯುತ್ತಿರಲಿಲ್ಲ. ಈಗೀಗ ಯಕ್ಷಗಾನಗಳು ದೊಡ್ಡಾಟಗಳು ಪುಸ್ತಕ ರೂಪದಲ್ಲಿ ದೊರಕುವಂತಾಗಿವೆಯೇನೋ ನಿಜ. ಆದರೆ ಅವುಗಳ ಕಾಮರೂಪಿತ ವನ್ನು ಸೀಮಿತಗೊಳಿಸಿದಂತಾಗಿದೆ. ಎಂದರೆ ಮೂಲವೊಂದು ಯಕ್ಷಗಾನವಾಗಲಿ, ದೊಡ್ಡಾಟವಾಗಲಿ ಪ್ರದೇಶದಿಂದ ಪ್ರದೇಶಕ್ಕೆ ಕಾಲದಿಂದ ಕಾಲಕ್ಕೆ ಕುಶಲ ನಟವರ್ಗದಿಂದ ಕುಶಲ ನಟ ವರ್ಗಕ್ಕೆ ಸಂಭಾಷಣೆ, ಕಥೆ, ಪದಗಳಲ್ಲಿ ರೂಪಾಂತರಗಳನ್ನು ತಾಳುತ್ತಿತ್ತು. ಆಯಾ ಪ್ರಸಂಗಕ್ಕೆ ಸರಿ ಹೋಗುವಂತೆ ಎಷ್ಟೋ ಕೈಗಂಟಿನ ಸಂಭಾಷಣೆಗಳನು ಪ್ರತ್ಯುತ್ಪನ್ನಮತಿಗಳಾದ ನಟರು ಅಲ್ಲಿಂದಲ್ಲಿಯೆ ಆಶು ಸಂಭಾಷಣೆಗಳನು ಹೆಣೆಯುತ್ತಿದ್ದರು. ಇದು ಅವರ ಪ್ರತಿಭೆಯ ದ್ಯೋತಕವಾಗಿತ್ತು. ಅಚ್ಚು ಹಾಕಿಸಿದ ಆಟಗಳನು ಕಂಠಪಾಠ ಮಾಡಿ ಯಾಂತ್ರಿಕವಾಗಿ ಅಭಿನಯಿಸುವುದು ಪ್ರತಿಭಾವಂತ ಕಲಾವಿದರಿಗೆ ಒಗ್ಗುವುದಿಲ್ಲ. ಒಬ್ಬ ಬಯಲಾಟದ ನಾಟಕಕಾರ ತನ್ನ ನಾಟಕದಲ್ಲಿ ಪದ ಸಂಭಾಷಣೆಗಳನ್ನೇನೊ ತುಂಬಿರುತ್ತಿದ್ದರೂ ಅದರಲ್ಲಿ ಸಮಯಾನುಸಾರವಾಗಿ ಒಂದೊಂದು ವರ್ಗದ ನಟರು ತಮ ತಮಗೆ ಸರಿದೋರಿದಂತೆ ಇನ್ನಷ್ಟು ಹೂರಣವನು ತುಂಬುತ್ತಿದ್ದರು. ಅಚ್ಚಿನ ಯಾಂತ್ರೀಕರಣವು ಬಯಲಾಟದ ಪ್ರತಿಭೆಗೆ ಒಂದು ಕಟ್ಟೆಯನ್ನು ಕಟ್ಟಿದಂತಾಯಿತು ಎನ್ನಬಹುದು.

ಬಯಲಾಟನಾಟಕ ಭೂಮಿ ಬೆಳವಣಿಗೆಯನು ಹೊಂದಿ ನಾಗರಿಕ ಕಂಪನಿಯ ನಾಟಕವಾಗಿ ವಿಕಾಸಗೊಂಡಿತು. ಬಯಲಾಟದ ವೇಷ ಭೂಷಣ ಮುಖವರ್ಣಿಕೆ ರಂಗರಚನೆ ಇವೆಲ್ಲ ಪ್ರಾಗತಿಕ ಪರಿವರ್ತನೆಯನ್ನು ಹೊಂದಿದವು. ಬಯಲಾಟ ಎಂಬ ಶಬ್ದವೆ ಸೂಚಿಸುವಂತೆ ರಂಗಭೂಮಿ ಎಂದರೆ ಹಳ್ಳಿಯ ಆಟದ ಅಟ್ಟವು ಪಡದೆ ವಿಂಗುಗಳಿಲ್ಲದೆ ಅಟ್ಟಹಾಸದಿಂದ ಮೆರೆಯುತ್ತಿತ್ತು. ಕಂಪನಿಯ ರಂಗಭೂಮಿ ಒಂದು ವ್ಯವಸ್ಥಿತವಾದ ನಾಟ್ಯಗೃಹವಾಗಿ ಮೈ ತಳೆಯಿತು. ಒಂದು ಅಂಕಪಡದೆ ಒಂದು ರಸ್ತಾ ಪಡದೆ, ಒಂದು ಜಂಗಲ್ ಸೀನು, ಒಂದು ಅರಮನೆಯ ದೃಶ್ಯ ಆಯಾ ದೃಶ್ಯಗಳಿಗೆ ಸರಿಹೊಂದುವ ವಿಂಗುಗಳು ಅಸ್ತಿತ್ವದಲ್ಲಿ ಬಂದವು. ಪೇಟಿ, ತಬಲಾ. ಇವು ಸನಾದಿ ಮದ್ದಳೆಗಳ ಸ್ಥಾನವನ್ನು ಆಕ್ರಮಿಸಿದವು. ರಂಗಭೂಮಿಗೆ ಬೆಳಕು? ಮೊದ ಮೊದಲಿಗೆ ಎಂದರೆ ಗುಬ್ಬಿ ವೀರಣ್ಣನವರ ಬಾಲ್ಯಾವಸ್ಥೆಯಲ್ಲಿ ದೊಟ್ಟಾಟದ ಹಿಲಾಲುಗಳೆ ದೀಪವನ್ನು ಒದಗಿಸುತ್ತಿದ್ದವು. ಸೀಮೆಎಣ್ಣೆಯ ಡಬ್ಬಾಗಳ ಮೇಲೆ ಹಲಗೆ ಹಾಕಿ ರತ್ನಸಿಂಹಾಸನವನ್ನು ರಚಿಸಲಾಗುತ್ತಿತ್ತು. ನಾಗರಿಕ ನಾಟಕ ಕಂಪನಿಯ ಅನಾಗರಿಕ ಸ್ವರೂಪ ಅದು ಆಗಿತ್ತು. ಮಹಾರಾಷ್ಟ್ರದ ಕಂಪನಿಗಳು ಗ್ಯಾಸ್ ಲೈಟ್‌ಗಳನು ಬಳಸಹತ್ತಿದವು. ಮುಂದೆ ಕನ್ನಡ ಕಂಪನಿಗಳೂ ಸುಧಾರಣೆಯ ಮೈಲುಗಲ್ಲು ಮುಟ್ಟಿದವು. ಗ್ಯಾಸ್‌ಲೈಟುಗಳ ಕಾಲವನ್ನೂ ದಾಟಿ ಕೊಣ್ಣೂರ ಕಂಪನಿಯ ರಾವಸಾಹೇಬ ಕಣಬರ್ಗಿಮಠ ಅವರು ಪ್ರಥಮತಃ ರಂಗಭೂಮಿಗಾಗಿ ಸುಮಾರು ಮೂರು ಸಾವಿರ ರೂಪಾಯಿಯ ವಿದ್ಯುತ್ ಡೈನಮೋ ಬಳಕೆಯಲ್ಲಿ ತಂದರು. ಕನ್ನಡ ಕಂಪನಿಯ ಇತಿಹಾಸದಲ್ಲಿ ಅದೊಂದು ಮಹಾ ಮೈಲುಗಲ್ಲು. ಅದರೊಂದಿಗೆಯೆ ಟ್ರಾನ್ಸ್‌ಫರ್ ಸೀನರಿಗಳ ಹೊಸ ತಾಂತ್ರಿಕ ಕ್ರಾಂತಿಯೂ ನಡೆಯಿತು. ಶನಿಪ್ರಭಾವ ನಾಟಕದಲ್ಲಿ ರಾಜಾವಿಕ್ರಮನ ದರ್ಬಾರು ಕಣ್ಮರೆಯಾಗಿ ಕ್ಷಣಾರ್ಧದಲ್ಲಿ ಜಂಗಲ್‌ನಲ್ಲಿ ಅಸಹಾಯಕ ರಾಜಾ ವಿಕ್ರಮನು ಚಿಂತಾಮಗ್ನನಾಗಿ ದುಃಖ ಗೀತವನ್ನು ಹಾಡುತ್ತ ಕುಳಿತಿರುವ ದೃಶ್ಯ. ವಿದ್ಯುತ್ತಿನ ಬಳಕೆಯೊಂದಿಗೆ ವಿಧ್ಯುಕ್ತವಾದ ರಂಗವಿಧಾನಗಳಲ್ಲಿ ವಿಕಸನದ ಹೆಜ್ಜೆಗಳು ಮೂಡತೊಡಗಿದವು. ಇವೆಲ್ಲ ರಂಗಭೂಮಿಯ ಸುಧಾರಣೆ ತಲೆಯೆತ್ತಿದುದು ಸುಮಾರಾಗಿ ಒಂದು ಶತಮಾನದ ಇತಿಹಾಸದಲ್ಲಿ.

ಕಂಪನಿಯ ನಾಟಕ ಸಾಹಿತ್ಯದ ರಚನಾ ತಂತ್ರವು ಪಾಶ್ಚಾತ್ಯ ನಾಟಕಗಳ ಪ್ರಭಾವದಿಂದಾಗಿ, ಪಾರ್ಸಿ, ಬಂಗಾಲಿ, ಮರಾಠಿ, ನಾಟಕಗಳಿಂದಾಗಿ ಕನ್ನಡ ಕಂಪನಿ ನಾಟಕಗಳ ಸಾಹಿತ್ಯವು ಒಂದು ಸುಂದರ ಸ್ವರೂಪವನ್ನು ತಾಳಿತು. ಚೂರಮರಿ ಶೇಷಗಿರಿ ರಾಯರ ಕನ್ನಡ ಶಾಕುಂತಲವು ತನ್ನ ಸರ್ವಮುಖ ಸಮೀಚೀನತೆಯಿಂದ ಕನ್ನಡ ನಾಟಕ ಸಾಹಿತ್ಯದಲ್ಲಿಯೆ ಒಂದು ಕೃತಿರತ್ನವಾಗಿ ಉಳಿದಿದೆ. ಇದಕ್ಕೆ ಸರಿ ಸಮನಾಗಿ ಬಸವಪ್ಪ ಶಾಸ್ತ್ರಿಗಳ ಶಾಕುಂತಲವು ಸೃಷ್ಟಿಯಾಯಿತು. ಕನ್ನಡ ಕಂಪನಿ ನಾಟಕ ಸಾಹಿತ್ಯವು ಹೆಚ್ಚಾಗಿ ಒಂದಿಲ್ಲೊಂದು ಭಾಷೆಯ ಅನುವಾದವಾಗಿಯೆ ಬೆಳೆದುಕೊಂಡು ಬಂದಿದೆ. ಬೆಳ್ಳಾವೆ ನರಹರಿ ಶಾಸ್ತ್ರಿ, ಬಿ. ಪುಟ್ಟಸ್ವಾಮಯ್ಯ, ಹಣಮಂತರಾವ ಕಂದಗಲ್, ಗರೂಡ ಸದಾಶಿವರಾವ್ ಇವರೇ ಮೊದಲಾದವರು ಸ್ವಂತದ ಪೌರಾಣಿಕ ನಾಟಕಗಳನ್ನು ನೀಡಿದ್ದಾರೆ. ನರಹರಿ ಶಾಸ್ತ್ರಿಗಳ ಪಾಂಡಿತ್ಯ, ಪುಟ್ಟಸ್ವಾಮಯ್ಯನವರ ಕಲ್ಪನಾಮಯತೆ, ಕಂದಗಲ್ಲರ ಬಾಠಡಾಥಣದ ಗಡಸುಗಾರಿಕೆ , ಗರೂಡರ ರಸವಂತಿಕೆ ಎದ್ದು ಕಾಣುವ ವೈಶಿಷ್ಟ್ಯಗಳಾಗಿವೆ.ವಾಮನರಾವ್ ಮಾಸ್ತರರ ಮರಾಠಿ ನಾಟಕಗಳ ಅನುವಾದ ಶೈಲಿ ರುಚಿಕಟ್ಟಾದುದು.

ಗುಬ್ಬಿ ವೀರಣ್ಣನವರ ಕುರುಕ್ಷೇತ್ರ ನಾಟಕ (ಪುಟ್ಟಸ್ವಾಮಯ್ಯ ವಿರಚಿತ) ರಂಗಭೂಮಿಯ ಮೇಲೆ ಅಶ್ವಗಳನ್ನು ಅಶ್ವಾರೋಹಿಗಳನ್ನು ಮೊದಲಸಲ ಎಳೆದು ತಂದಿತು.ಶಿರಹಟ್ಟಿ ವೆಂಕೋಬರಾಯರ ಭಕ್ತಪ್ರಹ್ಲಾದದ ನಾರಸಿಂಹನ ಪ್ರವೇಶ, ಕೃಷ್ಣಲೀಲಾ ನಾಟಕದ ಕಾಳಿಯ ಮರ್ದನ ದೃಶ್ಯ, ಮಹಾನಂದಾ ನಾಟಕದೊಳಗಿನ ಕೈಲಾಸದ ಪಾರ್ವತಿಯು ಭೂಮಿಯ ಮೇಲಿನ ಮಹಾನಂದೆಯಾಗಿ ಜನ್ಮಿಸುವ ಟ್ರಾನ್ಸ್‌ಫರ್ ಸೀನ್ ಇವೆಲ್ಲ ರೋಮಾಂಚಕಾರಿಯಾಗಿದ್ದವು.

ಇಂಗ್ಲಿಷ್ ನಾಟಕಗಳ ಪ್ರಭಾವ ಇಂಗ್ಲೆಂಡಿನಿಂದ ಮರಳಿದ ಕೈಲಾಸಂರ ಪ್ರಭಾವದ ಮುಂದೆ ಶ್ರೀರಂಗರ ಪ್ರಭಾವ ಕನ್ನಡ ನಾಟಕ ಸಾಹಿತ್ಯಕ್ಕೆ ವಾಸ್ತವತೆಯ ಒಪ್ಪವನ್ನು ಕೊಟ್ಟವು. ನಾಟಕ ಎಂದರೆ ನಮ್ಮ ನಡೆ ನುಡಿಗಳ ಪಡಿನುಡಿ ಪ್ರತಿಬಿಂಬ. ಎಂದು ಕೈಲಾಸಂ ಗುಂಡೂಭಾಂಡಾರದಿಂದ ಎತ್ತಿ ತೋರಿಸಿದರು. ಸುತ್ತುಮುತ್ತಲಿನ ಜನರಾಡುವ ಇಂಗ್ಲೀಷ್ ಬೆರೆತ ಕನ್ನಡ ಮಾತನ್ನು ಗ್ರಾಮಫೋನ್ ಪೆಟ್ಟಿಗೆಯಲ್ಲಿ ಹಿಡಿದು ಹಾಕಿ ಜನರ ಜೀವನವನ್ನು ತಸ್ವೀರ ಪೆಟ್ಟಿಗೆಯಲ್ಲಿ ತಂದು ಹಾಕಿ ಗುಂಡೂರಾಯ ಸಮಾಜಕ್ಕೆ ತಾನು ಲೆಕ್ಚರ್ ಮೂಲಕ ಬೊಗಳಬೇಕೆಂದಿದ್ದನ್ನೆಲ್ಲಾ ನಾಟಕದ ಪಾತ್ರಗಳ ಮುಖಾಂತರ ಬೊಗಳಿಸುತ್ತಾನೆ. ನಾಟಕ ಸಮಾಜಕ್ಕೆ ಒಂದು ಸಂದೇಶ ನೀಡಬೇಕು ಎಂಬ ಹೊಸ ಮಾತು ಹೇಳಿದರು ಕೈಲಾಸಂ. ಶಿಕ್ಷಣ ಎಂದರೇನು? ಸ್ತ್ರೀ ಪಾತ್ರ ಎಂದರೇನು? ಧರ್ಮ ಎಂದರೇನು? ಬ್ರಾಹ್ಮಣಿಕೆ ಎಂದರೇನು? ಸೂಳೆ ಎಂದರೆ ಯಾರು? ಮದುವೆ ಎಂದ

> ರಂಗಭೂಮಿಯ ಮೇಲೆ ತೋರಿಸುವ ಪ್ರತಿಯೊಂದೂ ದೃಶ್ಯವೂ ಮಾತಿನ ಏರಿಳಿತಗಳ ಮೂಲಕ ಶಬ್ದನಾಹಿನಿಯಾಗಿ ಬರುವದೇ ರೇಡಿಯೋ ನಾಟಕ.

ರೇನು? ಈ ಎಲ್ಲ ಕುಡುಗೋಲಿನಾಕಾರದ ಪ್ರಶ್ನಾರ್ಥಕಗಳಿಗೆ ಸಮಾಜಕ್ಕೆ ಉತ್ತರ ನೀಡುತ್ತವೆ ಕೈಲಾಸಂರ ಒಂದೊಂದೂ ನಾಟಕ. ಗದುಗಿನಲ್ಲಿ ಹುಯಿಲಗೋಳ ನಾರಾಯಣರಾಯರು ಶಿಕ್ಷಣ ಸಂಭ್ರಮ ಸ್ತ್ರೀ ಧರ್ಮರಹಸ್ಯಗಳಂತಹ ಪ್ರಹಸನಗಳಿಂದಲೂ ಇದೇ ಕಾರ್ಯವನ್ನು ಎಸಗಿದರು. ಕೈಲಾಸಂ ಸಂದೇಶಕ್ಕಿಂತ ವಿನೋದವನ್ನೆ ಹೆಚ್ಚಾಗಿ ನೀಡುವ ಚಪಲವುಳ್ಳವರಾಗಿದ್ದರು ಎಂದು ವಿಮರ್ಶಕರ ಅಭಿಪ್ರಾಯ. ಕೈಲಾಸಂರ ಈ ಒಂದು ಕೊರತೆಯನ್ನು ತುಂಬಿಕೊಂಡು ಶ್ರೀರಂಗರು ತಮ್ಮ ವೈಚಾರಿಕ ನಾಟಕಗಳಿಂದ ವಿಡಂಬನೆಯ ಮೂಲಕ ವ್ಯಂಗ್ಯ ಉಪಹಾಸಗಳ ಮೂಲಕ ಸಮಾಜವನ್ನು ನಗಿಸಿ ಕೆರಳಿಸಿದರು.

ರಂಗ ಭೂಮಿಯ ರಚನೆಯಲ್ಲಿ ನಾಟಕ ಸಾಹಿತ್ಯದ ತಂತ್ರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಬಳಸಿದ ಶ್ರೇಯಸ್ಸು ಶ್ರೀರಂಗರದು. ಈ ಪ್ರಯೋಗಗಳ ಹಿಂದೆ ಪಾಶ್ಚಾತ್ಯ ನಾಟಕಕಾರರ ಪ್ರಭಾವ ಛಾಯೆಗಳು ಇದ್ದಿರಬಹುದು. ಆದರೆ ಇಂತಹ ಹೊಸ ಕಲ್ಪನೆಗಳನ್ನು ನಾಟಕ ಸಾಹಿತ್ಯಕ್ಕೆ ನೀಡಿದ ಕೀರ್ತಿ ಶ್ರೀರಂಗರದು.

ಶ್ರೀರಂಗರು ವಯೋಮಾನಕ್ಕೆ ಅನುಗುಣವಾಗಿ ಆಧುನಿಕ ವಿಚಾರ ಪ್ರಣಾಲಿಯಲ್ಲಿ ಎಂದೂ ಹಿಂದೆ ಬಿದ್ದವರಲ್ಲ. ನವ್ಯತೆಯಲ್ಲಿ ನಾವೀನ್ಯ ಕಲ್ಪನೆಯಲ್ಲಿ ಯಯಾತಿಯ ತಾರುಣ್ಯವನ್ನು ಪಡೆದ ಅತ್ಯಾಧುನಿಕತೆ ಶ್ರೀರಂಗರ ದೃಷ್ಟಿಯಲ್ಲಿದೆ. ಚೇತನದ ಲೇಖನಿಯಲ್ಲಿದೆ, ವ್ಯಕ್ತಿತ್ವದಲ್ಲಿದೆ. ಶ್ರೀರಂಗರ ವಿಚಾರಧಾರೆ ಎಂದಿಗೂ Out dated. out moded ಆಗಿಲ್ಲ. ನಾಟಕದಲ್ಲಿ ಎಂತೆಂತಹ ನವನವೀನ ಪ್ರಯೋಗಗಳನ್ನು ಗೇಲಿ ಮಾಡುವ ಎದೆಗಾರಿಕೆ ಇವರ ಪ್ರತಿಭೆಗಿದೆ. ತೀರ ಇತ್ತೀಚಿನ ಅವರ 'ಅಪರಾಧಂಗಳ ಕ್ಷಮಿಸು'ಸ್ವಗತ ಸಂಭಾಷಣೆಗಳಲ್ಲಿ ನಾಟಕಕ್ಕೂ ಜನಜೀವನಕ್ಕೂ ಇರುವ ನಿಕಟ ಸಂಬಂಧವನ್ನು ಎತ್ತಿ ತೆರೆ ಎತ್ತಿ ತೋರಿದ್ದಾರೆ. ಹಾಗೆ ನೋಡಿದರೆ ಸ್ವಗತ ಸಂಭಾಷಣೆಗೆ ತೆರೆಯೇ ಬೇಕಿಲ್ಲ. ಪಾತ್ರಗಳೂ ಬೇಕಿಲ್ಲ. ಪ್ರೇಕ್ಷಕ ಸಮುದಾಯದಿಂದ ರಂಗಭೂಮಿಗೆ ನಡೆದು ಬಂದ ವ್ಯಕ್ತಿಗಳ ಪಾತ್ರಗಳಾಗಬಹುದು. ಕೇಳು ಜನಮೇಜಯ ಎಂಬ ನಾಟಕದ ತಂತ್ರವು ಇದೇ ಬಗೆಯ ಇನ್ನೊಂದು ಹೊಸ ಕಲ್ಪನೆ.ರಂಗಭೂಮಿಯ ಮೇಲೆ ಬಿದ್ದಿರುವ ಅಸ್ಥಿಪಂಜರಗಳಲ್ಲಿ ಸಮಾಜದ ಚೇತನಗಳು ಎದ್ದು ಬಂದು ಪ್ರವೇಶ ಮಾಡಿ ಈ ನೆರಳುಗಳಿಗೆ ರಕ್ತ ಮಾಂಸಗಳನ್ನು ಜೀವವನ್ನೂ ವ್ಯಕ್ತಿತ್ವವನ್ನೂ ಕೊಡುತ್ತವೆ. ಶ್ರೀರಂಗರು ಯಾವಾಗಲೂ ಪ್ರಯೋಗಶೀಲರು. ಇವರ ಮೂರಂಕಿನ ನಾಟಕಗಳೆಂದರೆ ಒಂದೊಂದು ಅಂಕಿನ ಒಂದೊಂದೇ ದೃಶ್ಯಗಳುಳ್ಳವು.Unity ಎಂಬುದು ಶ್ರೀರಂಗರ ರಚನೆಗಳಲ್ಲಿ ಎದ್ದು ಕಾಣುವ ಸದ್ಗುಣ. ಈ ಪ್ರಯೋಗ ಶೀಲತೆಯಲ್ಲಿ ನವ-ನವೋನ್ಮೇಷಿತ್ವದಲ್ಲಿ ಮೀರ ಬಲ್ಲಂಥ ಪ್ರತಿಭೆಗಳು ಬರಬೇಕಾಗಿದೆ.

ವಿಜ್ಞಾನದ ಒಂದು ಕಾಣಿಕೆಯಾಗಿ ರೇಡಿಯೋ ಅವತರಿಸಿತು. ರಂಗಭೂಮಿಯ ನಾಟಕ ರೇಡಿಯೋ ತಂತ್ರಕ್ಕೆ ಹೊಂದಿಕೊಳ್ಳಲು ಹವಣಿಸಿತು. ರೇಡಿಯೋ ಎಂದರೆ ನಾವು ಅದರ ಮೂಲಕ ಶಾಬ್ದಿಕವಾಗಿ ಕೇಳುತ್ತೇವಷ್ಟೇ . ಚಾಕ್ಷುಷವಾಗಿ ಏನೂ ನೋಡಲು ಸಿಗುವುದಿಲ್ಲ ಆದುದರಿಂದ ರೇಡಿಯೋ ನಾಟಕಕಾರನು ಹೇಳಬೇಕಾದುದನ್ನೆಲ್ಲ ಶಬ್ದ ಮೂಲಕವೆ ಹೇಳಬೇಕು. ರಂಗಭೂಮಿಯ ಟ್ರಾನ್ಸಫರ್ ಸೀನುಗಳು ಈ ಶಬ್ದ ಬ್ರಹ್ಮನಲ್ಲಿ ಹುಟ್ಟಲಾರವು. ರೇಡಿಯೋ ರಂಗಭೂಮಿ ಎಂದರೆ ಕುರುಡರಿಗಾಗಿ ನಿರ್ಮಿಸಿರುವ ಒಂದು ನಾಟಕ ಸಮಾರಂಭ ಎಂದು ಬಗೆದರೆ ಸರಿ ಹೋದೀತು. ಶ್ರೀರಾಮ, ಶ್ರೀ ಕೃಷ್ಣರು ನೀಲವರ್ಣರಾಗಿರಲಿ, ಬಿಡಲಿ ಅವರ ವೇಷ ಭೂಷಣ ಏನೇ ಇರಲಿ, ಶ್ರೋತೃಗಳಾದ ನಮಗೆ ಸಂಬಂಧಿಸಿರುವುದು ಅವರ ಮಧುರ ಕಂಠ ಮಾತ್ರ. ಅದೇ ರೀತಿ ಆಧುನಿಕ ಒಂದು ರೇಡಿಯೋ ನಾಟಕದಲ್ಲಿ ಕಾರು, ಜೀಪು, ಟ್ರಕ್ಕು, ಬಸ್ಸು ಇಂತಹ ವಾಹನ ವಿಶೇಷಗಳನ್ನು ಅವುಗಳ ಸಂಚಾರ ಶಬ್ದ ಹಾರ್ನುಗಳ ಶಬ್ದಗಳಿಂದ ಮಾತ್ರ ಗುರುತಿಸಬೇಕಾಗುವುದು. ರೇಡಿಯೋದ ಆವಶ್ಯಕತೆಗಳಿಗೆ ಅನುಸರಿಸಿ ರೇಡಿಯೋ ನಾಟಕದ ತಂತ್ರ, ಸಾಹಿತ್ಯಗಳು ಸ್ವಲ್ಪ ಬೇರೆಯೇ ಆಗಬೇಕಾಗವುದು. ವಿಸ್ತೃತವಾದ ರಂಗ ಸೂಚನೆಗಳು ಅಭಿನಯ ಹಾವ ಭಾವ ಮೂಕ ಶೋಕ ಮುಖ ಮುದ್ರೆಗಳು ರೇಡಿಯೋ ನಾಟಕದಲ್ಲಿ ಪ್ರಯೋಜನ ಬೀಳಲಾರವು. ರಸಭಾವಗಳನ್ನು ರೇಡಿಯೋ ನಟನು ತನ್ನ ಧ್ವನಿಯ ಏರಿಳಿತಗಳಿಂದ ಸೂಚಿಸಬೇಕಾಗುವುದು. ಯಾವುದೆ


ತಪ್ಪಾದುದನ್ನು ಹನ್ನೆರಡು ಸಾರಿ ಬರೀ ಅಂದ್ರೆ ಎಂಟು ಸಾರಿ ಬರಿದಿದ್ದಿ !
"ಅದೂ ತಪ್ಪಾಯ್ತಾ? ಈಗ ಅದೂ ಹನ್ನೆರಡು ಸಾರಿ ಬರಿಬೇಕಾ ಸಾರ್?"

ಒಂದು ರಂಗ ನಾಟಕವನ್ನು ರೇಡಿಯೊ ದ್ವಾರಾ ಪ್ರಸ್ತುತಪಡಿಸಬೇಕಾದರೆ ಚಾಕ್ಷುಷ ಭಾಗವನ್ನೆಲ್ಲ ಶಾಬ್ದಿಕವಾಗಿ ಮಾರ್ಪಡಿಸಬೇಕಾಗುವುದು. ಎರಡನೆಯದಾಗಿ ರಂಗ ನಾಟಕದ ಕಾಲ ಮಿತಿ,ರೇಡಿಯೋ ನಾಟಕಕ್ಕೆ ಸರಿ ಹೋಗಲಾರದು. ಒಂದು ರಂಗನಾಟಕವು ಕಿವಿಗೂ ಕಣ್ಣಿಗೂ ಕೂಡಿಯೆ ರಂಜನೆಯನ್ನು ನೀಡುವುದರಿಂದ ಮೂರು ಘಂಟೆಯ ಕಾಲ ಬೇಸರಿಯದೆ ನೋಡಬಹುದು. ರೇಡಿಯೊ ನಾಟಕವು ಶ್ರುತಿಕೆಯಾಗಿ ಬರುವುದರಿಂದ ಅಲ್ಲಿ ಕಣ್ಣಿಗೆ ಕೆಲಸವಿಲ್ಲದೆ ಎಲ್ಲ ಗಮನವು ಶ್ರುತಿದ್ವಾರಾ ಕೇಂದ್ರೀಕೃತವಾಗಬೇಕಾಗುವುದು.ಆದುದರಿಂದ ಮೂರು ಗ್ರಂಟೆಯ ಕಾಲಾವಧಿಯನ್ನು ರೇಡಿಯೋ ರೂಪಾಂತರದಲ್ಲಿ ಮೂವತ್ತು ನಿಮಿಷಕ್ಕೊ ಒಂದು ಗಂಟೆಗೊ ಅಳವಡಿಸಬೇಕಾಗುವುದು.ಸಾಮಾನ್ಯವಾಗಿ ಎಲ್ಲ ಸ್ತ್ರೀ ಧ್ವನಿಗಳು High frequency ಮಾದರಿಗಳೆ ಇರುವುದರಿಂದ ಸ್ತ್ರೀ ಪಾತ್ರಗಳನ್ನು ಎರಡು ಅಥವಾ ಮೂರಕ್ಕೆ ಮಿಕ್ಕ ಬಾರದು. ಅದೂ ಆ ಮೂರೂ ಸ್ತ್ರೀ ಪಾತ್ರಗಳೂ ಬೇರೆ ಬೇರೆ ವಯೋಮಾನದ ಧ್ವನಿಗಳಿದ್ದರೆ ಗುರುತಿಸುವುದು ಕಷ್ಟವಾಗಲಾರದು. ಪುರುಷ ಧ್ವನಿಗಳು ಕೂಡ ವಿವಿಧ ವಯೋಮಾನವನ್ನನುಸರಿಸಿ ಮೂರು ನಾಲ್ಕಕ್ಕೆ ಮಿತವಾಗಿದ್ದರೆ ಒಳ್ಳೆಯದು. ಈ ದೃಷ್ಟಿಯಿಂದ ಅನೇಕ ಚಿಲ್ಲರೆ ಪಾತ್ರಗಳನ್ನು ಚಿಕ್ಕ ಚಿಕ್ಕ ದೃಶ್ಯಗಳನ್ನು ಬಿಟ್ಟು ಕೊಟ್ಟು ಕಥಾ ವಸ್ತುವಿನ ಬೆಳವಣಿಗೆಯನ್ನು ಸ್ವಲ್ಪದರಲ್ಲಿಯೆ ಪ್ರಭಾವಿಯಾಗಿ ತೋರಿಸಬೇಕಾಗುವುದು. ಹಿನ್ನೆಲೆಯ ಸಂಗೀತ ಮಧ್ಯಂತರಸಂಗೀತಗಳಿಂದ ಆಯಾ ರಸಕ್ಕೆ ಸರಿಯಾದ ವಾತಾವರಣವನ್ನು ರಚಿಸಬೇಕಾಗುವುದು. ದೊಡ್ಡ ರಂಗನಾಟಕವನ್ನು ರೇಡಿಯೋ ಅಳತೆಯಲ್ಲಿ ರೂಪಾಂತರಿಸುವಾಗ ಎಡಿಟ್ ಮಾಡಬೇಕಾದ ಹಲವಾರು ಘಟನೆಗಳನ್ನು ವಾದ್ಯ ಸಂಕೇತಗಳ ಮೂಲಕವೂ ಒಂದೆರಡು ಸಾವಿನ ನಿರೂಪಣೆಯ ಮೂಲಕವೂ ನಿರ್ವಹಿಸಿಕೊಂಡು ಹೋಗಬೇಕಾಗುವುದು. ಮುಖ್ಯ ಕಥಾನಕಕ್ಕೆ ಪೋಷಕವಲ್ಲದ ನೃತ್ಯ, ಸಂಗೀತಗಳನ್ನು ಬಿಟ್ಟುಕೊಡಬೇಕಾದೀತು. (ಕೇವಲ ಒಂದು ನೃತ್ಯ ಪ್ರದರ್ಶನವನ್ನೇ ರೇಡಿಯೋದ ಮೂಲಕ ಸಾದರಪಡಿಸುವುದಾದರೆ ಅದರದೊಂದು ತಂತ್ರವೆ ಬೇರೆಯಾಗಬೇಕಾಗುವುದು)

ಒಂದು ಸಿನಿಮಾ ಚಿತ್ರವನ್ನಾಗಲಿ ನಾಟಕವನ್ನಾಗಲಿ ನೋಡಬೇಕಾದರೆ ಅದಕ್ಕೊಂದು ಪ್ರೇಕ್ಷಕ ಗೃಹ ಬೇಕು. ರೇಡಿಯೋ ನಾಟಕಕ್ಕೆ ಇಂತಹ ಪ್ರೇಕ್ಷಕ ಗೃಹದ ಆವಶ್ಯಕತೆಯಿಲ್ಲ. ಮನೆ ಮನೆಗಳ ಮಾಡಗಳೆ ರೇಡಿಯೊ ಗೃಹಗಳು ಎನ್ನಬಹುದು. ನಾಟಕಕ್ಕಿಂತ ರೇಡಿಯೋದ ಸೌಕರ್ಯಗಳು ಅನುಕೂಲತೆಗಳು ಒಂದು ದೃಷ್ಟಿಯಿಂದ ಹೆಚ್ಚೆಂದೇ ಹೇಳಬೇಕು. ಈ ದೃಷ್ಟಿಯಿಂದ ರೇಡಿಯೊ ಈ ಹೊತ್ತು ಜೀವನದ ಒಂದು ಅವಶ್ಯಕತೆಯೆನಿಸಿದೆ. ಆರಾಮ ವಸ್ತುವಲ್ಲ. ಆದರೆ ಇಷ್ಟರಿಂದಲೆ ರೇಡಿಯೋ ನಾಟಕವು ಯಾವಾಗಲೂ ರಂಗ ನಾಟಕಕ್ಕಿಂತ ಶ್ರೇಷ್ಠ ಎಂದು ಹೇಳಲಿಕ್ಕಾಗದು. ರೇಡಿಯೊ ನಾಟಕಕಾರನು ಬಿತ್ತರಣೆಯ ಸೀಮಿತಗಳನ್ನು ಸಾಮರ್ಥ್ಯಗಳನ್ನು ಸಂಪೂರ್ಣ ಗ್ರಹಿಸಿರಬೇಕಾಗಿರುವುದು.

ಸಿನಿಮಾ ಚಿತ್ರವು ರೇಡಿಯೊ ಮತ್ತು ರಂಗನಾಟಕಗಳ ಒಂದು ಸಂಗಮ ಎಂದು ಹೇಳಬಹುದು. ಇಲ್ಲಿ ಶ್ರೌತಿಕದಂತೆ ಚಾಕ್ಷುಷವೂ ಉಪಯೋಗಕ್ಕೆ ಬರುತ್ತದೆ. ಸಿನಿಮಾ ಚಿತ್ರ ಕಥೆಯ ನಾಟಕಕಾರನು ತಯಾರಿಸುವ ಸಿನೇರಿಯು ಶಬ್ದ ಶಂಕೇತಗಳು (Sound effects) ಸಂಗೀತ ಮುಖಾಭಿನಯ ಹಾವಭಾವ ವೇಷ ಪ್ರಸಾಧಾನ ದೃಶ್ಯ ಪರಿಸರ ದೀಪ ಸಂಯೋಜನೆ ಮತ್ತು ರಂಗವಸ್ತುಗಳು ಈ ಎಲ್ಲ ಅಂಶಗಳನ್ನು ಬಳಸಿಕೊಂಡು ಸಿನಿಮಾ ಸಾಹಿತ್ಯ ತಯಾರಿಸಬೇಕಾಗುವುದು. ಸಿನಿಮಾ ಮತ್ತು ರೇಡಿಯೋ ಸಾಹಿತ್ಯಗಳು ಇಂದಿನ ವೈಜ್ಞಾನಿಕ ಬೆಳವಣಿಗೆಯ ಎರಡು ಕಾಣಿಕೆಗಳಾಗಿವೆ. ಆದರೆ ಶುದ್ಧ ಸಾಹಿತ್ಯದ ದೃಷ್ಟಿಯಿಂದ ರೇಡಿಯೊ ನಾಟಕವಾಗಲಿ ಸಿನಿಮಾ ಸಿನೇರಿಯಾ ಆಗಲಿ ಮನೋರಂಜಕವಾದ ವಾಚ್ಯ ಸಾಹಿತ್ಯಗಳಾಗಲಾರವು. ಒಂದು ಸಿನಿಮಾ ಸಿನೇರಿಯೋ ಅಂತೂ ಕ್ಯಾಮರಾ ರೆಕಾರ್ಡಿಂಗ ಯಂತ್ರ ದೀಪ ಸಂಯೋಜನೆ ನಟರ ಚಲನ-ವಲನಗಳ ನಕ್ಷೆ ಇವುಗಳನ್ನೆ ಒಳಗೊಂಡ ಪಂಚಾಂಗವಾಗಿ ಬಿಟ್ಟು ಓದಿ ಸಂತೋಷಿಸುವಂತಹ ಸಾಹಿತ್ಯಭಾಗ ಔಷಧಕ್ಕೂ ಸಿಗಲಿಕ್ಕಿಲ್ಲ. ಹಾಗೆಯೆ ಇವತ್ತು ಪೇಟೆಗಳಲ್ಲಿ ಅಚ್ಚಾದ ಗ್ರಂಥಸ್ಥ ಸಿನೇರಿಯು ನಮಗೆ ದೊರಕುವುದಿಲ್ಲ. ರೇಡಿಯೊ ನಾಟಕಗಳೇನೊ ಅಲ್ಪ ಪ್ರಮಾಣದಲ್ಲಿ ದೊರಕಬಹುದು ಅಷ್ಟೆ. ಹಾಗಿದ್ದರೂ ಅವು ಒದಗಿಸುವ ಶುದ್ಧ ಸಾಹಿತ್ಯ ರಸಾನುಭವ ರಂಗ ನಾಟಕದಷ್ಟು ಸರಸವೆನಿಸಲಿಕ್ಕಿಲ್ಲ. ಇವತ್ತು ಪ್ರಪಂಚವೆ ಸಿನಿಮಾ ಪ್ರಭಾವಕ್ಕೆ ಒಳಗಾಗಿದ್ದೆ ಇಂದಿನ ರೀತಿ ನೀತಿ ಇಂದಿನ ನಾಗರಿಕತೆ

"ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ
ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಂ ಹ ದೇವಂ ಆತ್ಮ
ಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ॥"

"-ಶ್ವೇತಾಶ್ವತರ ಉಪನಿಷತ್"

ಪ್ರತಿಯೊಂದು ಕಲ್ಪಾವಧಿಯಲ್ಲಿಯೂ ಯಾರು ಬ್ರಹ್ಮನನ್ನು ಸೃಷ್ಟಿಸಿ, ಆತನಿಗೆ ಅತ್ಯುತ್ತಮ ಜ್ಞಾನವಾದ ವೇದವನ್ನು ಕೊಡುವನೋ, ಯಾರ ಬೆಳಕು ಬುದ್ಧಿಯನ್ನು ಆತ್ಮದೆಡೆಗೆ ತಿರುಗಿಸುತ್ತದೆಯೋ, ಅಂತಹ ಭಗವಂತನಲ್ಲಿ ಮೋಕ್ಷಾಪೇಕ್ಷೆಯುಳ್ಳ ನಾನು ಶರಣು ಹೋಗುತ್ತೇನೆ.

# MANGALORE P. V. S. BEEDIES




**FOREMOST IN QUALITY SINCE 1906**

SERVICE AND ENCOURAGEMENT THROUGH INDUSTRY

**First to Celebrate Diamond Jubilee in Beedi Industry**

MANUFACTURERS:

**P. V. S. BEEDIES PRIVATE LTD.,**

POST BOX NO. 707 MANGALOE. 3 (S. K.)

ಇಂದಿನ ಫ್ಯಾಶನ್ನುಗಳು ಇಂದಿನ ಅಭಿರುಚಿಗಳು ಎಲ್ಲವೂ ಸಿನಿಮಾಮಯ ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಒಟ್ಟೇನು ಇಂದಿನದು ಸಿನಿಮಾಯುಗ. ಒಬ್ಬ ರಂಗ ನಾಟಕಕಾರನಿಗೆ ಹನ್ನೆರಡು ಪ್ರಕಾರದ ಸಲಕರಣೆಗಳು ಲಭ್ಯವಿದ್ದರೆ ರೇಡಿಯೋ ನಾಟಕಕಾರನಿಗೆ ಅಥವಾ ನಿರ್ಮಾಪಕನಿಗೆ ಕೇವಲ ಮೂರೇ ಸಲಕರಣೆಗಳು ಸಂಭಾಷಣೆ, ಶಬ್ದಸಂಕೇತಗಳು ಮತ್ತು ಸಂಗೀತ. ನಾಲ್ಕನೆಯ ಒಂದಂಶವೆಂದರೆ ಮೌನ. ಒಮ್ಮೊಮ್ಮೆ ಒಂದು ಒಂದೂವರೆ ಸೆಕೆಂಡಿನಷ್ಟು ಮೌನವು ಪರಿಣಾಮದ ತೀವ್ರತೆಯನ್ನು ಹೆಚ್ಚಿಸಬಹುದು. ರೇಡಿಯೊ ನಾಟಕದಲ್ಲಿ ಸಂಭಾಷಣೆಗಳೇ ಸರ್ವಸ್ವ. ಆದುದರಿಂದ ಅವು ಪಾತ್ರ ನಿರೂಪಣೆ ಮಾಡಬೇಕು. ಸ್ಥಳ ಸೂಚನೆ ನೀಡಬೇಕು. ಸನ್ನಿವೇಶದ ಕಲ್ಪನೆ ಕೊಡಬೇಕು. ಇಷ್ಟಲ್ಲದೆ ಕಥೆಯನ್ನು ಮುಂದುವರೆಸಿಕೊಂಡು ಹೋಗಬೇಕು.

ರೇಡಿಯೋಕ್ಕಾಗಿಯೆ ರಚಿತವಾದ ಸಿನಿಮಾಕ್ಕಿಂದೆ ಸ್ಪಷ್ಟವಾದ ನಾಟಕ ಸಾಹಿತ್ಯವು ಕಡಿಮೆ. ರೇಡಿಯೊ ಸಿನಿಮಾಗಳಿಗೆ ರೂಪಾಂತರ ಸಾಹಿತ್ಯವೆ ಮುಖ್ಯ. ಎರಡೂ ತಂತ್ರಕ್ಕೆ ಕಾದಂಬರಿಯೆ ಮೂಲ ಸಾಮಗ್ರಿಯಾಗಲು ಹೆಚ್ಚು ಅನುಕೂಲವಿದೆ. ಬಾನುಲಿ ಬರೆಹಗಾರನು ಒಂದು ಕಾದಂಬರಿಯನ್ನು ತನ್ನ ಶಬ್ದ ಮಾಧ್ಯಮಕ್ಕೆ ಸರಿ ಹೋಗುವಂತೆ ಅಳವಡಿಸಿಕೊಳ್ಳುತ್ತಾನೆ. ಒಬ್ಬ ನಿರೂಪಕನನ್ನು ತಂದು ಅಲ್ಲಲ್ಲಿ ಕಾದಂಬರಿಕಾರನ ಮೂಲ ನಿರೂಪಣೆಯನ್ನೆ ನಿರೂಪಕನ ಬಾಯಲ್ಲಿ ಹಾಕಿ ಕಥೆಯನ್ನು ಮುಂದರಿಸಿಕೊಂಡು ಹೋಗಬಹುದು. ರೇಡಿಯೋಕ್ಕೆ ಇರುವ ಈ ಅನುಕೂಲವು ಸಿನಿಮಾಕ್ಕಿಲ್ಲ. ಒಂದು ಕಾದಂಬರಿಯನ್ನು ಚಿತ್ರೀಕರಿಸುವಲ್ಲಿ ಮೂಲ ಕಾದಂಬರಿಕಾರನ ಕಾವ್ಯಮಯವಾದ ರಸವತ್ತಾದ ಮನೋಜ್ಞವಾದ ನಿರೂಪಣಾ ಭಾಗವನ್ನು ಬಿಟ್ಟು ಕೊಡಬೇಕಾಗುವುದು. ಇಪ್ಪತ್ತು ಪುಟಗಳಲ್ಲಿ ವಿಸ್ತರಿಸಿರುವ ಒಂದು ಮಳೆಗಾಲದ ವರ್ಣನೆ ಸಿನಿಮಾ ತೆರೆಯಲ್ಲಿ ಒಂದೆರಡು ನಿಮಿಷಗಳ ಮುಗಿಲೋಳಿಗಳ ಓಟ, ಗುಡುಗು, ಸಿಡಿಲುಗಳ ಗರ್ಜನೆ ಮುಸಲಧಾರೆಯಾಗಿ ಸುರಿಯುವ ವರ್ಷಾ ವೈಭವವನ್ನು ಮತ್ತಷ್ಟು ಮರ್ಮ ಭೇದಿಯಾಗಿ ಚಿತ್ರೀಕರಿಸಬಹುದು. ಆದರೆ ಇದಕ್ಕೆ ನಾವು ಸಾಹಿತ್ಯ ಎನ್ನೋಣವೆ? ಸಿನಿಮಾದಲ್ಲಿ ಚಿತ್ರಕಲೆಯೂ ಸೇರಿಕೊಂಡು ನಾಟಕ ಸಾಹಿತ್ಯವನ್ನು ಬಹಳಷ್ಟು ಯಂತ್ರೀಕರಿಸಿದೆ ಎಂದು ಹೇಳಬಹುದು. ರಂಗನಾಟಕ ವ್ಯಾಪ್ತಿಗೆ ಅಳವಡದಂತಹ ಅದ್ಭುತ ಘಟನೆಗಳನ್ನು ಸಿನಿಮಾ ಚಿತ್ರದಲ್ಲಿ ರೇಡಿಯೊ ನಾಟಕದಲ್ಲಿ ಯಶಸ್ವಿಯಾಗಿ ತರಬಹುದು. ಜ್ವಾಲಾಮುಖಿ, ಭೂಕಂಪ, ಮಹಾಪೂರ ಉಕ್ಕೇರಿದ ಸಮುದ್ರ, ಕಲ್ಲೋಲದಲ್ಲಿ ಉಂಟಾಗುವ ನೌಕಾಘಾತ, ವಿಮಾನಾಪಘಾತ. ರೈಲು, ಆಕಸ್ಮಿಕ ಬಾಂಬುಗಳ ದಾಳಿ, ಸ್ವಪ್ನ ಸೃಷ್ಟಿ ಮೊದಲಾದ ಪರಿಣಾಮಗಳನ್ನು ಸಿನಿಮಾ ಮತ್ತು ರೇಡಿಯೊಗಳಲ್ಲಿ ಯಶಸ್ವಿಯಾಗಿ ತೋರಿಸಬಹುದಾಗಿದೆ.

ಒಂದು ಕಾದಂಬರಿಯನ್ನು ರೇಡಿಯೊ ರೂಪಾಂತರಗೊಳಿಸುವಾಗ ರೂಪಾಂತರಕಾರನು ಮೂಲ ಕಾದಂಬರಿಕಾರನ ಹೃದಯವನ್ನು ಪ್ರವೇಶಿಸಿ ಆತನ ಮನೋಭಾವವನ್ನು ಅರಿತುಕೊಂಡು ಆತ ನಿರ್ಮಿಸಿದ ಪ್ರತಿಯೊಂದು ಪಾತ್ರದ ಪ್ರತಿಯೊಂದು ಪ್ರಸಂಗದ ಆಶಯವನ್ನು ಅರಿತುಕೊಂಡು ರಸ ಪೋಷಣೆಯಾಗುವ ರೀತಿಯಲ್ಲಿ ಕಾದಂಬರಿಕಾರನ ಕಥನವನ್ನು ಸಂಭಾಷಣೆಗಳಲ್ಲಿ ಹೆಣೆಯಬೇಕಾಗುವುದು. ರೇಡಿಯೋ ರೂಪಾಂತರವು ಅಲ್ಪಾವಧಿಯಲ್ಲಿ ಮೂಲ ಕಾದಂಬರಿಕಾರನ ನೂರಾರು ಪುಟಗಳ ಸ್ವಾರಸ್ಯವನ್ನು ಭಟ್ಟಿ ಇಳಿಸದಿದ್ದರೆ ರೇಡಿಯೊ ಅನುವಾದವನ್ನು ಕೇಳುವದಕ್ಕಿಂತ ಅಂಗೈಯ ರಂಗಭೂಮಿಯೆನಿಸಿದ ಮೂಲ ಕಾದಂಬರಿಯನ್ನೆ ಓದುವುದು ಹೆಚ್ಚು ಇಷ್ಟವಾದೀತು. ಹಾಗೆಯೆ ಸಿನಿಮಾ ಚೌಕಟ್ಟಿನಲ್ಲಿಯೂ ಮೂಲ ಕಾದಂಬರಿಯ ಚಿತ್ರವು ಅಳವಡದಿದ್ದರೆ ಅದರ ತಲೆಯನ್ನೋ, ಬಾಲವನ್ನೋ ಕತ್ತರಿಸಿದಂತಾಗಿ ಮೂಲದ ಸೌಂದರ್ಯಾನುಭೂತಿ, ರಸಾನುಭೂತಿಗಳು ಉಂಟಾಗದೆ ಹೋಗುವುವು.




ಆಕಳು–"ಇವತ್ತು ನನ್ನ ಕರೂಗೆ ಹಾಲೇ ಇಲ್ಲ! ಒಂದು ಡಬ್ಬಾ ಕೊಡಸ್ರಾ!"

ಭಾರತದಲ್ಲಿ ರೇಡಿಯೊ ಪ್ರವೇಶವು ಟಾಕೀ ಸಿನಿಮಾ ಪ್ರವೇಶಕ್ಕಿಂತ ಒಂದೈದು ವರ್ಷ ಮುಂಚಿನದು ಎನ್ನಬಹುದು. ಇನ್ನು ಐದು ವರುಷಕ್ಕೆ ನಮ್ಮ ದೇಶದಲ್ಲಿ ರೇಡಿಯೋಕ್ಕೆ ಚಿನ್ನದ ಹಬ್ಬ ನೆರವೇರಬೇಕು. ಭಾರತದಲ್ಲಿ ರೇಡಿಯೊ ಕಾಲಿಟ್ಟು ೭೭ನೆಯ ಇಸ್ವಿಗೆ ಐವತ್ತು ವರುಷಗಳು ತುಂಬುತ್ತವೆ. ಆ ಹೊತ್ತಿಗೆ ಟೆಲಿವಿಜನ್ ಕೂಡ ರೇಡಿಯೋದ ಸಹವಾಸಿಯಾಗಿ ಸಿನಿಮಾದ ಸಂಗಾತಿಯಾಗಿ ನೆಲೆಸಿರುವುದು. ಟೆಲಿವಿಜನ್ ಈಗಾಗಲೇ ದಿಲ್ಲಿ ರಾಜಧಾನಿಯನ್ನು ವ್ಯಾಪಿಸಿದ್ದು ಆಮೆಯ ಗತಿಯಲ್ಲಿ ಮುಂಬೈ ಮುಟ್ಟಲಿದೆ. ಮುಂದೆ ಕಾನಪುರ, ಕಲ್ಕತ್ತಾ ಮದರಾಸುಗಳಿಗೂ ತನ್ನ ಕರಣಗಳನ್ನು ಚಾಚಿ ಕನ್ನಡದ ರಾಜಧಾನಿ ಬೆಂಗಳೂರನ್ನೂ ತಲುಪಲಿದೆ. ಆಕಾಶವಾಣಿಯ ಪ್ರಾಯೋಗಿಕ ಟೆಲಿವಿಜನ್ ಸೇವೆಯು ೧೯೫೯ ಡಿಶೆಂಬರ್ ೧೫ ರಂದು ಸೂತೋವಾಚಮಾಡಿತು. ಇದು ಒಂದು ರೀತಿ ಜನತೆಯಲ್ಲಿ ಟೆಲಿವಿಷನ್ ಪ್ರಜ್ಞೆಯನ್ನು ಬೆಳೆಸಿ ಅದರ ಮೌಲ್ಯಗಳ ಪರಿಚಯ ಮಾಡಿಕೊಡುವುದಾಗಿತ್ತು. ಈ ಹದಿಮೂರು ವರುಷಗಳ ಅವಧಿಯಲ್ಲಿ ಅದರ ಉದ್ದೇಶವು ಈಡೇರಿದೆ ಎಂದು ಹೇಳಬಹುದು. ಟೆಲಿವಿಷನ್ ಕ್ಯಾಮರಾ ಗಣರಾಜ್ಯ ದಿನೋತ್ಸವದಂದು ಭವ್ಯಸಮಾರಂಭಗಳಲ್ಲಿ ಸ್ಟುಡಿಯೋದ ಹೆಬ್ಬಾಗಿಲನ್ನು ದಾಟಿ ಹೊರಾಂಗಣವನ್ನೂ ಪ್ರವೇಶಿಸಿದೆ. ಟೆಲಿವಿಜನ್‌ನಲ್ಲಿ ರೇಡಿಯೊ ಸಿನಿಮಾ ರಂಗಭೂಮಿ ಮೂರೂ ಮಾಧ್ಯಮಗಳ ತ್ರಿವೇಣಿ ಸಂಗಮವಾಗಿರುತ್ತದೆ. ಅಮೇರಿಕೆಯಂತಹ ದೇಶಗಳಲ್ಲಿ ಅಡುಗೆ ಮನೆಯ ಟಿ. ವ್ಹಿ. ಸೆಟ್ಟುಗಳು ಸಿನಿಮಾಗಳಿಗಿಂತಲೂ ಹೆಚ್ಚು ಲೋಕ ಪ್ರಿಯವಾಗಿವೆ. ಈ ಟಿ. ವ್ಹಿ. ಮೂಲಕ ಪ್ರಸಾರವಾಗುವ ಥ್ರಿಲ್ಲರ್ ಪತ್ತೇದಾರಿ ಕತೆಗಳು ಯುವಕರನ್ನು ಮುದುಕರನ್ನೂ ಹುಚ್ಚು ಹಿಡಿಸಿಬಿಟ್ಟಿವೆ. ಭಾರತದ ಟಿ. ವ್ಹಿ. ಭವಿಷ, ಈಡೇರಬೇಕಾದ ಪ್ರಮಾಣವಚನವಾಗಿದೆ.

ಜೀವನವೆ ಒಂದು ನಾಟಕ. ಆದರೆ ಜೀವನವು ಎದುರಿಸುವ ಎಷ್ಟೋ ಸಮಸ್ಯೆಗಳು ಅರ್ಥವಾಗದೆ ಹೋಗುತ್ತವೆ. ಆಗ ನಾಟಕಕಾರನು ಮುಂದೆ ಬಂದು ಈ ಸಮಸ್ಯೆಗಳಿಗೆ ಒಂದು ಅರ್ಥವನ್ನು ಹಚ್ಚುತ್ತಾನೆ. ಜೀವನದ ಮೌಲ್ಯಗಳನ್ನು ಎತ್ತಿ ತೋರಿಸುತ್ತಾನೆ. ಆಗ ಬದುಕಿಗೆ ಬಣ್ಣ ಬರುತ್ತದೆ. ರಂಗಭೂಮಿ ರೇಡಿಯೊ ಸಿನಿಮಾ ಮಾಧ್ಯಮಗಳ ಮುಖಾಂತರ ಸಾಹಿತ್ಯದ ತಂತ್ರದ ರೂಪವನ್ನು ಹೆಚ್ಚು ಕಡಿಮೆ ಮಾಡಿಕೊಂಡು ನಾಟಕಕಾರ ತನ್ನ ಸಂದೇಶವನ್ನು ನೀಡುತ್ತಾನೆ. ಯಾವ ಮಾಧ್ಯಮವಾದರೇನು? ಸಮಾಜದ ಹೃದಯವನ್ನು ಮುಟ್ಟಬಲ್ಲ ಸಾಹಿತ್ಯವಾದರೆ ಸಾಕು.

ವೈಜ್ಞಾನಿಕ ಬೆಳವಣಿಗೆಯಿಂದಾಗಿ ಸಾಹಿತ್ಯ ಸ್ವರೂಪಗಳು ಹೇಗೆ ಬದಲಾವಣೆ ಹೊಂದುತ್ತಿವೆ ಎಂಬುದನ್ನು ಇಲ್ಲಿ ಸ್ಥೂಲವಾಗಿ ಸಂಕ್ಷಿಪ್ತವಾಗಿ ವಿವರಿಸಲು ಹವಣಿಸಲಾಗಿದೆ. ಸಾಹಿತ್ಯದ ಹೊರಗಿನ ರೂಪ ಬದಲಾದರೂ ಒಳಗಿನ ಮೌಲ್ಯಗಳು ಮಾತ್ರ ಶಾಶ್ವತವಾಗಿ ಉಳಿದರೆ ಅದುವೆ ನಿಜವಾದ ಸಾಹಿತ್ಯ ●



# ಕನ್ನಡದಲ್ಲಿ ಅಸಂಗತ ನಾಟಕಗಳು-ಒಂದು ಚರ್ಚೆ

## —ಶಾಂತಿನಾಥ ದೇಸಾಯಿ

ರ: ಅಲ್ಲರೀ ತ, ನಿನ್ನಿನ ನಾಟಕಾ ನಿಮಗೆ ಹ್ಯಾಂಗನಿಸಿತಪ್ಪ?

ತ: ಥೂ, ಅವೇನು ನಾಟಕಾ ಏನ್ರಿ! ಇಬ್ಬರು—ಅವರ ಹೆಸರೇನದು? ಹೆಸರಕಾಯಿ, ಅಲಸಂದಿಕಾಯಿ ಅಂತ—ಛತ್ರಿ ಹಿಡಕೊಂಡು ಬಂದು ಏನೇನೋ ಹುಚ್ಚುಚ್ಚಾರ ಮಾತಾಡಿ ಕುಣಿದಾಡಿದ್ರ ಆತೇನ್ರೀ ನಾಟಕ? ಅಥವಾ ಮೂರು ಮಂದಿ—ಅ, ಬ, ಕ ಅಂತ ಮೂರು ಕುರ್ಚಿ ಮ್ಯಾಲ ಕೂತು ಏನೇನೋ ತಳ ಬುಡ ಇಲ್ಲದಂಥ ಮಾತು ಮಾತಾಡ್ತಾ ಕೂತ್ರ ನಾಟಕಾ ಆತೇನ್ರಿ?

ರ: ಮತ್ತ ನಾಟಕದಾಗ ಅದಕ್ಕಿಂತ ಹೆಚ್ಚೇನು ಇರ್ತದ? ರಂಗಭೂಮಿ, ಪಾತ್ರ, ಅವರ ಮಾತು, ಅವರ ಕೃತ್ಯ...

ತ: ಅಲ್ಲರೀ, ನೀವೂ ಅಸಂಗತ ನಾಟಕದೊಳಗಿನ ಪಾತ್ರ ಧಾಂಗ ಮಾತಾಡಲಿಕ್ಹತ್ತೀರಲ್ಲ. ನಾಟಕ ಅಂದ ಮ್ಯಾಲೆ ನಮ್ಮ ನಿಮ್ಮಂಥ ಜನರಿರಬೇಕು, ವಾಸ್ತವಿಕ ಘಟನಾ ಇರಬೇಕು, ಏನಾದರೂ ಸಮಸ್ಯೆ ಇರಬೇಕು, ನಾಟಕಕ್ಕೆ ಒಂದು ಅರ್ಥ ಇರಬೇಕು. ಅದೆಲ್ಲಾ ಬಿಟ್ಟು—

ರ: ನಾಟಕಾ ಹಂಗs ಇರಬೇಕು ಹೀಂಗs ಇರಬೇಕು ಅಂತ ಹೇಳಿದವರ್ಯಾರು? ಭರತನೋ ಅರಿಸ್ಟಾಟಲನೋ ಹೇಳಿಧಾಂಗs ನಾಟಕಾ ಇರಬೇಕು ಅಂತ ದೇವರೇನು ಕಟ್ಟಪ್ಪಣೆ ಮಾಡ್ಯಾನೇನು? ರಂಗ ಭೂಮೀ ಮ್ಯಾಲೆ ಒಂದು ಆಟಾ ಆಡಿ—ಅರ್ಧಾ ತಾಸೋ, ತಾಸೋ, ಎರಡು ತಾಸೋ ಪ್ರೇಕ್ಷಕರ ಮನಸ್ಸು ಹಿಡಿಯೋ ಹಾಂಗ ಮಾಡಿದರ ಮುಗೀತು. ನಾಟಕಾ ಆತು. ಅಲ್ಲರೀ, ನಿನ್ನೆ ಪಾಟೀಲರ **ಕೊಡೆಗಳು** ನೋಡೋ ಮುಂದ ನೀವು ನಕ್ಕೋತ ಕೂತಿದ್ದನ್ನ ನಾ ನೋಡೀನಿ...'

ತ: ನಕ್ಕರ ಏನಾತ ಬಿಡ್ರಿ! ಮಾತು ಹಂಗ ಮಜಾ ಇದ್ದವು, ನಕ್ಕೆ. 'ಅಂಧಾಂಗ ಇದು ಯಾವ ವರ್ಷ? 'ಇದು ಮುಂದಿನ ವರ್ಷದ ಹಿಂದಿನ ವರ್ಷ', 'ಹಿಂದಿನ ವರ್ಷದ ಮುಂದಿನ ವರ್ಷ' 'ಹುಡುಗಾಟಾನೂ ಆಟಾನs, ಜಗಳಾಟಾನೂ ಆಟಾನs' ಆದರ ನಾಟಕದ ಅರ್ಥ ನನಗೇನೂ ತಿಳೀಲಿಲ್ಲ ಬಿಡ್ರೀ. ನಿಮಗೇನಾದ್ರೂ ತಿಳೀತೇನು?

ರ: ಹಂಗ ನನಗೂ ಪೂರ್ಣ ತಿಳಿದಿಲ್ಲ. ಆದರ ತಿಳಕೋಬೇಕು ಅಂತ ಅನಿಸ್ತು. ಜೀವನ ಮೂಲತಃ ಅರ್ಥಹೀನವಾದದ್ದು, ಅಸಂಬದ್ಧವಾದದ್ದು ಎಂಬ ಧ್ವನಿ ಅದರಾಗ ಇದ್ದಂಗ ಅನಿಸ್ತು. ಮತ್ತ ಕೊಡೆಗೂ ಮನುಷ್ಯನ ವ್ಯಕ್ತಿತ್ವಕ್ಕೂ ಏನೋ ಸಂಬಂಧ ಇದ್ದಂಗ ಅನಿಸ್ತು...

ತ: ಅಂತೂ ನಿಮಗೂ ಪೂರ್ಣ ತಿಳಿಧಾಂಗಿಲ್ಲ....

ರ: ಆದರ ಪೂರ್ಣ ತಿಳಿಯsಬೇಕು ಅಂತೆಲ್ಲಿದೆ?

ತ: ನೀವೂ ಮಜಾನ ಮಾತಾಡಾಕ್ಹತ್ತೀರಿ ಬಿಡ್ರಿ...

ರ: ಹೋಗಲಿ, ಈ ನಾಟಕದಾಗ ಏನೋ ಒಂದು ಹೊಸತನ ಅದ ಅಂತನಿಸ್ತೋ ಇಲ್ಲೋ?

ತ: ಹೊಸತನ ಹೊಸತನ—ಹುಚ್ಚತನ! ಹೊಸತನ ಬೇಕು ಅಂತ ಏನೇನಾದರೂ ಹುಚ್ಚುಚ್ಚಾರ ಪ್ರಯೋಗ ಮಾಡಬೇಕಂತದs ಏನು?

ರ: ಅಲ್ಲರೀ, ನಿಮಗೆ ಸ್ಯಾಮ್ಯುಅಲ್ ಬೆಕೆಟ್, ಹ್ಯಾರಲ್ಡ್ ಪಿಂಟರ್, ಆಯನೆಸ್ಕೋ, ಆಲ್ಬೀ ಇವರ ಹೆಸರು ಕೇಳಿ ಗೊತ್ತದ ಏನು? ಯುರೋಪದಾಗ, ಅಮೇರಿಕೆಯಲ್ಲಿ ಅಬ್ಸರ್ಡ್ ನಾಟಕಗಳ ಒಂದು ಸಂಪ್ರದಾಯನs ಅದ...

ತ: ಅಂದರ ಈ ಹುಚ್ಚತನ ಇಲ್ಲೀದಲ್ಲ; ಅಲ್ಲಿಂದ ಬಂದದ್ದು ಅಂತ ಹೇಳತೀರೇನು? ಅಲ್ಲರೀ, ಎಷ್ಟಂತ ನಾವು ಹೀಂಗ ಅನುಕರಣೆ ಮಾಡ್ತಾ ಹೋಗುವವರು?

ರ: 'ಅನುಕರಣೆ'—ಈ ಶಬ್ದಾನs ಬಹಳ ವಿಚಿತ್ರದ ನೋಡ್ರಿ. ಬೇಂದ್ರೆ ಬರಧಾಂಗs ನಾ ಕವಿತಾ ಬರದ್ರ ಅದಕ ಅನುಕರಣೆ ಅನ್ನೋದಿಲ್ಲ ನೀವು: ಅದು ಬೇಂದ್ರೆ ಸಂಪ್ರದಾಯದ ಕವಿತಾ ಅಂತೀರಿ!...

ತ: ಹಂಗಾರ, 'ಅನುಕರಣೆ' ಶಬ್ದಾ ಬಿಟ್ಟು 'ಪ್ರಭಾವ' ಶಬ್ದಾ ಉಪಯೋಗಿಸಿದ್ರ?

ರ: ಅದು ಹೆಚ್ಚು ಛಲೋ. ಈ ಜಗತ್ತಿನ್ಯಾಗ ಪರಸ್ಪರ ಪ್ರಭಾವ ಯಾವಾಗಲೂ ಆಗ್ತಾನೇ ಇರ್ತದ. ನನ್ನ ಮ್ಯಾಲೆ ನಿಮ್ಮ ಪ್ರಭಾವ, ನಿಮ್ಮ ಮೇಲೆ ನನ್ನ ಪ್ರಭಾವ: ನಮ್ಮ ಮ್ಯಾಲ ಅವನ ಪ್ರಭಾವ, ಅವನ ಮ್ಯಾಲ ಮತ್ತೊಬ್ಬನ ಪ್ರಭಾವ...ಅದಕ್ಕ ಪ್ರಭಾವ ಮುಖ್ಯಲ್ಲ—ನಾಟಕ ಮುಖ್ಯ.

ತ: ಆದರ ನೋಡ್ರಿ, ನೀವೇ ಹೇಳಿಧಾಂಗ—ಇದು ನಮ್ಮ ನೆಲದಿಂದ ಹುಟ್ಟಿದ್ದಲ್ಲ ನೋಡ್ರಿ...

ರ: ನಮ್ಮ ನೆಲ ಅಂದರ ಅದೇನು ಜಗತ್ತಿನ ಹೊರತಾದ ನೆಲಾ ಏನ್ರಿ? ನಮ್ಮ ನೆಲದಾಗ ನಾವು ಬಟಾಟಿ, ಟೊಮ್ಯಾಟೊ ಬೆಳಿಸೋದಿಲ್ಲೇನ್ರಿ? ನಾವು ಅವನ್ನ ತಿನ್ನೋದಿಲ್ಲೇನ್ರಿ?...ಹೋಗಲಿ ಬಿಡ್ರಿ. ಜೀವನ ಅರ್ಥಹೀನವಾದದ್ದು ಎಂಬ ಅನಿಸಿಕೆ ನಮ್ಮ ಭಾರತೀಯ ಧರ್ಮಗಳಲ್ಲಿ ಇಲ್ಲ ಅಂತೀರೇನು? ಬುದ್ಧಗ ಏನನಿಸ್ತು ಗೊತ್ತದ ಇಲ್ಲೋ? ಆ ಮ್ಯಾಲೆ ಈ ಜೀವನವೆಲ್ಲ ಮಾಯಾ ಅಥವಾ ಇದೆಲ್ಲ ದೇವಲೀಲಾ ಅನ್ನೋ ಮಾತಿನ ಹಿಂದ ಜೀವನ ಮೂಲತಃ ನಿರರ್ಥಕವಾದದ್ದು ಎಂಬ ಅನಿಸಿಕೆ ಅದ ಅಂತ ಅನಿಸೋದಿಲ್ಲೇನು?

ತ: ಅದೆಲ್ಲಾ ಖರೆಯಿರಬಹುದು. ಆದರ ಈ ನಾಟಕಾ ನೋಡೋ ಮುಂದ ಇದೆಲ್ಲ ಏನೋ ಹುಡುಗಾಟ ಅಂತ ಅನಿಸ್ತದ ನೋಡ್ರಿ .

ರ: ಹುಡುಗಾಟಾನೂ ಆಟಾನ!

ತ: ಹುಡುಗಾಟಾನೂ ನಾಟಕಾನs ! ಹಹಹೆ...ಕುನೆನೂರರ ಹಳ್ಳಾಕೊಳ್ಳಾನೀರಿನ್ಯಾಗ ಏನೋ ಅರ್ಥ ಅದ ಅಂತ ಅನಿಸ್ತು. ಆದರ ಏನ್ರಿನಾಟಕಾ ಅಂದರ—

ರ: ನಾಟಕಾ ಅಂದರ ಹಾಂಗs ಇರಬೇಕು. ಹೀಂಗs ಇರಬೇಕು ಅಂತ ಹೇಳೋದನ್ನ ಬಂದ ಮಾಡಿರಿ ಇನ್ನ ಮ್ಯಾಲ.

* * * *

ರ: ಬಿ. ವಿ. ಕಾರಂತರು ನಿರ್ದೇಶಿಸಿ ನಿರ್ಮಿಸಿದ ನಾಲ್ಕು ನಾಟಕಾ ನೀವು ನೋಡೀರಿ. ಅವುಗಳ ಬಗ್ಗೆ ನಿಮಗೇನೇನನ್ನಿಸ್ತು ಹೇಳಿರಿ.

ಯುರೋಪಿನಲ್ಲಿ ಮತ್ತು ಅಮೇರಿಕೆಯಲ್ಲಿ Absurd (ಅಸಂಬದ್ಧ) ನಾಟಕಗಳ ಒಂದು ಸಂಪ್ರದಾಯವೇ ಇದೆ. ವೈಜ್ಞಾನಿಕ ಹಾಗೂ ಆರ್ಥಿಕ ಬೆಳವಣಿಗೆಯ ಉಚ್ಚ ಮಟ್ಟ ಮುಟ್ಟಿರುವ ಆ ದೇಶಗಳ ವಾತಾವರಣದಲ್ಲಿ ಜೀವನದ ಮೂಲಭೂತ ಅರ್ಥಶೂನ್ಯತೆಯ ಪ್ರಶ್ನೆ ಹೆಚ್ಚು ಸುಸಂಬದ್ಧ ಆಗಿರುವಂತೆ. ಭಾರತೀಯ ವಾತಾವರಣದಲ್ಲಿ ಸಾಮಾಜಿಕ ಅಸಂಗತಗಳು ಹೆಚ್ಚು ಅರ್ಥಪೂರ್ಣವಾಗಿವೆ.

ಠ: ಅಲ್ಲರೀ ರ, ಶ್ರೀರಂಗರ '**ಕತ್ತಲೆ-ಬೆಳಕು**' ಅದೂ ಅಸಂಗತ ನಾಟಕಾನs ಏನರಿ?

ರ: ಯಾಕ, ಆ ನಾಟಕಾ ನಿಮಗ ತಿಳೀಲಿಲ್ಲೇನ್ರಿ?

ಠ: ಹಾಂಗ ತಿಳೀತರಿ. ತಿಳೀತಷ್ಟಲ್ಲ ಭಾಳ ಸೇರಿತರಿ. ನಾಟಕಕಾರನ ಸಮಸ್ಯೆಗಳು -ಜೀವನಕ್ಕೂ ನಾಟಕಕ್ಕೂ ಇದ್ದ ಅಥವಾ ಇರದಿದ್ದ ಸಂಬಂಧ: ಜೀವನ ಅಲ್ಲಿ ನಡೀತಾನs ಅದ, ಆದರ ನಾಟಕಕಾರನ ಲಕ್ಷ ಅತ್ತ ಇಲ್ಲೇ ಇಲ್ಲ ಅನ್ನೋ ಮಾತು ಅದರಾಗದ. ಅದರ ತಂತ್ರ ಮಾತ್ರ ಬಹಳ ಹೊಸಾ ರೀತೀದಿತ್ತು ನೋಡರಿ. ತಂತ್ರ ಮಾತ್ರ 'ಅಸಂಗತ' ಅನಿಸ್ತು ನೋಡರಿ...

ರ: ಹೊಸಾ ಅನಪೇಕ್ಷಿತ ತಂತ್ರ ಇದ್ದ ಕೂಡಲೆ ಅದು 'ಅಸಂಗತ' ಆತೇನ್ರಿ? '**ಕತ್ತಲೆ-ಬೆಳಕು**' ನಾಟಕದಾಗ ಒಂದು ರೀತಿಯ ಸಾಮಾಜಿಕ ಅಸಂಗತಿಯ ಚಿತ್ರಣ ಅದ ಅಂತ ಹೇಳಬಹುದು.

ಠ: ಸಾಮಾಜಿಕ ಅಸಂಗತಿ?

ರ: ಅಸಂಗತಿ ಎರಡು ರೀತಿಯದಿರಬಹುದು: ತಾತ್ವಿಕ ಅಸಂಗತಿ ಬೆಕೆಟ, ಪಿಂಟರ್ ಮುಂತಾದವರ ನಾಟಕಗಳಲ್ಲಿ ಬರುವ ಅಸಂಗತಿ; ಇನ್ನೊಂದು ಸಾಮಾಜಿಕ ಅಸಂಗತಿ; ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಅಡಕಗೊಂಡ ಅಸಂಗತಿ. ಲಂಕೇಶರ '**ಸಿದ್ಧತೆ**'ಯಲ್ಲಿ ಶ್ರೀರಂಗರ '**ಕತ್ತಲೆ-ಬೆಳಕಿನಲ್ಲಿ**' ಇಂಥ ಸಾಮಾಜಿಕ ಅಸಂಗತಿ ಇದೆ ಅಂತ ಹೇಳಬಹುದು....

ಠ: ಹಾಂ, '**ಸಿದ್ಧತೆ**'ನೂ ನನಗ ಬಹಳ ಸೇರಿತು ನೋಡ್ರಿ. ಅದರಾಗ ಒಂದು ಜೀವಂತ ಸಮಸ್ಯೆ ಅದ; ನಮ್ಮ ಸದ್ಯದ ಜೀವನದಲ್ಲಿದ್ದ ಟೆನ್ಶನ್‌ಗಳ ಅಭಿವ್ಯಕ್ತಿ ಅದರಾಗದ.

ರ: ರತ್ನರ '**ಎಲ್ಲಿಗೆ**'-ಅದರಾಗ ನಿಜವಾದ ತಾತ್ವಿಕ ಅಸಂಗತಿ ಅದ ನೋಡ್ರಿ. ಮನುಷ್ಯ ಎತ್ತ ಹೊರಟಾನ, ಯಾಕ ಹೊರಟಾನ ಅನ್ನೋದು ಅವಗs ಗೊತ್ತಿಲ್ಲ. ಕೊನೆಗೆ ಯಾವುದಾದರೊಂದು ಭ್ರಮೆಯ ಬೆನ್ನು ಹತ್ತಿ ಗದ್ದಲಾ ಹಾಕ್ತಾನ.

ಠ: ಪಾಟೀಲರ '**ಗುರ್ತಿನವರು**' ನಾಟಕದಾಗ ಮಾತ್ರ ಬರೇ ಮಾತು ಮಾತು–ಮಾತಿನ ಚಮತ್ಕಾರ ಬಿಟ್ಟರ ಅದರಾಗೇನದ?

ರ: ಅಲ್ಲರಿ, ಅದರಾಗ ಮನುಷ್ಯ–ಮನುಷ್ಯನ ಸಂಬಂಧದ ಬಗ್ಗೆ ಏನೋ ವಿಚಾರಗಳಿದ್ದಾವಂತ ಅನಿಸೋದಿಲ್ಲೇನು? ಗಂಡ–ಹೆಂಡತಿ–ಅವರ ನಡುವೆ ಅತ್ಯಂತ ನಿಕಟವಾದ ಸಂಬಂಧವಿರಬಹುದು–ಒಂದು ಪಾತಳಿಯ ಮೇಲೆ, ಆ ಮೇಲೆ ಮತ್ತೊಂದು ಪಾತಳಿಯ ಮೇಲೆ–ಚಪ್ಪಾ ತಗದಾಗ–ಅವರು ಸಂಪೂರ್ಣ ಒಬ್ಬರಿಗೊಬ್ಬರು ಅಪರಿಚಿತರಾಗಿಬಿಡಬಹುದು. ಆಮ್ಯಾಲ ಇಬ್ಬರು ತೀರ ಅಪರಿಚಿತರಿರಬಹುದು, ಆದರ ಅವರ ನಡುವೆ ಒಮ್ಮೆಲೆ ಒಂದು ತಿಳುವಳಿಕೆ ಒಂದು ಆತ್ಮೀಯತೆ ಹುಟ್ಟಬಹುದು.

ಠ: ಅಂದರ ಇಂಥಾ ನಾಟಕದಾಗ ಜೀವನದ ಬಗ್ಗೆ ಕೆಲವು ವಿಧಾನಗಳಿರ್ತಾವ ಅಂಧಾಗಾತು. ಅಂದರ ಈ ನಾಟಕಗಳನು **allegory** ಅಂತ ತಗೊಳಬೇಕಲ್ಲರಿ?

ರ: ಹಾಂ, ಒಂದು ದೃಷ್ಟಿಯಿಂದ ಈ ನಾಟಕಗಳು **extended allegory** ಹೌದು!

ಠ: **Allegory** ಅಂದ ಮ್ಯಾಲ–ನಾಟಕದಲ್ಲಿ ಜೀವನದ ಶೋಧ ಇರ್ತದ ಅಂತ ಹ್ಯಾಂಗ ಹೇಳಬೇಕು? ಕೆಲವು ಪೂರ್ವಗೃಹೀತ ವಿಚಾರಗಳ ನಾಟ್ಯೀಕರಣ ಮಾತ್ರ ಇಂಥಾ ನಾಟಕದಾಗ ಇರ್ತದ ಅಂತ ಹೇಳಿಧಾಂಗಾತು. ನನಗೇನೂ ಇಂಥಾ ನಾಟಕ ಶ್ರೇಷ್ಠ ನಾಟಕ ಅಂತ ಅನಿಸೋದಿಲ್ಲ ಬಿಡ್ರಿ.

ರ: ಆ ಮಾತು ಬ್ಯಾರೆ. ಮುಖ್ಯ ಇವು ನಾಟಕ ಅಂತ ಒಪ್ಪಿಕೊಂಡಿರಲ್ಲ ಅಷ್ಟ ಸಾಕು ಸಧ್ಯಕ್ಕ...ಇಂಥ ನಾಟಕಗಳಲ್ಲಿ ನೀವು ಅನ್ನೋ ಹಂಗ ಶ್ರೇಷ್ಠ ನಾಟ್ಕ ಕನ್ನಡದಾಗ ಬಂದಿಲ್ಲ. ಬರಲಿಕ್ಕಿಲ್ಲ ಅಂತ ಹ್ಯಾಂಗ ಹೇಳಲಿಕ್ಕೆ ಬರ್ತದ?

* * * *

ಠ: ಬಾದಲ ಸರಕಾರರ '**ಏವಂ ಇಂದ್ರಜಿತ್**' ಬಹಳ ಛಂದಿತ್ತು ನೋಡ್ರಿ. ಅದರೊಳಗಿನ 'ಅಸಂಗತಿ'–ನಮ್ಮ ಮಧ್ಯಮ ವರ್ಗದ ಜೀವನದ ನಿರರ್ಥಕತೆ, ಅರ್ಥಶೂನ್ಯತೆ ಎಷ್ಟು ಪರಿಣಾಮಕಾರಿಯಾಗೇದ ಗೊತ್ತದ ಏನ್ರಿ? ಹೊಸಾ ನಾಟಕಾ ಇದ್ರ ಹೀಂಗಿರಬೇಕು...

ರ: ಲಂಕೇಶರ '**ತೆರೆಗಳು**'?

ಠ: ಅದೂ ಭಾಳ ಪರಿಣಾಮಕಾರಿಯಾಗಿತ್ತು...

ರ: ಅಂದರ ನಿಮಗ ಸಾಮಾಜಿಕ ಅಸಂಗತಿಯ ಚಿತ್ರಣ ಭಾಳ ಹಿಡಿಸ್ತದ ಅಂಧಾಗಾತು...

ಠ: ನಮಗ ಅದs **relevant** ಅಲ್ಲೇನರಿ?

ರ: ಅಂಧಾಂಗ ನೀವು ಹೇಳುವ ಮಾತಿನಲ್ಲಿ ಭಾಳ ತಥ್ಯ ಅದ ನೋಡರಿ. ಬಹುಶಃ ಭಾರತೀಯ ವಾತಾವರಣದಲ್ಲಿ ಸಾಮಾಜಿಕ ಅಸಂಗತಿ ಹೆಚ್ಚು ಅರ್ಥಪೂರ್ಣವಾದದ್ದು; ಪಾಶ್ಚಿಮಾತ್ಯ ವಾತಾವರಣದಲ್ಲಿ–ವೈಜ್ಞಾನಿಕ ಹಾಗೂ ಆರ್ಥಿಕ ಬೆಳವಣಿಗೆ ಉಚ್ಚ ಮಟ್ಟ ಮುಟ್ಟಿದ ಆ ದೇಶಗಳಲ್ಲಿ–ಜೀವನದ ಮೂಲಭೂತ ಅರ್ಥಶೂನ್ಯತೆಯ ಪ್ರಶ್ನೆ ಹೆಚ್ಚು **relevant** ಆಗಿರಬಹುದು...

ಠ: ಅಂದರ 'ಅಸಂಗತ ನಾಟಕ' ಭಾರತೀಕೃತ ಆಗಬೇಕು–ಆಗಲಿಕ್ಕೆ ಹತ್ತೇದ ಅಂತ ಹೇಳಬಹುದೇನು?

ರ: ಕಾರ್ನಾಡರ '**ಹಯವದನ**' ಓದೀರೇನು? ಅದರಲ್ಲಿ ನೀವನ್ನೋ ಪ್ರಯತ್ನ ಭಾಳ ಎದ್ದು ಕಾಣಿಸ್ತದ. ಪಾಟೀಲರ '**ಟೊಂಗರ ಬಿಡ್ಣ್ಣ**'–ಅದೂ ಕೂಡ ಭಾರತೀಕರಣದ ಒಂದು ಸ್ತುತ್ಯ ಪ್ರಯತ್ನ ಅಂತ ಹೇಳಬಹುದು...

ಠ: ಇರಬಹುದು...ನೀವೇನs ಹೇಳರಿ, ನಿಮ್ಮ ಅಸಂಗತ ನಾಟಕ'ದ ನಿಲುಕು ಸ್ವಲ್ಪ ಕಡಿಮೀನs ಅಂತ ಅನಸ್ತದ. ಅದು ಭಾಳ ಲಗೂನ ತನ್ನ ಸಾಧ್ಯತೆಗಳನ್ನು ಮುಗಿಸಿ ಖಾಲೀಯಾಗಿ ಬಿಡ್ತದ ಅಂತ ಅನಿಸ್ತದೆ...

ರ: ಅದೆಲ್ಲಾ ನೋಡ್ರಿ ಠ, ಭವಿಷ್ಯದ ಮಾತು. ಭವಿಷ್ಯ ಪ್ರತಿಭೆಗೆ ಬಿಟ್ಟು ಬಿಡಬೇಕು. ಪ್ರತಿಭೆ ಮತ್ತು ಆಳವಾದ ಜೀವನ ದೃಷ್ಟಿ ಕೂಡಿದರ ಯಾವ ರೀತಿ ನಾಟಕಾ ಇದ್ದರೇನು ಅದು ಶ್ರೇಷ್ಠ ಆಗ್ತದ.ಬೆಕೆಟನ '**ವೇಟಿಂಗ್ ಫಾರ್ ಗೋಡೋ**', ಅಲ್ಬೀಯ '**ಹೂ ಇಜ್ ಅಫ್ರೇಡ್ ಆಫ್ ವ್ಹರ್ಜೀನಿಯಾ ವೂಲ್ಫ್**', ಆಯನೆಸ್ಕೋನ ನಾಟಕಗಳು –ಕಾಮೂನ ನಾಟಕಗಳು–ಇವುಗಳಲ್ಲಿ ಶ್ರೇಷ್ಠತೆ ಬಂದದು ಹ್ಯಾಂಗ ಮತ್ತ? ಆದ್ದರಿಂದ ರಸಿಕರಾದ ನಾವು ಕಾದು ನೋಡಬೇಕು.

ಠ: ಮತ್ತ ಎಷ್ಟೋ ಹುಚ್ಚು ಪ್ರಯೋಗ ಸಹಿಸ್ಬೇಕು. ಹಹಹ!

ರ: ಸಹಿಸ್ಬೇಕು–ವಿಮರ್ಶಾ ಮಾಡಬೇಕು. ಚರ್ಚಾ ಮಾಡಬೇಕು. ...

 ದೀಪಾವಳಿಯು ಸರ್ವರಿಗೂ ಸುಖದಾಯಕವಾಗಲಿ 

# ಶೀತ ಮತ್ತು ಫ್ಲೂ—ಇವುಗಳ ವಿಷಯದಲ್ಲಿ ಕೆಲವು ಮುಖ್ಯ ಸಂಗತಿಗಳು ಮತ್ತು ಈ ರೋಗಗಳನ್ನು ಎದುರಿಸುವ ಬಗೆ.

## “ಅನಾಸಿನ್‌ನಿಂದ ಬಹಳ ಸಹಾಯವಾಗುವುದನ್ನು ನಾನು ಕಂಡಿದ್ದೇನೆ” ಎಂದು ನರ್ಸ್ ಅಂಜೆಲಾ ಫೆರ್ನಾಂಡಿಸ್ ಹೇಳುತ್ತಾಳೆ

**ರೋಗ ಅಂಟುವುದು:** ಶೀತ ಮತ್ತು ಫ್ಲೂ ಇವುಗಳು, ರೋಗಗ್ರಸ್ತ ವ್ಯಕ್ತಿಗಳಿಂದ ಹೊರಬಂದು ಗಾಳಿಯಲ್ಲಿ ಸಂಚರಿಸುವ ವೈರಸ್‌ಗಳಿಂದ ಉಂಟಾಗುತ್ತವೆ. ಸಾಮಾನ್ಯವಾಗಿ ಈ ವೈರಸ್‌ಗಳನ್ನು ಎದುರಿಸಲು ನಿಮ್ಮ ಶರೀರಕ್ಕೆ ಸಾಮರ್ಥ್ಯವಿರುತ್ತದೆ. ಆದರೆ, ವಿಪರೀತ ಪರಿಶ್ರಮ, ಅಥವಾ ಕಡಿಮೆ ಪೋಷಣೆ—ಇವು ನಿಮ್ಮ ಶರೀರವನ್ನು ದುರ್ಬಲಗೊಳಿಸಬಲ್ಲವು ಮತ್ತು ನಿಮ್ಮ ನಿರೋಧಕ ಶಕ್ತಿಯನ್ನು ಕಡಿಮೆ ಮಾಡಬಲ್ಲವು.

**ರೋಗಲಕ್ಷಣಗಳು:** ತಲೆ ಭಾರವಾಗಿರುವುದು, ತಲೆನೋವು, ಮತ್ತು ಮೂಗು ಸುರಿಯುವುದು—ಇವು ಶೀತದ ಮೊದಲ ಲಕ್ಷಣಗಳು. ಇವು ಕಂಡು ಬಂದು 18 ರಿಂದ 72 ಗಂಟೆಗಳು ಕಳೆಯುವುದರೊಳಗೆ ಮೂಗಿನಿಂದ, ದಪ್ಪವಾದ ಹಳದಿ ಸಿಂಬಳ ಸುರಿಯಲು ಆರಂಭವಾಗುತ್ತದೆ. ಕೆಮ್ಮುವುದು ಅಥವಾ ನಡುಕ ಉಂಟಾಗುವುದು ಸಾಧಾರಣವಾಗಿ ಫ್ಲೂವಿನ ಮುನ್ಸೂಚನೆಯಾಗಿದೆ. ಆದರ ಹಿಂದೆಯೇ ದಣಿವು, ಅಶಕ್ತತೆ ಮತ್ತು ಇಡೀ ಶರೀರದಲ್ಲಿ ನೋವು ಮತ್ತು ಸಿಡಿತ, ಹಸಿವು ಇಲ್ಲದಿರುವುದು, ತೂಕಡಿಸುತ್ತ ಇರುವುದು, ತಲೆನೋವು ಹಾಗೂ ಜ್ವರದ ಜೊತೆ ಈ ತೊಂದರೆಗಳು ಬರಬಹುದು. ಒಣಕೆಮ್ಮು ಮತ್ತು ಗಂಟಲುನೋವು ಕೂಡ ಉಂಟಾಗಬಹುದು.

**ಉಪಶಮನ:** ಗುಣಹೊಂದಲು ಸಾಮಾನ್ಯವಾಗಿ ಎರಡು ಅಥವಾ ಮೂರು ದಿನಗಳು ಸಾಕಾಗುತ್ತವೆ; ಒಮ್ಮೊಮ್ಮೆ, ಗುಣವಾಗಲು ಅದಕ್ಕಿಂತ ಹೆಚ್ಚು ಸಮಯ ತಗಲುತ್ತದೆ.



ನರ್ಸ್ ಅಂಜೆಲಾ ಫೆರ್ನಾಂಡಿಸ್ ಕಂಡ ಅನುಭವವೆಂದರೆ, ಅನಾಸಿನ್ ಶೀತ ಮತ್ತು ಫ್ಲೂಗಳಿಂದ ಉಂಟಾದ ನೋವುಗಳನ್ನು ಮತ್ತು ಸಿಡಿತಗಳನ್ನು ಶೀಘ್ರ ಉಪಶಮನಗೊಳಿಸುವಷ್ಟು ಪ್ರಭಾವಶಾಲಿಯಾಗಿದೆ. “ಅದು ಮಕ್ಕಳಿಗೆ ಕೊಡುವುದಕ್ಕೂ ವಿಶ್ವಾಸಾರ್ಹವಾಗಿದೆ.” ಎಂದೂ ಆಕೆ ಹೇಳುತ್ತಾಳೆ.

**ಇತರ ತೊಂದರೆಗಳು:** ಫ್ಲೂವನ್ನು ಉಪಶಮನಗೊಳಿಸದಿದ್ದರೆ ಅದು ನ್ಯುಮೋನಿಯಾ ಮತ್ತು ಮೇಲಿನ ಶ್ವಾಸನಾಳಗಳ, ಕಿವಿ ಮತ್ತು ಶ್ವಾಸಕೋಶಗಳ ರೋಗಗಳಿಗೆ ಎಡೆಕೊಡುತ್ತದೆ. ನಿಮಗೆ ಫ್ಲೂ ಅಥವಾ ವಿಪರೀತ ಶೀತ ಇದ್ದರೆ ನಿಮ್ಮ ಡಾಕ್ಟರರ ಸಲಹೆಯನ್ನು ಪಡೆಯಿರಿ.

**ರೋಗದ ಮರುಕಳಿಕೆ:** ನೀವು ಸರಿಯಾಗಿ ಜಾಗರೂಕತೆ ವಹಿಸದಿದ್ದರೆ ಈ ರೋಗ ಮರುಕಳಿಸಬಹುದು. ಎರಡನೆಯ ಸಲ ಬರುವ ರೋಗ ಬಹಳ ಕಠಿಣವಾಗಬಹುದು.

**ನೀವು ಏನು ಮಾಡತಕ್ಕದ್ದು**

1. ನಿಮ್ಮ ಮನೆಯಲ್ಲಿ ಯಾರಿಗಾದರೂ ವಿಪರೀತ ಶೀತ ಅಥವಾ ಫ್ಲೂ ಆಗಿದ್ದರೆ ಅವನು ಹಾಸಿಗೆಯಲ್ಲಿ ಮಲಗಿಕೊಂಡಿರಲಿ. ಅವನಿಗೆ ಸಂಪೂರ್ಣ ವಿಶ್ರಾಂತಿ ಸಿಗಬೇಕು. ಸಾಧ್ಯವಿರುವಷ್ಟು ಮಟ್ಟಿಗೆ ಅವನನ್ನು ಇತರರಿಂದ ಬೇರ್ಪಡಿಸಿರಿ. ಅವನ ಬಟ್ಟೆಗಳನ್ನು—ವಿಶೇಷವಾಗಿ ಕರವಸ್ತ್ರಗಳನ್ನು, ಮತ್ತು ಹಾಸಿಗೆಯ ಬಟ್ಟೆಗಳನ್ನು ಅವನಿಗೆ ಗುಣವಾದ ಕೂಡಲೇ ರೋಗಾಣು ನಾಶಕ ದ್ರವಗಳಿಂದ ಚೆನ್ನಾಗಿ ಶುದ್ಧಿಗೊಳಿಸಬೇಕು.
2. ಕೋಣೆಯಲ್ಲಿ ಗಾಳಿ ಬೆಳಕುಗಳ ಸಂಚಾರವಾಗುವಂತೆ, ಕಿಟಕಿಗಳನ್ನು ತೆರೆದಿಡಿರಿ.
3. ಬೆಚ್ಚಗಿನ ನೀರಿನಲ್ಲಿ ಯಾವುದಾದರೂ ಆಂಟಿಸೆಪ್ಟಿಕ್‌ನ್ನು ಅಥವಾ ಉಪ್ಪನ್ನು ಸೇರಿಸಿ ಅದರಿಂದ ದಿನಕ್ಕೆ ಎರಡು ಸಲವಾದರೂ ಮುಕ್ಕಳಿಸಿರಿ.
4. ಕುದಿಸಿದ ನೀರನ್ನೇ ಕುಡಿಯಿರಿ. ಬೇರೆ ಪೇಯಗಳನ್ನೂ ತುಂಬಾ ಕುಡಿಯಿರಿ. ವಿಶೇಷವಾಗಿ ನಿಂಬೆಯ ಅಥವಾ ಕಿತ್ತಳೆ ಹಣ್ಣಿನ ರಸವನ್ನು ಕುಡಿಯಿರಿ. ಪೌಷ್ಟಿಕ ಆಹಾರವನ್ನು ಸೇವಿಸಿರಿ. ನಿಮಗೆ ತುಂಬಾ ಪ್ರಯಾಸವಾಗದಂತೆ ನೋಡಿಕೊಳ್ಳಿರಿ. ಹೆಚ್ಚು ವಿಶ್ರಾಂತಿಯನ್ನು ತೆಗೆದುಕೊಳ್ಳಿರಿ. ಅನಾಸಿನ್ ನಿಮಗೆ ಸಹಾಯ ಮಾಡಬಲ್ಲುದು।

ಶೀತ ಮತ್ತು ಫ್ಲೂದಿಂದಾದ ನೋವುಗಳನ್ನೂ ಸಿಡಿತಗಳನ್ನೂ ಅನಾಸಿನ್ ಉಪಶಮನಗೊಳಿಸಿ ನಿಮ್ಮ ಕಷ್ಟವನ್ನು ಕಡಿಮೆ ಮಾಡಬಲ್ಲದು. ಅನಾಸಿನ್ ಪ್ರಭಾವಶಾಲಿಯಾಗಿದೆ. ಜಗತ್ತಿನಾದ್ಯಂತ ಡಾಕ್ಟರರು ಹೆಚ್ಚಾಗಿ ಶಿಫಾರಸು ಮಾಡುವ ನೋವು-ನಿವಾರಕ ಔಷಧವು ಅನಾಸಿನ್‌ನಲ್ಲಿ ಅಧಿಕ ಪ್ರಮಾಣದಲ್ಲಿದೆ. ಅನಾಸಿನ್ ವಿಶ್ವಾಸಾರ್ಹವಾಗಿದೆ—ಏಕೆಂದರೆ ಅದು ಡಾಕ್ಟರರ ಪರವಾಯಕರ ಔಷಧದಂತೆ ಸಂತುಲಿತ ಮಿಶ್ರಣವಾಗಿದೆ. ಆದ್ದರಿಂದ, ಶೀತ ಅಥವಾ ಫ್ಲೂವಿನ ಮೊದಲ ಚಿಹ್ನೆಗಳು ಕಂಡುಬಂದಾಗಲೇ ಸ್ವಲ್ಪ ನೀರಿನೊಂದಿಗೆ ಅನಾಸಿನ್ ತೆಗೆದುಕೊಳ್ಳಿರಿ. ಹೀಗೆಯೇ ದಿನದಲ್ಲಿ ನಾಲ್ಕು ಸಲ ಅನಾಸಿನ್ ಸೇವಿಸಿರಿ.

**ಪ್ರಭಾವಶಾಲಿ ಹಾಗೂ ವಿಶ್ವಸನೀಯ**

**ಅನಾಸಿನ್**

ಭಾರತದಲ್ಲಿಯ ಎಲ್ಲಕ್ಕಿಂತ ಹೆಚ್ಚು ಮಾರಾಟವಾಗುವ ನೋವು-ನಿವಾರಕ ಔಷಧ



ನಾಲ್ಕು ವಿಧಗಳಲ್ಲಿ ಕೆಲಸ ಮಾಡುತ್ತದೆ

Regd. User: Geoffrey Manners & Co. Ltd. A-38

# ವಿಲಾಸಿ ರಂಗಭೂಮಿ

– ಪರ್ವತವಾಣಿ

ವೃತ್ತಿ ಕಂಪೆನಿಗಳು ಉಚ್ಛ್ರಾಯ ಸ್ಥಿತಿಯಲ್ಲಿರುವಾಗಲೇ ಇನ್ನೊಂದು ಬಗೆಯ ರಂಗಭೂಮಿ ಕಾಣಿಸಿಕೊಂಡಿತು. ಇದೇ ವಿಲಾಸಿ ರಂಗಭೂಮಿ. ಹೆಸರೇಹೇಳುವಂತೆ ಇದು ವಿಲಾಸಿಗಳದು. ಖಯಾಲಿ ಕಷ್ಪಣ್ಣರದು, ಗೀಳಿನವರದು. ಹೊಟ್ಟೆಗಿಂತ ತಲೆ ಮತ್ತು ಹೃದಯವನ್ನು ಮುಟ್ಟಲು ಹೆಚ್ಚು ಕಾತುರತೆಯುಳ್ಳ ಪುಣ್ಯವಂತರದು, ಕಲೆಗಾಗಿ, ಸಾಹಿತ್ಯಕ್ಕಾಗಿ ಬಣ್ಣ ಹಚ್ಚಿಕೊಳ್ಳುವವರದು.

ಇದು ಏಕೆ ಹುಟ್ಟಿತು? ಹೇಗೆ ಹುಟ್ಟಿತು?

ರುಚಿ ಬದಲಾವಣೆಯನ್ನು ಬಯಸುತ್ತದೆ. ಸೂರ್ಯ, ಅನ್ನ, ಹೆಂಡತಿ, ಇವಕ್ಕೆ ಹಳೆತನ ಹತ್ತುವುದೇ ಇಲ್ಲ. ನಿತ್ಯ ನೂತನ ಬಾಬತ್ತುಗಳಿವು. ಮಿಕ್ಕೆಲ್ಲವೂ ಬದಲಾಯಿಸುತ್ತಿರಬೇಕು. ನಾಲಿಗೆಗೆ ಹೊಸ ಹೊಸ ರುಚಿ ಒದಗಿಸದಿದ್ದರೆ ಅದು ಮರವಾಗಿ ಹೋಗುತ್ತದೆ. ನುಡಿ ಅವಲಕ್ಷಣವಾಗುತ್ತದೆ. ವೃತ್ತಿ ರಂಗಭೂಮಿಯೇ ಈ ಬಯಕೆಯ ವಾಕರಿಕೆಯನ್ನು ಗಮನಿಸಿ, ಗೌರವಿಸಿ, 'ಶಾಕುಂತಲಾ' ಜೊತೆಗೆ "ಗುಲೇಬ ಕಾವಲಿ' 'ಸುಭದ್ರಾ ಪರಿಣಯ'ದ ಜೊತೆಗೆ 'ರಾಮವರ್ಮ ಲೀಲಾವತಿ' 'ವಿಷ್ಣುಲೀಲಾ, ಜತೆಗೆ ನಿರುಪಮ ನಾಟಕಗಳನ್ನು ಪ್ರೇಕ್ಷಕರಿಗೆ ಬಡಿಸಿತು. ಹೊಸ ರಕ್ತದ ರುಚಿ ಕಂಡ ಹುಲಿ ಆಲಿವರ್ ಟ್ವಿಸ್ಟಾಯಿತು. 'ಇನ್ನೂ ಬೇಕು, ಇನ್ನೂ ಬೇಕು. ಇನ್ನೂ ಹೊಸದು, ಬೇಕು' ಎಂದಿತು. ವಿಲಾಸಿ ರಂಗಭೂಮಿ 'ಕೋ' ಎಂದಿತು.

ವೃತ್ತಿರಂಗಭೂಮಿಯ ಯಶಸ್ಸು ಕೆಲವೇ ಮಹಾವ್ಯಕ್ತಿಗಳನ್ನು ಅವಲಂಬಿಸಿತ್ತು. ಅವರು ಇಲ್ಲವಾಗಿ ಅಥವಾ ಪ್ರಕೃತಿ ನಿಯಮಕ್ಕನುಸಾರವಾಗಿ ಮುಪ್ಪು ಹಿಡಿದು ಮೂಲೆ ಕೂತಂತಾಗಿ ಅವರ ನರ ಸ್ವರಗಳು ಕುಗ್ಗಿ ಇತರರಿಗೆ ಕರ್ಕಶವಾಗಿ, ಆದರೆ ರಂಗಭೂಮಿಯ ಗೀಳು ಹತ್ತಿದ್ದು ಬಿಡದಾಗಿ, ಬೇರೊಂದು ರಂಗಭೂಮಿ ಹುಟ್ಟಲೇಬೇಕಾಯಿತು.

ಹಿಂದಿನ ಜನಜೀವನವೇ ಬೇರೆಯದಾಗಿತ್ತು. ವಿಳಂಬಗತಿಯ ಕಾಲ ಅದು. ಯಾವುದಕ್ಕೂ ಅವಸರವಿರಲಿಲ್ಲ. ರಾತ್ರಿ ಸಾವಕಾಶವಾಗಿ ಉಂಡು,ಅಡಿಕೆ ಎಲೆಜಗಿಯುತ್ತಾ ಹೆಂಡತಿಯ ಕೂಡಲೋ ಅಥವಾ – ಕೂಡಲೋನಾಟಕಶಾಲೆಗೆ ಬಂದು ಕೂತು, ಬೆಳಗಿನ ಝಾವದ ತನಕ ನಿರಾತಂಕವಾಗಿ ಮೈಮರೆಯುವ ಪುಣ್ಯ ಆ ರಸಿಕರಿಗಿತ್ತು. ನಾಟಕಗಳ ವ್ಯಾಪ್ತಿ, ನಾಲ್ಕು ಐದು ಗಂಟೆಗಳು! ಕಾಲ ಬದಲಾಯಿಸಿತು. ಸಾವಕಾಶಕ್ಕೆ ಅವಸರ ಕೊಕ್ಕೋ ಕೊಟ್ಟಿತು. ಆ ಮಾತು. ಆ ಸಂಗೀತ. ಆ ಪೋಷಕ ನಟ–ನಟಿಯರ ಹಾಸ., ಆ ನಾಟಕ 'ಇಂತಿ ನಮಸ್ಕಾರ' ಹಾಕಲೇ ಬೇಕಾಯಿತು.

ವಿಲಾಸಿ ರಂಗಭೂಮಿಯ ಕೆಲವು ಲಕ್ಷಣಗಳನ್ನು ಗಮನಿಸೋಣ.

ಅ) ವೃತ್ತಿ ರಂಗಭೂಮಿಯ ನಾಟಕಗಳಲ್ಲಿ ವಸ್ತು ನೂರಕ್ಕೆ ತೊಂಭತ್ತು ಪೌರಾಣಿಕ. ವಿಲಾಸಿ ರಂಗಭೂಮಿಯಲ್ಲಿ ಸಾಮಾಜಿಕ ವಸ್ತುವಿಗೇ ಹೆಚ್ಚು ಪ್ರಾಧಾನ್ಯ. ರಾಮ ಭೀಮರು ಓಡಿಯಾಡಿದ ರಂಗ ಮಂಟಪದಲ್ಲಿ ಸಾತು. ಪಾತು. ಚೋರ ಯಾಕೂಬ, ಬಸನಿಂಗ ತುಂಬಿ ಬಿಟ್ಟರು. ಪುರಾಣಗ ಕಥೆಗೆ ಬದಲಾಗಿ ನವ ಕತೆ ಹುಟ್ಟಿತು

ಆ) ನಾಟಕವು ಜೀವನದ ಕೈಗನ್ನಡಿಯಂತೆ. ಹಿಂದಿನವರು ಕನ್ನಡಿ ಹಿಡಿಯುತ್ತಿದ್ದರೂ ಅದರಲ್ಲಿ ಕಾಣುತ್ತಿದ್ದುದು ನೋಡುವವರ ಮುಖಗಳಲ್ಲ. ನೋಡಬೇಕಾದವರ ಮುಖಗಳು. ಆ ನಾಟಕಗಳಲ್ಲಿ ಮನರಂಜನೆ ಬಿಟ್ಟು ಬೇರೆ ಯಾವ ಮಹಾ ಉದ್ದೇಶವೂ ಇರಲಿಲ್ಲ. ಸಮಾಜವನ್ನು (ಕಾರಂತರ–ಶಿವರಾಮ ಕಾರಂತರ–ಭಾಷೆಯಲ್ಲಿ ಹೇಳಬೇಕಾದರೆ) ರಿಪೇರಿ ಮಾಡುವ ಕೆಲಸ ಅಲ್ಲಿ ಕಾಣುವುದಿಲ್ಲವೆಂದು ಅನೇಕ ಇಂದಿನವರ ಆರೋಪಣೆ. ರಾಮನಂತೆ ಪಿತೃ ವಾಕ್ಯ ಪರಿಪಾಲನೆ ಮಾಡುವ ಮನಸ್ಸು ಬರದಿದ್ದರೆ, ರಾವಣನು ಹತ್ತು ತಲೆಗಳನ್ನು ಕಳೆದುಕೊಂಡದ್ದನ್ನು ಕಂಡು ಇನ್ನೊಬ್ಬರ ಹೆಂಡತಿಯನ್ನು ಹಾರಿಸಿಕೊಂಡು ಹೋಗಬಾರದೆಂದು ಕಲಿಯದಿದ್ದರೆ ತಪ್ಪು ಪ್ರೇಕ್ಷಕನದೇ ಹೊರತು ನಾಟಕದ್ದಲ್ಲ. ಆದರ್ಶ ವ್ಯಕ್ತಿಗಳನ್ನು, ದುಷ್ಟ ಶಕ್ತಿಗಳನ್ನು ತೋರಿಸುತ್ತಿದ್ದುದರ ಉದ್ದೇಶವೇನು?? ಮೊದಲಿನವರನ್ನು ಅನುಕರಿಸು. ಎರಡನೆಯವರಂತೆ ಆಗಬೇಡವೆಂದು ತಿಳಿಸುವುದಲ್ಲವೇ? ಅಲ್ಲವೆಂದುಕೊಂಡರು ನಮ್ಮವರು. ನಮ್ಮ ಮುಖಗಳನ್ನೇ ಕನ್ನಡಿಯಲ್ಲಿ ಪ್ರತಿಬಿಂಬಿಸಿದರು. ಈ ಕನ್ನಡಿ ನಮ್ಮ ಲಕ್ಷಣ ಅವಲಕ್ಷಣಗಳನ್ನು ಪ್ರತಿಬಿಂಬಿಸಿಸುವುದರ ಜೊತೆಗೆ ಮಾತಾಡತೊಡಗಿತು. "ವಿಚಾರ" ಮಾಡತೊಡಗಿತು!

ಇ) ಹಿಂದಿನ ನಾಟಕಗಳಲ್ಲಿ ಸಂಗೀತಕ್ಕೆ ಅತ್ಯಂತ ಗೌರವವಿತ್ತು. ಅರಸನೂ ಹಾಡುತ್ತಿದ್ದ, ಅಗಸನೂ ಹಾಡುತ್ತಿದ್ದ. ಚಾರ ಚೇಟಿಯರ ಶೃಂಗಾರ ಚೇಷ್ಟೆಗಳು ಸಹ ರಾಗ ತಾಳಲಯ ಬದ್ಧವಾಗಿಯೇ ಇರುತ್ತಿತ್ತು. ಈಗಿನವರು ಈ ನಿಂತರೆ ಹಾಡು. ಕುಂತರೆ ಹಾಡು ಇವನ್ನು ಹಾಸ್ಯ ಮಾಡುತ್ತಾರೆ. ನಾಟಕದ ಓಟಕ್ಕೆ ಅಘಾತವೆನ್ನುತ್ತಾರೆ. ಐದು ಗಂಟೆ ಕೂತು ನಾಟಕ ನೋಡುತ್ತಿದ್ದವರಿಗೆ ಸಂಗೀತ ಜ್ಞಾನವಿದ್ದು ಅವರಿಗೆ ಏನೂ ಕೇಡೆನಿಸುತ್ತಿರಲಿಲ್ಲ. ಕಂದ. ವೃತ್ತ. ಮಟ್ಟುಗಳು ತುಂಬ ಪ್ರಿಯವಾಗಿದ್ದುವು. ಹಾಡಲು ಬರದಿದ್ದವನಿ(ಳಿ)ಗೆ ನಟ(ಟಿ)ನ(ಯಾ)ಗುವ ಯೋಗವೇ ಇರಲಿಲ್ಲ. ವಿಲಾಸಿ ರಂಗಭೂಮಿ ರೆಂಗೀತ. ರಂಗಭೂಮಿ. ಒಂದೊಂದು ಸಾರಿ ನನಗೆ ಅನಿಸುತ್ತದೆ. ಬಾಲ ಕಳೆದುಕೊಂಡ ನರಿಯ ಬಾಬತ್ತೋ ಎಂದು! ಕಂಠ ತ್ರಾಣವಿಲ್ಲ. ಸೊಂಟ ತ್ರಾಣವಿಲ್ಲ. ಮೈಕು ಮುಖದ ಮುಂದಲ್ಲದಿದ್ದರೆ ಉಸಿರು ಹೊಟ್ಟೆಯಲ್ಲೇ ಇಳಿಯುತ್ತದೆ. ಈ ನಟ ಏನು ಹಾಡಿಯಾನು? ಏನು ಮಾಡಿಯಾನು? 'ಹಾಡು ಕೇಡು' ಎಂದು ಘೋಷಿಸಿ ಗದ್ದಲವೆಬ್ಬಿಸುವುದರಲ್ಲಿ ಆಶ್ಚರ್ಯವೇನು? ಒಂದು ಸೋಜಿಗವೆಂದರೆ, ಇತ್ತೀಚೆಗೆ ಈ ಸಂಗೀತ ಸೇಡು ತೀರಿಸಿಕೊಳ್ಳಲು ಮನಸ್ಸು ಮಾಡಿರುವಂತಿದೆ. ನಮ್ಮ ನಟರು ಗದ್ಯವನ್ನೂ ಪದ್ಯದಂತೆ ಹಾಡಲು ಪ್ರಾರಂಭಿಸಿದ್ದಾರೆ. ಕ್ಷಮಿಸಿ, ಅವರಿಗೆ ಹಾಡಲು ಬರದು. ಹಾಡಿಸಲು ಪ್ರಾರಂಭಿಸಿದಾರೆ. 'ಹಯವದನ'ದಲ್ಲಿ ಹಾಡು ಬಂತು, 'ಜೋಕುಮಾರ ಸ್ವಾಮಿ'ಯಲ್ಲಿ ಹಾಡು ಬಂತು. ಮುಂದೇನಾಗುತ್ತದೋ!

ಈ) ಇದು ಅವಸರದ ಕಾಲವಾಗಿ ನಾಲ್ಕೈದು ಗಂಟೆಗಳ ನಾಟಕ ಮಾಯವಾಯಿತು. ಈಗಿನ ನಮ್ಮ ನಾಟಕಗಳ ವ್ಯಾಪ್ತಿ ಅರ್ಧಗಂಟೆಯಿಂದ ಹಿಡಿದು ಅಬ್ಬಬ್ಬ ಅಂದರೆ ಮೂರು ಗಂಟೆ ಮೀರುವುದಿಲ್ಲ. ಏಕಾಂಕ ನಾಟಕಗಳು ಹುಟ್ಟಿದುವು, ತುಂಬಾ ಜನಪ್ರಿಯವಾದುವು.

ಉ) ಮತ್ತೊಂದು ಬಹುಮುಖ ವ್ಯತ್ಯಾಸವೆಂದರೆ ವಿಲಾಸಿ ರಂಗಭೂಮಿ ಹಾಸ್ಯರಸಕ್ಕೆ ಕೊಟ್ಟ ಗೌರವ. ಹಿಂದಿನ ನಾಟಕಗಳ ನಾಯಕ ಯಾವಳನ್ನಾದರೂ ಮದುವೆಯಾಗಬೇಕು, ಅಥವಾ ಯಾವನನ್ನಾದರೂ ಸಾಯಿಸಬೇಕು. ಶೃಂಗಾರ ಅಥವಾ ವೀರರಸ. ಹಾಸ್ಯ ವಿಟರ, ಚೇಟ ಚೇಟಿಯರ, ವಿದೂಷಕ ಬ್ರಾಹ್ಮಣರ ಮೀಸಲಾಗಿತ್ತು. ಹಾಸ್ಯವನ್ನು ನಾಯಕನ ಪಟ್ಟಕ್ಕೆ ಏರಿಸಿದುದರ ಕೀರ್ತಿ ವಿಲಾಸಿ ರಂಗಭೂಮಿಗೆ ಸೇರಿದ್ದು. 'ಇಗ್ಗಪ್ಪ ಹೆಗ್ಗಡೆ ಪ್ರಹಸನ'ವೇ ಪ್ರಥಮ ನಾಟಕವೆಂದು ಹೇಳುತ್ತಾರೆ. ಐತಿಹಾಸಿಕ ದೃಷ್ಟಿಯಿಂದ ಇದನ್ನು ಒಪ್ಪಿಕೊಳ್ಳಬೇಕಾದರೂ ನಿಜವಾದ ಪ್ರಥಮ ಆಧುನಿಕ ಕನ್ನಡ ನಾಟಕ–ಪರಂಪರೆಯನ್ನು ಬೆಳೆಸಿದ ಕನ್ನಡ ನಾಟ್ಯ 'ಟೊಳ್ಳು ಗಟ್ಟಿ' ಕರ್ತೃ ಕೈಲಾಸಂ ಕರ್ನಾಟಕ ಪ್ರಹಸನ ಪ್ರಪಿತಾಮಹ. ತರುವಾಯ ಬಂದ ಹೆಚ್ಚು ಪ್ರಸಿದ್ಧ ನಾಟಕಕಾರರೆಲ್ಲಾ ಹಾಸ್ಯವನ್ನೆಲ್ಲ ಬಳಸಿ ಕೃತಿಗಳನ್ನು ರಚಿಸಿದರು. ಪ್ರೇಕ್ಷಕ ವರ್ಗವನ್ನು ಕಟ್ಟಿದರು.

ಊ) ಅರಮನೆ, ಉದ್ಯಾನ, ಕಾಡು, ಬೀದಿ ಈ ದೃಶ್ಯಗಳ ಪರದೆಗಳು ಕಣ್ಮರೆಯಾದುವು. ಸಾದಾ ಪರದೆಗಳು ಬಂದುವು. ರಂಗಸಜ್ಜಿಕೆ, ಪ್ರಸಾಧನ, ರಂಗನಿರ್ಮಾಣ, ದೀಪಾಲಂಕಾರ ಮೊದಲಾದುವುಗಳಲ್ಲಿ ವಿಶೇಷ ಮಾರ್ಪಾಡುಗಳನ್ನು ನೋಡಬಹುದು.

ವಿಲಾಸಿ ರಂಗಭೂಮಿ ಹುಟ್ಟಿದ್ದು ಬೆಳೆದಿದ್ದು

ವೃತ್ತಿ ರಂಗಭೂಮಿ ಈಗೀಗ ಜನತೆಯ ಮನತಣಿಸಲು ಸಮರ್ಥವಾಗತೊಡಗಿದೆ. ಈ ದಿಶೆಯಲ್ಲಿ ವಿಲಾಸಿ ರಂಗಭೂಮಿ ಪರಿಣಾಮಕಾರಿಯಾದ ಕೆಲಸ ಮಾಡುತ್ತಿದೆ. ಇಷ್ಟಾದರೂ ವಿಲಾಸಿ ರಂಗಭೂಮಿ ನಮ್ಮನ್ನು ವೃತ್ತಿರಂಗಭೂಮಿ ಕೊಂಡೊಯ್ದು ಎತ್ತರಕ್ಕೊಯ್ದಿಲ್ಲವೆಂದೇ ಕೆಲವರ ಭಾವನೆ. ಆದರೆ ಅದು ಸರಿಯಲ್ಲ.

ಕೆಲವು ವಿಲಾಸಿ ಸಂಘಗಳ ಚಟುವಟಿಕೆಗಳಿಂದ ಮತ್ತು ಶಾಲಾ ಕಾಲೇಜುಗಳಿಂದ. ಇವರ ನಾಟಕಗಳೇನು ಮಹಾ ಬರೀ ಸ್ಕೂಲು ಕಾಲೇಜು ಹುಡುಗರಿಗೇ ಲಾಯಕ್ಕು ಎಂದು ಅಪಸ್ವರವೆಳೆಯುವವರು ಈಗ ಅನೇಕರಿದ್ದಾರೆ. ಮೊಟ್ಟ ಮೊದಲಿಗೆ 'ಸಾವಿನ ಸಮಸೆ' ಆಡಿದ್ದು ಯಾರು? 'ಆಷಾಢ ಭೂತಿ' ಆಡಿದು ಯಾರು? 'ಅಶ್ವತ್ಥಾಮನ್' 'ಗದಾಯುದ್ಧ' 'ಸೊಹ್ರಾಬ್ ರುಸ್ತುಂ' 'ಗಗಯ್ಯನ ಗಡಿಬಿಡಿ'–'ಕಾಪಾನೆ' 'ಬಹಿಷ್ಕಾರ' ಈ ನಾಟಕಗಳನ್ನು ನಾಟಕಕಾರರನ್ನು ಬೆಳಕಿಗೆ ತಂದು ಮೇಲಕ್ಕೆ ಎತ್ತಿ ಹಿಡಿವದು ಮೈಸೂರಿನ ಮಹಾರಾಜ ಕಾಲೇಜು ಎಂಬುವನ್ನು ಮರೆತರೆ ಪಾಪ ಯಾರದು? ಸಾಹಿತ್ಯವನ್ನು ಕಲಿಯುವ ವಿದ್ಯಾರ್ಥಿಗಳು, ಕಲಿಸುವ ಉಪಾಧ್ಯಾಯರು ಸಲ್ಲಿಸಿರುವ ಸೇವೆಯನ್ನು ಮರೆಯಬಾರದು. ಈಗಿನ ನಾಟಕಗಳನ್ನು ವಿಲಾಸಿ ಸಂಘಗಳು ನೂರಕ್ಕೆ ಇಪ್ಪತ್ತು ಪ್ರದರ್ಶಿಸಿದರೆ ಮಿಕ್ಕ ಎಂಭತ್ತು ನಾಟಕಗಳ ಪ್ರದರ್ಶನ ಶಾಲಾ ಕಾಲೇಜುಗಳಲ್ಲೇ ಶಾಲಾ ಕಾಲೇಜಿನವರಿಂದಲೇ!

ಕೆಲವು ಮುಖ್ಯ ವಿಲಾಸಿ ಸಂಘಗಳ ಹೆಸರುಗಳನ್ನು ಸ್ಮರಿಸೋಣ.

## ಅಮೆಚೂರ್ ಡ್ರಾಮಾಟಿಕ್ ಅಸೋಸಿಯೇಷನ್, ಬೆಂಗಳೂರ

೧೯೦೯ರಲ್ಲಿ ಜನ್ಮ ತಾಳಿತು. ತೆಲುಗು, ಇಂಗ್ಲಿಷ್, ಹಿಂದಿ ಮತ್ತು ಕನ್ನಡ ಭಾಷೆಗಳಲ್ಲಿ ನಾಟಕಗಳನು ಪ್ರದರ್ಶಿಸುತ್ತಿತ್ತು. ೧೯೧೯ರಲ್ಲಿ ಒಂದು ನಾಟಕ ಸ್ಪರ್ಧೆಯನ್ನು ಏರ್ಪಡಿಸಿ ಟಿ. ಪಿ. ಕೈಲಾಸಂರ ಪ್ರಥಮ ನಾಟಕ 'ಟೊಳ್ಳು ಗಟ್ಟಿ'ಗೆ ಪ್ರಥಮ ಬಹುಮಾನ ಕೊಟ್ಟಿತು. ಅಂದಿನ ಯುವರಾಜರಾಗಿದ್ದ ಕಂಠೀರವ ನರಸಿಂಹರಾಜ ಒಡೆಯರು ಈ ಅಸೋಸಿಯೇಶನ್ನಿನ ಕೃಪಾಪೋಷಕರಾಗಿದ್ದರು. ಯುವರಾಜನ ನಾಮಾಂಕಿತ ಪಾರಿತೋಷಕವನ್ನು ಕೈಲಾಸಂರು ಪಡೆದು 'ಕರ್ಣಾಟಕ ಪ್ರಹಸನ ಪ್ರಪಿತಾಮಹ'ರಾದರು. ಬಳ್ಳಾರಿ, ಮದ್ರಾಸು, ಆಂಧ್ರದೇಶ, ಉತ್ತರ ದೇಶದಲ್ಲಿ ಸಿಮ, ಕಲ್ಕತ್ತಾ ಹಾಗೂ ಬೊಂಬಾಯಿ ಎಲ್ಲ ಕಡೆಗಳಲ್ಲೂ ಕೀರ್ತಿ ಸಂಪಾದಿಸಿದರು. ಬಳ್ಳಾರಿ ಟಿ. ರಾಘವಾಚಾರಿಯವರು ಇದರ ಜೀವನಾಡಿಯಾಗಿದ್ದರು. ಕೈಲಾಸಂ ಬರೆದ ಇತರ ನಾಟಕಗಳ ಜೊತೆಗೆ ಮಾಸ್ತಿಯವರ 'ತಾಳಿಕೋಟೆ' 'ಶಾಂತಿ' ಸಿ. ಕೆ. ವೆಂಕಟರಾಮಯ್ಯನವರ 'ನಚಿಕೇತ' 'ತೆನಾಲಿ ರಾಮಕೃಷ್ಣ' ಮಂಡೋದರಿ,ಸೋಸಲೆ ಗರಳಪುರಿ ಶಾಸ್ತ್ರಿಗಳ 'ಸೂತ್ರದ ಬೊಂಬೆ' ಮತ್ತಿತರ ಜನಪ್ರಿಯ ನಾಟಕಗಳನ್ನು ಪ್ರದರ್ಶಿಸಿತು. ವೆಂಕಟಸುಬ್ಬರಾಯರು ಮತ್ತು ವಾಸುದೇವ ರಾಯರು ಹೆಣ್ಣು ಪಾತ್ರ ವಹಿಸುತ್ತಿದ್ದರು. ನಂತರ ಅನ್ನಪೂರ್ಣದೇವಿ ಮತ್ತು ಎಸ್. ಕೆ. ಪದ್ಮಾ ಅವರು ಸೇರಿದರು. ಎಂ. ಎಲ್. ಶ್ರೀನಿವಾಸ ಶಾಸ್ತ್ರಿಗಳು, ಕೆ. ಭೀಮರಾಯರು, ಗರುಡಾಚಾರ್ ಮತ್ತಿತರರು ಮುಖ್ಯ ಪಾತ್ರಗಳನ್ನು ವಹಿಸುತ್ತಿದ್ದರು. ಪಂಡಿತ ತಾರಾನಾಥರು ಸ್ವತಃ 'ಕಬೀರ'ನ ಪಾತ್ರ ವಹಿಸುತ್ತಿದ್ದರು.

"ರಂಗಭೂಮಿ" ಎಂಬ ಪತ್ರಿಕೆಯನ್ನು ಪ್ರತಿ ತಿಂಗಳೂ ಹೊರಡಿಸಲು ಪ್ರಾರಂಭಿಸಿ ನಂತರ ಅದನ್ನು ತ್ರೈಮಾಸಿಕ ಪತ್ರಿಕೆಯನ್ನಾಗಿ ಮಾಡಿತು. ಡಿ. ಕೆ. ಭಾರದ್ವಾಜ ಜಿ. ವೆಂಕಟಾಚಲಂ ಹಾಗೂ ಕೆ. ಸಂಪದಿರಿರಾಯರು ನಾಟಕಕ್ಕೆ ಮೀಸಲಾದ ಈ ಪತ್ರಿಕೆಯ ಹೊಣೆ ಹೊತ್ತರು. ಇಡೀ ಭಾರತದಲ್ಲಿ ನಾಟಕಕ್ಕಾಗಿ ಹುಟ್ಟಿದ ಪ್ರಥಮ ಪತ್ರಿಕೆಯಿದೇ!

೧೯೩೧ರಲ್ಲಿ ಒಂದು ಪುಸ್ತಕ ಭಂಡಾರವನ್ನು ಸ್ಥಾಪಿಸಿತು. ೪೭ ಪತ್ರಿಕೆಗಳನ್ನೂ ಪ್ರಕಟಣೆಗಳನ್ನೂ ತರಿಸಲಾಗುತ್ತಿದ್ದವು. ಈ ಸಂಘವು ಏರ್ಪಡಿಸಿದ ಕಲೋತ್ಸವವನ್ನು ವಿಶ್ವ ಕವಿ ರವೀಂದ್ರನಾಥ ಠಾಕೂರರು ಉದ್ಘಾಟಿಸಿದರು. ಅಖಿಲ ಭಾರತ ನಾಟಕ ಸಮ್ಮೇಳನದ ಅಧ್ಯಕ್ಷತೆಯನ್ನು ಶ್ರೀಮತಿ ಸರೋಜಿನಿನಾಯುಡು ಅವರು ವಹಿಸಿದರು. ಸರ್. ಸಿ. ಪಿ. ರಾಮಸ್ವಾಮಿ ಐಯರ್, ಡಾಕ್ಟರ್ ಮತ್ತು ಮಿಸಸ್ ಕಸಿನ್ಸ್, ಡಾಕ್ಟರ್ ಸಿ. ಆರ್. ರೆಡ್ಡಿ ಮೊದಲಾದ ಮೇಧಾವಿಗಳು ಚರ್ಚೆ ಮಾಡಿದರು. ಮಹಾತ್ಮ ಕಬೀರ್" ನಾಟಕವನು ಮಹಾತ್ಮಾಗಾಂಧಿ ಯವರು ವೀಕ್ಷಿಸಿದರು. ೧೯೪೭ರಲ್ಲಿ ರಾಘವಾಚಾರ್ಯರು ಕಾಲವಾದರು.

ಈಗ ಮತ್ತೆ ಹುರುಪಿನಿಂದ ಚಟುವಟಿಕೆಗಳನ್ನು ಆರಂಭಿಸಲು ಸನ್ನಾಹವಾಗುತ್ತಿದೆಯೆಂದು ಕೇಳಿರುವೆ.

## ವಾಸುದೇವ ವಿನೋದಿನಿ ನಾಟಕ ಸಭಾ, ಬಾಗಿಲುಕೋಟೆ

೧೯೨೭ರಲ್ಲಿ ಪ್ರಾರಂಭವಾದ ಈ ಸಭೆ "ವಸಂತ ಯಾಮಿನಿ ಸ್ವಪ್ನ ಚಮತ್ಕಾರ" "ಸುರತ ನಗರದ ಶ್ರೇಷ್ಠಿ" ನಾಟಕಗಳನು ಪ್ರದರ್ಶನ ಮಾಡಿ ನಂತರ ಶ್ರೀರಂಗರ ಅನೇಕ ನಾಟಕಗಳನ್ನು ಅಭಿನಯಿಸಿತು. ೧೯೫೩ರಲ್ಲಿ ಬೆಳ್ಳಿ ಹಬ್ಬವನು ಆಚರಿಸಿತು. ಆಹೊತ್ತಿಗೆ ೧೯ ದೀರ್ಘ ನಾಟಕಗಳನ್ನೂ, ೧೩ ಏಕಾಂಕಗಳನ್ನೂ ಅಭಿನಯಿಸಿತ್ತು. ಹೆಸರು ಇನ್ನೂ ಇದೆ. ಚಟುವಟಿಕೆ ಕೇಳಿಲ್ಲ.

## ಯೂನಿವರ್ಸಿಟಿ ಅಮೆಚೂರ್ಸ ಮೈಸೂರು:

ಡಾಕ್ಟರ್ ನಾರಾಯಣ ಶಾಸ್ತ್ರಿಗಳ ನೇತೃತ್ವದಲ್ಲಿ ಈ ಗುಂಪು ೧೯೨೭ರಲ್ಲಿ ಸ್ಥಾಪಿತವಾಯಿತು. ಸಿ. ಬಿ. ಜಯರಾವ್, ಎ. ಕೆ. ಶ್ರೀನಿವಾಸನ್ (ಬುಳ್ಳ) ಬಿ. ಕೃಷ್ಣ, (ತುಪ್ಪ) ಎ. ಸಿ. ನರಸಿಂಹ ಮೂರ್ತಿ, ನಟೇಶ ಮುದಲಿಯಾರ್, ಟಿ. ಎಂ. ಅಮೀರ್, ಡಿ. ಚಂದ್ರಶೇಖರಯ್ಯ ಇವರು ಮುಖ್ಯ ನಟರು. ನಾನು ಹಿಂದೆ ಹೇಳಿದೆ. ಮಹಾರಾಜ ಕಾಲೇಜಿನಲ್ಲಿ ಕನ್ನಡದ ಅನೇಕ ನಾಟಕಗಳ ಪ್ರಥಮ ಪ್ರದರ್ಶನಗಳು ನಡೆದುವೆಂದು. ಈ ಕಲಾವಿದರೇ ಅಭಿನಯಿಸಿದವರು. ಬಿ. ಎಂ. ಶ್ರೀ. ಮೂರ್ತಿರಾಯರು, ಕುವೆಂಪು, ಕಸ್ತೂರಿ ಅವರ ಕೃತಿಗಳನ್ನು ಬೆಳಕಿಗೆ ತಂದವರು ಇವರೇ. ರಾಲೋ. ಎಸ್. ವಿ. ಕೆ. ಹನುಮಂತ ರಾಯರು ಕಲಿಸಿದರು, ಕುಣಿಸಿದರು.

## ಯುನೈಟೆಡ್ ಆರ್ಟಿಸ್ಟ್ಸ್, ಬೆಂಗಳೂರು:

ಶ್ರೀ ಸಿ. ಕೆ. ನಾಗರಾಜರಾಯರು ೧೯೩೭ರಲ್ಲಿ



ಧಾರವಾಡದಲ್ಲಿ ಅಭಿನಯಿಸಿದ ಶ್ರೀರಂಗರ ನಾಟಕ 'ಸೌಭಾಗ್ಯವತೀಭವ' ದ ಒಂದು ದೃಶ್ಯದಲ್ಲಿ ಸಾಗರದ ಉದಯ ಕಲಾವಿದರು



ಸಾಗರದ ಉದಯಕಲಾವಿದ ತಂಡದವರು, ಧಾರವಾಡದಲ್ಲಿ ಅಭಿನಯಿಸಿದ, ಶ್ರೀರಂಗರನಾಟಕ 'ಏನು ಬೇಡಲಿ ನಿನ್ನ ಬಳಿಗೆಬಂದು' ನಾಟಕದ ಒಂದು ದೃಶ್ಯ

ತಮ್ಮ ಕೆಲವು ಮಿತ್ರರನ್ನು ಕಲೆ ಹಾಕಿ ಈ ಸಂಘವನ್ನು ಸ್ಥಾಪಿಸಿದರು. ಕೈವಾರ ರಾಜಾರಾವ್, ಕೈಲಾಸಂ, ಶ್ರೀರಂಗ, ರಾಜರತ್ನಂ ಮೊದಲಾದವರ ನಾಟಕಗಳನ್ನು ಅಭಿನಯಿಸಿದರು. ವಿದುರಾಶ್ವತ್ಥ, ಹರಿಹರ ಚನ್ನಪಟ್ಟಣ, ತುಮಕೂರು ಮುತ್ತಿತರ ಕಡೆ ಜರುಗಿದ ಎಲ್ಲ ಕಾಂಗ್ರೆಸ್ ಅಧಿವೇಶನಗಳ ಮನೋರಂಜನೆ ಅಂಗವಾಗಿ ನಾಟಕಗಳನ್ನಾಡಿದರು. ಕ್ಷಾಮ, ಭೂಕಂಪ, ಪೀಡಿತರ ಪರಿಹಾರ ನಿಧಿಗೆ ಸಹಾಯ ಮಾಡಿದರು. ಆಶುನಾಟಕ ಸ್ಪರ್ಧೆಯಲ್ಲಿ 'ಧರ್ಮದ ಡೋಲು' ನಾಟಕವಾಡಿ ಪ್ರಥಮ ಬಹುಮಾನ ಗಳಿಸಿದರು. ಶ್ರೀ ಎಲ್. ರಾಜಾರಾಯರು (ವೈಣಿಕ ವಿದ್ವಾಂಸರು) ಸಂಘಕ್ಕೆ ಸೇರಿದ ಮೇಲೆ ಕುವೆಂಪು ಅವರ 'ವಾಲ್ಮೀಕಿಯ ಭಾಗ್ಯ'ವನ್ನೂ, ರನ್ನ ಕವಿಯ ಶತಮಾನೋತ್ಸವ ಸಂದರ್ಭದಲ್ಲಿ ಎರಡು ಸಹಸ್ರ ರೂಪಾಯಿಗೂ ಹೆಚ್ಚು ಖರ್ಚು ಮಾಡಿ ಬಿ. ಎಂ. ಶ್ರೀ ರಚಿತ "ಗದಾಯುದ್ಧ" ನಾಟಕ ರೂಪವನ್ನೂ ಪ್ರದರ್ಶಿಸಿ ಅಪಾರ ಮೆಚ್ಚುಗೆ ಪಡೆದರು. ೧೯೪೫ರಲ್ಲಿ ಈ ಕಲಾವಿದರು ಮುಂಬಯಿಗೆ ಹೋಗಿ ಒಂದು ವಾರ ನಾಟಕೋತ್ಸವ ನಡೆಸಿ ಅಲ್ಲಿನ ಕನ್ನಡಿಗರಿಗೆ ರಸದೌತಣ ಬಡಿಸಿದರು.

## ಛಾಯಾ ಆರ್ಟಿಸ್ಟ್ಸ್, ಬೆಂಗಳೂರು

೧೯೩೦ರಲ್ಲಿ ಜನ್ಮ ತಾಳಿದ ಈ ಸಂಘ ತುಂಬ ಜನಪ್ರಿಯತೆಯನ್ನು ಗಳಿಸಿ ವಿಲಾಸಿ ರಂಗಭೂಮಿಯ ಚಟುವಟಿಕೆಗಳನ್ನು ತ್ವರಿತಗೊಳಿಸಿತು. ಕೈಲಾಸಂ ನಾಟಕಗಳನು ಅಭಿನಯಿಸುವುದರಲ್ಲಿ ಎತ್ತಿದ ಕೈ. ಶ್ಯಾಂಪ್ರಿಯರು, ಪರ್ವತವಾಣಿ, ಬಿ. ಎಸ್. ವೆಂಕಟರಾಮ್ ನಾರಾಯಣರಾಯರು, ರಾಮರಾಯರು, ಗುರುರಾಜರಾಯರು, ನಾಗರಾಜ, ವೈ. ಸುಬ್ಬರಾವ್, ಯಮುನ, ಹೇಮ, ಅಹಲ್ಯ ಹೆಸರು ಗಳಿಸಿದ ನಟ ನಟಿಯರು. ಈ ತಂಡ ಸಾಧಿಸಿದ ಒಂದು ವಿಕ್ರಮವೆಂದರೆ–

"It may be mentioned that this is the only ameateur unit which staged 120 consecutive shows in Bangalore of Parwathavani's. 'Bahaddoor Ganda' to Capacity houses"('The Karnataka Theater' Dr. H.K. Ranganath)

ನನ್ನ ಬಹು ಜನಪ್ರಿಯ ನಾಟಕಗಳನ್ನೆಲ್ಲಾ ಬೆಂಗಳೂರಿನ ನ್ಯಾಷನಲ್ ಹೈಸ್ಕೂಲು ಆವರಣದಲ್ಲಿ ಮತ್ತು ಇತರ ಕಡೆಗಳಲ್ಲಿ ಹೆಚ್ಚಾಗಿ ಅಭಿನಯಿಸಿದ ತಂಡ ಇದೇ.

ಈಗ ನಾಟಕ ಪ್ರದರ್ಶನ ಪೂರ್ಣವಿರಾಮ ಪಡೆಯುತ್ತಿದೆ. ಆದರೆ ಶ್ರೀ ಬಿ. ಎಸ್. ವೆಂಕಟರಾಮ್ ಅವರು ಸರ್ಕಾರದ ಮನ್ನಣೆ ಪಡೆದು ಕಲಾವಿದರಿಗೆ ನಾಟಕ ಕಲೆಯ ಶಿಕ್ಷಣವನು ಕೊಡುತ್ತಿರುವರು.

## ಚಿತ್ರಕಲಾವಿದರು, ಬೆಂಗಳೂರು

೧೯೫೮–೫೯ರಲ್ಲಿ ಜನ್ಮ ತಾಳಿದ ಈ ತಂಡ ಎ. ಎಸ್. ಮೂರ್ತಿ ಮತ್ತಿತರ ನಾಟಕಗಳನ್ನು ಜನಪ್ರಿಯಗಳಿಸಿತು. ಇದಕ್ಕಿಂತ ಹೆಚ್ಚಾಗಿ ವಾರ ವಾರ ನಾಟಕ ಕಲೆಯಲ್ಲಿ ಅಭಿರುಚಿಯುಳ್ಳವರನ್ನು ಸೇರಿಸಿ, ತಜ್ಞರನ್ನು ಆಹ್ವಾನಿಸಿ, ಅವರಿಂದ ನಾಟಕದ ನಾನಾ ವಿಷಯಗಳ ಮೇಲೆ ಉಪನ್ಯಾಸಗಳನ್ನು ಏರ್ಪಡಿಸಿದುದು ಈ ವಿಚಾರ ವಿನಿಮಯ, ಪ್ರಚಾರ, ಯಾರೂ ಮಾಡಿರಲಿಲ್ಲ. ಚಿತ್ರಕಲಾವಿದರು ಅಭಿನಂದನಾರ್ಹರು.

## ನ್ಯಾಷನಲ್ ಕಾಲೇಜ್ ಹಿಸ್ಟ್ರಿಯಾನಿಕ್ ಅಸೋಸಿಯೇಷನ್ ಬೆಂಗಳೂರು:

೧೯೪೭ರಲ್ಲಿ ಕಾಲೇಜಿನ ಹಿರಿಯ ತರುಣರು ಬಿ. ಎನ್. ನಾರಾಯಣ್ (ನಾಣಿ) ಮುಖಂಡತ್ವದಲ್ಲಿ ಈ ಸಂಘವನ್ನು ಕಟ್ಟಿದರು. ವಿಶೇಷವಾಗಿ ಕೈಲಾಸಂ, ಪರ್ವತವಾಣಿ ನಾಟಕಗಳನ್ನು ಅಭಿನಯಿಸುತ್ತಾ ಬಂದು ಮುಂದೆ ಒಂದು ದೊಡ್ಡ ಹೆಜ್ಜೆಯಿಟ್ಟರು. ವಿದ್ಯಾರ್ಥಿಗಳಲ್ಲಿ ಹುದುಗಿರುವ ಕಲಾ ಪ್ರತಿಭೆಯನ್ನು ಕಂಡು ಹಿಡಿದು ಬೆಳಕಿಗೆ ತರಲು ಪ್ರತಿ ವರ್ಷವೂ ಇಲ್ಲಿಯ ವರೆಗೆ ತಪ್ಪದೆ ಅಂತರ ತರಗತಿ ನಾಟಕ ಸ್ಪರ್ಧೆ ನಡೆಯಿಸುತ್ತಿದ್ದಾರೆ. ಅನೇಕ ನಟರನ್ನು ವಿಲಾಸಿ ರಂಗಭೂಮಿಗೆ ಕೊಟ್ಟಿದ್ದಾರೆ. ತೆರೆಮರೆಯಲ್ಲಿ (back stage) ಕೆಲಸ ಮಾಡುವ ತಂಡವನ್ನು ನಿರ್ಮಾಣ ಮಾಡಿದ್ದಾರೆ. ಇವತ್ತು ಎಲ್ಲೇ ನಾಟಕವಾಗಲಿ, ಪ್ರಾಸಾಧನ, ರಂಗಸಜ್ಜಿಕೆ, ದೀಪಾಲಂಕಾರ ಇವಷ್ಟೂ ನಾಣಿ, ಪದ್ದು, ಕಪ್ಪಣ್ಣ–ಈ ಶಿಷ್ಯ ಕೋಟಿಯನ್ನು ಅವಲಂಬಿಸಿದೆ. ನಾಡಿನ ಯಾವ ಕಾಲೇಜಿನಲ್ಲೂ ಕಾಣದ ಚಟುವಟಿಕೆ, ಸಾಧನೆ. ಪ್ರಿನ್ಸಿಪಾಲರಾದ ಡಾ. ನರಸಿಂಹಯ್ಯನವರಂತೂ ಮಹಾರಾಜ ಕಾಲೇಜಿನ ನೆನಪನ್ನು ನನಗೆ ಪದೇ ಪದೇ ತರುತ್ತಾರೆ. ಅವರ ಉತ್ಸಾಹಕ್ಕೆ, ಪ್ರೋತ್ಸಾಹಕ್ಕೆ ವಿಲಾಸಿ ರಂಗಭೂಮಿ ಋಣಿ.



ಮುಂಬಯಿಯ ಕನ್ನಡ ಕಲಾವಿದರು ಅಭಿನಯಿಸಿದ 'ಸತ್ಯಂವದ ಧರ್ಮಂಚರ' ನಾಟಕದ ಒಂದು ದೃಶ್ಯದಲ್ಲಿ ಶ್ರೀ ಸದಾನಂದ ಸುವರ್ಣ, ಶ್ರೀ ಸುಧಾಕರ ಮೋರೆ, ಶ್ರೀ ಮುರಲೀಧರ್ ಹಾಗೂ ಕು. ರೇಖಾರಾವ್

## ರವಿ ಕಲಾವಿದರು, ಬೆಂಗಳೂರು

೧೯೪೭ ಆಗಸ್ಟ್ ೧೫ರಂದು ಹುಟ್ಟಿತು. ಹೆಸರಾಂತ ವ್ಯಾಯಾಮ ಪಟು ಪ್ರೊಫೆಸರ್ ಕೆ. ವಿ. ಐಯ್ಯರ್ ಅವರು ಅಧ್ಯಕ್ಷರು. ಆಡಬಹುದಾದ ನಾಟಕಗಳನ್ನೆಲ್ಲಾ ಆಡಿದ್ದಾರೆ. ಬೆಂಗಳೂರಿನಲ್ಲಿ, ಬೊಂಬಾಯಿನಲ್ಲಿ, ದಿಲ್ಲಿಯಲ್ಲಿ, ಬರೋಡಾದಲ್ಲಿ ಇತರ ಕಡೆಗಳಲ್ಲಿ ಒಂದು ಗೊತ್ತಾದ ಸ್ಥಳದಲ್ಲಿ ಒಂದು ವ್ಯವಸ್ಥಿತ ರೀತಿಯಲ್ಲಿ ತನ್ನ ೫೦೦ ಸದಸ್ಯರನ್ನು ಸತತವಾಗಿ ತೃಪ್ತಿ ಪಡಿಸುತ್ತಿರುವ ಸಂಸ್ಥೆಯೆಂದರೆ ಈಗ ಇದೊಂದೇ. ಉತ್ತಮ ನಟ ನಟಿಯರಿದ್ದಾರೆ. ನಿರ್ದೇಶನಕ್ಕೆ' ಬಿ. ಎಸ್. ನಾರಾಯಣ ರಾಯರು, ಒಟ್ಟಿನಲ್ಲಿ ಅಮೆಚೂರ್ ಡ್ರಾಮಾಟಿಕ್ ಅಸೋಸಿಯೇಷನ್ ತರುವಾಯ ಯೋಜನೆಯ ಪ್ರಕಾರ ಅಚ್ಚುಕಟ್ಟಿನ ಕೆಲಸ ನಡೆಯಿಸಿಕೊಂಡು ಬರುತ್ತಿರುವ ತಂಡ ಇದೇ. ಇತ್ತೀಚೆಗೆ ಬೆಳ್ಳಿಹಬ್ಬವನ್ನು ವಿಜೃಂಭಣೆಯಿಂದ ಆಚರಿಸಿದರು.

## ಉದಯ ಕಲಾವಿದರು, ಸಾಗರ:

ಇತರರ ನಾಟಕಗಳ ಅಭಿನಯದಿಂದ ಪ್ರಾರಂಭಿಸಿ, ಬೆಳ್ಳಿ ಹಬ್ಬದ ಆಚರಣೆ ಮಾಡುವುದರಲ್ಲಿರುವ ಈ ತಂಡ, ಶ್ರೀ ಮಾಸೂರರ ಮುಖಂಡತ್ವದಲ್ಲಿ ಒಂದು ಶ್ರೀರಂಗ ಭೂಮಿಯನ್ನು ಸ್ಥಾಪಿಸಿದೆಯೆಂದರೆ ತಪ್ಪಾಗಲಾರದು. ಶ್ರೀರಂಗರ ಸುಮಾರು ೧೫ ನಾಟಕಗಳನ್ನು ೮೦ಕ್ಕೂ ಹೆಚ್ಚು ಬಾರಿ ಅಭಿನಯಿಸಿದ್ದಾರೆಂದು ತಿಳಿದು ಬಂದಿದೆ. ಇವರಿಂದ ಇತ್ತೀಚೆಗೆ ಧಾರವಾಡದಲ್ಲಿ ಶ್ರೀರಂಗರ ಇತ್ತೀಚಿನ ನಾಟಕ "ಏನು ಬೇಡಲಿ ನಿನ್ನ ಬಳಿಗೆ ಬಂದು" ಪ್ರದರ್ಶನವಾಯಿತು. ಉತ್ಸಾಹಿ ತಂಡ, ಬಿರುಸಿನಿಂದ ಕೆಲಸ ಮಾಡುತ್ತಿದ್ದಾರೆ.

## ಸಮತೆಂತೋ, ಮೈಸೂರು:

೧೯೬೭ರ ಕೊನೆಯ ಭಾಗದಲ್ಲಿ ಸ್ಥಾಪಿತವಾದ ಈ ತಂಡದಲ್ಲಿರುವವರೆಂದರೆ ವಿಶ್ವವಿದ್ಯಾನಿಲಯದ ವಿಶಿಷ್ಟ ಕಾಲೇಜುಗಳ ಅಧ್ಯಾಪಕರು, ಅವರ ಮನೆಯವರು, ಹಾಗೂ ವಿದ್ಯಾರ್ಥಿಗಳು. ಅಧಿಕಾರವರ್ಗ ಇಲ್ಲದಿರುವುದು ಈ ತಂಡದ ವೈಶಿಷ್ಟ್ಯ. ಹೊಸ ನಾಟಕಗಳನ್ನು ರಂಗದ ಮೇಲೆ ತರುವುದರ ಜೊತೆಗೆ ಹಳೆಯ ಹಾಗೂ ಮರೆತು ಹೋದ ನಾಟಕಗಳನ್ನು ರಂಗದ ಮೇಲೆ ತರುವುದು ಉದ್ದೇಶ. ನಾಟಕಗಳನ್ನು ಪ್ರಯೋಗಿಸುವುದರ ಜೊತೆಗೆ ನಾಟಕ ರಂಗದಲ್ಲಿ ದುಡಿದವರಿಗೆ , ದಾಖಲೆಯನ್ನು ಸ್ಥಾಪಿಸಿದವರಿಗೆ ಗೌರವಿಸುವ ಉದ್ದೇಶವನ್ನೂ ಹೊಂದಿದೆ. "ಬೊಂತೆ" "ಇಲಿಬೋನು" "ಟೆಂಗರ ಬುಡ್ಡಣ್ಣ" "ಸುಂದೋಪಸುಂದ್ರು" "ಭ್ರಮೆ" "ಆಶೀರ್ವಾದ" "ಮನವೆಂಬ ಮರ್ಕಟ" "ಕಾಡು ಪ್ರಾಣಿ" "ಎಲ್ಲಿಗೆ" "ಗೋಡೆ ಬೇಕೆ ಗೋಡೆ" "ಆವಾಹನೆ" "ಬಹದ್ದೂರ ಗಂಡ" "ಇಷ್ಟಾರ್ಥ" "ಕದಡಿದ ನೀರು" ನಾಟಕಗಳ ಪ್ರಯೋಗವಾಗಿವೆ. ಶ್ರೀಯುತರಾದ ಸಂಪತ್ ಗುರುರಾಜ ರಾವ್, ಜಿ. ಬಿ. ಜೋಶಿ ಹಾಗೂ ಪರ್ವತವಾಣಿ ಇವರನ್ನು ಗೌರವಿಸಲಾಗಿದೆ.

ಪ್ರಾಚ್ಯ ಕ್ರೀಡಾ ಸಂವರ್ಧನ ಮಂಡಲಿ, ಭಾರತ ಕಲೋತ್ತೇಜಕ, ಸಂಗೀತ, ಸಮಾಜ, ಯಂಗ್‌ಮೆನ್ಸ್ ಫುಟ್‌ಬಾಲ್ ಕ್ಲಬ್ ಆಫ್ ಅಮೆಚೂರ್ಸ್, ಭಾರತ ಸೇವಕ ಸಮಾಜ, ಕರ್ನಾಟಕ ಕಲೋದ್ಧಾರಕ ಸಂಘ, ಕರ್ನಾಟಕ ಕಾಲೇಜು, ಅಮೆಚೂರ್ಸ್, ಕಲೋಪಾಸಕ ಮಂಡಲಿ, ಎಲ್. ಡಿ. ಎ. ಮೈಸೂರು, ವೈ. ಎಂ. ಎಲ್. ಡಿ. ಎ. ಭದ್ರಾವತಿ., ಕಲಾ ಜ್ಯೋತಿ ಆರ್ಟಿಸ್ಟ್ ಸಾಧನ ಆರ್ಟಿಸ್ಟ್ಸ್, ವಿಚಾರ ವಿಹಾರ, ಕಲಾ ಘೋಷಿಣಿ ಕಮಲಕಲಾ ನಿಕೇತನ, ಮಿತ್ರರ ಬಳಗ, ಕನ್ನಡ ಸಾಹಿತ್ಯ ಕಲಾ ಸಂಘ, ಕಲಾ ಕುಂಜ, ಗಾಂಪರ ಗುಂಪು ಇತರ ನಗರದ ಹೊರಗಿನ ಅನೇಕ ಸಂಘಗಳು ವಿಲಾಸಿ ರಂಗಭೂಮಿಗೆ ಸಾಕಷ್ಟು ಸೇವೆ ಸಲ್ಲಿಸಿವೆ



ಡಾ|| ಮಾಸ್ತಿಯವರ 'ಕಾಕನ ಕೋಟೆ' ನಾಟಕದ ದೃಶ್ಯದಲ್ಲಿ
ಚೋಣಿ, ಮಲ್ಲಿ, ಹೆಗಡೆಮಗ

ಶಾಲಾ ಕಾಲೇಜುಗಳಲ್ಲಿ ನಾಟಕ ಪ್ರದರ್ಶನಗಳು ವರ್ಷಕ್ಕೆ ಒಂದೋ ಎರಡೋ ಒಂದೊಂದು ಕಡೆ ನಡೆದರೂ ಒಟ್ಟಿನಲ್ಲಿ ವಿಲಾಸಿ ರಂಗಭೂಮಿಯ ಚಟುವಟಿಕೆಯಲ್ಲಿ ಸಕ್ರಿಯ ಭಾಗವಹಿಸಿದಂತೆಯೇ. ರಾಜ್ಯದ ನಾಟ್ಯಸಂಘದವರು ವರ್ಷ ವರ್ಷ ನಡೆಯಿಸುವ ಉಲ್ಲಾಳ್ ಹಾಗೂ ವಿಜಯ ಷೀಲ್ಡ್ ನಾಟಕ ಸ್ಪರ್ಧೆಯಲ್ಲಿ ೨೦–೨೫ ಪ್ರದರ್ಶನಗಳು ಆಗುತ್ತವೆ. ಅನೇಕ ಉತ್ತಮ ನಾಟಕಕಾರರ ಉತ್ತಮ ನಾಟಕಗಳ ಉತ್ತಮ ಪ್ರದರ್ಶನಗಳನ್ನು ನೋಡಿದ್ದೇವೆ.

ಇತ್ತೀಚೆಗೆ ವಾಣಿಜ್ಯ ಹಾಗೂ ಕೈಗಾರಿಕಾ ಸಂಸ್ಥೆಗಳೂ ಸ್ಪರ್ಧೆಗಳನ್ನು ನಡೆಸುತ್ತಾ, ಇತರ ವಿಲಾಸಿ ಸಂಘಗಳ ಪ್ರದರ್ಶನಗಳಿಗೆ ಜಾಹಿರಾತಿನ ರೂಪದಲ್ಲಿ ನೆರವು ಕೊಡುತ್ತಾ ವಿಲಾಸಿ ರಂಗಭೂಮಿಗೆ ದೊಡ್ಡ ಲಿಫ್ಟ್ ಕೊಟ್ಟಿದ್ದಾರೆ.

ಇಷ್ಟಾದರೂ ವಿಲಾಸಿ ರಂಗಭೂಮಿ ನಮ್ಮನ್ನು ವೃತ್ತಿರಂಗಭೂಮಿ ಕೊಂಡೊಯ್ದ ಎತ್ತರ ಮುಟ್ಟಿಸಿಲ್ಲವೆಂದು ನಾನೇ ಎಷ್ಟೋ ಸಾರಿ ಅಂದುಕೊಂಡದ್ದುಂಟು. ಆದರೆ ಬೇರೊಂದು ರೀತಿ ಯೋಚನೆ ಮಾಡಿದರೆ ಹೀಗೆ ಹೋಲಿಸುವುದೇ ತಪ್ಪೆನ್ನಿಸುತ್ತದೆ.

ವೃತ್ತಿ ರಂಗಭೂಮಿಗೆ, ಸದಾಶಿವನಿಗೆ, ೨೪ ಘಂಟೆಯೂ, ಅದೇ ಧ್ಯಾನ, ರಾಜರ, ವರ್ತಕರ, ಇತರ ಶ್ರೀಮಂತರ ಕೃಪೆಯಿರುತ್ತಿತ್ತು. ಹಣ ಹೇಗೋ ಸಿಗುತ್ತಿತ್ತು. ಸ್ವಂತ ನಾಟಕ ಮಂದಿರಗಳನ್ನು ಕಟ್ಟಿಕೊಳ್ಳುತ್ತಿದ್ದರು. ಸಂಬಳಕ್ಕೆ ನಟರಿದ್ದರು. ನಟಿಯರು, ಅವರಿಗೂ ಅಭಾವವಿರಲಿಲ್ಲ. ೧೦–೧೨ ನಾಟಕಗಳಷ್ಟನ್ನು ಅಭ್ಯಾಸ ಮಾಡಿ ಆಯಸ್ಸು ಕಳೆದು ಬಿಡುತ್ತಿದ್ದರು. ಹೇಗೆ? ಇವರಿಗೆ ನೂರಾರು ನಾಟಕಗಳು ಬೇಕಿರಲಿಲ್ಲ. ನಾಟಕ ಪ್ರದರ್ಶನ ಕ್ಷೇತ್ರ ಒಂದು ಊರಿಗೇ, ಒಂದು ಸ್ಥಳಕ್ಕೆ ಸೀಮಿತವಾಗಿರಲಿಲ್ಲ. ಊರಿಂದ ಊರಿಗೆ ಹೋಗುತ್ತಿದ್ದ ಕಾರಣ, ಹಳೆ ನಾಟಕ ಹೊಸ ಪ್ರೇಕ್ಷಕರಿಗೆ ಹೊಸದಾಗಿರುತ್ತಿತ್ತು. ವಿಲಾಸಿಗಳ ಕತೆ ಬೇರೆ. ಇವರಿಗೆ ನಾಟಕ ಸ್ಪೇರ್ ಟೈಂ ಸಾಹಸ. ದಿನವೆಲ್ಲಾ ಎಲ್ಲೋ ದುಡಿದು ಒಂದೆರಡು ತಾಸು ಬಿಡುವುಮಾಡಿಕೊಂಡು ತಮ್ಮ ಖಯಾಲಿಯನ್ನು ತೃಪ್ತಿಪಡಿಸಿಕೊಳ್ಳಬೇಕು. ಹಣ ಕೈಯಿಂದ ಹಾಕಬೇಕು. ಹಿಂದೆ ನಾಟಕ ಶಾಲೆಗೆ ಮೂರು ರೂಪಾಯಿ ಬಾಡಿಗೆ ಕೊಟ್ಟದುಂಟು. ನೂರು ಕೊಟ್ಟದ್ದೂ ಉಂಟು. ಈಗ? ಭಯವಾಗುತ್ತದೆ. ಇವತ್ತಿನ ನಟ ನಾಳೆಯಿಲ್ಲ. ವರ್ಗವೋ ಇನ್ನೇನೋ ಆದರೆ ಬೇರೊಬ್ಬನನ್ನು ತರಬೇಕು. ನಟಿ? ಹಿಂದೆ ಅಮೇಚೂರ್ ಡ್ರಾಮಾಟಿಕ್ ಅಸೋಸಿಯೇಷನ್ ಒಳ್ಳೆ ಕೀರ್ತಿ ಸಂಪಾದಿಸಿದಾಗ ಗಂಡಸರೇ ಸೀರೆ ಉಡುತ್ತಿದ್ದರು. ಈಗ ಇದು ಅಸಹನೀಯ. ಬೆಂಗಳೂರಿನ ಸತ್ಯವತಿ ಸಹೋದರಿಯರು ಎಷ್ಟು ವಿಲಾಸಿ ಸಂಘಗಳಿಗೆ ಸಹಕಾರ ನೀಡುತ್ತಿದ್ದಾರೆ, ಇವರಿಲ್ಲದಿದ್ದರೆ ಎಷ್ಟು ನಾಟಕಗಳ ಪಾಡು ಏನಾಗುತ್ತಿತ್ತು ಎಂಬುದನ್ನು ಬಲ್ಲವರೇ ಬಲ್ಲರು. ಕೆಲವೇ ಇತರ ಕಲಾವಿದೆಯರು ತುಂಬ ಪರಿಚಯವಿದ್ದವರೊಡನೆ ಸೇರಿ ನೆರವು ನೀಡುತ್ತಿದ್ದಾರೆ. ಆದರೂ ಈ ಸಮಸ್ಯೆ ಸಾಮಾನ್ಯದ್ದಲ್ಲ. ವಿಲಾಸಿಗಳು ಕೆಲವೇ ನಾಟಕಗಳನ್ನಿಟ್ಟುಕೊಂಡು ಊರೂರು ತಿರುಗಲಾರರು, ಇವರು ಗೊತ್ತಾದ

ಒಂದೇ ಸ್ಥಳದಲ್ಲಿ ಕೆಲಸಮಾಡುವವರು. ಗೊತ್ತಾದ ಪ್ರೇಕ್ಷಕರೇ, ಇವರಿಗೆ ಹೆಚ್ಚು ನಾಟಕಗಳು ಅಗತ್ಯ. ನೂರಾರು ನಾಟಕಗಳು ಬಂದಿವೆ. ಇನ್ನೂ ಬೇಕು. ಕೈಲಾಸಂ ದಾರಿ ತೋರಿಸಿದರು. ಕಡೆಕಡೆಗೆ ಇಂಗ್ಲಿಷ್ ದಿಕ್ಕಿಗೆ ತಿರುಗಿ ಬಿಟ್ಟರು. ಬೇಂದ್ರೆಯವರು 'ಉದ್ಧಾರ 'ತಿರುಕ ಪಿಡುಗು 'ಹೊಸ ಸಂಸಾರ' ಬರೆಯಲಾರಂಭಿಸಿ ನಾಟಕ ಬಿಟ್ಟು ಕಾವ್ಯದ ಗೌರೀಶಂಕರದತ್ತ ನಡೆದರು. 'ಶಿವರಾಮ ಕಾರಂತರು 'ಬಿತ್ತಿದ ಬೆಳೆ', 'ಗರ್ಭಗುಡಿ ನಾಟಕ'ವೆಂಬ ನಾಟಕ ಕೊಟ್ಟು, ಕಾದಂಬರಿ ಲೋಕದ ಉದ್ಧಾರದ ಕಡೆ ನಡೆದರು. ಶ್ರೀ ರಂಗರು 'ಹರಿಜನ್ವಾರ ನರಕದಲ್ಲಿ ನಾರಸಿಂಹ' 'ಪ್ರಪಂಚ ಪಾಣಿಪತ್ತು, ಮೊದಲಾದ ನಿಜ–ಕಟು–ನಾಟಕಗಳನು ರಚಿಸಿ, ಯಾಕೋ ಏನೋ 'ಪ್ರಯೋಗ' ಬಲಿ ಬಿದ್ದು, ಶಾಲೆ ಬಿಟ್ಟು ಈಚೆ ಬಂದೇ ಇಲ್ಲ. ಪ್ರಯೋಗ ಅಗತ್ಯವೇ. ಆದರೆ ಆ ಘಟ್ಟದಲ್ಲೇ ನಿಂತು ಬಿಟ್ಟರೆ? ಬಸವರಾಜ ಕಟ್ಟೀಮನಿಯವರು, 'ಶ್ರೀರಂಗರ ನಾಟಕಗಳನ್ನು ಕಲಾ ವಿಲಾಸಿ ಸಂಸ್ಥೆಗಳು ಅಭಿನಯಿಸಿವೆಯಾದರೂ ಜನಸಾಮಾನ್ಯರಿಗೆ ಅವು ತಿಳಿಯುವುದು ಕಠಿಣವಾಗಿ ಅವರ ನಾಟಕ ಕಲೆ ಸಾಕಷ್ಟು ಪ್ರಸಿದ್ಧಿ ಪಡೆಯಲಿಲ್ಲ. ಇತ್ತೀಚೆಗೆ ಅವರು ನಡೆಸಿರುವ ನೂತನ ಪ್ರಯೋಗಗಳ ಹಣೆಬರಹವೂ ಅಷ್ಟೇ' ಅಂದಿದ್ದಾರೆ. 'ಅವರ ಲೇಖನಿ ಇನ್ನೂ ಹೆಚ್ಚು ನಿಶಿತವಾದ ಕೃತಿಗಳನ್ನು ಕೊಡಬಲ್ಲುದು. ಭಾವ ಕಲ್ಪನೆಗಿಂತ ರಸ ಕಲ್ಪನೆಗೆ, ಹೃದಿ ಲಾಸಕ್ಕೆ ಮನಸ್ಸು ಹೋದಿ ಹಣ್ಣಾದರೆ, ಸವಿಗೊಂಡರೆ, ಅವರ ದೃಶ್ಯ ಸಾಹಿತ್ಯ ಕನ್ನಡ ನಾಟಕಕ್ಕೆ ಅತ್ಯಮೋಘ ಕ್ರಾಂತಿನಾದ ಮಾಡೀತು" ಎಂದಿದ್ದಾರೆ. ವಿ.ಸೀ. "ಎಷ್ಟು ವಿಶೇಷವಾಗಿ ಸಮಸಾಮಯಿಕ ಸಂಸಾರ ಜೀವನವನ್ನೂ ರಾಜಕೀಯವನ್ನೂ ಚಿತ್ರಿಸುತ್ತೇನೆಂದಾಗಲೂ ರಂಗದ ಕಡೆ ಹೆಚ್ಚು ಒಲವುಳ್ಳದ್ದೇ ಹೊರತು ವಾಸ್ತವ ಜೀವನದ ಹೃದಯ ಪ್ರವೇಶ ಮಾಡಿ ಅದನ್ನು ಬೆಳಗುವ ಕಾರ್ಯದಿಂದ ಹೊರಗೇ ಉಳಿಯುತ್ತದೇನೋ" ಎಂದೂ ಅಭಿಪ್ರಾಯಪಟ್ಟಿದ್ದಾರೆ. ನಾಟಕ ನೋಡುವವರನ್ನು ಲಕ್ಷ್ಯಕ್ಕೇ ತರದೆ ಹೋದರೆ ಆಚಾರ್ರು ಮುಂದೆ. ಗಂಟು ಹೊತ್ತು ಅವರ ಹೆಂಡ್ತಿ ಹತ್ತು ಹೆಜೆ ಹಿಂದೆ-ಈ ಚಿತ್ರ ಕಣ್ಣಿಗೆ ಕಟ್ಟುತ್ತದೆ. ನಮ್ಮೆಲ್ಲರಿಗಿಂತ ಹಿರಿಯರಾದರೂ, ಉತ್ಸಾಹದಲ್ಲಿ ತರುಣರಿಗಿಂತ ತರುಣರಾಗಿ ಇನ್ನೂ ನಾಟಕದ ಮೇಲೆ ನಾಟಕ ರಚಿಸುತ್ತಿದ್ದಾರೆ. ಆದರೆ– ಇನ್ನು ನಮ್ಮ ಈಗಿನ ಹೊಸ ನಾಟಕಕಾರರೂ ಪ್ರತಿಭಾವಂತರೇ. ಆದರೆ ಅವರ ಒಲವು ತುಂಬ 'ಹೊಸತನ'ದ ಕಡೆಗೆ. ವಸ್ತು, ಶೈಲಿ, ಒಗ್ಗುವುದು ಸಂದೇಹ. ಧಾರವಾಡದ 'ಅಂತರಂಗ', ಬೆಂಗಳೂರಿನ 'ಪ್ರತಿಮಾ ನಾಟಕ ರಂಗ' ಅಸಂಗತ ರಂಗಭೂಮಿಯ ಕಡೆಗೆವಾಲಿವೆ. ಕೆಲವೇ ಕೆಲವು ಪ್ರೇಕ್ಷಕರನ್ನು ಮಾತ್ರ ರಂಜಿಸುತ್ತಿವೆ, ಎನ್ನುವುದು ಸಹಜ ಸತ್ಯ. ಹೊಸದು ಬೇಕು, ನಿಜ. ಯಾರಿಗೆ ಬೇಕು? ಪ್ರೇಕ್ಷಕರಿಗೆ ಎಂಬುದನ್ನು ಮರೆಯಬಾರದು.

ನಾಟಕಗಳು ಬೇಕು. ನಾಟಕಗಳ ಪ್ರದರ್ಶನ ಬೇಕು. ಇತ್ತೀಚೆಗೆ ಹೊಸದಾಗಿ ಕಾಣಿಸಿಕೊಳ್ಳುತ್ತಿರುವ "ನಿರ್ದೇಶಕರ ಪ್ರದರ್ಶನ"ದ ಬಗ್ಗೆ ಸ್ವಲ್ಪ ಎಚ್ಚರ ಅಗತ್ಯವೆನ್ನಿಸುತ್ತದೆ. ಹಿಂದೆಯೂ ನಾಟಕಗಳಿಗೆ ನಿರ್ದೇಶಕರು ಇದ್ದೇ ಇದ್ದರು. ರಾಣಿಗೆ ಸೈನಿಕ ಥಿಕ್ಕ ಹೊಡೆಯುತ್ತಿರಲಿಲ್ಲ. ರಾಜಸಭೆಯಲ್ಲಿ ಯಾರು ಯಾರು ಎಲ್ಲೆಲ್ಲಿರಬೇಕೋ ಅಲ್ಲೇ "ಗ್ರೂಪಾ"ಗುತ್ತಿದ್ದರು. ಈಗ ನಾನೋ ಹೊಸದು ಎಂದೂ ಇಲದ್ದು ಆಗಿ ಹೋಗಿದೆ ಎಂಬ ಭ್ರಮೆ ಹಿಡಿಸಲಾಗುತ್ತಿದೆ. ನಾಟಕ ಯಾವುದಾದರೂ ಆಗಬಹುದು, ನಟನಟಿ ಯಾರಾದರೂ ಆಗಬಹುದು, ನಿರ್ದೇಶಕ ಸಾಕು! ಮದುವೆ ಮನೆಯಲ್ಲಿ ಚಪ್ಪರ ಚೆಂದ, ವಾಲಗ ಬ್ಯಾಂಡು ಗ್ರಾಂಡು, ಆಚಾರ್ರ ಮಂತ್ರ, ಗಂಟೆಯಲ್ಲಿ ಗೋವಿಂದ ಮದುವಣಿಗ ಕುಂಟ, ಮದುವಣಗಿತ್ತಿ ಕುರುಡಿ, ಆದರೂ ಪ್ರದರ್ಶನ "ಯಶಸ್ವಿ" ಈ ಜನ ಮರುಳೋ ಜಾತ್ರೆ ಮರುಳೋ ಅಪಾಯ.

ಈ ಸಂದರ್ಭದಲ್ಲಿ ನಮ್ಮ ರಾಜ್ಯ ಸಂಗೀತ ನಾಟಕ ಅಕಾಡೆಮಿ ವಿಲಾಸಿ ರಂಗಭೂಮಿಯವರನ್ನು ಇತರರಿಗಿಂತ ಕೆಳಗಿಟ್ಟು 'ಸನ್ಮಾನ' ಮಾಡುತ್ತೇವೆನ್ನುತ್ತಿದ್ದಾರೆ. ಮಾಡುತ್ತಿದ್ದಾರೆ. ಈ ಭೇದವನ್ನು ಕೂಡಲೇ ನಿಲ್ಲಿಸಿ ವಿಲಾಸಿ ರಂಗಭೂಮಿಯ ಸ್ಥಾನಮಾನಗಳನ್ನೂ ಸರಿಯಾಗಿ ಅರ್ಥಮಾಡಿಕೊಳ್ಳುವುದು ಒಳ್ಳೆಯದು.

ಸದ್ಯದ ಸ್ಥಿತಿ ಏನೇ ಇರಲಿ. ನಾನು ಆಶಾವಾದಿ. ವಿಲಾಸಿ ರಂಗಭೂಮಿಯೇ ಉಳಿಯುವ ರಂಗಭೂಮಿ, ಬೆಳೆಯುವ ರಂಗಭೂಮಿ, ಹೊಳೆಯುವ ರಂಗಭೂಮಿ ●



# ಕನ್ನಡ ವೃತ್ತಿರಂಗಭೂಮಿಯನ್ನು ಬೆಳಗಿದವರು

ರಾ. ಯ. ಧಾರವಾಡಕರ



ಶಿರಹಟ್ಟಿ ಎಚ್. ವೆಂಕೋಬರಾಯರು

ಕನ್ನಡ ಕಂಪನಿ ನಾಟಕಗಳು ಬಯಲಾಟ ಯಕ್ಷಗಾನ ಗೊಂಬೆಯಾಟ ಇವುಗಳ ಮೂಲದಿಂದ ಪ್ರಾರಂಭವಾಗಿದ್ದರೂ ಈ ನಾಟಕಗಳ ಮಧ್ಯ ಕಾಲದಲ್ಲಿ "ಆಟ"ಗಳ ಕಾಲವೂ ಕನ್ನಡದಲ್ಲಿ ಆಗಿ ಹೋಯಿತು. ಈ ಆಟಗಳ ಗುಂಪು ಒಂದು ದಿನ ಹುಟ್ಟಿ ಮರುದಿನವೇ ಸಾಯದೆ ಜನ ಕರೆಸಿದಾಗ ಬೇರೆ ಬೇರೆ ಸ್ಥಳಗಳಿಗೆ ಹೋಗಿ ತಮ್ಮ ಆಟಗಳನ್ನು ಆಡುತ್ತಿತ್ತು. ವಸ್ತು ಪುರಾಣ ವಿಷಯವಾಗಿದ್ದರೂ ನಿತ್ಯ ಜೀವನದ ಶೃಂಗಾರಕೂ ಇದರಲ್ಲಿ ಎಡೆ ಇದ್ದಿತು. ಕುಲಿಗೋಡ ತಮ್ಮಣ್ಣನ 'ಪಾರಿಜಾತ' ನಾಟಕ, ಸರಗಿ ಕುಂಬಾರನ 'ರಾಜಾಸ' ಆಟ, ಹಣಮಂತನ 'ಪಾರಿಜಾತ' ಆಟ ಈ ವರ್ಗಕ್ಕೆ ಸೇರಿದುವು. ಬಡಕುಂದ್ರಿ ಬಸಪ್ಪ, ಕೌಜಲಗಿ ನಿಂಗಾಸಾನಿ ಮತ್ತು ಹಿಡಕಲ್ಲ ಕಲ್ಲಪ್ಪ ಮೊದಲಾದವರು ಆಡಿದ ಆಟಗಳು ಸಾಮಾಜಿಕ ಕಥಾವಸ್ತುವುಳ್ಳವಾಗಿದ್ದವು. ಸಂಗ್ಯಾ-ಬಾಳ್ಯಾನ ಆಟದ ಕಥೆ ಬೈಲಹೊಂಗಲದಲ್ಲಿ ನಡೆದ ಒಂದು ಘಟನೆಯ ಸಾಹಿತ್ಯ ರೂಪ. ಇದೇ ಕಾಲಕ್ಕೆ ಹಲವು ಮೇಳದವರು ಆಡುತ್ತಿದ್ದ "ಮುಕುಂದ ಗೋವಿಂದ" ಎಂಬ ಆಟ ತೀರ ನೂತನವಾದ ಸಾಮಾಜಿಕ ವಿಷಯಕ್ಕೆ ಸಂಬಂಧಪಟ್ಟುದು. ಮುಕ್ಕುಂದ ಮತ್ತು ಗೋವಿಂದರು ಮಿತ್ರರು. ಅನ್ಯೋನ್ಯ ಪ್ರೇಮಿಗಳು. ಆದರೆ ದುರ್ದೈವದಿಂದ ಒಬ್ಬನು ತನ್ನ ಮಿತ್ರನ ಹೆಂಡತಿಯ ರೂಪ ಗುಣಗಳಿಗೆ ಮನಸೋತು ಯಾವ ರೀತಿ ಅವಳನ್ನು ಪಡೆಯುತ್ತಾನೆಂಬುದೇ ಈ ಆಟದ ಕಥಾ ವಸ್ತು. ಗುಳೇದಗುಡ್ಡದ ದಾಸರ ಆಟಗಳೂ ಈ ವರ್ಗಕ್ಕೇ ಸೇರಿದುವು. ಅಪರಾಳ ತಮ್ಮಪ್ಪನವರು ರಚಿಸಿದ ಕೃಷ್ಣ ಪಾರಿಜಾತವನ್ನು ಕೌಜಲಗಿ ನಿಂಗಾಸಾನಿಯ ಮೇಳದವರು ಅದ್ಭುತವಾಗಿ ಅಭಿನಯಿಸುತ್ತಿದ್ದರೆಂದೂ, ನಿಷ್ಣಾತ ನಟಿಯಾದ ನಿಂಗಾಸಾನಿಯು ತಲೆಯ ಮೇಲೆ ದೀಪ ಹಚ್ಚಿದ ಸಮೆಯನ್ನಿಟ್ಟುಕೊಂಡು ಬೇಕಾದ ಅಂಗ-ಭಂಗಿಯಲ್ಲಿ ತಾಳ-ಲಯಬದ್ಧವಾಗಿ ಎಷ್ಟೇ ಕುಣಿದರೂ ಸಮೆಯ ದೀಪಕ್ಕೆ ಏನೂ ಧಕ್ಕೆ ತಗುಲುತ್ತಿರಲಿಲ್ಲವೆಂದೂ ಹಿರಿಯರಾದ ದಿವಂಗತ ಮುದವೀಡು ಕೃಷ್ಣರಾಯರು ಹೇಳುತ್ತಿದ್ದರು.

ಈ ಆಟಗಳ ಕಾಲ ಮುಗಿಯುವುದರಲ್ಲಿಯೇ ಈ ಮೊದಲೇ ಹೇಳಿದಂತೆ ೧೮೭೭ರಲ್ಲಿ ಹಲಸಗಿ ನಾಟಕ ಕಂಪನಿಯು ಪ್ರಾರಂಭವಾಯಿತು. ಈ ಕಂಪನಿಯವರು ವೆಂಕಣ್ಣಾಚಾರ್ಯ ಆಗಳಗಟ್ಟಿ, ಉರ್ಫ "ಶ್ರೀನಿವಾಸ ಕವಿ" ಬರೆದ 'ಶ್ರೀಮತಿ ಪರಿಣಯ,' 'ಮದಾಲಸ ಪರಿಣಯ,' 'ಭೌಮಾಸುರ ವಧ' ಮೊದಲಾದ ನಾಟಕಗಳನ್ನು ಆಡುತ್ತಿದ್ದರು. ಈ ಕಂಪನಿಯವರು ದೂರದ ಬಳ್ಳಾರಿಯ ವರೆಗೂ ಹೋಗಿ ತಮ್ಮ ಕೀರ್ತಿ ಪತಾಕೆಯನ್ನು ಮೆರೆಸಿದರು. ಸಾಮಾನ್ಯವಾಗಿ ನಟರೆಂದರೆ ಸಚ್ಚಾರಿತ್ರ್ಯಕ್ಕೆ ದೂರವಿರುವವರಾಗಿ ಜನಮನದಲ್ಲಿ ಕಲ್ಪನೆ ಇದೆ. ಆದರೆ ಈ ಹಲಸಗಿ ನಾಟಕ ಕಂಪನಿಯವರ ನಟರಿಗೆ ಕಲೆಯ ಪಾವಿತ್ರ್ಯದ ಅರಿವಿತ್ತು. ಈ ನಟರು ಉಂಡಾಡಿ ಪೋರರಾಗಿರದೆ, ವೇದಶಾಸ್ತ್ರ ಸಂಪನ್ನರೂ, ಸದಾಚಾರಿಗಳೂ ಆಗಿದ್ದರು. ತಮ್ಮ ವ್ಯವಸಾಯದಲ್ಲಿಯೂ ಕೂಡ ಇವರು ತಮ್ಮ ಸ್ನಾನ ಸಂಧ್ಯಾದಿಗಳನ್ನು ಎಂದಿಗೂ ಬಿಡುತ್ತಿರಲಿಲ್ಲ. ಸಂಚಾರ ಹೋದಲ್ಲೆಲ್ಲ ಗುಡಿ-ಗುಂಡಾರಗಳಲ್ಲಿ ಪ್ರತಿ ನಿತ್ಯ ಪುರಾಣ ಪ್ರವಚನವನ್ನು ಸಾಗಿಸುತ್ತಿದ್ದರೆಂದು ಪ್ರತೀತಿಯಿದೆ. ಈ ಕಂಪನಿ ಮುರಿದ ಮೇಲೆ ಶಕ ೧೮೮೦ರ ಸುಮಾರು ಇದನ್ನು ಪುನಶ್ಚೇತನಗೊಳಿಸುವ ಪ್ರಯತ್ನ ನಡೆಯಿತು. ಈ ಹೊಸ ಕಂಪನಿಯವರು 'ವಿರಾಟಪರ್ವ', ಮೊದಲಾದ ನಾಟಕಗಳನ್ನು ಆಡಿದರು. ಇದರಲ್ಲಿ ಭಾಗವಹಿಸುತ್ತಿದ್ದ ಸಂಡಿಗಿ ಮತ್ತು ಮಂಡಿಗಿ ಎಂಬ ನಟರು ಸ್ತ್ರೀ ಪಾತ್ರಗಳನ್ನು ಅತ್ಯಂತ ಅದ್ಭುತವಾಗಿ ಅಭಿನಯಿಸುತ್ತಿದ್ದರೆಂದು ಹೇಳುತ್ತಾರೆ.

ಈ ಹಲಸಗಿ ನಾಟಕ ಮಂಡಳಿಯ ತರುವಾಯ ಸ್ಥಾಪಿತವಾದ ಎರಡನೆಯ ಕಂಪನಿಯೆಂದರೆ ೧೮೭೮ರಲ್ಲಿ ಪ್ರಾರಂಭವಾದ ಗದುಗಿನ 'ಶ್ರೀ ವೀರ ನಾರಾಯಣ ಪ್ರಾಸಾದಿತ ಕೃತಪುರ ನಾಟಕ ಮಂಡಳಿ.' ಈ ಕಂಪನಿಗೆ ಸಹಾಯಕರಾದವರು ಸುಪ್ರಸಿದ್ಧ ಕನ್ನಡ ಕವಿಗಳಾದ ಶಾಂತ ಕವಿಗಳು. ಕ್ರಿ. ಶಕ ೧೮೭೦ರಲ್ಲಿ ಮುದ್ರಿತವಾದ ಚುರುಮುರಿ ಶೇಷಗಿರಿರಾಯರ ಶಾಕುಂತಲ ನಾಟಕವನ್ನೇ ಆಧಾರವಾಗಿಟ್ಟುಕೊಂಡು ಅಣ್ಣಾ ಕಿರ್ಲೋಸ್ಕರ

**ಕನ್ನಡದ ವೃತ್ತಿರಂಗಭೂಮಿಗೆ ಶತಮಾನದ ಗತ ಇತಿಹಾಸವಿದೆ. ಈ ನೂರು ವರುಷಗಳ ಅವಧಿಯಲ್ಲಿ ನಮ್ಮ ವೃತ್ತಿ ರಂಗಭೂಮಿ ಸಾಧಿಸಿದ್ದು ಬಹಳಷ್ಟು. ಅದಕ್ಕಾಗಿ ಶ್ರಮಿಸಿದವರೂ ಬಹಳಷ್ಟು. ಇವರನ್ನು ಕನ್ನಡ ನಾಡು, ಜನತೆ ಮರೆಯುವಂತಿಲ್ಲ.**



ವಾಮನರಾವ ಮಾಸ್ತರ

ಅವರು ತಮ್ಮ ಸಂಗೀತ ಶಾಕುಂತಲವನ್ನು ರಚಿಸಿ ಅದರಲ್ಲಿ ಕನ್ನಡ ಪದಗಳ ಧಾಟಿಯಲ್ಲಿಯೇ ಮರಾಠಿ ಪದಗಳನ್ನು ಹಾಕಿದ್ದು ಸರ್ವಶ್ರುತವೇ ಇದೆ. ಶಕೆ ೧೮೮೨ರಲ್ಲಿ ಈ ಸಂಗೀತ ಶಾಕುಂತಲದ ಪ್ರಯೋಗವು ಪುಣೆಯಲ್ಲಿ ಮೊಟ್ಟ ಮೊದಲಿಗೆ ಆದಾಗ ಅದರ ಹಾಡುಗಳ ಮಟ್ಟವನ್ನು ಕೇಳಿ ಪುಣೆಯ ನಗರವಾಸಿಗಳೆಲ್ಲ ಮುಗ್ಧರಾದರೆಂದು ಹೇಳುತ್ತಾರೆ. ಕ್ರಿ. ಶ. ೧೯೧೭ರ 'ಕೇಸರಿ'ಯಲ್ಲಿ ಬರೆದ ಒಂದು ಲೇಖದಲ್ಲಿ ಶ್ರೀ ವಿಠ್ಠಲ ರಾಮಜಿ ಶಿಂಧೆ ಎನ್ನುವವರು ಶ್ರೀ ವಿಷ್ಣುದಾಸ ಭಾವೆ ಎಂಬ ಸುಪ್ರಸಿದ್ಧ ಮರಾಠಿ ನಾಟಕಕಾರ ಪೌರಾಣಿಕ ನಾಟಕಗಳಿಗೆ ಕನ್ನಡಿಗರ ಯಕ್ಷಗಾನಗಳೇ ಮೂಲವಾಗಿದುವೆಂದು ಹೇಳುತ್ತಾರೆ. ಕ್ರಿ. ಶ. ೧೮೭೪ರ ಸುಮಾರು ಉತ್ತರ ಕನ್ನಡದ ಘಟ್ಟದ ಜನರು ಮಹಾರಾಷ್ಟ್ರದ ಮಿರಜ ಕೊಲ್ಹಾಪುರಗಳಲ್ಲಿ ಆಡಿದ ಆಟಗಳನ್ನು ನೋಡಿ ಅಲ್ಲಿಯ ನಾಟಕ ಕಂಪನಿಗಳು ತಮ್ಮಲ್ಲಿಯೂ ಸುಧಾರಣೆ ಮಾಡಿಕೊಂಡವೆಂದು ಹೇಳುತ್ತಾರೆ. ಶಾಂತ ಕವಿಗಳು ಹೇಳಿದಂತೆ ಈ ಘಟ್ಟದ ಭಾಗವತರ ಆಟಗಳಲ್ಲಿಯ—

"ಗಂಡುಡಿಗೆ ಗಂಡುಗಾಯಿನ ಗಂಡುಗುಣಿತಂ
ಗಂಡುಗೇಕೆ ಹಾಕಿಕೆ ಲಾಲಿ



ಗರೂಡ ಸದಾಶಿವರಾವ್

ಗಂಡುಗರ್ನಿಯ ಮರ್ದಳಾವಾದ ಗಂಡುಜಾಂಗಟಿ
ಪುಂಡಿಕಟ್ಟಿಗೆಗಳ,
ಕೆಂಡೆಗಳ ಬೊಂಬಾಳ ಪಂಜುಗಳೊಡನೆ ಧರ್ಮ
ಮಂಡನ ಪುರಾಣ ಕಥೆಗಳಿದ್ದ ಆಟಗಳು"

ಮಹಾರಾಷ್ಟ್ರದ ಪ್ರೇಕ್ಷಕರ ಮನಸ್ಸನ್ನು ಸೂರೆಗೊಂಡುವು.

ಅವರೇ ಹೇಳುವಂತೆ—

ನೆರೆ ಮಹಾರಾಷ್ಟ್ರದವರೀ ಭಾಗವತರ ಮಾ
ದರಿಗಳಂ ಕೊಂಡು ಅವುಗಳಲಿ ನಸು ತಿದ್ದುಪಡಿ
ವೆರಸಿ ತಬಲಾರ್ಮೋಂಜು ಸೀನು ಪಡದಾ ವಿದೂಷಕ
ಸೂತ್ರಧಾರ ಮೇಣು
ಕರಿವದನ ಶಾರದಾಗಮನ ಮಧ್ಯಮಗಾನ
ಕರವಾಳಗಳ ತಿರುವು ನಯದ ಪೆಣ್ ಸೋಗು ಹಂ
ದರ ಥಿಯೇಟರುಗಳೊಡನಾಡಿ ನಾಟಕವೆಂದು ಗಳಿಸಿದರ್
ದ್ರವ್ಯವನ್ನು...

ಆದರೆ ಮರಾಠಿಯ ರಂಗಸ್ಥಲದ ಮೇಲೆ ಕನ್ನಡವು ಮಾಡಿದ ಈ ಪ್ರಭಾವವು ಕಾಲಕ್ರಮದಲ್ಲಿ ನಷ್ಟವಾಗಿ ಮರಾಠಿಗರ ಪ್ರಭಾವವೇ ಕನ್ನಡದ ಮೇಲೆ ಹೆಚ್ಚಾಯಿತು. ಶಾಂತ ಕವಿಗಳು ಹೇಳಿದ ಹಾಗೆ ಕರ್ನಾಟಕ ಮರಾಠಿ ನಾಟಕಮಯವಾಯ್ತು.

ಎಲ್ಲಿ ನೋಡಿದರು ಮರಾಠಿಯರ ನಾಟಕ ಕೀರ್ತಿ
ಯೆಲ್ಲಿ ನೋಡಲು ಮರಾಠಿಯರ ನಾಟಕದರ್ಥಿ
ಯೆಲ್ಲಿ ನೋಡಲು ಮರಾಠಿಯರ ನಾಟಕ ನಟರ
ಮೂರ್ತಿಗಳ ಸಂಚಾರವು
ಎಲ್ಲಿ ನೋಡಲು ಮರಾಠಿಯರ ನಾಟಕದಾಟ
ವೆಲ್ಲಿ ನೋಡಲು ಮರಾಠಿಯರ ನಾಟಕದೂಟ
ವೆಲ್ಲಿ ನೋಡಲು ಮರಾಠಿಯರ ನಾಟಕಮಯಂ
ತಾನಾಯ್ತು ಕರ್ನಾಟಕಂ!!! *

ಈ ಪ್ರಭಾವವನ್ನು ಹೋಗಲಾಡಿಸಲು ಕ್ರಿ. ಶ. ೧೮೭೨-೭೩ರಲ್ಲಿ ಶ್ರೀಗಳಾದ ಉಮಚಗಿ ಲಚ್ಚಪ್ಪ ನಾಯಕ, ಗುಡಿ ರಾಘವೇಂದ್ರಾಚಾರ್ಯ. ಕೊಣ್ಣೂರ ಜೀವು ಬಾಳಪ್ಪ ಮತ್ತು ಕುನ್ನಿಭಾವಿ ಇಮ್ಮಣ್ಣ ಮೊದಲಾದವರು ಕೂಡಿ ಶ್ರೀ ವೀರನಾರಾಯಣ ಪ್ರಾಸಾದಿಕ ಕೃತಪುರ ನಾಟಕ ಮಂಡಳಿಯನ್ನು ಸ್ಥಾಪಿಸಿದರು. ಈ ಕಂಪನಿಯವರು ಆಡಿದ ಮೊದಲನೆಯ ನಾಟಕವೆಂದರೆ ಶಾಂತಕವಿ ವಿರಚಿತ 'ಬಾಣಾಸುರ' ಎಂಬ ಆಖ್ಯಾನ. ಈ ನಾಟಕ ತುಂಬಾ ಯಶಸ್ವಿಯಾಯಿತು. ಇದರ ಯಶಸ್ಸನ್ನು ಸಹಿಸದ ಅಂದಿನ ಮರಾಠಿ ಶಿಕ್ಷಣಾಧಿಕಾರಿಗಳು ಶಾಂತ ಕವಿಗಳನ್ನು ಗದುಗಿನಿಂದ ಹೊಂಬಳಕೆ ವರ್ಗ ಮಾಡಿದರು. ಹೀಗಿದ್ದರೂ ಕನ್ನಡದ ನಿಸ್ಸೀಮ ಅಭಿಮಾನಿಗಳಾದ ಶಾಂತಕವಿಗಳು ಪ್ರತಿ ದಿವಸ ಕುದುರೆಯ ಮೇಲಾಗಲೀ ನಡೆದಾಗಲೀ ಒಂಬತ್ತು ಮೈಲು ಹೊಂಬಳದಿಂದ ಗದುಗಿಗೆ ಬಂದು ರಂಗ ತಾಲೀಮನು ಮಾಡಿಸಿ ಹೋಗುತ್ತಿದ್ದರು. ಈ ಕಂಪನಿಯಲ್ಲಿ ಡಂಬಳ ಹುಚಾಚಾರ್ಯರು, ಸ್ತ್ರೀ ಪಾತ್ರವನ್ನೂ, ಜೀವು ಬಾಳಪ್ಪನವರು ಸೂತ್ರಧಾರನ ಪಾತ್ರವನ್ನೂ, ಬಾದಾಮಿ ಫುಟ್ಟಾಚಾರರು ವಿನೋದದ ಪಾತ್ರವನ್ನೂ ಅಭಿನಯಿಸುತ್ತಿದ್ದರು. ಗುಡಿ ರಾಘವೇಂದ್ರಾಚಾರ್ಯರು ಭೀಮಸೇನನ ಘಟೋತ್ಕಚ ಮೊದಲಾದ ಪ್ರಮುಖ ಪಾತ್ರಗಳನ್ನು ವಹಿಸುತ್ತಿದ್ದರು. ಅಂದಿನ ಅಗ್ಗಳತೆಯ ಕಾಲದಲ್ಲಿ ಈ ಕಂಪನಿಯವರು ಸುಮಾರು ಒಂದು ಸಾವಿರ ರೂಪಾಯಿ ಗಳಿಸುತ್ತಿದ್ದರಂತೆ. ಇವರ ಯಶಸ್ಸನ್ನು ಕಂಡೂ ಹಿಗ್ಗಿದ ಶಾಂತ ಕವಿಗಳು—"ಬರೆದು ಕಲಿಸಿದರಿಂದೆ ಗುರುಗಳಾದೆವು ನಾವು. ನೇರ ಕಲಿತು ನಟಿಸಿದವರೆಲ್ಲರೂ ಶಿಷ್ಯರಾದರು" ಎಂದು ಹೇಳುತ್ತಾರೆ. *

ಹೆಚು ಕಡಿಮೆ ಇದೇ ಕಾಲಕ್ಕೆ ಈ ಭಾಗದಲ್ಲಿ

* ಪ್ರಭಾತ ೧೯೧೪

* ಆರು ಪ್ರಬಂಧಗಳು- ರಾ. ಯ. ಧಾರವಾಡಕರ



ಶ್ರೀಮತಿ ಗಂಗೂಬಾಯಿ ಗುಳೇದಗುಡ್ಡ



ಏಣಗಿ ಬಾಳಪ್ಪ

ಸುಪ್ರಸಿದ್ಧವಾದ ಇನ್ನೊಂದು ನಾಟಕ ಕಂಪನಿಯೆಂದರೆ ಧಾರವಾಡದ "ತಂತುಪುರ ಸಂಗೀತ ನಾಟಕ ಮಂಡಳಿ." ಈ ಕಂಪನಿಯಲ್ಲಿ ಶ್ರೀಯುತರಾದ ಭೀಮಾಚಾರ್ಯ ಏರಿ, ದತ್ತಾತ್ರಯ ಧಾರವಾಡ, ರಾಮಭಾವು ಹಲಸಗಿ ಮೊದಲಾದವರು ಭಾಗವಹಿಸುತ್ತಿದ್ದರು. ಈ ಕಂಪನಿಯವರು ಮಹಾರಾಷ್ಟ್ರ, ಗುಜರಾಥ, ವಿದರ್ಭ. ಆಂಧ್ರ, ಮೊದಲಾದ ಪ್ರಾಂತಗಳಿಗೆ ಹೋಗಿ ಅಲ್ಲಿಯ ಪ್ರಾದೇಶಿಕ ಭಾಷೆಗಳಲ್ಲಿಯೇ ನಾಟಕಗಳನ್ನು ಆಡುತ್ತಿದ್ದರೆಂದು ಹೇಳುತ್ತಾರೆ. ಕ್ರಿ. ಶ. ೧೮೮೫ರಲ್ಲಿ ಧಾರವಾಡಕ್ಕೆ ರೇಲ್ವೆ ಮುಖ್ಯ ಕಚೇರಿ ಬರಲು ಈ ಜನರೆಲ್ಲ ಕಲಾಸೇವೆಯನ್ನು ಬಿಟ್ಟು ರೇಲೆ ನೌಕರಿಯನು ಹಿಡಿದರು.

ಇದಾದ ನಂತರ ಬೈಲಹೊಂಗಲದ ರಾವಸಾಹೇಬ್ ಕಣಬರಗಿಮಠ ಶಿವಮೂರ್ತಿಸ್ವಾಮಿಗಳು ಕೊಣ್ಣೂರ ನಾಟಕ ಮಂಡಳಿ ಎಂಬುದನ್ನು ಸುಮಾರು ೧೯೦೮ರಲ್ಲಿ ಸ್ಥಾಪಿಸಿದರು. ಈ ಕಂಪನಿ ಯೋಗ್ಯವಾದ ರಂಗಸಜ್ಜಿಕೆ, ಒಳ್ಳೆಯ ವಸ್ತ್ರಾಭರಣಗಳು ಮೊದಲಾದವುಗಳನ್ನು ಒದಗಿಸಿ ನಾಟಕಕ್ಕೆ ರಂಗೇರುವ ಹಾಗೆ ಮಾಡಿತು.

ಸುಪ್ರಸಿದ್ಧ ಶಿರಹಟ್ಟಿ ವೆಂಕೋಬರಾಯರ "ಶ್ರೀ ಲಕ್ಷ್ಮೀ ಪ್ರಸಾದಿಕ ನಾಟಕ ಮಂಡಳಿ' ಕ್ರಿ. ಶ. ೧೯೦೪ರಲ್ಲಿ ಪ್ರಾರಂಭವಾಯಿತು. ವೆಂಕೋಬರಾಯರು ಕೊಪ್ಪಳದಲ್ಲಿ ಹುಟ್ಟಿ ಅಂದಿನ ಸಾಂಗ್ಲಿ ಸಂಸ್ಥಾನದ ಶಿರಹಟ್ಟಿಯಲ್ಲಿ ಬೆಳೆದು ದೊಡ್ಡವರಾದರು. ಈ ಕಂಪನಿಯವರು 'ಪದ್ಮಾವತಿ ಪರಿಣಯ', 'ಭೋಜ ಪ್ರಬಂಧ' 'ಶರಭಾವತಾರ' 'ಇಂದಿರಾ' ಅಡಬುದ್ದಿ ಮಾಸ್ತರ ಕೃತ 'ಶನಿ ಪ್ರಭಾವ' ಮೊದಲಾದ ನಾಟಕಗಳನ್ನು ಆಡುತ್ತಿದ್ದರು. ವೆಂಕೋಬರಾಯರ ನಾಟಕಗಳನ್ನು ನೋಡಿದವರು ಅವರ ದಶಾವತಾರ ನಾಟಕವನ್ನು ಎಂದಿಗೂ ಮರೆಯುವಂತಿರಲಿಲ್ಲ. ಅದ್ಭುತವಾದ ವಿದ್ಯುದಲಂಕಾರ, ನಯನ ಮನೋಹರ ಸೀನು, ಪರದೆಗಳು, ಟ್ರಾನ್ಸಫರ ಸೀನುಗಳು ಮತ್ತು ಎಲ್ಲಕ್ಕೂ ಹೆಚು ನರಸಿಂಹಾವತಾರದಲ್ಲಿ ಪರಮಾತ್ಮನು ಹಿರಣ್ಯಕಶಿಪುವಿನ ಹೊಟ್ಟೆ ಹರಿಯುವ ಸಂದರ್ಭ ರಂಗಸ್ಥಳದ ಮೇಲಿನ ಎಲ್ಲ ಕಂಬಗಳಲ್ಲಿಯೂ ಕಾಣಿಸಿಕೊಳ್ಳುವುದು—ಈ ಮೊದಲಾದ ಅಂಶಗಳಿಂದ ವೆಂಕೋಬ



ಚಿತ್ತರಗಿ ಗಂಗಾಧರ ಶಾಸ್ತ್ರಿಗಳು

ರಾಯರ ನಾಟಕ ಕಂಪನಿ ಕೀರ್ತಿಯ ಅತ್ಯುನ್ನತ ಶಿಖರದಲ್ಲಿದ್ದಿತು. ಕಲೆಯ ಸೇವೆಗಾಗಿ ವೆಂಕೋಬರಾಯರು ದುಡ್ಡನ್ನು ನೀರಿನಂತೆ ಖರ್ಚು ಮಾಡಿದರು. ಸ್ವತಃ ಒಂದು ಡೈನಮೋ ಇಟ್ಟುಕೊಂಡು ರಂಗಸ್ಥಳಕ್ಕೆ ವಿದ್ಯುದ್ದೀಪಗಳನ್ನು ಅಳವಡಿಸುತ್ತಿದ್ದರು. ಇದರ ಮೇಲ್ವಿಚಾರಣೆಗಾಗಿ ಮಂಗಳೂರಿನ ಪೀಟರ್ ಎಂಬ ವಿದ್ಯುತ್ ಶಾಸ್ತ್ರ ಪರಿಣತನೊಬ್ಬನನ್ನು ನೇಮಿಸಿಕೊಂಡಿದ್ದರು. ಅವರ ಕಂಪನಿಯಲ್ಲಿ ವಿದ್ಯುದ್ದೀಪ ಹಚ್ಚುವವ ಮಂಗಳೂರಿನವ. ಪರದೆಗಳನ್ನು ಸುಂದರವಾಗಿ ಬರೆಯುವವರು ಗೋವೆಯ ಹರಿರಾಮ ಎನ್ನುವವ, ತಿರುವನಂತಪುರದ ಮುಪ್ಪುವೇಲು ಮತ್ತು ಬೆಳಗಾವಿಯ ಬೋಂಗೆ ಎನ್ನುವವರು.

ವೆಂಕೋಬರಾಯರಿಗೆ ರಾಜಕೀಯ ಮತ್ತು ಸಾಮಾಜಿಕ ಪ್ರಜ್ಞೆಯೂ ಅತಿಶಯವಾಗಿದ್ದಿತು. ಕ್ರಿ.ಶ.೧೯೦೮ರಲ್ಲಿ ಕಂಪನಿ ಧಾರವಾಡದಲ್ಲಿದ್ದಾಗ ಲೋಕಮಾನ್ಯ ಟಿಳಕರಿಗೆ ತಮ್ಮ ನಾಟಕವನ್ನು ತೋರಿಸಿ ಆ ನಾಟಕದ ಉತ್ಪನ್ನವನ್ನು ಅವರಿಗೆ ಅರ್ಪಿಸಿದರು. ೧೯೨೯ರಲ್ಲಿ ಕಂಪನಿ ಮಂಗಳೂರಿನಲ್ಲಿದ್ದಾಗ ಅಲ್ಲಿಗೆ ಆಗಮಿಸಿದ್ದ ಪಂಡಿತ ಜವಾಹರಲಾಲ ನೆಹರು ಅವರನ್ನು ನಾಟಕಕ್ಕೆ ಆಹ್ವಾನಿಸಿ ಅವರಿಗೆ ಮರ್ಯಾದೆ ಮಾಡಿದರು. ವೆಂಕೋಬರಾಯರ ಕಂಪನಿಯಲ್ಲಿಯ ಆಂಜನೇಯನ ಪಾತ್ರವನ್ನು ವಹಿಸುತ್ತಿದ್ದವರ ನಟನೆಯನ್ನು ಎಂದಿಗೂ ಮರೆಯುವಂತಿಲ್ಲ. ಪ್ರತ್ಯಕ್ಷ ಆಂಜನೇಯನೇ ಬಂದ ಹಾಗೆ ಅವರು ಕಾಣುತ್ತಿದ್ದರು. ಸವಣೂರ ವಾಮನರಾವ ಮಾಸ್ತರರು ಈ ಕಂಪನಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು. ಹೀಗೆ ಸುಮಾರು ೩೫ ವರುಷ ಕಾಲ ಕಲಾಸೇವೆಯನ್ನು ಮಾಡಿದ ವೆಂಕೋಬರಾಯರು ೧೯೩೪ನೆಯ ಇಸ್ವಿ ಜುಲೈ ೧೫ ರಂದು ಇಹಲೋಕವನ್ನು ಅಗಲಿದರು.

ವೆಂಕೋಬರಾಯರ ಕಂಪನಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದ ವಾಮನರಾವ ಮಾಸ್ತರರು ಆ ಕಂಪನಿಯನ್ನು ಬಿಟ್ಟ ಮೇಲೆ ಕ್ರಿ.ಶ. ೧೯೧೩ ರ ಸುಮಾರಿಗೆ ತಮ್ಮ "ವಿಶ್ವಗುಣಾದರ್ಶ ನಾಟಕ ಮಂಡಳಿ" ಎಂಬ ಕಂಪನಿಯನ್ನು ಪ್ರಾರಂಭಿಸಿದರು. ಈ ಕಂಪನಿ ಪೌರಾಣಿಕ ನಾಟಕಗಳನ್ನಲ್ಲದೆ, 'ಸಂಶಯ ಕಲ್ಲೋಳ', 'ಬಾಜೀರಾವ ಪೇಶವೆ' ಮೊದಲಾದ ಮರಾಠಿ ನಾಟಕಗಳ ಅನುವಾದವನ್ನೂ ಆಡುತ್ತಿದ್ದರು. ವಾಮನರಾಯರು ತಮ್ಮ ಕಂಪನಿಯ ನಟ ನಟಿಯರ ವೈಯಕ್ತಿಕ ಚಾರಿತ್ರ್ಯವು ನಿರ್ಮಲವಿರುವ ಹಾಗೆ ಪ್ರಯತ್ನಪಟ್ಟರು. ಈ ಕಂಪನಿಯ ಮುಖ್ಯ ನಟರೆಂದರೆ ವಾಮನರಾವ ಮಾಸ್ತರ, ನಟಿಯೆಂದರೆ ಗಾನರತ್ನ ಗಂಗೂಬಾಯಿ ಗುಳೇದಗುಡ.



ಬಳ್ಳಾರಿ ಲಲಿತ

ವಿಶ್ವಗುಣಾದರ್ಶ ನಾಟಕ ಮಂಡಳಿಯನ್ನು ಬಿಟ್ಟ ಮೇಲೆ ಗಾನರತ್ನ ಗಂಗೂಬಾಯಿಯವರು ತಮ್ಮದೇ ಆದ "ಶ್ರೀ ಕೃಷ್ಣ ನಾಟಕ ಮಂಡಳಿ"ಯನ್ನು ಕ್ರಿ. ಶ. ೧೯೧೬ರ ಸುಮಾರು ಪ್ರಾರಂಭಿಸಿದರು. ಶ್ರೀಮತಿಯವರು ನಾಟಕವೇ ಉಸಿರಾಗಿರುವ ಸುಪ್ರಸಿದ್ಧ ಗುಳೇದಗುಡದವರು. ಅವರ ತಾಯಿ ಯಲ್ಲವ್ವನವರೂ ಒಂದು ಕಾಲಕ್ಕೆ ಸುಪ್ರಸಿದ್ಧ ನಟಿಯಾಗಿದ್ದರು. ಹೀಗಾಗಿ ನಾಟಕದ ವಾತಾವರಣದಲ್ಲಿಯೇ ಬೆಳೆದ ಗಂಗೂಬಾಯಿಯವರು ಕನ್ನಡದ ರಂಗಭೂಮಿಗೆ ಅಮೋಘವಾದ ಸೇವೆಯನ್ನು ಸಲ್ಲಿಸಿದರು. ಸುಮಧುರವಾದ ಕಂಠ, ಶಾಸ್ತ್ರೀಯವಾದ ಸಂಗೀತ ಸಾಧನೆ, ಬಳ್ಳಿಯಂತೆ ಬಳುಕುವ ಸುಂದರವಾದ ದೇಹಯಷ್ಟಿ, ಅದಕ್ಕೆ ತಕ್ಕ ನಯವಾದ ಹಾವಭಾವ, ಅಂಗವಿನ್ಯಾಸ ಮೊದಲಾದವುಗಳ ಮೂಲಕ ಶ್ರೀಮತಿಯವರ ಅಭಿನಯವು ಕಣ್ಣಿಗೆ ಒಂದು ಹಬ್ಬವಾಗಿದ್ದಿತು. 'ಮಹಾನಂದಾ' ನಾಟಕದಲ್ಲಿ ವೇಷಧಾರಿಯಾದ ಶಿವನು ಸರ್ವವಿಧದಲ್ಲಿಯೂ ಪಾರ್ವತಿಯ ಸತ್ವ ಪರೀಕ್ಷೆಯನ್ನು ಮಾಡಿದಾಗ ಇವನೇ ಶಿವನಿರಬೇಕೆಂದು ನಿಶ್ಚಯಿಸಿ ಪಾರ್ವತಿಯ ಪಾತ್ರದಲ್ಲಿ ಶ್ರೀಮತಿಯವರು ಹೇಳುತ್ತಿದ್ದ "ಇವನೇ ಗಿರಿಜಾರಮಣನೇ, ಇವನೇ ಫಾಲಾಕ್ಷ ಶಿವನೇ" ಎಂಬ ಹಾಡು ಒಂದು ಕಾಲಕ್ಕೆ ಜನತೆಗೆ ಹುಚ್ಚು ಹಿಡಿಸಿತ್ತು. ನಾಟ್ಯಕಲಾರಾಣಿಯಾಗಿದ್ದ ಶ್ರೀಮತಿಯವರು ಉದಾರ ಹೃದಯಿಗಳೂ ಆಗಿದ್ದರು. ಆ ಕಾಲದಲ್ಲಿ ಬಾಗಿಲುಕೋಟೆಯಲ್ಲಿ ಕಟ್ಟಲಾಗುತ್ತಿದ್ದ ಸೇವಾದಲದ ಕಟ್ಟಡಕ್ಕೆ ಶ್ರೀಮತಿಯವರು ತಮ್ಮ ನಾಟಕದ ಒಂದು ಸಾವಿರದ ಒಂದು ರೂಪಾಯಿಗಳನ್ನು ದೇಣಿಗೆಯಾಗಿ ಡಾ. ನಾ. ಸು. ಹರ್ಡೀಕರ ಅವರಿಗೆ ಕೊಟ್ಟರು. ಅಂದಿನ



ಬಳ್ಳಾರಿ ರಾಘವ



ಜೋಳದರಾಶಿ ದೊಡ್ಡನಗೌಡರು



ಸಿ. ಬಿ. ಮಲ್ಲಪ್ಪ

ಬ್ರಿಟಿಷ್ ಆಳರಸರ ಕಠೋರ ಕಟಾಕ್ಷದ ಕಾಲದಲ್ಲಿ ಒಬ್ಬ ಕಲಾವಿದ ರಾಷ್ಟ್ರಕಾರ್ಯಕ್ಕಾಗಿ ಹೀಗೆ ಹಣವನ್ನು ಕೊಟ್ಟುದು ಔದಾರ್ಯಕ್ಕಿಂತಲೂ ಹೆಚ್ಚಾಗಿ ಧೈರ್ಯದ ಮಾತು.

'ನಾಟಕಾಲಂಕಾರ' 'ಅಭಿನಯ ಕೇಸರಿ' ಗರುಡ ಸದಾಶಿವರಾಯರ "ಶ್ರೀ ದತ್ತಾತ್ರಯ ನಾಟಕ ಮಂಡಳಿ"ಯು ಕ್ರಿ. ಶ. ೧೯೧೬ರಲ್ಲಿ ಪ್ರಾರಂಭವಾಯಿತು. ದಿವಂಗತ ಗರುಡರು ೧೮೭೭ನೆಯ ಇಸ್ವಿಯಲ್ಲಿ ಕೊಪ್ಪಳ ತಾಲ್ಲೂಕಿನ ಕವಲೂರು ಎಂಬ ಗ್ರಾಮದಲ್ಲಿ ಒಂದು ಸಂಪ್ರದಾಯವಂತರ ಮನೆಯಲ್ಲಿ ಹುಟ್ಟಿದರು. ಅವರ ತಂದೆ ಗುರುನಾಥಭಟ್ಟರಿಗೆ ಮಗ ಸಂಸ್ಕೃತ ಪಂಡಿತನಾಗಬೇಕೆಂಬ ಅಭಿಲಾಷೆ. ಆದರೆ ಸದಾಶಿವರಾಯರ ಒಲವು ಹೆಚ್ಚಾಗಿ ನಾಟಕದ ಕಡೆಗೆ ಇದ್ದಿತು. ಶ್ರೀಯುತರು ನಾಟಕ ಕಂಪನಿಗಳಲ್ಲಿ ಬಹು ಕಾಲದಿಂದ ನಡೆದು ಬಂದ ಫ್ರೀ ಪಾಸ್ ಹಾವಳಿಗೆ ತಡೆಯನ್ನು ಹಾಕಿದರು. ಶ್ರೀಯುತರ ಕಂಪನಿಯಲ್ಲಿ ಹುಲಿಮನೆ ಸೀತಾರಾಮ ಶಾಸ್ತ್ರಿ, ಹಮ್ಮಿಗಿ ನೀಲಕಂಠಪ್ಪ ಮೊದಲಾದ ಸುಪ್ರಸಿದ್ಧ ಕಲಾವಿದರಿದ್ದರು. ಕ್ರಿಸ್ತ ಶಕ ೧೯೨೫–೨೬ರಲ್ಲಿ ಸದಾಶಿವರಾಯರು ಬೆಂಗಳೂರಲ್ಲಿ ತಮ್ಮ ನಾಟಕಗಳ ನೂರಾರು ಪ್ರಯೋಗಗಳನ್ನು ಮಾಡಿದರು. ಶ್ರೀಯುತರ ದಶರಥನ ಪಾತ್ರವನ್ನು ಮೆಚ್ಚಿದ ಬೆಂಗಳೂರಿನ ಕಲಾಭಿಮಾನಿಗಳು ಅವರಿಗೆ "ಅಭಿನಯ ಕೇಸರಿ" ಎಂಬ ಬಿರುದನ್ನು ಕೊಟ್ಟು ಗೌರವಿಸಿದರು. ೧೯೨೮ರಲ್ಲಿ ಬೆಳಗಾವಿಯಲ್ಲಿ ಜರುಗಿದ ಸಾಹಿತ್ಯ ಸಮ್ಮೇಲನದಲ್ಲಿ ಶ್ರೀಯುತರಿಗೆ "ನಾಟಕಾಲಂಕಾರ" ಎಂಬ ಬಿರುದನ್ನು ಕೊಡಲಾಯಿತು. ಶ್ರೀಯುತರು ಪರಿಶುದ್ಧವಾದ ಜೀವನ ಮತ್ತು ಉಗ್ರವಾದ ಕನ್ನಡ ಅಭಿಮಾನಗಳಿಗಾಗಿ ಹೆಸರಾಗಿದ್ದರು. ಅವರ ಎಚ್ಚಮ ನಾಯಕ ಸುಪ್ತವಾದ ಕನ್ನಡ ಜನತೆಯನ್ನು ಬಡಿದೆಬ್ಬಿಸಿತು. ಹೀಗೆ ಸದಾಶಿವರಾಯರು ಕಲಾಸೇವೆಯನ್ನು ಮಾಡಿ ಕ್ರಿ. ಶ. ೧೯೫೬ರಲ್ಲಿ ಇಹಲೋಕವನ್ನು ತ್ಯಜಿಸಿದರು.



ವರದಾಚಾರ್ಯರು

ಇದೇ ಕಾಲಕ್ಕೆ ಕೇವಲ ಸ್ತ್ರೀಯರೇ ಪಾತ್ರ ವಹಿಸುತ್ತಿದ್ದ ಲಕ್ಷ್ಮೇಶ್ವರದ ಸ್ತ್ರೀ ಸಂಗೀತ ನಾಟಕ, ಬೆಳಗಾವಿಯ ಸ್ತ್ರೀ ಸಂಗೀತ ನಾಟಕ, ಧಾರವಾಡ ಮತ್ತು ಹಾವೇರಿಯ ಸ್ತ್ರೀ ಸಂಗೀತ ನಾಟಕಗಳು ವೈಶಿಷ್ಟ್ಯಪೂರ್ಣವಾಗಿದ್ದವು.

ಇದಾದ ನಂತರ ಲಲಿತ ಕಲೋದ್ಧಾರಕ ನಾಟಕ ಮಂಡಳಿ, ಅಬ್ಬಿಗೇರಿ ಶಂಕರಗೌಡರ 'ಅಬ್ಬಿಗೇರಿ ನಾಟಕ ಮಂಡಳಿ' (೧೯೨೮), ಎರೇಸೀಮಿ ಭರಮಪ್ಪನವರ 'ವಾಣೀವಿಲಾಸ ನಾಟಕ ಮಂಡಳಿ' (೧೯೨೯), ಲಕ್ಷ್ಮಣರಾವ ಆಸುಂಡಿಯವರ 'ಶಿವಾನಂದ ನಾಟಕ ಮಂಡಳಿ' (ಸು. ೧೯೩೦) ರಘುನಾಥಭಟ್ಟರ 'ಅಂಬಾ ಪ್ರಾಸಾದಿಕ ನಾಟಕ ಮಂಡಳಿ' (ಸು. ೧೯೩೦), ಬಿ. ಟಿ. ಹೊಸಮನಿ ಬಂಧುಗಳ 'ಶ್ರೀ ಶಾರದಾ ಸಂಗೀತ ನಾಟಕ ಮಂಡಳಿ' (ಸು. ೧೯೩೩), ಹುಲಿಮನೆ ಸೀತಾರಾಮ ಶಾಸ್ತ್ರಿಗಳ 'ಶ್ರೀ ಜಯಕರ್ನಾಟಕ ನಾಟ್ಯ ಸಂಘ' (೧೯೩೬), ಸಿದ್ಧರಾಮಪ್ಪ ಹಂದಿಗನೂರ ಅವರ 'ವಿಶ್ವರಂಜನ ನಾಟಕ ಮಂಡಳಿ' (೧೯೩೯), ಬಾಳಪ್ಪ ಏಣಗಿಯವರ 'ಕಲಾ ವೈಭವ ನಾಟ್ಯ ಸಂಘ'(೧೯೪೦)ಚಿತ್ರರಗಿ ಗಂಗಾಧರ ಶಾಸ್ತ್ರಿಗಳ 'ಕುಮಾರ ವಿಜಯ ನಾಟ್ಯ ಸಂಘ' (೧೯೪೨) ಚನ್ನಬಸವರಾಜ ಕವಲಿ ಅವರ 'ಕಲಾಪ್ರಕಾಶ ನಾಟ್ಯ ಸಂಘ' (೧೯೫೦) ಮೊದಲಾದವುಗಳನ್ನು ಮರೆಯುವ ಹಾಗಿಲ್ಲ.

ಲಲಿತ ಕಲೋದ್ಧಾರಕ ನಾಟಕ ಮಂಡಳಿಯಲ್ಲಿ ಆಸುಂಡಿಯವರು ಪಾತ್ರ ವಹಿಸುತ್ತಿದ್ದರು. ವಾಣೀವಿಲಾಸ ನಾಟಕ ಮಂಡಳಿಯ ಕಲಾ ಶ್ರೀಮಂತಿಕೆ ಇಂದು ಹಿಂದೂಸ್ಥಾನಿ ಸಂಗೀತ ಪದ್ಧತಿಯ ಸಾರ್ವಭೌಮರಾಗಿರುವ ಮಲ್ಲಿಕಾರ್ಜುನ ಮನ್ಸೂರ ಅವರಿಂದ ಹೆಚ್ಚಿಸಲ್ಪಟ್ಟಿತು. ಮನ್ಸೂರ ಬಂಧುಗಳಾದ ಮಲ್ಲಿಕಾರ್ಜುನ ಮತ್ತು ಬಸವರಾಜರ ಉಚ್ಚ ಮಟ್ಟದ ಸಂಗೀತ, ಕುಶಲವಾದ ಅಭಿನಯ ಮತ್ತು ಹಾವಭಾವಗಳು ಇಂದಿಗೂ ಕಣ್ಣೆದುರು ಕಟ್ಟುವಂತಿವೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಾಟಕದಲ್ಲಿ ವಿದ್ಯಾರಣ್ಯರ ಪಾತ್ರವನ್ನು ವಹಿಸುತ್ತಿದ್ದ ಮಲ್ಲಿಕಾರ್ಜುನ ಮನ್ಸೂರರು ಸುವರ್ಣ ವೃಷ್ಟಿಯನ್ನು ಮಾಡಿಸುತ್ತಿದ್ದ ಸನ್ನಿವೇಶವು ಪ್ರೇಕ್ಷಕರಿಗೆ ನವಿರೇಳುವಂತೆ ಮಾಡುತ್ತಿದ್ದಿತು. ಇದೇ ಸಮಯದಲ್ಲಿ ಈ ಕಂಪನಿಯ ಇನ್ನೊಬ್ಬ ಸುಪ್ರಸಿದ್ಧ ನಟರಾದ ಕುಂಬಾರ ಗೋಪಾಳ ಅವರ ಬಗ್ಗೆಯೂ ಒಂದು ಮಾತನ್ನು ಹೇಳಬೇಕು. ಕುಂಭಾರ ಗೋಪಾಳ ಗಿಡ್ಡ ಆಸಾಮಿ. ಮುಖದಲ್ಲಿ ಕ್ರೌರ್ಯ ಉಕ್ಕಲಾಡುತ್ತಿತ್ತು. ಧ್ವನಿಗೆ ಯಾವ ಲೌಡ ಸ್ಪೀಕರೂ ಬೇಕಾಗಿರಲಿಲ್ಲ. ಗೋಪಾಳ ಕೂಗಿದರೆ ಇಡೀ ನಾಟ್ಯಗೃಹವೇ ನಡುಗುತ್ತಿತ್ತು. ಈ ಗಿಡ್ಡ ಆಸಾಮಿ ರಂಗಭೂಮಿಯ ತುಂಬೆಲ್ಲ ಅಗ್ನಿಯ ಗೋಲಕದಂತೆ, ರಬ್ಬರಿನ ಚೆಂಡಿನಂತೆ ಪುಟಿದಾಡುತ್ತಿದ್ದ. ನಾಟಕದ ಪ್ರಾರಂಭದಲ್ಲಿ ಅವನು ಬಿರುಗಾಳಿಯಂತೆ ಬಂದು ರಂಗಸ್ಥಲದ ಮಧ್ಯದಲ್ಲಿ ನಿಂತು ಪ್ರೇಕ್ಷಕರೆಡೆಗೆ ಕ್ರೂರ ದೃಷ್ಟಿಯನ್ನು ಬೀರಿ "ಈ ನಾಟಕದಲ್ಲಿ ನಾನು Villain ಭೂಮಿಕೆಯನ್ನು ಕೈಕೊಂಡದ್ದು ಕ್ಷಿಪ್ರದಲ್ಲಿಯೇ ಕಂಡು ಬರುವುದು" ಎಂದು ಘೋಷಿಸಿ ಮರೆಯಾದಾಗ ಅಳ್ಳೆದೆಯವರ ಎದೆ ಝಲ್ಲೆನ್ನುತ್ತಿತ್ತು. ಈ ಗೋಪಾಳ, ಸುಪ್ರಸಿದ್ಧ Villain ನಟ ಎಲ್ಲಿ ಹೋದ? ಏನಾದ? ನಟರ ಜೀವನವೆಲ್ಲ ಜಲಲಿಪಿ. ಅವರ ಉಚ್ಛ್ರಾಯ ಕಾಲದಲ್ಲಿ ಅವರನ್ನು ಇಂದ್ರ–ಚಂದ್ರ ಎಂದು ಹೊಗಳಿದವರೇ ಅವರ ಕಾಲ ಕಂದಿದಾಗ ಅವರತ್ತ ಕಣ್ಣೆತ್ತಿ ಸಹ ನೋಡುವುದಿಲ್ಲ. ಬರಡಾದ ದನಕ್ಕೆ ಪಾಂಜರಪೋಳಾದರೂ ಉಂಟು. ಆದರೆ ಬರ



ಸ್ತ್ರೀಪಾತ್ರಧಾರಿ ಹಮ್ಮಿಗಿ ನೀಲಕಂಠಪ್ಪ



ಪೀರಸಾಹೇಬರು



ಕೆ. ಹಿರಣ್ಣಯ್ಯನವರು

ಡಾದ ನಟರಿಗೆ ಏನಿದೆ? ಪ್ರಸ್ತುತ ಲೇಖಕ ಕಳೆದ ಸಲ ಗೋಪಾಳನನ್ನು ಕಂಡಾಗ ಅವನು ಮುಂಬಯಿಯ 'ಗಿರಿ ಗಾಂವ ಕರ್ನಾಟಕ ಸಂಘದಲ್ಲಿ ಐವತ್ತು ರೂಪಾಯಿಯ ಕಾರಕೂನನಾಗಿ, ರಕ್ತದ ಒತ್ತಡದ ವ್ಯಾಧಿಯಿಂದ ಬಳ ಉತ್ತ, ಜೀವನ ಸಾಗಿಸುತ್ತಿದ್ದ. ಇದು ನಮ್ಮ ಕಲಾಭಿಮಾನ!!

'ಕಲಾವೈಭವ'ದ ಬಾಳಪ್ಪನವರ ಬಗ್ಗೆ ಹೆಚ್ಚಾಗಿ ಹೇಳಬೇಕಾಗಿಲ್ಲ. ಶ್ರೀಯುತರು ಸ್ತ್ರೀ ಪಾತ್ರದಿಂದ ಪ್ರಾರಂಭ ಮಾಡಿ ಇಂದು ಉತ್ತಮ ಶ್ರೇಷ್ಠ ದರ್ಜೆಯ ನಟರೆಂದು ಮನ್ನಣೆ ಪಡೆದಿದ್ದಾರೆ. ಶ್ರೀಯುತರು ತಮ್ಮ ಕಂಪನಿಯ ನಟರೆಲ್ಲರನ್ನೂ ಒಂದೇ ಕುಟುಂಬದ ಜನರಂತೆ ನೋಡಿಕೊಳ್ಳುತ್ತಿದ್ದಾರೆ. ಅವರೆಲ್ಲರ ಚಾರಿತ್ರ್ಯದ ಪರಿಶುದ್ಧತೆಯ ಬಗ್ಗೆ ದಕ್ಷತೆ ವಹಿಸುತ್ತಿದ್ದಾರೆ. ಶ್ರೀಯುತರು ನೈಸರ್ಗಿಕ ಅಭಿನಯ ಮತ್ತು ಸಂಭಾಷಣೆಗಳಿಗೆ ಕಲೆಯಲ್ಲಿ ಹೆಚ್ಚಿನ ಸ್ಥಾನವನ್ನು ಕೊಟ್ಟಿದ್ದಾರೆ. 'ಬಸವೇಶ್ವರ' ನಾಟಕದಲ್ಲಿ ಅವರ ಬಸವೇಶ್ವರ ಪಾತ್ರ ಅವರ ಕಲೆಯ ಪರಾಕಾಷ್ಠತೆಯನು ತೋರಿಸುತ್ತದೆ.

'ಕುಮಾರ ವಿಜಯ'ದ ಗಂಗಾಧರ ಶಾಸ್ತ್ರಿಗಳಿಗೆ ಹೋದಲ್ಲೆಲ್ಲ ವಿಜಯ ಕಟ್ಟಿಟ್ಟದ್ದೆ. ಅವರು ಮುಟ್ಟಿದ್ದೆಲ್ಲ ಚಿನ್ನವಾಗಿದೆ. ಬಿಜಾಪುರ ಜಿಲ್ಲೆಯ ಚಿತ್ತರಗಿಯಲ್ಲಿ ೧೯೧೭ರಲ್ಲಿ ಜನಿಸಿದ ಗಂಗಾಧರ ಶಾಸ್ತ್ರಿಗಳು ನಾಟ್ಯ ರಂಗಕ್ಕೆ ಬಂದುದು ಒಂದು ಆಕಸ್ಮಿಕ ಯೋಗಾಯೋಗ. ಅವರ ಪ್ರಮುಖವಾದ ಆಸೆ ಕೀರ್ತನ-ಅದು ಅವರ ಕುಲವೃತ್ತಿಯೂ ಆಗಿದ್ದಿತು. ಪಂಚಾಕ್ಷರಿ ಗವಾಯಿಗಳ ಶಿಷ್ಯರಾಗಿದ್ದ ಅವರಿಗೆ ಗುರುವಿನ ಸಾಲವನ್ನು ಹೇಗೆ ಬಗೆಹರಿಸಬೇಕು ಎಂಬ ವಿಚಾರ ಬಂದಾಗ ನಾಟಕಕ್ಕೆ ಕೈ ಹಾಕಿದರು. ಯಾವಾಗಲೂ ಯಶಸ್ವಿಯಾದ ಗಂಗಾಧರ ಶಾಸ್ತ್ರಿಗಳು ಕೆಲವು ತಿಂಗಳುಗಳಲ್ಲಿಯೇ ಗುರುವಿನ ನಲವತ್ತು ಸಾವಿರಕ್ಕೂ ಹೆಚ್ಚಿದ್ದ ಸಾಲವನ್ನು ತೀರಿಸಿದರು. ಸಂಘದ ಮೊದಲ ನಾಟಕ "ಕಾರಸ್ಥಾನ" ಎಂಬುದು ೧೯೪೩ರಲ್ಲಿ ಬಾಗಲಕೋಟೆಯಲ್ಲಿ ಪ್ರದರ್ಶಿತವಾಯಿತು. ಗಂಗಾಧರ ಶಾಸ್ತ್ರಿಗಳ ಅಭಿನಯ ಭಾವಪೂರ್ಣವಾದುದು; ಉತ್ಸಾಹಭರಿತವಾದುದು.

'ಕಲಾ ಪ್ರಕಾಶ'ದ ಕವಲಿಯವರು ನುರಿತ ಕಲಾವಿದರು. ಇಡೀ ಕಂಪನಿಯನ್ನೇ ತಮ್ಮ ಕುಟುಂಬದವರೆಂದು ಭಾವಿಸಿದವರು. ಪ್ರತಿಭೆ ಎಲ್ಲಿಯೇ ಇರಲಿ, ಅದನ್ನು ಎತ್ತಿ ಹಿಡಿಯುವವರು. ನಾಟಕ ಕಲೆಗಾಗಿ ಅವರದು ದೀಕ್ಷಿತವಾದ ಜೀವನ.



ಗುಬ್ಬೀ ವೀರಣ್ಣನವರು



ಬಿ. ಜಯಮ್ಮ

ತುಂಗಭದ್ರೆಯ ದಕ್ಷಿಣದ ಕಡೆಗೆ ಪ್ರಮುಖವಾಗಿದ್ದ ಹಲವು ನಾಟ್ಯ ಸಂಘಗಳೆಂದರೆ ಗುಬ್ಬಿ ವೀರಣ್ಣನವರ "ಶ್ರೀ ಚನ್ನಬಸವೇಶ್ವರಸ್ವಾಮಿ ಕೃಪಾಪೋಷಿತ ನಾಟಕ ಸಭಾ" (೧೮೮೪), ದಿವಂಗತ ವರದಾಚಾರ್ಯರ "ರತ್ನಾವಳಿ ನಾಟಕ ಕಂಪನಿ" (೧೮೮೯), ಮೈಸೂರು ಮಹಾರಾಜರಿಂದ ಪೋಷಿತವಾದ "ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ" (೧೯೦೦), ಗ್ರಾರ್ಮಿತೀ ಅಯ್ಯಂಗಾರ ಅವರ "ಅಯ್ಯಂಗಾರ ಕಂಪನಿ" (೧೯೧೫) ಕೊಟ್ರಬಸಪ್ಪನವರ "ಮಹಾಲಕ್ಷ್ಮಿ ನಾಟ್ಯ ಕಂಪನಿ" (೧೯೨೭), ಮಹಮ್ಮದ ಪೀರ ಅವರ "ಚಂದ್ರಕಲಾ ನಾಟಕ ಸಂಘ", ಸುಬ್ಬಯ್ಯ ನಾಯ್ಡು ಅವರ "ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿ" (೧೯೩೦), ಕೆ. ಹಿರಣ್ಣಯ್ಯನವರ "ಹಿರಣ್ಣಯ್ಯ ಮಿತ್ರ ಮಂಡಳಿ" (೧೯೪೭), ಚಿಂದೋಡಿ ವೀರಪ್ಪನವರ "ಕೆ. ಬಿ. ಆರ್. ನಾಟಕ ಮಂಡಳಿ" (೧೯೪೮), ಬಳ್ಳಾರಿಯ ಲಲಿತಮ್ಮನವರ "ಲಲಿತ ಕಲಾದರ್ಶಕ ನಾಟಕ ಮಂಡಳಿ", ಹೊನ್ನಪ್ಪ ಭಾಗವತರ ನಾಟ್ಯ ಸಂಘ, ಮತ್ತು ನಾಗರತ್ನಮ್ಮ ಅವರ "ಸ್ತ್ರೀ ನಾಟಕ ಮಂಡಳಿ" ಮೊದಲಾದುವನ್ನು ಹೇಳಬೇಕು. ಇವೆಲ್ಲ ಕಂಪನಿಗಳು ಕಲೆಯ ಕೀರ್ತಿ ಸ್ತೂಪಗಳು. ಜೋಳದರಾಶಿ ದೊಡ್ಡನಗೌಡರ ನಾಟಕ ಕಂಪನಿ ಅವರ ಕಂಠದಂತೆ ದೊಡ್ಡದು. ದೇಹಮುಷ್ಟಿಯಂತೆಯೇ ಗಟ್ಟಿಮುಟ್ಟಾದುದು. ಗಮಕಕ್ಕೆ ಒಂದು ಶ್ರೀಮಂತಿಕೆಯನ್ನು ಒದಗಿಸಿದವರು ದಿವಂಗತ ಸಂಪತ್ ಕುಮಾರಾಚಾರ್ಯರು, ಭಾರತ ಬಿಂದೂರಾಯರು ಮತ್ತು ಜೋಳದರಾಶಿ ದೊಡ್ಡನಗೌಡರು.

ಹಳೆಯ ಮೈಸೂರಿನ ನಾಟಕ ಪರಂಪರೆಯ ಬಗ್ಗೆ ಮಾತನಾಡಬೇಕಾದಾಗ ಮೊದಲನೆಯ ಶ್ರೀಕಾರವೆಂದರೆ ದಿವಂಗತ ವರದಾಚಾರ್ಯರು. ಶೃಂಗಾರ, ರೌದ್ರ, ಕರುಣ, ವೀರ-ಯಾವುದೇ ರಸವಿರಲಿ, ಅದನ್ನು ಪ್ರಚಂಡವಾಗಿ ಅಭಿನಯಿಸತಕ್ಕವರು ವರದಾಚಾರ್ಯರು. ಅವರು ಅಭಿನಯಿಸಿದ ದುಷ್ಯಂತ, ವತ್ಸರಾಜ, ಮನ್ಮಥ, ರಾಜಕಿರೀಟ ಮೊದಲಾದ ಶೃಂಗಾರ ನಾಯಕರ ಪಾತ್ರ



ವಾಸುದೇವ ಗಿರಿಮಾಜಿ



ಎಸ್. ಶ್ರೀಕಂಠಮೂರ್ತಿ



ಬಸವರಾಜ ಮನಸೂರ

ಗಳನ್ನು ನೋಡಿದವರಿಗೆ ಇಂದಿಗೂ ಆಚಾರ್ಯರ ಕಲಾ ಪ್ರೌಢಿಮೆ ಕಣ್ಣೆದುರಿಗೆ ಕಟ್ಟುವಂತಿದೆ. ದೃಢವಾದ ಮೈಕಟ್ಟು, ಗಂಭೀರವಾದ ಮುಖಮುದ್ರೆ, ಹಿತಮಿತವಾದ ಮಾತು, ನಿರಾಡಂಬರ ವ್ಯಕ್ತಿತ್ವ ಇವುಗಳನ್ನು ನೋಡಿದಾಗ ಆಚಾರ್ಯರು ರಾಜಪುರುಷನ ಹಾಗೆ ಕಾಣುತ್ತಿದ್ದರು. ಶಕುಂತಲಾ ನಾಟಕದಲ್ಲಿ ಅವರು ಧರಿಸಿದ ಪೋಷಾಕನ್ನು ನೋಡಿದರೆ ಪ್ರತ್ಯಕ್ಷ ಶ್ರೀಮನ್ ಮೈಸೂರ ಮಹಾರಾಜರೇ ಎದ್ದು ಬರುವಂತೆ ಕಾಣುತ್ತಿತ್ತು. ಶ್ರೀಯುತರು ತಮ್ಮ ಕಂಪನಿಯೊಡನೆ ಮಧುರೆ,ಕುಂಭಕೋಣಮ್,ಕೊಯಮತ್ತೂರು ಮೊದಲಾದ ದಕ್ಷಿಣ ದೇಶಗಳಲ್ಲೆಲ್ಲ ಸಂಚಾರ ಮಾಡಿ, ತಮ್ಮ ಜಯಭೇರಿಯನ್ನು ಮೊಳಗಿದರು. ತಿರುಚಿನಾಪಳ್ಳಿಯಲ್ಲಿ ಎನಿ ಬೆಸೆಂಟರ ಅಧ್ಯಕ್ಷತೆಯಲ್ಲಿ ಶಾಕುಂತಲ ನಾಟಕವನ್ನು ಅಭಿನಯಿಸಿದಾಗ ಅದನ್ನು ತುಂಬಾ ಮೆಚಿಕೊಂಡ ಅಲ್ಲಿಯ ಪುರ ಪ್ರಮುಖರು ಅವರಿಗೆ ರತ್ನಖಚಿತವಾದ ತೋಡಾವನ್ನೂ, "ನಾಟಕ ಶಿರೋಮಣಿ" ಎಂಬ ಬಿರುದನ್ನೂ ಇತ್ತು ಸನ್ಮಾನಿಸಿದರು. ಕನ್ನಡ ನಾಟಕ ಪರಂಪರೆಯಲ್ಲಿ ವರದಾಚಾರ್ಯರದು ಬಹು ದೊಡ್ಡ ಹೆಸರು.

ಗುಬ್ಬಿ ವೀರಣ್ಣನವರು ಕನ್ನಡ ರಂಗಭೂಮಿಯ ಭೀಷ್ಮಾಚಾರ್ಯರು. ಹಳೆ ಹೊಸದರ ಸೇತುವೆಯಂತೆ ಇರುವವರು. ವಿನೋದ ರತ್ನಾಕರ (**Versatile comedian**) ಗುಬ್ಬಿ ವೀರಣ್ಣನವರ ನಾಟಕ ಕಂಪನಿಯು ಕ್ರಿ. ಶ. ೧೮೮೪ರಲ್ಲಿ ಗುಬ್ಬಿ ಗ್ರಾಮದಲ್ಲಿ ಶ್ರೀ ಚಂದಣ್ಣ ಎಂಬವರಿಂದ ಸ್ಥಾಪಿಸಲ್ಪಟ್ಟಿತು. ಆ ಕಾಲಕ್ಕೆ ಕೇವಲ ಐದು ರೂಪಾಯಿ ಸಂಬಳದ ಮೇಲೆ ಕಂಪನಿಯನ್ನು ಸೇರಿದ ವೀರಣ್ಣನವರು ಇಂದು ನಾಟಕ ಕಂಪನಿಗಳ ಅನಭಿಷಿಕ್ತ ದೊರೆಯಂತಿದ್ದಾರೆ. ಅವರ ನಾಟಕ ಕಂಪನಿ ಎಂದರೆ ಒಂದು ಸಂಸ್ಥಾನವಿದ್ದಂತೆ. ಅದರಲ್ಲಿ ಎರಡು ನೂರಕ್ಕೂ ಮಿಕ್ಕಿ ಕುಟುಂಬಗಳು ಆಶ್ರಯ ಹೊಂದಿವೆ. ಸುಮಧುರವಾದ ಶಾಸ್ತ್ರೀಯ ಸಂಗೀತ, ಸಿನೇಮಾ ಪ್ರಪಂಚಕ್ಕೆ ಸೇರಬಹುದಾದಷ್ಟು ಅದ್ಭುತವಾದ ರಂಗೋಪಕರಣಗಳು, ಸುಸಂಸ್ಕೃತವಾದ ನಟನೆ ಮತ್ತು ನಯವಾದ ಹಾಸ್ಯಾಭಿನಯ—ಇವುಗಳ ಮೂಲಕ ವೀರಣ್ಣನವರ ಕಂಪನಿಯು ಅನನ್ಯ ಸಾಧಾರಣವಾದ ಯಶೋದುಂದುಭಿಯನ್ನು ಮೊಳಗಿದೆ. ಕುರುಕ್ಷೇತ್ರ ನಾಟಕದಲ್ಲಿಯಂತೂ ಶ್ರೀಯುತರು ಆನೆಯನ್ನು ರಂಗಸ್ಥಲದ ಮೇಲೆ ತರುತ್ತಾರೆ. ಬಡತನದಲ್ಲಿ ಹರಕು ಮುರುಕಾಗಿ ಕನ್ನಡ ನಾಟಕಗಳು ಸಾಗುತ್ತಿರುವಾಗ ತಮ್ಮ ಕಂಪನಿಯನ್ನು ರಾಜಠೀವಿಯಲ್ಲಿ ರಾಜಾರೋಷವಾಗಿ ನಡೆಸಿಕೊಂಡು ಹೋದ ಶ್ರೇಯಸ್ಸು ವೀರಣ್ಣನವರಿಗೆ ಸಲ್ಲುತ್ತದೆ. ಶ್ರೀಯುತರ ಕಲಾ ತಪಸ್ಸನ್ನು ಮೆಚ್ಚಿದ ಮದ್ರಾಸ ಅಕಾಡೆಮಿಯವರು ಅವರಿಗೆ ಒಂದು ಬಂಗಾರದ ಪಟವನ್ನೂ, ಕೇಂದ್ರಸರ ಕಾರವು ರಾಷ್ಟ್ರಪತಿ ಪ್ರಶಸ್ತಿಯನ್ನೂ, ಮತ್ತು ಮೈಸೂರು ವಿಶ್ವವಿದ್ಯಾನಿಲಯವು ಅವರಿಗೆ ಡಾಕ್ಟರೇಟ ಪದವಿಯನ್ನೂ ಕೊಟ್ಟು ಗೌರವಿಸಿದವು. ವೀರಣ್ಣನವರ ಕಂಪನಿಯ ಪ್ರಮುಖ ನಟಿ ಎಂದರೆ ಬಿ. ಜಯಮ್ಮ ಅವರು. ಜಯಮ್ಮನವರ ತಂದೆ ಎಲ್ಲಪ್ಪನವರಿಗೆ ಮಗಳು ಡಾಕ್ಟರು ಆಗಬೇಕೆಂಬ ಆಸೆ. ದೇಹಕ್ಕೆ ಔಷಧವನ್ನು ಕೊಡಬೇಕಾಗಿದ್ದ ಈ ಮಹಿಳೆ ಪ್ರೇಕ್ಷಕರ ಮನಸ್ಸಿಗೆಲ್ಲ ಔಷಧಿಯನ್ನಿತ್ತುದು ಅವರ ಕಲೆಯ ವೈಭವವನ್ನು ಕಾಣುವಂತೆ ಮಾಡಿದೆ. ಶ್ರೀಮತಿಯವರು ಮೊಟ್ಟ ಮೊದಲು ಅಭಿನಯಿಸಿದ ಚಿತ್ರವೊಂದಿದೆ.



ಸಿ. ಹೊನ್ನಪ್ಪ ಭಾಗವತರ್

ಅದರ ಹೆಸರು: (**His love affair**) ಎಂಬುದು. ಇದರಲ್ಲಿ ಶ್ರೀ ಗುಬ್ಬಿ ವೀರಣ್ಣ, ಸುಬ್ಬಯ್ಯ ನಾಯ್ಡು ಮತ್ತು ಬಿ. ಜಯಮ್ಮನವರು ಭಾಗವಹಿಸಿದ್ದಾರೆ. ಈ ಚಿತ್ರದ ನಿರ್ದೇಶಕರು ಹಾಲಿವುಡ್ಡಿನವರು. ರಂಗಭೂಮಿ ಮತ್ತು ಚಲಚ್ಚಿತ್ರ ಪ್ರಪಂಚ ಎರಡರಲ್ಲಿಯೂ ಅಷ್ಟೇ ಯಶಸ್ಸನ್ನು ಸಾಧಿಸಿದ ಕೀರ್ತಿ ಗುಬ್ಬಿ ವೀರಣ್ಣ ಮತ್ತು ಬಿ. ಜಯಮ್ಮನವರಿಗಿದೆ.

ಮಹಮ್ಮದ ಪೀರ ಅವರು ಬುದ್ಧನ ಪಾತ್ರವನ್ನು ವಹಿಸುತ್ತಿದ್ದಾಗ ಅವರು ಮಹಮ್ಮದೀಯರೆಂದು ಯಾರೂ ಹೇಳಲು ಸಾಧ್ಯವಿರಲಿಲ್ಲ. ಅವರ 'ಸಂಸಾರ ನೌಕೆ' ಮತ್ತು 'ಶಹಾಜಹಾನ' ಮೊದಲಾದ ನಾಟಕಗಳು ಧಾರವಾಡದಲ್ಲಿ ಪ್ರದರ್ಶಿತವಾಗುತ್ತಿದ್ದಾಗ ದಿವಂಗತ ಮುದವೀಡು ಕೃಷ್ಣರಾಯರು ನೇರವಾಗಿ ರಂಗಮಂಟಪಕ್ಕೆ ಹೋಗಿ ತಮ್ಮ ಸಿಂಹವಾಣಿಯಲ್ಲಿ "ನೀವು ಸಾಮಾನ್ಯ ನಟರಲ್ಲ. ಸಂಗೀತ ಸಾಹಿತ್ಯ ಮತ್ತು ಅಭಿನಯ ಈ ಮೂರರ ತ್ರಿವೇಣಿ ಸಂಗಮ" ಎಂದು ಹೇಳಿ ಧಾರವಾಡದ ಜನತೆಯ ಪರವಾಗಿ ಅವರಿಗೆ ಒಂದು ಬಿನ್ನವತ್ತಳೆಯನ್ನು ಅರ್ಪಿಸಿದರು. ಧಾರವಾಡದ ಜನತೆ ಅವರಿಗೆ "ಕಲಾ ದುರಂಧರ" ಎಂಬ ಬಿರುದನ್ನು ಇತ್ತಿತು. ಶ್ರೀಯುತರ ನಾಟಕಗಳನ್ನು ದಿವಂಗತ ನೆಹರೂ ಅವರೂ ನೋಡಿ ಮೆಚ್ಚಿದರು. ಜನ್ಮತಃ ಮಹಮ್ಮದೀಯರಾಗಿದ್ದ ಪೀರರು ಸಂಸ್ಕೃತ ವಿದ್ವಾಂಸರಿಗಿಂತಲೂ ಸ್ಫುಟವಾಗಿ ಸಂಸ್ಕೃತ ಶ್ಲೋಕಗಳನ್ನು ಹೇಳುತ್ತಿದ್ದರು. ಪೀರ ಮತ್ತು ಸಿಂಹರ ಜತೆ ಕೆಲ ಕಾಲ ಕನ್ನಡ ನಾಡಿನ ಜನತೆಯ ಮನಸ್ಸನ್ನು ಸೂರೆಗೊಂಡಿತು. ಶ್ರೀಯುತರ ಅಕಾಲಮರಣ ಕನ್ನಡ ಕಲಾ ಪ್ರಪಂಚಕ್ಕಾದ ಒಂದು ದೊಡ್ಡ ನಷ್ಟ.

ಸುಬ್ಬಯ್ಯ ನಾಯ್ಡು ಮತ್ತು ಲಕ್ಷ್ಮೀದೇವಿಯವರು ಸಾಹಿತ್ಯ ಸಾಮ್ರಾಜ್ಯದಂತೆ ಕಲಾ ಸಾಮ್ರಾಜ್ಯವನ್ನೂ ಆಳಿದರು. ಸುಬ್ಬಯ್ಯ ನಾಯ್ಡು ಅವರು ೧೮೯೫ರಲ್ಲಿ ಮೈಸೂರಿನ ಹತ್ತಿರ ಒಂದು ಗ್ರಾಮದಲ್ಲಿ ಜನ್ಮತಾಳಿದರು. ಅವರು ಒಳ್ಳೆಯ ಕುಸ್ತಿ ಪಟುಗಳು. ಇವರು ಕೆಲ ಕಾಲ ಗುಬ್ಬಿ ಕಂಪನಿಯಲ್ಲಿ ಕೆಲಸ ಮಾಡಿ ತಮ್ಮದೇ ಆದ ನಾಟಕ ಕಂಪನಿಯನ್ನು ಪ್ರಾರಂಭಿಸಿದರು. ವೀರಣ್ಣನವರಂತೆ ಇವರೂ ರಂಗಭೂಮಿ ಮತ್ತು ಚಲಚ್ಚಿತ್ರಗಳಲ್ಲಿ ಅಷ್ಟೆ ಸಮನಾದ ಯಶಸ್ಸನ್ನು ಸಂಪಾದಿಸಿದವರು. ೧೯೬೨ರಲ್ಲಿ ಕೇಂದ್ರ ಸಂಗೀತ ನಾಟಕ ಅಕ್ಯಾಡೆಮಿಯು, ಆ ಮೇಲೆ ಕೆಲ ದಿವಸಗಳ ನಂತರ ಮೈಸೂರು ರಾಜ್ಯದ ಸಂಗೀತ ನಾಟಕ ಅಕ್ಯಾಡೆಮಿಯೂ ಅವರ ಕಲಾ ಸೇವೆಯನ್ನು ಮನ್ನಿಸಿದವು. ಶ್ರೀಯುತರು ೨೧-೭-೧೯೬೨ರಂದು ಪರಲೋಕವಾಸಿಗಳಾದರು.

ಹಿರಣ್ಣಯ್ಯನವರ ಮಿತ್ರಮಂಡಳಿಯು ೧೯೪೨ರ ಜುಲೈ ೫ನೆಯ ತಾರೀಖಿನಂದು ಪ್ರಾರಂಭವಾಯಿತು. ಈ ಮಂಡಳಿ ಪ್ರಾರಂಭವಾದದ್ದು ಒಂದು ಆಕಸ್ಮಿಕವೇ, ಯಾಕಂದರೆ ಹಿರಣ್ಣಯ್ಯನವರಿಗೆ ನಾಟಕ ಕಂಪನಿಯನ್ನು ಪ್ರಾರಂಭಿಸಬೇಕೆಂದು ಏನೂ ವಿಚಾರವಿರಲಿಲ್ಲ. ಪ್ರಗತಿ ಪಿಕ್ಚರ್ಸನವರ ತಮಿಳು ಚಿತ್ರಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದ ಹಿರಣ್ಣಯ್ಯನವರು ೧೯೪೨ರಲ್ಲಿ ಕಾರಣಾಂತರದಿಂದ ಮೈಸೂರಿಗೆ ಬಂದರು. ಆಗ ನಾಲ್ಕಾರು ಜನ ಹಿಂದಿನ ಮಿತ್ರರು ಕೂಡಿ ಸಹಜ ವಿನೋದಕ್ಕಾಗಿ ಯಾವುದಾದರೊಂದು ನಾಟಕವನ್ನು ಆಡಬೇಕೆಂದೂ, ಅದರ ಉತ್ಪನ್ನದ ಅರ್ಧ ಭಾಗವನ್ನು ತಮ್ಮ ಸ್ನೇಹಿತರಾದ ವಕೀಲ ರಂಗಾಚಾರ್ಯ ಎಂಬುವವರು ನಡೆಸುತ್ತಿದ್ದ ಅನ್ನದಾನಕ್ಕೆ ಕೊಡಬೇಕೆಂದೂ ನಿರ್ಧರಿಸಿ ಮೈಸೂರು ಟೌನ್ ಹಾಲಿನಲ್ಲಿ ದಿನಾಂಕ ೫-೭-೧೯೪೨ರಂದು 'ಸದಾರಮೆ' ಎಂಬ ನಾಟಕವನ್ನು ಪ್ರಥಮತಃ ಪ್ರಯೋಗಿಸಿದರು. ಈ ಮಿತ್ರರು 'ಮಿತ್ರ ಮಂಡಳಿಯ' ಕೈಯನ್ನು ಅಲ್ಲಿಯೇ ಬಿಡದೆ ತಮ್ಮ ನಾಟಕಗಳನ್ನು ದಾವಣಗೆರೆ, ಹುಬ್ಬಳ್ಳಿ, ಬಾಗಲಕೋಟೆ—ಮೊದಲಾದ ನಗರಗಳಲ್ಲೆಲ್ಲ ಪ್ರಯೋಗಿಸಿದರು. ಕನ್ನಡ ನಾಟಕ ಪ್ರಪಂಚದಲ್ಲಿ ಹಿರಣ್ಣಯ್ಯನವರು ತಮ್ಮದೇ ಆದ ಮಾರ್ಗವನ್ನು ಹಾಕಿಕೊಟ್ಟು ಹೋಗಿದ್ದಾರೆ. ಕನ್ನಡ ಕಲಾ ಪ್ರಪಂಚದಲ್ಲಿ ಬಿಟ್ಟು ಹೋದ ಹೆಜ್ಜೆಗಳನ್ನು ಇಂದಿಗೂ ಗುರುತಿಸಬಹುದು. ಸ್ವತಃ ಲೇಖಕರೂ ಆದ ಹಿರಣ್ಣಯ್ಯನವರು ಸಮಾಜದ ಬೆನ್ನಿಗೆ ಎತ್ತಿದ ಬಾರುಕೋಲಿನಂತಿದ್ದರು. ಅವರ ಟೀಕೆಯ ಹೊಡೆತಕ್ಕೆ ಒಳಗಾದ ಸಮಾಜ ತತ್ತರಿಸಿತು; ಒರಲಿತು; ತನ್ನನ್ನು ಬಿಟ್ಟರೆ ಸಾಕೆಂದು ಅಲ್ಪರಿಯಿತು. :ದೇವದಾಸಿ' ನಾಟಕದ ನಾಜೂಕಯ್ಯನಾಗಿ ಹಿರಣ್ಣಯ್ಯನವರು ಸಾವಿರ ಸಮಾಜ ಸುಧಾರಕರು ಮಾಡದಷ್ಟು ಕೆಲಸವನ್ನು ಮಾಡಿದರು. ಅದೇ ಪರಂಪರೆಯನ್ನೇ ಅವರ ಚಿರಂಜೀವರಾದ ನರ

ಸಿಂಹಮೂರ್ತಿಯವರೂ 'ಲಂಚಾವತಾರ'ದ ದತ್ತು ಆಗಿ ಮುಂದುವರಿಸಿ ಸಮಾಜದ ಬೆನ್ನಿಗೆ ಬರೆ ಕೊಡುತ್ತಿದ್ದಾರೆ. ದತ್ತು ಸನಾತನ. ನಿತ್ಯನೂತನ. ದಿನಕ್ಕೊಂದು ಹೊಸ ಹೊಡೆತ ಅವನ ಮಾತಿನಲ್ಲಿ ಇದ್ದೇ ಇರುತ್ತದೆ. **The wisest man in Shakespeare is the fool** ಎಂದು ಹೇಳುವುದುಂಟು. ಹಾಗೆಯೇ **Fool** ನ ಹಾಗೆ ಕಾಣುತ್ತಿರುವ ದತ್ತು ಬಹುಶಃ ನಾಟಕ ಪ್ರಪಂಚದಲ್ಲಿಯೇ **wisest man** ಆಗಿ ಕಂಗೊಳಿಸುತ್ತಾನೆ. 'ಲಂಚಾವತಾರ' ಎಂದು ಮುಗಿಯಬೇಕು? 'ಸದಾಚಾರ' ನಾಟಕ ಎಂದು ಪ್ರಾರಂಭವಾಗಬೇಕು? ಬಹುಶಃ ಸದಾಚಾರ ಭೂಮಿಗೆ ಇಳಿದಾಗ ಮಾತ್ರ ಇದು ಸಾಧ್ಯ. ಅಲ್ಲಿಯ ವರೆಗೆ ದತ್ತೂನೇ ನಮ್ಮ ವಿವೇಕದ ಜಾಗ್ರತೆಯನು ವಹಿಸಬೇಕು. ದತ್ತು ನಮ್ಮ **Conscienee**ದ **Alarum** ಗಂಟೆ.

ಚಿಂದೋಡಿ ವೀರಣ್ಣ ಮತ್ತು ಅವರ ಭಗಿನಿ ಲೀಲಾ ನಾಟಕ ಪ್ರಪಂಚಕ್ಕೆ ಚಲಚ್ಚಿತ್ರದ ಥಳಕನ್ನು ತಂದುಕೊಟ್ಟರು. ರಂಗಭೂಮಿಯ ಮೇಲೆ ಸಾಮಾಜಿಕರು ಅಪೇಕ್ಷಿಸಿದ್ದನ್ನೆಲ್ಲ ಇವರು ಒದಗಿಸಿದರು.

ಹೊನ್ನಪ್ಪ ಭಾಗವತರದು ಮಧುರವಾದ ಕಂಠ. ಸುಂದರವಾದ ದೇಹಯಷ್ಟಿ. ನಯವಾದ ನಟನೆ. ಅವರು ರಂಗಸ್ಥಲ, ಚಲಚ್ಚಿತ್ರ ಎರಡನ್ನೂ ಅಷ್ಟೇ ಯಶಸ್ವಿಯಾಗಿ ವ್ಯಾಪಿಸಿಕೊಂಡವರು.

ನಾಗರತ್ನಮ್ಮನವರ ಸ್ತ್ರೀ ನಾಟಕ ಮಂಡಳಿ ವೈಶಿಷ್ಟ್ಯಪೂರ್ಣವಾದುದು. ಇಲ್ಲಿಯ ಪಾತ್ರವರ್ಗವೆಲ್ಲ ಸ್ತ್ರೀಯರೇ. ನಾಯಕನಿಂದ ಮೊದಲು ಮಾಡಿಕೊಂಡು ಖಳನಾಯಕನ ವರೆಗೂ ಎಲ್ಲ ಪಾತ್ರಗಳನ್ನೂ ಸ್ತ್ರೀಯರೇ ಅಭಿನಯಿಸುತ್ತಾರೆ. ನಾಗರತ್ನಮ್ಮನವರು ಪುರುಷ ಪಾತ್ರವನ್ನು ಅಭಿನಯಿಸುವಾಗ ಹೆಣ್ಣು ಮಗಳೊಬ್ಬಳು ಪುರುಷ ಪಾತ್ರವನ್ನು ಧರಿಸಿದ್ದಾಳೆಂದು ಯಾರೂ ಹೇಳಲಾರರು. ಗಂಡಸಿನ ಆ ಗಾಂಭೀರ್ಯ, ಆ ಠೀವಿ, ಆ ಕೆಚ್ಚು ಎಲ್ಲವೂ ನಾಗರತ್ನಮ್ಮನವರಲ್ಲಿ ಕಂಡು ಬರುತ್ತವೆ.



ಎಂ. ಪಂಢರಿಬಾಯಿ

ಇನ್ನೊಂದು ನಾಟಕ ಕಂಪನಿ ಹೆಚ್ಚಾಗಿ ಸಂಚಾರ ಮಾಡಿರದಿದ್ದರೂ ಅದರಲ್ಲಿ ಭಾಗವಹಿಸಿದ ವ್ಯಕ್ತಿಗಳು ಕೀರ್ತಿ ಶಿಖರವನ್ನು ಏರಿದವರಿದ್ದಾರೆಂಬ ದೃಷ್ಟಿಯಿಂದ ಅದನ್ನು ಉಲ್ಲೇಖಿಸಬೇಕು. ಅಲ್ಲಿಯ ನಟರ ಬಗ್ಗೆ ಒಂದು ಮಾತನ್ನು ಹೇಳಬೇಕು. ಅವರೆಂದರೆ ಸುಪ್ರಸಿದ್ಧ ಚತುರ್ಭಾಷಾ ತಾರೆಯಾದ ಪಂಢರಿಬಾಯಿಯವರು. ಶ್ರೀಮತಿಯವರು ತಮ್ಮ ಸಹೋದರ ವಿಮಲಾನಂದದಾಸರು ನಡೆಸುತ್ತಿದ್ದ 'ಆದರ್ಶ ನಾಟಕ ಸಂಘ'ದಲ್ಲಿ ಭಾಗವಹಿಸಿದರು. ಶ್ರೀಮತಿಯವರು ಉತ್ತರ ಕನ್ನಡ ಜಿಲ್ಲೆಯ ಭಟಕಳದಲ್ಲಿ ಜನ್ಮವೆತ್ತಿದರು. ತಂದೆ ಒಳ್ಳೆಯ ಕೀರ್ತನಕಾರರು; ತಾಯಿ ಶಾಲಾಶಿಕ್ಷಕಿ. ತಂದೆಯ ಧರ್ಮ, ತಾಯಿಯ ವಿದ್ಯಾ ಸೌಜನ್ಯ ಎರಡೂ ಪಂಢರಿಬಾಯಿಯವರಲ್ಲಿ ಕೂಡಿ ಅವರ ಜೀವನಕ್ಕೊಂದು ಅಪೂರ್ವವಾದ ಮೆರುಗನ್ನು ತಂದುಕೊಟ್ಟಿವೆ. ಶ್ರೀಮತಿಯವರ ಜೀವನ ತಪಸ್ಸು. ತುಂಬಾ ಧಾರ್ಮಿಕವಾದುದು. ಅಂತೆಯೇ ಅವರು ಮಡಿವಂತ ಕಲಾವಿದೆಯೆಂದು ಹೆಸರಾಗಿದ್ದಾರೆ. ಸದಾ ವಿಠ್ಠಲ ಧ್ಯಾನ, ನಾಮ ಸಂಕೀರ್ತನ, ವಿಠ್ಠಲನ ಅರ್ಚನೆ ಶ್ರೀಮತಿಯವರ ನಿತ್ಯ ಜೀವನ. ಅವರು ಇರುವುದೂ ಮದರಾಸಿನಲ್ಲಿ ಒಂದು ವಿಠ್ಠಲ ಮಂದಿರವನ್ನು ಕಟ್ಟಿಸಿಕೊಂಡು ಅದರ ಒಂದು ಭಾಗದಲ್ಲಿಯೇ. ಪಾವಿತ್ರ್ಯ, ಪುಣ್ಯ ಸರಳತೆ ಮತ್ತು ನಿರ್ವ್ಯಾಜ ಪ್ರೇಮವನ್ನು ಕಾಣಬೇಕಾದರೆ ಪಂಢರಿಬಾಯಿಯವರ ನಟನೆಯನ್ನು ನೋಡಬೇಕು.

ಹೀಗೆ ಸುಮಾರು ಒಂದು ನೂರು ವರುಷಗಳ ಹಿಂದೆ ಪ್ರಾರಂಭವಾದ ಕನ್ನಡ ಕಂಪನಿ ರಂಗಭೂಮಿ ತನ್ನ ಅನೇಕ ತಾರಾಗಣಗಳಿಂದ ಜಾಜ್ವಲ್ಯಮಾನವಾಗಿ ಕನ್ನಡ ಜನತೆಯ ಮನಕ್ಕೂ, ಮೆದುಳಿಗೂ ಸುಖ ಸಂತೃಪ್ತಿಯನ್ನು ಕೊಟ್ಟಿದೆ. ಹೀಗೆ ಜನಮನವನ್ನು ಸಂತೋಷಗೊಳಿಸಿದ ಈ ಕಲಾ ಸಂತಾನವನ್ನು ಎಷ್ಟು ಕೃತಜ್ಞತೆಯಿಂದ ನೆನೆಸಿದರೂ ಕಡಮೆಯೇ!!! ●

# ಕನ್ನಡ ರಂಗಭೂಮಿಯ ಕೆಲವು ಸಮಸ್ಯೆಗಳು

ಕನ್ನಡ ರಂಗಭೂಮಿ ಹಲವು ವಿಶಿಷ್ಟ ಸಮಸ್ಯೆಗಳನ್ನೆದುರಿಸುತ್ತಿದೆ. ಬದಲಾದ ಪರಿಸ್ಥಿತಿಗೆ ಹೊಂದಿಕೊಳ್ಳಲಾರದೆ, ತ...ರಿಸುತ್ತಿದೆ. ಈ ಸಮಸ್ಯೆಗಳೇನು?- ಅವುಗಳಿಗೆ ಪರಿಹಾರವೇನು? ಸರಕಾರ ನೀಡಬೇಕೆಂದಿರುವ ಸಹಾಯ ಧನದಿಂದ ಈ ಸಮಸ್ಯೆಗಳ ನಿವಾರಣೆಯಾಗುವದೇ? ಈ ಸಮಸ್ಯೆಗಳನ್ನು ಕಳೆದ ೨೨ ವರ್ಷಗಳಿಂದ ವೃತ್ತಿ ರಂಗಭೂಮಿಯ ಸೇವೆಯಲ್ಲಿರುವ ಪ್ರತಿಭಾನ್ವಿತ ನಟರಾದ ಶ್ರೀ ನರಸಿಂಹಮೂರ್ತಿ (ಮಾಸ್ಟರ್ ಹಿರಣ್ಣಯ್ಯ) ಅವರು ತಮ್ಮ ಸ್ವಾನುಭವದಿಂದ ಇಲ್ಲಿ ವಿವರಿಸಿದ್ದಾರಷ್ಟೇ ಅಲ್ಲದೇ, ಅವುಗಳಿಗೆ ನಿರ್ದಿಷ್ಟವಾದ ಪರಿಹಾರ ಮಾರ್ಗವನ್ನೂ ಸೂಚಿಸಿದ್ದಾರೆ.

ನರಸಿಂಹಮೂರ್ತಿ
[ ಮಾಸ್ಟರ ಹಿರಣ್ಣಯ್ಯ ]

ಒಂದು ಕಾಲದಲ್ಲಿ ಉಚ್ಛ್ರಾಯ ಸ್ಥಿತಿಯಲ್ಲಿದ್ದು, ವೈಭವದಿಂದ ಮೆರೆದ ಕನ್ನಡ ರಂಗಭೂಮಿ ಇಂದು ಯಾವ ಸ್ಥಿತಿಯಲ್ಲಿದೆಯೆಂದು ವಿಚಾರ ಮಾಡಿದಾಗ ಅದರ ಪ್ರಸ್ತುತ ದಾರುಣ ಸ್ಥಿತಿಯ ಅರಿವಾಗದಿರದು. ಆ ಕಾಲದಲ್ಲಿ ನಮ್ಮ ರಂಗಭೂಮಿಯಿಂದ ಮರಾಟಿಗರು ಸ್ಫೂರ್ತಿ ಪಡೆದು, ತಮ್ಮ ರಂಗಭೂಮಿಯನ್ನು ಅಭಿವೃದ್ಧಿಪಡಿಸಿಕೊಂಡರು; ಅದನ್ನು ಮೇಲ್ಮಟ್ಟಕ್ಕೆ ಎತ್ತಿದರು. ಇಂದು ಎಲ್ಲಾ ತಿರುವು-ಮುರುವಾಗಿದೆ. ನಾವೇ ಅವರಿಂದ ಪಾಠ ಕಲಿಯುವಂತಾಗಿದೆ; ಸ್ಫೂರ್ತಿ ಪಡೆಯುವಂತಾಗಿದೆ. ಈ ವಿಪರ್ಯಸ್ತ ಪರಿಸ್ಥಿತಿಗೆ ಕನ್ನಡಿಗರ ಆಲಸ್ಯ, ಹೆಡ್ಡತನ, ಸುಸಂಬದ್ಧ ಸಂಘಟನೆ ಇಲ್ಲದಿರುವುದು, ಸರಕಾರದ ಮಲತಾಯಿ ಧೋರಣೆ ಮೊದಲಾದವು ಕಾರಣವಾಗಿವೆ.

ಕನ್ನಡ ರಂಗಭೂಮಿಯ ಉಚ್ಛ್ರಾಯ ಕಾಲದಲ್ಲಿ ಅದರ ರಂಗಸ್ಥಲದ ಮೇಲೆ ಅನೇಕ ಅನರ್ಘ್ಯ ರತ್ನಗಳು ಕಂಗೊಳಿಸಿದುವು. ವರದಾಚಾರ್ಯರು, ಗರೂಡ ಸದಾಶಿವರಾಯರು, ಪೀರ ಸಾಹೇಬರು, ಕಲಘಟಗಿ ಕೇಶವ ಭಟ್ಟರು, ನನ್ನ ತಂದೆ ಹಿರಣ್ಣಯ್ಯನವರು ಇವರನ್ನು ನಾವು ಪೂಜ್ಯ ಭಾವನೆಯಿಂದ ಸ್ಮರಿಸಬೇಕು. ಅವರೆಲ್ಲ ಸುಸಂಸ್ಕೃತ ಜೀವಿಗಳು; ಅಭಿನಯ ವಿಶಾರದರು, ಶ್ರೇಷ್ಠ ಸಂಗೀತಗಾರರು. ತಮ್ಮ ವೈಯಕ್ತಿಕ ಪ್ರಭಾವ, ಪ್ರತಿಭೆಯ ನೆರವಿನಿಂದ ಕನ್ನಡ ರಂಗಭೂಮಿಗೆ ಅಮೋಘ ಸೇವೆ ಸಲ್ಲಿಸಿದರು. ರಂಗಭೂಮಿಯ ವೃತ್ತಿ ಗೌರವವನ್ನು ಕಾಪಾಡಿದರು; ಹೆಚ್ಚಿಸಿದರು. ಅವರ ನಾಟಕಗಳಿಗೆ ಜನ ಮುಕುರುತ್ತಿದ್ದರು. ಸಂಪಾದನೆಯೂ ಚೆನ್ನಾಗಿತ್ತು. ಉತ್ತಮ ನಾಟಕಗಳನ್ನೇ ಆಡುತ್ತಿದ್ದರು. ಅಭಿರುಚಿಯೂ ಮೇಲ್ಮಟ್ಟದ್ದಿದ್ದಿತು. ಆ ಅಭಿರುಚಿಗೆ ತಕ್ಕಂತೆ, ಅದಕ್ಕೊಪ್ಪುವಂಥ ನಾಟಕಗಳನ್ನೇ ಆಡುತ್ತಿದ್ದರು. ಜನರಿಗೆ ಉಚ್ಚ ಮಟ್ಟದ ಸಂಗೀತವನ್ನು ಕೇಳಬೇಕೆಂಬ ಅಭಿರುಚಿಯಿದ್ದಿತು. ಅವರ ನಾಟಕಗಳಲ್ಲಿ ಸಂಗೀತ ಪ್ರಧಾನವಾಗಿರುತ್ತಿತ್ತು. ಸಂಗೀತ ಬಾರದವನಿಗೆ ರಂಗಭೂಮಿಗೆ ಪ್ರವೇಶ ಮಾಡುವುದು ಸಾಧ್ಯವೇ ಇರಲಿಲ್ಲ. ಪ್ರತಿಯೊಬ್ಬ ಪಾತ್ರಧಾರಿಗೂ ಸಂಗೀತ ಬರಲೇಬೇಕಿತ್ತು. ಸೇವಕನ ಪಾತ್ರದಲ್ಲಿದ್ದ ನಟನೂ ಸಹ ತನ್ನ ಒಂದು ಮಾತನ್ನೂ ಸಂಗೀತದಿಂದಲೇ ಆಡಬೇಕಾಗುತ್ತಿತ್ತು. ಪಾತ್ರಗಳು ಒಂದು ರಾಗ, ಒಂದು ಕಂದ, ಒಂದು ವೃತ್ತವನ್ನು ಎಷ್ಟೇ ಹೊತ್ತು ಹಾಡಲಿ, ಕೇಳುವವರಿಗೆ ಬೇಸರವಿರಲಿಲ್ಲ; ಕೇಳುವ ಉತ್ಸುಕತೆಯಿತ್ತು.

ಇಂದು ಯಾರಿಗೆ ಬೇಕಾಗಿದೆ ಸಂಗೀತ? ಪಾತ್ರಗಳು ಆಲಾಪನೆ ಪ್ರಾರಂಭಿಸಿದರೆ, ಜನ ಎದ್ದು ಕಾಫಿ-ಟೀ ಕುಡಿಯಲೋ, ಬೀಡಿ ಸಿಗರೇಟು ಸೇದಲೋ ಹೊರಗೆ ಹೋಗುತ್ತಾರೆ. ಅವರಿಗೆ ಏನಿದ್ದರೂ, ೩-೪ ನಿಮಿಷಗಳಲ್ಲಿ ಮುಗಿಯುವ ಹಾಡುಗಳು ಬೇಕು. ಕೇಳುವ ತಾಳ್ಮೆಯಿಲ್ಲ; ಅಭಿರುಚಿ ಮೊದಲೇ ಇಲ್ಲ. ನಾಟಕ ಕಂಪನಿ ಸೇರಬೇಕಾದರೆ ಸಂಗೀತ ಬರಲೇಬೇಕೆಂಬ ಕಡ್ಡಾಯವೇನಿಲ್ಲ. ಇನ್ನು ಅಭಿನಯ. ಅದರಲ್ಲಿಯ ಪವಿತ್ರ ಭಾವನೆ ಹೊರಟು ಹೋಗಿದೆ. ಒಟ್ಟಿನಲ್ಲಿ ರಂಗದ ಮೇಲೆ ಹಾವಭಾವ ಪ್ರದರ್ಶನದ ಅಣಕ ನಡೆದಿದೆ.

ಒಳ್ಳೆಯ ಸಂಗೀತ ಮತ್ತು ಅಭಿನಯದ ಸಾಮರ್ಥ್ಯ ಉಳ್ಳವರು ರಂಗಭೂಮಿಗೆ ಬರುತ್ತಿಲ್ಲ. ಹೊಟ್ಟೆ ಪಾಡಿಗಾಗಿ ಬೇರೆಬೇರೆ ಉದ್ಯೋಗಗಳನ್ನು ಹುಡುಕಿಕೊಂಡು ಹೋಗುತ್ತಾರೆ. ರಂಗಭೂಮಿಗೆ ಕೊನೆಯಲ್ಲಿ ಸಿಕ್ಕುವವರು ಯಾರೆಂದರೆ ಬೇರೆಲ್ಲಿಯೂ ಉದ್ಯೋಗ ದೊರಕಿಸಿಕೊಳ್ಳಲಾರದವರು. Politics is the last resort of a scoundrel ಎನ್ನುತ್ತಾರಲ್ಲ. ಅದೇ ಮಾತನ್ನು ರಂಗಭೂಮಿಯ ವಿಷಯದಲ್ಲಿ ಸ್ವಲ್ಪ ಬದಲಾಯಿಸಿ, Dramatic is the last resort of unemployed ಎಂದು ಹೇಳಬಹುದು.

ಇಂಥ ಜನರಿಂದ ತುಂಬಿರುವ ರಂಗಭೂಮಿ ಅದು ಹೇಗೆ ಮೇಲಕ್ಕೇಳಬೇಕು? ಸಂಸ್ಕೃತಿ, ಸಂಸ್ಕಾರ, ಅನುಭವ ಯಾವೂ ಇಲ್ಲದ ಈ ಜನರಿಂದ ಎಂಥ ನಾಟಕ



ಕೊಣ್ಣೂರ ನಾಟಕ ಕಂಪನಿಯ ಬಸವೇಶ್ವರ ನಾಟಕದಲ್ಲಿ ಒಂದು ದೃಶ್ಯ.

ದನು ಆವ್ಯಾರ ಮ? ಸರಿ. ಅವರೂ ನಾಟಕಗಳನ್ನು ಆಡುತ್ತಲೇ ಇದ್ದಾರೆ. ಸಂಗೀತದ ಗಂಧವಿಲ್ಲದ, ಸಂಸ್ಕೃತಿಗೆ ಅಪಚಾರವೆಸಗುವಂಥ, ಕೀಳು ಮಟ್ಟದ, ಕೀಳು ಅಭಿರುಚಿಯ ನಾಟಕಗಳಿಗೆ ಕೊರತೆಯಿಲ್ಲ. ಜನರಾದರೂ ಇಂಥ ನಾಟಕಗಳನ್ನೇ ನೋಡುತ್ತಾರೆ. ಜನರ ಅಭಿರುಚಿಯನ್ನು ತಿದ್ದುವ ಕಾರ್ಯವನ್ನು ನಾಟಕದವರು ಮಾಡಿಲ್ಲ-ಮಾಡುತ್ತಿಲ್ಲ; ಜನರೂ ಸಹ ನಮಗೆ ಇಂಥ ನಾಟಕಗಳು ಬೇಡ; ಒಳ್ಳೆಯ ನಾಟಕಗಳನ್ನಾಡಿ ಎಂದು ಬಾಯಿ ಬಿಟ್ಟು ಹೇಳುತ್ತಿಲ್ಲ.

ಆದರೆ ಜನರ ಅಭಿರುಚಿಯಲ್ಲಿ ಖಂಡಿತವಾಗಿಯೂ ಬದಲಾವಣೆಯಾಗಿದೆ; ಆಗುತ್ತಿದೆ. ಅದ ಕೇವಲ ಅವ್ಯಕ್ತ ಅಷ್ಟೇ. ಸೂಕ್ಷ್ಮಮತಿಯಾದವನು ಈ ಪರಿವರ್ತನೆಯನ್ನು ಕಂಡುಕೊಂಡು ಜನರ ಅಭಿರುಚಿಗೆ ತಕ್ಕಂಥ ನಾಟಕಗಳನ್ನು ಆಡುತ್ತಾನೆ. ಜೊತೆಗೇ ಜನರ ಅಭಿರುಚಿಯನ್ನೂ ತಿದ್ದುತ್ತಾನೆ. ಉದಾಹರಣೆಗೆಂದು ಸಂಗೀತವನ್ನೇ ತೆಗೆದು ಕೊಳ್ಳಿರಿ. ನಾಟಕಗಳಲ್ಲಿ ಸಂಗೀತಕ್ಕೆ ಮೊದಲಿದ್ದ ಸ್ಥಾನ ಈಗಿಲ್ಲವೆಂಬುದನ್ನು ಈಗಾಗಲೇ ಹೇಳಿದ್ದೇನೆ. ಹಾಗಾದರೆ ಜನರಿಗೆ ಏನು ಬೇಕಾಗಿದೆ? ಪೌರಾಣಿಕ ಕಥೆಗಳಲ್ಲಿ ಮೊದಲಿದ್ದ ಜನರ ಆಸಕ್ತಿ ಈಗ ಕಡಿಮೆಯಾಗಿದೆ. ಪ್ರಚಲಿತ ರಾಜಕೀಯ ಜನರ ಜೀವನದಲ್ಲಿ ಪ್ರಮುಖ ಪಾತ್ರವನ್ನಾಡುತ್ತಿದೆ. ಅವರ ಜೀವನ ಕ್ರಮವನ್ನು ರೂಪಿಸುತ್ತಿದೆ. ಆ ರಾಜಕೀಯ ಪ್ರಭಾವದ ಕೂಲಂಕಷ ವಿಮರ್ಶೆ, ಟೀಕೆ ಜನಕ್ಕೆ ಬೇಕಾಗಿದೆ.

## ಅಜ್ಜ ನೆಟ್ಟ ಆಲದ ಮರ

ಜನರ ಅಭಿರುಚಿಯಲ್ಲುಂಟಾದ ಈ ಪರಿವರ್ತನೆಯನ್ನು ಗಮನಕ್ಕೆ ತೆಗೆದುಕೊಳ್ಳದೆ, ಅಜ್ಜ ನೆಟ್ಟ ಆಲದ ಮರವೆಂಬ ವ್ಯಾಮೋಹದಿಂದ ಆ ಮರಕ್ಕೇ ನೇಣು ಹಾಕಿಕೊಳ್ಳುತ್ತೇನೆಂದರೆ ಅದಕ್ಕಿಂತ ಹೆಚ್ಚಿನ ಮೌಢ್ಯ ಇನ್ನೊಂದಿರಲಾರದು. ಈ ವ್ಯಾಮೋಹವನ್ನು ತ್ಯಜಿಸಬೇಕು. ಕಾಲ ಬದಲಾಗುತ್ತಿದೆ, ಕ್ಷಣ ಕ್ಷಣಕ್ಕೂ. ನಿನ್ನೆ-ಮೊನ್ನೆಯವು ಇಂದು ತೀರ ಹಳತಾಗಿ ತೋರುತ್ತಿವೆ. ಪ್ರಪಂಚ ನಾಗಾಲೋಟದಿಂದ ಮುಂದೆ ಸಾಗುತ್ತಿದೆ. ಜೀವನದಿ ಭರದಿಂದ ಪ್ರವಹಿಸುತ್ತಿದೆ. ಬದಲಾದ ಪರಿಸ್ಥಿತಿಗೆ ಹೊಂದಿಕೊಳ್ಳುವಲ್ಲಿಯೇ ನಮ್ಮೆಲ್ಲರ ಶ್ರೇಯಸ್ಸಿದೆ. ಎಲ್ಲರಿಗೂ ಅನ್ವಯವಾಗುವ ಈ ಅಂಶದಿಂದ ಕನ್ನಡ ರಂಗಭೂಮಿ ಹೊರತಾಗಿ ಉಳಿಯಬಲ್ಲದೆ? ಈ ಹೊಂದಾಣಿಕೆ ಇಲ್ಲದಿರುವುದೇ ಅದರ ಇಂದಿನ ದಾರುಣಾವಸ್ಥೆಗೆ ಮೂಲ ಕಾರಣ.

ಈ ಪರಿಸ್ಥಿತಿಗೆ ಇಂದಿನ ನಮ್ಮ ರಂಗಭೂಮಿ ಹೊಂದಿಕೊಳ್ಳಲಾರದೆ ತತ್ತರಿಸುತ್ತಿದೆ. ನನ್ನ ಉದಾಹರಣೆಯನ್ನೇ ತೆಗೆದುಕೊಳ್ಳಿ. ನನ್ನ ತಂದೆಯವರು ಆಡುತ್ತಿದ್ದ 'ದೇವದಾಸಿ', 'ಮಕಮಲ ಟೋಪಿ' ನಾಟಕಗಳು ಶ್ರೇಷ್ಠವಾದವು ಎಂಬ ಬಗ್ಗೆ ಎರಡು ಅಭಿಪ್ರಾಯಗಳಿಲ್ಲ. ಆದರೂ ಒಂದು ರೀತಿಯಲ್ಲಿ ಅವುಗಳ ಕಾಲ ಒಂದು ಹಂತದಲ್ಲಿ ಮುಕ್ತಾಯಗೊಂಡಿತು. ಶ್ರೇಷ್ಠ ನಾಟಕಗಳೆಂಬ ದುರಭಿಮಾನಕ್ಕೆ ಕಟ್ಟು ಬಿದ್ದು ಅವುಗಳನ್ನೇ ಆಡುತ್ತ ಹೋಗಿದ್ದರೆ ಕೈಸುಟ್ಟುಕೊಳ್ಳಬೇಕಾಗುತ್ತಿತ್ತು. ಕಾಲಕ್ಕೆ ತಕ್ಕ ಹಾಗೆ ಬದಲಾವಣೆ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಲಂಚಾವತಾರ, ಭ್ರಷ್ಟಾಚಾರ ನಾಟಕಗಳನ್ನು ಬರೆದು ಆಡಿದೆ. ತುಂಬಾ ಯಶಸ್ವಿಯಾದುವು. ಇನ್ನೂ ಆಡುತ್ತಿದ್ದೇನೆ. ಆದರೆ ನನಗೆ ಗೊತ್ತು-ಅವುಗಳ ಕಾಲವೂ ಮುಗಿಯುತ್ತ ಬಂದಿದೆ. ಜನರಿಗೆ ಬದಲಾವಣೆ ಬೇಕಾಗಿದೆ. ಆ ಅಂಶವನ್ನು ಗುರುತಿಸಿಯೇ ಹೊಸ ನಾಟಕಗಳ ಸಿದ್ಧತೆಯಲ್ಲಿದ್ದೇನೆ. "ಲಾಟರಿ ಸರಕಾರ" ಇಷ್ಟರಲ್ಲಿ ಬರಲಿದೆ. ಅದು ಮುಗಿಯುವ ಹೊತ್ತಿಗೆ ಆ ಕಾಲಕ್ಕೆ ಜನರ ಆಸಕ್ತಿಯನ್ನು ಕೆರಳಿಸಿರುವ, ಅವರ ಆಸಕ್ತಿಯನ್ನು ಸೆರೆ ಹಿಡಿಯಬಲ್ಲ ಮತ್ತೊಂದು ನಾಟಕದ ಸಿದ್ಧತೆ ಮಾಡಿಕೊಳ್ಳಲೇಬೇಕು. ಒಂದೊಂದು ಕಾಲಕ್ಕೆ ಒಂದೊಂದು ವಿಷಯ ಜನರಿಗೆ ಹಿಡಿಸುತ್ತದೆ. ಅದನ್ನು ಗುರುತಿಸಿ ಅದಕ್ಕೆ ತಕ್ಕ ಏರ್ಪಾಡು ಮಾಡಿಕೊಳ್ಳಲೇಬೇಕು-ಬದುಕಬೇಕಾದರೆ.

ಇದರಲ್ಲಿಯೂ ಇನ್ನೊಂದು ಸೂಕ್ಷ್ಮವಾದ ಅಂಶವೊಂದಿದೆ. ಒಂದು ನಾಟಕದ ಕಾಲ ಮುಗಿಯುವುದು ಒಂದು ಅವಧಿಯ ನಂತರ. ಈ ಅವಧಿಯಲ್ಲಿಯೇ ಜನರು ಅದೇ ನಾಟಕದಲ್ಲಿ ಚಿಕ್ಕ ಪುಟ್ಟ ಬದಲಾವಣೆಗಳನ್ನು ಅಪೇಕ್ಷಿಸುತ್ತಾರೆ. ಕೇಳಿದ ಮಾತನ್ನೇ ಕೇಳುವುದಕ್ಕೆ ಬೇಸರಿಸುತ್ತಾರೆ. ಅದಕ್ಕೆಂದೇ ನನ್ನ ನಾಟಕಗಳಲ್ಲಿ ಮೂಲ ಕಥಾ ವಸ್ತುವಿಗೆ ವ್ಯತ್ಯಯಬಾರದ ರೀತಿಯಲ್ಲಿ ನನ್ನ ಸಂಭಾಷಣೆಯಲ್ಲಿ, ಮಾತುಗಳಲ್ಲಿ, ದಿನದಿಂದ ದಿನಕ್ಕೆ ಚಿಕ್ಕ ಪುಟ್ಟ ಬದಲಾವಣೆಗಳಿರುತ್ತವೆ. ಇದರಿಂದ ಒಂದೇ ನಾಟಕವನ್ನು ಮತ್ತೊಮ್ಮೆ ನೋಡ ಬಂದವನಿಗೆ ಸ್ವಲ್ಪವಾದರೂ ಬದಲಾವಣೆಯಾಗಿರುವುದು ಅನುಭವಕ್ಕೆ ಬರುತ್ತದೆ. ಅದನ್ನು ಅವನು ಮೆಚ್ಚುತ್ತಾನೆ; ಸ್ವಾಗತಿಸುತ್ತಾನೆ.

ಮಾತುಗಳು ದಿನದಿನಕ್ಕೆ ಬದಲಾಗುತ್ತಿದ್ದರೆ ಬೇರೆ ಸಹ-ಪಾತ್ರಗಳು ಅದಕ್ಕೆ ಹೊಂದಿಕೊಳ್ಳುವ ಬಗೆಯೆಂತು ಎಂದು ನಿಮಗೆ ಸಂದೇಹ ಮೂಡಬಹುದು. ನಾನು ಮಾತುಗಳನ್ನು ಮಧ್ಯ ಭಾಗದಲ್ಲಿ ಮಾತ್ರ ಬದಲಾಯಿಸುತ್ತೇನೆ. ಮೊದಲ ಮತ್ತು ಕೊನೆಯ ಮಾತುಗಳಲ್ಲಿ ಬದಲಾವಣೆ ಮಾಡುವದಿಲ್ಲ. ಕೊನೆಯ Catch word ನಲ್ಲಿ ಬದಲಾವಣೆಯಿಲ್ಲದಿರುವುದರಿಂದ ಮುಂದಿನ ಮಾತನ್ನು ಆಡಬೇಕಾದ ಪಾತ್ರದ ನಟ Catch word ಆಧಾರದ ಮೇಲೆ ತನ್ನ ಮಾತನ್ನು ಆರಂಭಿಸುತ್ತಾನೆ. ಈ ಚಿಕ್ಕ ಪುಟ್ಟ ಬದಲಾವಣೆಗಳನ್ನು ನಾನು ಮಾತ್ರ ಮಾಡುತ್ತೇನೆಂದಲ್ಲ. ನನ್ನ ಸಹ-ನಟರಿಗೂ ಅದೇ ಬಗೆಯ ವಾಕ್-ಸ್ವಾತಂತ್ರ್ಯವನ್ನು ಕೊಟ್ಟಿದ್ದೇನೆ. ಅವರೂ ತಮ್ಮ ಮಾತುಗಳಲ್ಲಿ ದಿನದಿನಕ್ಕೂ ಚಿಕ್ಕ ಪುಟ್ಟ ಹೊಸ ಮಾತುಗಳನ್ನು ತಮ್ಮ initiative ಮೇಲೆ ಸೇರಿಸುತ್ತಾರೆ. ಇದರಿಂದ ಬದಲಾವಣೆಗೆ ಸಮಗ್ರತೆ ದೊರೆಯುತ್ತದೆ. ಅದು ಏಮ್ಮುಖವಾಗುವುದಿಲ್ಲ. ಪರಿಣಾಮ ಒಳ್ಳೆಯದಾಗುತ್ತದೆ. ಈ ಸತ್ಸಂಪ್ರದಾಯವನ್ನು ನಾನು ನನ್ನ ಕಂಪನಿಯಲ್ಲಿ ಪ್ರಾರಂಭಿಸಿ ಅದನ್ನು ಯಶಸ್ವಿಯಾಗಿ ಪ್ರಯೋಗಿಸಿದ್ದೇನೆ.

ವಾಕ್-ಸ್ವಾತಂತ್ರ್ಯ ನಮ್ಮ ಸಂವಿಧಾನವು ನಮಗೆ ಕೊಟ್ಟ ಶ್ರೇಷ್ಠ ವರ. ಈ ವಾಕ್-ಸ್ವಾತಂತ್ರ್ಯವನ್ನು ರಂಗಭೂಮಿ ಬಳಸಿಕೊಂಡ ರೀತಿಯಲ್ಲಿ, ಚಲನಚಿತ್ರ ಪ್ರಪಂಚ ಬಳಸಿಕೊಳ್ಳಲು ಬರುವದಿಲ್ಲ. ಸ್ವಲ್ಪ ಹೆಚ್ಚು ಕಡಿಮೆಯಾದರೆ, ಸೆನ್ಸಾರಿನವರ ಕತ್ತರಿ ಪ್ರಯೋಗವಾಗುತ್ತದೆ. ಈ ಭೀತಿ ರಂಗಭೂಮಿಗೆ ಇಲ್ಲ. ಇದೊಂದು ವಿಷಯದಲ್ಲಿಯಾದರೂ, ನಮ್ಮ ರಂಗಭೂಮಿ ಸುದೈವಿಯೆಂದು ಹೇಳಬೇಕಾಗಿದೆ. ಆದರೆ, ಈ ಸ್ವಾತಂತ್ರ್ಯದ ದುರುಪಯೋಗವೂ ಆಗುತ್ತಿದೆ. ಅಶ್ಲೀಲತೆಯನ್ನು ಪ್ರದರ್ಶಿಸಲೇಬೇಕೆಂದಿಲ್ಲವಲ್ಲ. ಮಾತುಗಳಲ್ಲಿ ಅದು ಹಣಿಕಿ ಹಾಕುತ್ತದೆ. ಜನರ ಅಭಿರುಚಿಯನ್ನು ರೂಪಿಸಲು ಸಾಧನವಾಗಬೇಕಾದ ಈ ವಾಕ್ ಸ್ವಾತಂತ್ರ್ಯದ ದುರುಪಯೋಗವಾಗುತ್ತಿರುವದು ವಿಷಾದದ ಸಂಗತಿ.

ನಾಟಕವೆಂಬುದು elastic entertainment. ಮುಂದಿನ ಸಾಲಿನಲ್ಲಿ ಕುಳಿತ ಪಿ.ಎಚ್.ಡಿ. ಮಾಡಿದ ಪ್ರೊಫೆಸರನಿಗೂ, ಚಾಪೆಯ ಮೇಲೆ



ಗರೂಡ ಸದಾಶಿವರಾಯರ [illegible] ನಾಟಕದಲ್ಲಿ ಒಂದು ದೃಶ್ಯ. ಜಾಂಬವಂತನ ಪಾತ್ರದಲ್ಲಿ ಗರೂಡರು.

ಕುಳಿತ ಓರ್ವ ಸಾಮಾನ್ಯ ಕೂಲಿಗೂ ಏಕಕಾಲಕ್ಕೆ ಹಿಡಸುವಂಥ ಸಾಮಗ್ರಿಯನ್ನು ಒದಗಿಸಬೇಕಾಗುತ್ತದೆ. ನೀವು ಮುಂದಿನ ಸಾಲಿನ ಸೂಟು–ಬೂಟಿನ ಜನರನ್ನು ರಂಜಿಸಲು ಪ್ರಯತ್ನಿಸಿದರೆ, ಕೂಲಿಯವ ಕೇಳುತ್ತಾನೆ: "ಏನಯ್ಯಾ, ನಾನು ಹನ್ನೆರಡಾಣೆ ಕೊಟ್ಟಿಲ್ಲವೆ? ನನಗಾಗಿ ಏನಿದೆ ನಿನ್ನ ನಾಟಕದಲ್ಲಿ?" ಅವನನ್ನು ಮಾತ್ರ ರಂಜಿಸುವ ಪ್ರಯತ್ನ ಮಾಡಿದರೆ, ಮುಂದಿನ ಸಾಲಿನಲ್ಲಿ ಕುಳಿತಿರುವವರು "ನಾಟಕ ಕೀಳು ದರ್ಜೆಯದು" ಎಂದು ಮೂಗು ಮುರಿಯುತ್ತಾರೆ. ಅವರಿಬ್ಬರಿಗೂ ಸೇರುವ ಸಾಮಾನ್ಯ ಅಂಶಗಳಿಂದ ಕೂಡಿದ ಕಥಾವಸ್ತುವಿನ ನಾಟಕವನ್ನು ರೂಪಿಸಿಕೊಂಡು ಎರಡೂ ವರ್ಗದ ಜನರಿಗೆ ಹಿಡಿಸುವ ರೀತಿಯಲ್ಲಿ ಪ್ರದರ್ಶಿಸಿದರೆ ಮಾತ್ರ ನಾಟಕ ಯಶಸ್ವಿಯಾಗುತ್ತದೆ. ಆದಕ್ಕೇ ನಾನು ಈ ಕಲೆಯನ್ನು elastic entertainment ಎಂದು ಕರೆಯುತ್ತೇನೆ. ಈ ಅಂಶವನ್ನು ಗಮನಿಸದಿರುವದೂ, ನಮ್ಮ ಇಂದಿನ ದುಸ್ಥಿತಿಗೆ ಒಂದು ಕಾರಣವಾಗಿದೆ.

## ಭದ್ರತೆಯೇ ಇಲ್ಲ!

ಇಂದು ರಂಗಭೂಮಿಯ ಮೇಲೆ ಆಡಂಬರ, ಬೂಟಾಟಿಕೆ ಹೆಚ್ಚಾಗಿದೆ. ನಾಟಕ ಜೀವನದಲ್ಲಿ ಮುಖ್ಯವಾಗಿ ಭದ್ರತೆಯೇ ಇಲ್ಲದಾಗಿದೆ. ವೃತ್ತಿ ಗೌರವ ನಶಿಸಿದೆ. ಭದ್ರತೆಯೇ ಇಲ್ಲದ ಮೇಲೆ ಆ ವೃತ್ತಿಯಲ್ಲಿ ಯಾವ ಆಕರ್ಷಣೆಯಿದ್ದೀತು? ಹೊಟ್ಟೆ ತುಂಬದ ಈ ವೃತ್ತಿಯಿಂದ ಯಾವ ನಟ ಉತ್ತಮ ಅಭಿನಯ ನೀಡಬಲ್ಲ? ಹಾಗೆ ಅಪೇಕ್ಷಿಸುವದೂ ಕ್ರೂರವೆನಿಸುವದು. ಉತ್ತಮ ಮಟ್ಟದ ಅಭಿನಯ, ಸಂಗೀತ, ಹಾಸ್ಯ, ವಿಡಂಬನೆಯನ್ನು ಅಪೇಕ್ಷಿಸುವ ಜನರು, ಸಾಹಿತ್ಯ, ಸಂಸ್ಕೃತಿ, ಕಲೆಯನ್ನು ಅಭಿವೃದ್ಧಿಗೊಳಿಸುವ ಧ್ಯೇಯವನ್ನಿರಿಸಿಕೊಂಡಿರುವ ಸರಕಾರ ಎಲ್ಲಕ್ಕೂ ಮೊದಲು ಈ ವೃತ್ತಿಗೆ ಒಂದು ಗೌರವವನ್ನೂ, ಒಂದು ಭದ್ರತೆಯನ್ನೂ ಒದಗಿಸಬೇಕು. ವಿದ್ಯಾವಂತರಾದವರು, ಸುಸಂಸ್ಕೃತರು, ಉತ್ತಮ ಸಂಸ್ಕಾರ ಪಡೆದವರು, ಸಂಗೀತದಲ್ಲಿ ಪರಿಶ್ರಮವಿದ್ದವರು ಇದರತ್ತ ಆಕರ್ಷಿತರಾಗುವಂಥ ಪರಿಸ್ಥಿತಿ ನಿರ್ಮಾಣಗೊಳ್ಳಬೇಕು.

ಇಂದು ಕಂಪನಿಯ ಒಡೆಯ ಮತ್ತು ನಟವರ್ಗದ ಮಧ್ಯ ಸಾಮರಸ್ಯ ಇಲ್ಲ. ಅಪನಂಬಿಕೆ ಕಾಲು ಚಾಚಿದೆ. ಇಂದು ಒಂದು ಕಂಪನಿಯಲ್ಲಿದ್ದ ನಟ, ನಾಳೆ ಇನ್ನೊಂದು ಕಂಪನಿಯಲ್ಲಿರುತ್ತಾನೆ. ನಟ ನಟಿಯರಲ್ಲಿ ಒಡಕು ಹುಟ್ಟಿಸಿ, ತಮ್ಮ ಕಂಪನಿಗೆ ಹಾರಿಸಿಕೊಂಡು ಹೋಗುವುದು ನಡೆದಿದೆ. ನಿಂತ ಕಡೆಯಲ್ಲಿ ಎಲ್ಲಾ ಸರಿಯಾಗಿದ್ದರೆ, ಭದ್ರತೆಯಿದ್ದರೆ, ಆತನಾದರೂ ಏಕೆ ಮತ್ತೊಂದು ಕಂಪನಿಗೆ ಹೋಗುತ್ತಾನೆ.ನಟ–ನಟಿಯರು ಹೂವಿನಿಂದ ಹೂವಿಗೆ ಹಾರುವ ದುಂಬಿಯಂತೆ ಒಂದು ಕಂಪನಿಯಿಂದ ಇನ್ನೊಂದು ಕಂಪನಿಗೆ ಹೋಗುತ್ತಾರೆ. ಎಲ್ಲೆಡೆಗೂ ಭದ್ರತೆಯೇ ಇಲ್ಲದಿರುವಾಗ, ಹೊಸ ಕಂಪನಿಯಲ್ಲೂ ಅವರು ಬಹಳ ದಿನ ನಿಲ್ಲುವುದಿಲ್ಲ. ಬೇರೊಂದು ಕಂಪನಿಗೆ ಹೋದರೆ, ಒಳ್ಳೆಯದಾದೀತೇನೋ ಎಂದು ಕಂಬಿ ಕೀಳುತ್ತಾರೆ.

ಕಂಪನಿ ಮಾಲೀಕನನ್ನೂ ಅಂದು ಪ್ರಯೋಜನವಿಲ್ಲ. ಅವನೊಬ್ಬನೇ ಕಾರಣನಲ್ಲವಲ್ಲ? ಅವನೂ ಪರಿಸ್ಥಿತಿಯ ಸುಳುವಿಗೆ, ಸೆಳೆತಕ್ಕೆ ಸಿಕ್ಕವನೇ! ಆರ್ಥಿಕವಾಗಿ ನಷ್ಟವನ್ನನುಭವಿಸುವ ಮಾಲೀಕನಾದರೂ ತನ್ನ ನಟ–ನಟಿಯರಿಗೆ ಎಷ್ಟೆಂದು ಕೊಟ್ಟಾನು? ಕೊಟ್ಟರೆ ಆತನಿಗೆ ಉಳಿಯುವುದೇನು? ಕೊಡುವ ಪ್ರವೃತ್ತಿ ಕೆಲವರಿಗಿಲ್ಲ; ಕೊಟ್ಟೇನೆಂದರೆ ಕೆಲವರಿಗೆ ಚೈತನ್ಯವಿಲ್ಲ. ಇದೊಂದು ವಿಷವೃತ್ತ.



ಗರೂಡ ಸದಾಶಿವರಾಯರ 'ಭಕ್ತ ಸುದಾಮ' ನಾಟಕದಲ್ಲಿ ಒಂದು ದೃಶ್ಯ.

ಈ ಯುಗದಲ್ಲಿ ವೈಯಕ್ತಿಕ ಬಲಕ್ಕೆ ಬೆಲೆಯಿಲ್ಲ. ಸಾಂಘಿಕ ಸಾಮರ್ಥ್ಯಕ್ಕೇ ಬೆಲೆ. ಸಾಮೂಹಿಕ ಸಂಘಟನೆಯಿದ್ದರೆ, ಏನನ್ನಾದರೂ ಸಾಧಿಸಬಹುದು. ಜನರ ಸಹಾನುಭೂತಿ, ಅನುಕಂಪ ದೊರಕಿಸಿಕೊಳ್ಳಲು, ಸರಕಾರದ ಕಣ್ಣು ತೆರೆಯಿಸಲು ಸಾಮೂಹಿಕ ಸಂಘಟನೆ ಬೇಕೇಬೇಕು. ಇಂದು ಕಂಪನಿ ಮಾಲೀಕರದಾಗಲೀ, ನಟ–ನಟಿಯರದಾಗಲೀ ಯಾವ ಸಂಘಟನೆಯಿದೆ? ಅವರೆಲ್ಲ ಒಂದೆಡೆ ಸೇರಿ ತಮ್ಮ ವೃತ್ತಿಯ ಸಮಸ್ಯೆಗಳನ್ನು ಚರ್ಚಿಸಿದ್ದಾರೆಯೆ? ಕೇಳಬಾರದ, ಒಬ್ಬರನ್ನು ಕಂಡರೆ, ಇನ್ನೊಬ್ಬರಿಗೆ ದ್ವೇಷ, ಮತ್ಸರ, ಹೊಟ್ಟೆಯುರಿ, ಇಲ್ಲದ ಪೈಪೋಟಿ. ಪೈಪೋಟಿ ಇರಬೇಕು, ನಿಜ. ಉತ್ತಮವಾದುದಕ್ಕೆ ಒಳ್ಳೆಯದಕ್ಕೆ ಪೈಪೋಟಿಯಿದ್ದರೆ ಅದರಿಂದ ಆರೋಗ್ಯಕರ ಪರಿಣಾಮವಾಗುತ್ತದೆ. ಇಲ್ಲಿ ದುರ್ಭಿಕ್ಷೆ ತಾಂಡವವಾಡುತ್ತಿದೆ. ಯಾಕೆ ಈ ಪೈಪೋಟಿ? ಒಬ್ಬರನ್ನು ತುಳಿಯುವ, ಮೆಟ್ಟಿ ನಿಲ್ಲುವ ಛಲ ಏಕೆ? ಸಾಂಘಿಕ ಪ್ರಯತ್ನ ಮಾಡುವ ಬಗ್ಗೆ ಸಂಬಂಧಪಟ್ಟವರೆಲ್ಲ ವಿಚಾರಿಸುವುದಕ್ಕೆ ಇದು ಸೂಕ್ತ ಕಾಲ.

ಗಮನಿಸಬೇಕಾದ ಇನ್ನೊಂದು ಅಂಶವೂ ಇದೆ. ನಟ–ನಟಿಯರೆಂದ ಮೇಲೆ, ಹೆಣ್ಣು–ಗಂಡುಗಳು ಒಟ್ಟಿಗೇ ಕೆಲಸ ಮಾಡಬೇಕಾಗುತ್ತದೆ. ನಮ್ಮ ವೃತ್ತಿ ರಂಗಭೂಮಿಯ ಗೌರವ ಕಡಿಮೆಯಾಗಿರುವುದಕ್ಕೆ ನಮ್ಮ ನಟ–ನಟಿಯರ, ಕಂಪನಿ ಒಡೆಯರ ವೈಯಕ್ತಿಕ ಚಾರಿತ್ರ್ಯವೂ ಒಂದು ಕಾರಣ. ಜನರು ಆಡಿಕೊಳ್ಳುವ ರೀತಿಯಲ್ಲಿ ಇವರು ನಡೆದುಕೊಳ್ಳುತ್ತಾರೆ. ಅವರ ನಡತೆಯ ಬಗ್ಗೆ ಊಹಾಪೋಹಗಳೇಳುತ್ತವೆ. ಅವುಗಳಲ್ಲಿ ತಥ್ಯಾಂಶವಿಲ್ಲವೆಂದು ಹೇಳಲಿಕ್ಕಾಗದು. ಬಹು ಜನರ ನಡತೆಯಲ್ಲಿ ಅಪೇಕ್ಷಿಸುವುದು ಬಹಳಷ್ಟಿದೆ; ಆಕ್ಷೇಪಿಸುವುದೂ ಬಹಳಷ್ಟಿದೆ. ಶುದ್ಧ ಸಚ್ಚಾರಿತ್ರ್ಯವಂತರಿಗೆ ರಂಗಭೂಮಿ ತಕ್ಕ ಸ್ಥಳವಲ್ಲವೆಂಬ ಪ್ರತೀತಿ ಬೆಳೆದಿದೆ. ಈ ಮೊದಲೇ ಹೇಳಿದಂತೆ ವಿದ್ಯಾವಂತರಲ್ಲದವರು, ಸಂಸ್ಕೃತಿ–ಸಂಸ್ಕಾರವಿಲ್ಲದವರು ರಂಗಭೂಮಿಯನ್ನಾಕ್ರಮಿಸಿಬಿಟ್ಟಿರುವದರಿಂದ, ಅವರಿಂದ ಬಹಳಷ್ಟು ನಾವು ಅಪೇಕ್ಷಿಸುವುದೂ ಒಂದು ರೀತಿಯಿಂದ ತಪ್ಪೆನಿಸುತ್ತದೆ. ವಿದ್ಯಾವಂತರಾದವರು, ಕಲಾಭಿಮಾನಿಗಳು, ರಂಗಭೂಮಿಗೆ ಬರುವ ಹಾಗೆ ಈ ವೃತ್ತಿಯಲ್ಲಿ ಭದ್ರತೆಯ ಗ್ಯಾರಂಟಿ ದೊರಕಿದರೆ, ಆಗ ಉತ್ತಮ ನಟ–ನಟಿಯರು ಈ ವೃತ್ತಿಗೆ ಕಾಲಿರಿಸಿ, ಅದಕ್ಕೆ ಅಂಟಿರುವ ಈ ಕಲಂಕವನ್ನು ತೊಡೆದಾರು.

ಹೊಸ ಮುಖಗಳ ಸಮಸ್ಯೆ ಚಲಚ್ಚಿತ್ರರಂಗವನ್ನು ಕಾಡುತ್ತಿರುವಂತೆ, ರಂಗಭೂಮಿಯನ್ನೂ ಕಾಡುತ್ತಿದೆ. ಮೇಲ್ಕಂಡ ಅಂಶದಿಂದಾಗಿ ಹೊಸ ಮುಖಗಳು ರಂಗಭೂಮಿಗೆ ಬಾರದಂತಾಗಿ ಅಭಾವ ತೀವ್ರವಾಗಿದೆ. ಅನಿವಾರ್ಯವಾಗಿ ಬಂದು ಸೇರಿದವರೊಡನೆ ಏಗಬೇಕಾಗಿದೆ. ಅವರಿಗೆ ತರಬೇತಿ ಕೊಡುವುದರಿಂದ ಅವರ ರಂಗಭೂಮಿಯ ಜೀವನ ಪ್ರಾರಂಭವಾಗಬೇಕು. ತರಬೇತಿಯಲ್ಲಿ ಅವರು ಯಶಸ್ವಿಯಾಗುವುದೂ ಸಂದೇಹಾಸ್ಪದವೇ. ಅಥವಾ ತರಬೇತಿಯ ನಂತರ ಅದೇ ಕಂಪನಿಗೆ ಅಂಟಿಕೊಂಡಿರುತ್ತಾರೆಂಬ ಭರವಸೆಯಾದರೂ ಎಲ್ಲಿದೆ?

## ವಿಲಾಸಿ ರಂಗಭೂಮಿ

ವಿಲಾಸಿ ರಂಗಭೂಮಿಯಲ್ಲಿರುವವರು ಹೆಚ್ಚಾಗಿ ವಿದ್ಯಾವಂತರು. ಅಷ್ಟಿಷ್ಟು ನಾಟಕಾಭಿನಯದಲ್ಲಿ ಗತಿಯುಳ್ಳವರು.ಕಲಾಭಿಮಾನಿಗಳು. ತಮ್ಮ ಆತ್ಮತೃಪ್ತಿಗೆ ನಾಟಕಗಳನ್ನು ಆಡುವವರು. ಅವರಿಗೆ ಲಾಭ–ನಷ್ಟದ ಪರಿವೆಯಿಲ್ಲ. ಆತ್ಮ ಸಂತೋಷವೇ ಅವರಿಗೆ ಮುಖ್ಯ. ವಿಲಾಸಿ ರಂಗಭೂಮಿಯಿಂದ ವೃತ್ತಿರಂಗಭೂಮಿಗೆ

ಅನಿಷ್ಟಕರವಾದ ಪರಿಣಾಮವಾಗಿದೆಯೆಂದು ನನಗೆನಿಸುವುದಿಲ್ಲ. ನನ್ನ ಅಭಿಪ್ರಾಯದಲ್ಲಿ ವಿಲಾಸಿ ತಂಡಗಳಿಂದ ವೃತ್ತಿರಂಗಭೂಮಿಗೆ ಉಪಕಾರವೇ ಆಗಿದೆಯೆಂದು ಹೇಳಬಹುದು. ಅವರು ಜನರ ಅಭಿರುಚಿಯನ್ನುರೂಪಿಸಿ, ಒಳ್ಳೆಯ ನಾಟಕಗಳನ್ನೇ ಜನರು ಬಯಸುವಂತೆ ಮಾಡಿದ್ದಾರೆ. ಒಂದು ವೇಳೆ ಅವರು ತಮ್ಮ ಪ್ರಯತ್ನದಲ್ಲಿ ಅಯಶಸ್ವಿಯಾದರೂ, ಅವರಿಗೆ ಯಾವ ಭಯವೂ ಇಲ್ಲ. ಅವರ-ಕುಂದು ಕೊರತೆಗಳನ್ನೂ ಲೋಪ-ದೋಷಗಳನ್ನೂ ಜನರು ಮನ್ನಿಸುತ್ತಾರೆ. "ನಮ್ಮ ಹುಡುಗರಲ್ಲವೇ? ಇಷ್ಟು ಮಾಡಿದುದೇ ಹೆಚ್ಚು. ಅವರೇನು ನಾಟಕ ಕಂಪನಿಯವರಲ್ಲವಲ್ಲ?"ಎಂಬ ಉದಾರ ಭಾವನೆ ವ್ಯಕ್ತಪಡಿಸುತ್ತಾರೆ. ಇದೇ ಮಾತನ್ನು ಜನರು ವೃತ್ತಿರಂಗಭೂಮಿಯ ಬಗ್ಗೆ ವ್ಯಕ್ತಪಡಿಸಲು ಸಿದ್ಧರಿಲ್ಲ. "ನಮ್ಮ ಊರಿನ ಹುಡುಗರೇ ಎಷ್ಟೋ ವಾಸಿ, ಇವರಿಗಿಂತ" ಎಂದು ಮೂದಲಿಸುತ್ತಾರೆ.

ಹಳೆಯ ಮೈಸೂರಿನ ಕೆಲವು ಊರುಗಳಲ್ಲಿ ವಿಲಾಸಿ ಸಂಘಗಳು ಉತ್ತಮ ಸಾಧನೆ ಮಾಡಿ ಜನರ ಅಭಿರುಚಿಯನ್ನು ಬೆಳೆಸಿದ್ದಾರೆ. ಅಂಥ ಊರುಗಳಲ್ಲಿ ವೃತ್ತಿ ರಂಗಭೂಮಿಯ ಕಂಪನಿಯವರು ತುಂಬ ನಿಗಾ ವಹಿಸಿ ನಾಟಕಗಳನ್ನಾಡಬೇಕಾಗುತ್ತದೆ. ಸ್ವಲ್ಪ ತೂಕ ತಪ್ಪಿದರೆ, ಜನರ ಆಗ್ರಹಕ್ಕೆ ತುತ್ತಾಗಬೇಕಾಗುತ್ತದೆ.

ವೃತ್ತಿರಂಗಭೂಮಿಯವರು ದಿನಾಲು ನಾಟಕಗಳನ್ನಾಡುವುದರಿಂದ ಅವರು ಪರಿಪೂರ್ಣರಾಗಲು ಸಾಧ್ಯವಿದೆ. ಸಾಧ್ಯವಿದೆಯಷ್ಟೆ ಅಲ್ಲ, ಪರಿಪೂರ್ಣರಾಗಲೇಬೇಕು ಅವರು. ಅದಕ್ಕೆಂದೇ ಅವರು ತಪ್ಪು ಮಾಡಿದರೆ ಜನರು ಕ್ಷಮಿಸುವುದಿಲ್ಲ. ವೃತ್ತಿ ರಂಗಭೂಮಿಯು ಪರಿಪೂರ್ಣತೆಯನ್ನು ಸಾಧಿಸುವಂತೆ ಪ್ರಚೋದನೆಯನ್ನಿತ್ತಿರುವುದು, ನಮ್ಮ ವಿಲಾಸಿ ರಂಗಭೂಮಿ. ಆದುದರಿಂದ ವಿಲಾಸಿ ಮತ್ತು ವೃತ್ತಿರಂಗಭೂಮಿಯ ನಡುವೆ ಸ್ಪೈರ್ಧೆಯೇನಿಲ್ಲ. ವಿಲಾಸಿ ರಂಗಭೂಮಿ, ವೃತ್ತಿ ರಂಗಭೂಮಿಗೆ ಪೋಷಕವೂ, ಪೂರಕವೂ ಆಗಿದೆಯೆಂದೇ ನನ್ನ ಅಭಿಪ್ರಾಯ.

## ಉತ್ತಮ ನಾಟಕಗಳ ಅಭಾವ

ಪೌರಾಣಿಕ ನಾಟಕಗಳ ಕಾಲವಿರುವ ವರೆಗೆ, ಕಥಾವಸ್ತುವಿಗೆ ಬಡತನವಿರಲಿಲ್ಲ. ನಮ್ಮ ಪುರಾಣಗಳಿಂದ ಸೂಕ್ತವಾದ ಪ್ರಸಂಗಗಳನ್ನು ಆಯ್ದುಕೊಂಡು, ಅವುಗಳನ್ನಾಧರಿಸಿ, ನಾಟಕಗಳನ್ನು ಬರೆಯುತ್ತಿದ್ದರು. ಆದರೆ ಪೌರಾಣಿಕ ನಾಟಕಗಳ ಕಾಲ ಇಂದು ಮುಗಿದಂತಾಗಿದೆ. ಉತ್ತಮ ಸಾಮಾಜಿಕ ಇಲ್ಲವೆ ರಾಜಕೀಯ ನಾಟಕಗಳಿಗೆ ಕಾಲವಿದು. ಆದರೆ ದುರ್ದೈವದಿಂದ ಇಂಥ ನಾಟಕಗಳನ್ನು ಬರೆಯುವವರೇ ಇಲ್ಲವಾಗಿದೆ.

"ಕಾವ್ಯೇಷು ನಾಟಕಂ ರಮ್ಯಂ" ಎಂದು ನಮ್ಮ ಕವಿಗಳೇ ಘೋಷಿಸಿದ್ದಾರೆ. ಆದರೆ ನಮ್ಮ ದುರದೃಷ್ಟ– ಉತ್ತಮ ಪ್ರಕಾರದ ಕಾವ್ಯವಾದ ನಾಟಕವನ್ನು ಬರೆಯುವ ನಾಟಕಕಾರರೇ ಇಂದು ನಮ್ಮಲ್ಲಿಲ್ಲ! ಇಂದು ಸಾಹಿತ್ಯದಲ್ಲಿ ಕಾದಂಬರಿ ಯುಗ ಪ್ರಾರಂಭವಾಗಿದೆ. ಮೊದ ಮೊದಲು ನಾಟಕಗಳನ್ನು ಬರೆದವರೂ, ಇಂದು ಪ್ರಭಾವಕ್ಕೆ ತಲೆ ಬಾಗಿಸಿ, ಕಾದಂಬರಿಗಳನ್ನೇ ಬರೆಯತೊಡಗಿದ್ದಾರೆ. ಕನ್ನಡದ ಹೆಸರಾಂತ ಕವಿಗಳಿಗೆಲ್ಲ ಅನ್ವಯಿಸುವ ಮಾತಿದು. ಶ್ರೇಷ್ಠ ಕವಿಗಳಾದವರೆ, ನಾಟಕಗಳನ್ನು ಬರೆಯದಿದ್ದರೆ ಉತ್ತಮ ನಾಟಕಗಳಿಗಾಗಿ ವೃತ್ತಿ ರಂಗಭೂಮಿ ಯಾರ ಮೊರೆ ಹೋಗಬೇಕು? ಸಾಹಿತ್ಯಾಭಿವೃದ್ಧಿಯಲ್ಲಿ ಆಸಕ್ತರಾಗಿರುವವರೆಲ್ಲ ಈ ಅಂಶವನ್ನು ತೀವ್ರವಾಗಿ ಆಲೋಚಿಸಬೇಕು. ಉತ್ತಮ ನಾಟಕಗಳಿಗಾಗಿ ರಂಗಭೂಮಿ ಅಲೆಯುವಂತಾಗಬಾರದು. ನಾಟಕವನ್ನು ಅಲಕ್ಷಿಸಿ, ಸಾಹಿತ್ಯಾಭಿವೃದ್ಧಿ ಪರಿಪೂರ್ಣವಾಗಲಾರದು. ಶ್ರೇಷ್ಠ ಕವಿಗಳು ಅಲಕ್ಷಿಸಿದ ನಾಟಕ ಸಾಹಿತ್ಯ ನಿರ್ಮಾಣಕ್ಕೆ ಕಡಿಮೆ ಯೋಗ್ಯತೆಯಿದ್ದವರು ಕೈ ಹಾಕುವಂತಾಗಿದೆ. ಅನಿವಾರ್ಯವಾಗಿ ಅವರು ಬರೆದ ಕಳಪೆ ನಾಟಕಗಳನ್ನೇ ರಂಗಭೂಮಿ ಅಭಿನಯಿಸಬೇಕಾಗಿದೆ. ಉತ್ತಮ ನಾಟಕಗಳು ರಂಗಭೂಮಿಯ ಮೇಲೆ ಬಾರದಿರುವುದಕ್ಕೆ ಇದೂ ಒಂದು ಕಾರಣ.

## ಸರಕಾರದ ಸಹಾಯ ಧನ

ರಾಜ್ಯ ಸರಕಾರವು ವೃತ್ತಿರಂಗಭೂಮಿಯ ಕಂಪನಿಗಳಿಗೆ ಸಹಾಯ ಧನ ನೀಡಬೇಕೆಂದು ನಿರ್ಧರಿಸಿದೆ. ಇಷ್ಟು ದಿನಗಳ ಮೇಲಾದರೂ ಸರಕಾರದ ಕೃಪಾಕಟಾಕ್ಷಕ್ಕೆ ರಂಗಭೂಮಿ ಪಾತ್ರವಾಗಿರುವುದು ಸಂತೋಷದ ಸಂಗತಿ. ಆದರೆ ಈ ಸಮಸ್ಯೆ ತಿಳಿದುಕೊಂಡಿರುವಷ್ಟು ಸುಲಭವಾಗಿಲ್ಲ. ಸಹಾಯ ಧನವನ್ನು ರೋಖ ಹಣದ ರೂಪದಲ್ಲಿ ಒಂದೊಂದು ಕಂಪನಿಗೆ ಇಷ್ಟಿಷ್ಟು ಎಂದು ಕೊಟ್ಟುಬಿಟ್ಟರೆ ಅಪೇಕ್ಷಿಸಿದ ಪರಿಣಾಮವುಂಟಾಗದು. ಹಣ ಕಂಪನಿಯ ಮಾಲೀಕರ ಕೈಗೆ ಸರ್ವಥಾ ಸೇರಬಾರದು. ಆ ಹಣದಿಂದ ಮಾಲೀಕನಾದವನು ತನ್ನ ವೈಯಕ್ತಿಕ ಸ್ಥಿತಿಗತಿಯನ್ನು ಸುಧಾರಿಸಿಕೊಳ್ಳಲು ಸಾಧ್ಯವಾಗುವದಷ್ಟೆ. ಹಾಗಾದರೆ, ನಿಜವಾಗಿ ಸಹಾಯ ಹಣದ ಅವಶ್ಯಕತೆಯಿರುವ ಬಡ ನಟ–ನಟಿಯರ ಪಾಡೇನು? ಅವರ ಸ್ಥಿತಿಗತಿ ಸುಧಾರಿಸಿದರೆ ಮಾತ್ರ ರಂಗಭೂಮಿಯಲ್ಲಿ ಒಂದಿಷ್ಟು ಭದ್ರತೆಯುಂಟಾದೀತು. ಅದು ಬಿಟ್ಟು ಕೇವಲ ಮಾಲೀಕನ ಸ್ಥಿತಿಗತಿ ಸುಧಾರಿಸುವಂತಾದರೆ ನಿಜವಾದ ಉದ್ದೇಶವನ್ನು ಸಾಧಿಸಿದಂತಾಗುವುದೆ?

ಸರಕಾರವು ಈ ಬಗ್ಗೆ ಈಗಾಗಲೇ ವೃತ್ತಿ ನಾಟಕ ಸಂಸ್ಥೆಗಳ ಅಭಿಪ್ರಾಯವನ್ನು ಕೇಳಿದೆಯೆಂದೂ, ಹಣ ಮಾಲೀಕರ ಕೈಗೆ ಸೇರಬೇಕೆಂಬ ಅಂಶವನ್ನು ಬಹುತೇಕ ಎಲ್ಲ ನಾಟಕ ಸಂಸ್ಥೆಗಳ ಮಾಲೀಕರು ಒಪ್ಪಿದ್ದಾರೆಂದೂ ತಿಳಿದು ಬರುತ್ತದೆ. ಸ್ವತಃ ನಾಟಕ ಕಂಪನಿಯೊಂದರ ಮಾಲೀಕನಾದ ನಾನು ಇದನ್ನು ತೀವ್ರವಾಗಿ ವಿರೋಧಿಸುತ್ತೇನೆ. ತಾನಾಗಿ ಬರಲಿರುವ ಹಣವನ್ನು ಬೇಡವೆಂದು ಹೇಳುತ್ತಿದ್ದೇನೆ. ಬಹುಶಃ ಹೀಗೆ ವಿರೋಧ ವ್ಯಕ್ತ ಮಾಡುತ್ತಿರುವವನು ನಾನೊಬ್ಬನೆ!

ಇದರಿಂದ ಚಲನಚಿತ್ರಗಳಿಗೆ ನೀಡುತ್ತಿರುವ ಸಹಾಯ ಧನದ ಕಥೆಯು ಪುನರಾವೃತ್ತಿಯಾಗುತ್ತದೆ. ಸಹಾಯ ಧನದ ಆಸೆಗಾಗಿಯೇ ಎಷ್ಟೋ ಜನರು ಚಿತ್ರ ತೆಗೆಯುತ್ತಿದ್ದಾರೆ. ರಾಜ್ಯದ ಹೊರಗಿನ ನಿರ್ಮಾಪಕರೂ ನಮ್ಮ ರಾಜ್ಯಕ್ಕೆ ಬಂದು ಇಲ್ಲಿಯೇ ಚಿತ್ರ ತೆಗೆಯುತ್ತಿದ್ದಾರೆ. ಹಾಗೆಯೇ ವೃತ್ತಿ ರಂಗಭೂಮಿಗೆ ಕೊಡಬೇಕೆಂದಿರುವ ಸಹಾಯ ಧನದ ಆಸೆಗಾಗಿ ಈಗಿರುವ ನಾಟಕ ಕಂಪನಿಗಳಿಗೆ ಇನ್ನಷ್ಟು ಕಂಪನಿಗಳು ತಲೆ ಎತ್ತಬಹುದಾಗಿದೆ. ೫೦ ಸಾವಿರದಂತೆ ಒಂದೆರಡು ಸಲ ಹಣ ಗಿಟ್ಟಿಸಿ ಬೆಂಗಳೂರಿನಲ್ಲಿಯೋ, ಮೈಸೂರಿನಲ್ಲಿಯೋ ಒಂದು ಭವ್ಯ ಬಂಗಲೆಯನ್ನು ಕಟ್ಟಿಸಿಕೊಂಡು, ಒಂದೆರಡು ವರ್ಷಗಳಲ್ಲಿ ಕಂಪನಿಯನ್ನು ಮುಚ್ಚಿ ಹಾಯಾಗಿ ಸುಖಮಯ ಜೀವನವನ್ನು ಕೆಲವು ಮಾಲೀಕರು ಸಾಗಿಸುವುದಕ್ಕೆ ಇದು ಆಸ್ಪದ ಮಾಡಿಕೊಡುವ ಭೀತಿಯಿದೆ.

ಹಾಗಾದರೆ ಈ ಹಣವನ್ನು ಯಾವ ರೂಪದಲ್ಲಿ ಕೊಡಬೇಕು? ಈಗ ರೂಢಿಯಲ್ಲಿರುವ ಪ್ರಾವಿಡೆಂಟ್ ಫಂಡ ಯೋಜನೆಯಿಂದ ನಟ–ನಟಿಯರಿಗೆ ಯಾವ ಪ್ರಯೋಜನವೂ ಇಲ್ಲ. ಇದ್ದರೂ ಸಹ ಅವರ ಇಂದಿನ ಸ್ಥಿತಿಗತಿ ಸುಧಾರಣೆಗೆ ಇದರಿಂದ ಯಾವ ಸಹಾಯವೂ ಆಗುತ್ತಿಲ್ಲ. ಒಂದು ಕಂಪನಿ ಬಿಟ್ಟ ನಟ ಆರು ತಿಂಗಳುಗಳ ವರೆಗಾದರೂ, ನಿರುದ್ಯೋಗಿಯಾಗಿದ್ದರೆ ಮಾತ್ರ ಅವನ ಹೆಸರಿನಲ್ಲಿ ಜಮಾ ಆದ ಪ್ರಾವಿಡೆಂಟ್ ಫಂಡ್ ಹಣ ಅವನಿಗೆ ಸಿಕ್ಕುತ್ತದೆ. ನಿರುದ್ಯೋಗದ ಆರು ತಿಂಗಳು ಅವನು ಜೀವಿಸಿರುವ ಬಗೆ ಹೇಗೆ?

ಸರಕಾರವು ಈಗ ಮನೆಯಿಲ್ಲದವರಿಗೆಲ್ಲ ಮನೆ ಕಟ್ಟಿಸಿಕೊಳ್ಳಲು ನಿವೇಶನಗಳನ್ನು ಹಂಚುತ್ತಿದೆ. ನಮ್ಮನ್ನು ಸಹ ಸರಕಾರವು ಹರಿಜನ, ಗಿರಿಜನರೆಂದೇ ಭಾವಿಸಿ ಅವರಿಗೆ ಕೊಡುವ ರೀತಿಯಲ್ಲಿಯೇ ರಂಗಭೂಮಿಯ ನಟ–ನಟಿಯರ ಸ್ವಂತ ಊರುಗಳಲ್ಲಿ ಅಥವಾ ಅವರು ಬಯಸಿದ ಊರುಗಳಲ್ಲಿ ಮನೆ ಕಟ್ಟಿಸಿಕೊಳ್ಳಲೆಂದು ಒಬ್ಬೊಬ್ಬರಿಗೆ ಒಂದೊಂದು ನಿವೇಶನವನ್ನು ಕೊಡಲಿ. ಆಮೇಲೆ ಮನೆ ಕಟ್ಟಿಕೊಳ್ಳಲು ಇತರರಿಗೆ ಅನ್ವಯವಾಗುವ ಕರಾರುಗಳಂತೆಯೇ ಅವರಿಗೂ ಸಾಲ ಕೊಡಲಿ. ಈ ಹಣವನ್ನು ನಟನಟಿಯರ ಸಂಬಳದಿಂದ ನೂರಕ್ಕೆ ಇಷ್ಟರಂತೆ ವಸೂಲು ಮಾಡಲಿ. ಅವರ ಸಂಬಳದಲ್ಲಿ ಹಿಡಿಯುವಷ್ಟು ಹಣದಷ್ಟೇ ಹಣವನ್ನು ಕಂಪನಿಯ ಮಾಲೀಕನೂ ಕೊಡಲಿ. ಈ ಹಣವನ್ನು ಕೊಟ್ಟ ಸಾಲಕ್ಕೆ ಜಮಾ ಮಾಡಿಕೊಳ್ಳಲಿ. ಯಾರಿಗೂ ಪ್ರಯೋಜನವಿಲ್ಲದ ಪ್ರಾವಿಡೆಂಟ್ ಫಂಡ್ ವ್ಯವಸ್ಥೆಯನ್ನು ರದ್ದು ಮಾಡಿ, ಅದರ ಬದಲು ಈ ವ್ಯವಸ್ಥೆಯನ್ನು ಮಾಡಲಿ. ಇದರಿಂದ ಆಗುವ ಪ್ರಯೋಜನವೆಂದರೆ ಮನೆ ಕಟ್ಟಿಸಿಕೊಳ್ಳಲೆಂದು ಸಾಲ ಪಡೆದಿರುವ ನಟ ನಟಿಯರು ಸಾಲ ಮುಟ್ಟಲೆಂಬ ಉದ್ದೇಶದಿಂದ ಸಾಲ ಮುಟ್ಟುವ ವರೆಗಾದರೂ ಒಂದೇ ಕಂಪನಿಯಲ್ಲಿ ಕಾಲೂರಿ ನಿಲ್ಲುತ್ತಾರೆ. ಆಗ ಕಂಪನಿಗೆ ಅಪ್ರತ್ಯಕ್ಷವಾಗಿ ಮತ್ತು ನಟ –ನಟಿಯರಿಗೆ ಪ್ರತ್ಯಕ್ಷವಾಗಿ ಭದ್ರತೆ ಉಂಟಾಗುತ್ತದೆ. ಮನುಷ್ಯನಿಗೆ ತನ್ನದೆಂಬ instinct ಬಹು ಪ್ರಾಮುಖ್ಯವಾದುದು. ತನ್ನದೂ ಒಂದು ಮನೆಯಾಗುವಂತಾದರೆ ಅವನು ಪರಮ ಸುಖಿ. "ಪರವಾ ಇಲ್ಲ. ನಾಟಕ ಕಂಪನಿ ಸೇರಿದರೂ ಸ್ವಂತ ಮನೆ ಮಾಡಿದ" ಎಂದು ಜನರೂ ಆತನಿಗೆ ಪ್ರೋತ್ಸಾಹಿಸುತ್ತಾರೆ. ಉಳಿದವರೂ ರಂಗಭೂಮಿಯನ್ನು ಪ್ರವೇಶಿಸಲು ಆಕರ್ಷಣೆಯುಂಟಾಗುತ್ತದೆ.

ಇದೂ ಅಲ್ಲದೆ, ಇನ್ನೂ ಒಂದು ಅಂಶವಿದೆ. ಒಂದು ಕಂಪನಿಗೆ ೫೦ ಸಾವಿರದಂತಾದರೆ, ೨೫ ಕಂಪನಿಗಳಿಗೆ ೧೦ ಲಕ್ಷ ರೂ. ಕೊಡಬೇಕಾಗುತ್ತದೆ. ೨೦ ಸಾವಿರವಾದರೆ ೪೦ ಕಂಪನಿಗಳಿಗೆ ಸಹಾಯ ಧನ ದೊರೆಯುತ್ತದೆ. ಇದೇ ೧೦ ಲಕ್ಷ ರೂ.ಯನ್ನು, ಒಂದು ಲಕ್ಷಕ್ಕೆ ಒಂದರಂತೆ ಹತ್ತು ನಾಟಕ ಗೃಹಗಳನ್ನು ಹತ್ತು ಊರುಗಳಲ್ಲಿ ಸರಕಾರವು ಕಟ್ಟಲಿ. ಹತ್ತು ವರ್ಷಗಳಲ್ಲಿ ನಮ್ಮ ರಾಜ್ಯದ ಒಂದು ನೂರು ಪ್ರಮುಖ ಊರುಗಳಲ್ಲಿ ಸರಕಾರದ ನಾಟಕ ಗೃಹಗಳ ನಿರ್ಮಾಣವಾಗುತ್ತದೆ. ಈ ನಾಟಕ ಗೃಹಗಳನ್ನು ನಾಟಕ ಪ್ರದರ್ಶನಕ್ಕೆಂದು ನಾಟಕ ಕಂಪನಿಗಳಿಗೆ ರಿಯಾಯಿತಿ ದರದಲ್ಲಿ ಕೊಡಲಿ. ಸರಕಾರಕ್ಕೆ ವರಮಾನವೂ ಬಂದಂತಾಗುತ್ತದೆ. ಕಂಪನಿಗಳಿಗೆ ಕಡಿಮೆ ದರದಲ್ಲಿ ನಾಟಕ ಗೃಹಗಳು ದೊರಕಿ ಎಷ್ಟೋ ಭಾರ ಕಡಿಮೆಯಾಗುತ್ತದೆ. ಇದರಿಂದ ರಂಗಭೂಮಿಗೆ ಶಾಶ್ವತ ಪರಿಹಾರ ದೊರೆಯುತ್ತದೆ.

ಈ ಮಾತನ್ನು ನಾನು ನನ್ನ ಸ್ವಾನುಭವದಿಂದ ಹೇಳುತ್ತಿದ್ದೇನೆ. ನಾಲ್ಕಾರು ಊರುಗಳಲ್ಲಿ ನನ್ನವೇ ನಾಟಕ ಗೃಹಗಳಿವೆ. ಬೇರೆ ಕಂಪನಿಯವರಿಗೆ ನಾನೇ ರಿಯಾಯಿತಿ ದರದಲ್ಲಿ ಈ ನಾಟಕ ಗೃಹಗಳನ್ನು ಬಾಡಿಗೆ

ಕೊಡುತ್ತಿದ್ದೇನೆ. ನಾನು ಮಾಡುತ್ತಿರುವುದನ್ನೇ ಸರಕಾರವೂ ಮಾಡಲಿ ಎಂದು ಹೇಳುತ್ತಿದ್ದೇನಷ್ಟೆ. ಓರ್ವ ವ್ಯಕ್ತಿ ಇಷ್ಟು ಮಾಡಬಹುದಾದರೆ ಸರ್ವಶಕ್ತ ಸರಕಾರವೇ ಇದಕ್ಕೆ ಕೈ ಹಾಕಿದರೆ ಏನೇನೆಲ್ಲ ಮಾಡಬಹುದು?

ಈಗಿನ ಪರಿಸ್ಥಿತಿಯಲ್ಲಿ ಒಂದು ತಾತ್ಕಾಲಿಕ ನಾಟಕ ಗೃಹ ಹಾಕಬೇಕಾದರೆ, ಕನಿಷ ೫ ಸಾವಿರ ರೂ. ಬೇಕು. ಅದನು ಕೀಳುವುದಕ್ಕೆ ೨ ಸಾವಿರ ರೂ. ಮತ್ತು ಸಾಮಾನು-ಸರಂಜಾಮು ಸಾಗಿಸಲು ೨ ಸಾವಿರ ರೂ. ಹೀಗೆ ಒಟ್ಟು ೯ ಸಾವಿರ ರೂ. ಖರ್ಚು ಬರುತ್ತದೆ. ಇಷ್ಟೆಲ್ಲ ಒಂದು ತಿಂಗಳಿನ ಕ್ಯಾಂಪಿನ ಮಟ್ಟಿಗೆ. ಅಂದರೆ ದಿನಕ್ಕೆ ೩೦೦ ರೂ. ಬಾಡಿಗೆಯಾಯಿತು. ಇದಕ್ಕೆ ನಟನಟಿಯರ ಸಂಬಳ, ವಿದ್ಯುಚ್ಛಕ್ತಿ ಹಾಗೂ ಇತರ ನಿರ್ವಹಣಾ ವೆಚ್ಚವನ್ನು ಕಳೆದು ಮಾಲೀಕನಿಗೆ ಲಾಭವಾಗಬೇಕೆಂದರೆ ಅವನಿಗೆ ಒಂದು ದಿನಕ್ಕೆ ಎಷ್ಟು ಕಲೆಕ್ಷನ್ ಆಗಬೇಕೆಂದಾಯಿತು? ಅಷ್ಟು ಹಣ ಕಲೆಕ್ಷನ್ ಆಗದೆ, ಎಷ್ಟೋ ದಿನ ಆತ ನಷ್ಟವನ್ನನುಭವಿಸಬೇಕಾಗುತ್ತದೆ. ಒಂದು ಊರಿನ ಕ್ಯಾಂಪು ಮುಗಿಯುವ ಹೊತ್ತಿಗೆ ಅವನ ಸಾಲದ ಹೊರೆ ಮತ್ತಿಷ್ಟು ಹೆಚ್ಚಿಗೆ ಆಗಿರುತ್ತದೆ.

ಅವನಿಗೆ ಕಡಿಮೆ ಬಾಡಿಗೆ ದರದಲ್ಲಿ ನಾಟಕ ಗೃಹ ದೊರೆಯುವಂತಾದರೆ, ಅವನ ಆರ್ಥಿಕ ಸ್ಥಿತಿಗತಿ ದಿನದಿನಕ್ಕೆ ಖಂಡಿತವಾಗಿಯೂ ಸುಧಾರಿಸುತ್ತದೆ. ಅಥವಾ ಒಂದು ಸಮಯ, ದುರದೃಷ್ಟದಿಂದ ಅವನಿಗೆ ಹಾನಿಯೇ ಆಯಿತೆಂದುಕೊಂಡರೂ, ಹಾನಿಯ ಪ್ರಮಾಣವನು ಕನಿಷ್ಟಕ್ಕೆ ಇಳಿಸಿದಂತಾಗುತ್ತದೆ. ಸಾಮಾನು ಸರಂಜಾಮುಗಳನು ಹೊತ್ತುಕೊಂಡು ತಿರುಗುವುದು ತಪ್ಪುತ್ತದೆ.

ಈ ವೃತ್ತಿಯಲ್ಲಿರುವ ನಮ್ಮಂಥವರಿಗೆ ಸರಕಾರವು ಕೇಳಲಿ. ನಾವು ಪ್ರಾಶಸ್ತ್ಯದ ಮೇಲೆ ಯಾವ ಯಾವ ಊರುಗಳಲ್ಲಿ ನಾಟಕ ಗೃಹಗಳನ್ನು ಕಟ್ಟಬೇಕೆಂಬುದನ್ನು ಸೂಚಿಸುತ್ತೇವೆ. ಇದೊಂದು ದೂರದರ್ಶಿ ಕಾರ್ಯಕ್ರಮ; ಶಾಶ್ವತ ಪರಿಹಾರ ನೀಡುವಂಥಾದ್ದು. ಸಹಾಯ ಧನವನ್ನು ಕೊಡುವ ಬಗ್ಗೆ ಅಂತಿಮ ನಿರ್ಧಾರವನು ತೆಗೆದುಕೊಳ್ಳುವ ಮೊದಲು ನಾನು ಸೂಚಿಸಿದ ನಾಟಕ ಗೃಹಗಳ ನಿರ್ಮಾಣ ಮತ್ತು ನಟ-ನಟಿಯರಿಗೆ ಮನೆಗಳ ನಿರ್ಮಾಣದ ಸೂಚನೆಗಳನ್ನು ಪರಿಶೀಲಿಸಬೇಕೆಂದು ಸರಕಾರವನ್ನು ಆಗ್ರಹಪೂರ್ವಕವಾಗಿ ಕೇಳಿಕೊಳ್ಳುತ್ತೇನೆ.




## ಲೈಸೆನ್ಸಿಂಗ್ ಪದ್ಧತಿ

ಲೈಸೆನ್ಸಿಂಗ್ ಪದ್ಧತಿಯ ಬಗ್ಗೆ ಒಂದೆರಡು ಮಾತುಗಳನು ಹೇಳಬಯಸುತ್ತೇನೆ. ಈ ಪದ್ಧತಿ ಈಗಿರುವ ರೂಪದಲ್ಲಿ ಅತ್ಯಂತ ಉಪದ್ರವಿಯಾಗಿದೆ. ಒಂದು ಊರಿನಲ್ಲಿ ಲೈಸನ್ ಪಡೆಯಬೇಕಾದರೆ, ನಾಟಕ ಕಂಪನಿಯ ಮಾಲೀಕ ನಗರಸಭೆ, ತಹಸೀಲದಾರ, ಪೋಲೀಸ ಇಲಾಖೆ, ಆರೋಗ್ಯ ಇಲಾಖೆ. ಲೋಕೋಪಯೋಗಿ ಇಲಾಖೆಗಳಿಂದ "ಲೈನ್ ಕ್ಲಿಯರ್" ಎಂದು ಹೇಳಿಸಿಕೊಳ್ಳಬೇಕು. ಇಷ್ಟೆಲ್ಲಾ ಹಗರಣ ಯಾಕೆ? ತಹಸೀಲದಾರರೊಬ್ಬರಿಗೆ ಅರ್ಜಿ ಕೊಟ್ಟರೆ ಸಾಲದೆ? ಶಾಂತಿ ಪಾಲನೆಯ ಹೊಣೆ ಹೊತ್ತಿರುವ ಪೋಲೀಸ್ ಇಲಾಖೆಯನ್ನು ಅವರು ವಿಚಾರಿಸಿ, ಲೈಸನ್ಸನ್ನು ತಕ್ಷಣ ನೀಡುವ ವ್ಯವಸ್ಥೆಯಾಗಬೇಕು. ಅಥವಾ ಈ ಅಧಿಕಾರವನ್ನು ಡೆಪ್ಯುಟಿ ಕಮೀಶನರರಿಗೆ ವಹಿಸಿ ಕೊಟ್ಟರೂ ನಡೆದೀತು. ಒಂದು ಜಿಲ್ಲೆಯ ಮಟ್ಟಿಗೆ ಆ ಜಿಲ್ಲೆಯ ಡೆಪ್ಯುಟಿ ಕಮೀಶನರ್ ಕೊಟ್ಟ ಲೈಸನ್ ನಡೆಯುವಂತಾಗಬೇಕು. ಒಂದು ಚಿಕ್ಕ ಕೆಲಸಕ್ಕೆ ನಾಟಕ ಕಂಪನಿಯ ಮಾಲೀಕ ಸಂಬಂಧವಿಲ್ಲದವರ ಬಳಿಗೆಲ್ಲ ಅಲೆಯುವಂತಾಗಬಾರದು.

## ಕೊನೆಯ ಮಾತು

ಕೊನೆಯದಾಗಿ ನಾಟಕ ವೃತ್ತಿಯಲ್ಲಿರುವವರ ಬಗ್ಗೆ ಸಾರ್ವಜನಿಕರಲ್ಲಿ ಒಂದು ವಿಜ್ಞಾಪನೆ. ಪರಿಪೂರ್ಣನಾದ ಮಾನವನಿಲ್ಲ. ಎಲ್ಲರಲ್ಲಿಯೂ ಒಂದೊಂದ ದೋಷವಿದ್ದೇ ಇರುತ್ತದೆ. ನಡೆಯುವವನು ಎಡವುವದು ಸ್ವಾಭಾವಿಕ. ಇಂದು ಸಮಾಜಘಾತುಕರಾದ ಚಂಬಲ ಕಣಿವೆಯ ದರೋಡೆಕೋರರನು ಸುಧಾರಿಸುವ ಪ್ರಯತ್ನ ಯಶಸ್ವಿಯಾಗಿದೆ. ಅಂಥವರೂ ಕೂಡ ದಾರಿಗೆ ಬಂದಿದ್ದಾರೆ. ನಾಟಕದವರಲ್ಲಿ ಯಾವುದೇ ದೋಷವಿದ್ದರೂ, ಅವರನ್ನು ಸುಧಾರಿಸುವುದು ಸಮಾಜದ ಅಳವಿನಲ್ಲಿದೆ. ಅದು ಅಸಾಧ್ಯವಾದುದೇನಲ್ಲ. ಅವರೇನು ದರೋಡೆಗಾರರಷ್ಟು ಭಯಂಕರರಲ್ಲ. ನಮ್ಮ ಲೋಪ-ದೋಷಗಳನ್ನು ಎತ್ತಿ ತೋರಿಸಿ, ಸುಧಾರಿಸಿಕೊಳ್ಳುವಂತೆ ಅವಕಾಶ ಕಲ್ಪಿಸಿ ಕೊಡಬೇಕು. ಇದ್ದದ್ದು ಇದ್ದಂತೆ ಇರಲಿ, ಎಂದು ಅಂದುಕೊಳ್ಳುವುದರಿಂದ ಇದ್ದ ದೋಷ ಮತ್ತಿಷ್ಟು ಬೇರು ಬಿಟ್ಟು ಭದ್ರವಾಗುತ್ತದೆ. ಅದರಿಂದ ಸಮಸ್ಯೆಯ ಪರಿಹಾರವಾದಂತಾಗುವುದಿಲ್ಲ. ನಾಟಕ ವೃತ್ತಿಯವರನ್ನು ಕಡೆಗಣಿಸಿ ನೋಡುವುದರಿಂದ, ಅವರು ಸಮಾಜದೊಡನೆ ಬೆರೆತು ನಡೆಯುವುದರಿಂದ ದೂರ ಉಳಿಯುತ್ತಾರೆ. ಅವರಿಬ್ಬರ ಮಧ್ಯ ಅಂತರವೇರ್ಪಡುತ್ತದೆ. ಈ ಅಂತರವೇರ್ಪಡದಂತೆ, ಹೆಚ್ಚು ಹೆಚ್ಚು ಸಾಮರಸ್ಯವುಂಟಾಗುವಂತೆ, ಅನ್ಯೋನ್ಯತೆ ಬೆಳೆಯುವಂತೆ ಸೌಹಾರ್ದಮಯ ವಾತಾವರಣ ನಿರ್ಮಾಣಗೊಳ್ಳಬೇಕು. ಈ ದಿಸೆಯಲ್ಲಿ ಸಮಾಜವೂ ಮುಂದುವರಿಯುವುದವಶ್ಯವಿದೆ. ನಾಟಕ ವೃತ್ತಿಯವರು ಸಮಾಜದ ಋಣವನು ತೀರಿಸಬೇಕಾಗಿರುವಂತೆಯೇ ಸಮಾಜವೂ ತನ್ನ ಪಾಲಿನ ಕರ್ತವ್ಯವನು ಮಾಡಲಿ ಎಂದು ನಮ್ರವಾಗಿ ಪ್ರಾರ್ಥಿಸಿಕೊಳ್ಳುತ್ತೇನೆ. ●










# ರಂಗಲಾಸ್ಯ

-ಕೆ. ಆರ್. ಸ್ವಾಮಿ






ನಮ್ಮದು 'ಸರಸ್ವತಿ ಕೃಪಾಪೋಷಿತ ನಾಟಕ ಮಂಡಳಿ' ಸಾರ್— ಲಕ್ಷ್ಮೀ ಕಟಾಕ್ಷ ನಮ್ಮಮೇಲಿಲ್ಲ



ಪ್ರೇಕ್ಷಕರು ದಯವಿಟ್ಟು ಸಾವಧಾನಿಸಬೇಕು. ಕರೆಂಟ್ ಬಂದಕೂಡಲೇ ರಾಜಾವಿಕ್ರಮನು ತನ್ನ 'ದೀಪಕರಾಗ'ವನ್ನು ಮುಂದುವರಿಸುತ್ತಾನೆ.




ನಾನೇ ಕಂಪನಿ ಮಾಲೀಕ, ನಾಟಕದ ಹೀರೋ, ಎಲ್ಲಾ.. ಟಿಕೆಟ್ ಹಂಚಿಕೆ ಮುಗಿದಕೂಡ್ಲೇ ಬಣ್ಣ ಹಾಕಿಬಿಡ್ತೀನಿ.-




ಈ ಪ್ರಸಿದ್ಧ ಸಿನಿಮಾ ನಟಿ ಪ್ರತಿದಿನ 5 ನಿಮಿಷಗಳ ಕಾಲ ನಮ್ಮ ನಾಟಕಕ್ಕೆ ಬಂದು ಹೋಗುವಂತೆ ಮಾಡಿದ್ದೇವೆ. ಈಗ ಕಲೆಕ್ಷನ್ ಫುಲ್.

★ ಎಸ್. ಎಸ್. ಬ್ಯಾತನಾಳ

# ಭಾರತೀಯ ರಂಗಭೂಮಿ

## ಸಂಸ್ಕೃತ ರಂಗಭೂಮಿ

ಭಾರತೀಯ ರಂಗಭೂಮಿಯ ಹುಟ್ಟು ಸಂಸ್ಕೃತ ರಂಗಭೂಮಿಯಲ್ಲಿ. ಸಂಸ್ಕೃತ ರಂಗಭೂಮಿ ಎಂದು ಹುಟ್ಟಿತು? ಇದೊಂದು ಕಗ್ಗಂಟು. ಸಂಸ್ಕೃತ ರಂಗಭೂಮಿಯ ಉಗಮ: ವೈದಿಕ ಧರ್ಮದಲ್ಲಿ; ಯಜ್ಞಾದಿಗಳ ಆಚರಣೆಯ ಕ್ರಮದಲ್ಲಿ. ಪ್ರಾಕೃತದಲ್ಲಿ; ಗ್ರೀಕ ಸಂಪರ್ಕ ಬಂದ ನಂತರ –ಹೀಗೆ ಹಲವು ವಾದಗಳಿವೆ. ಪಂಡಿತರಲ್ಲಿ, ವಿಮರ್ಶಕರಲ್ಲಿ ಭಿನ್ನಾಭಿಪ್ರಾಯವಿರುವುದು ಸ್ವಾಭಾವಿಕ. ಸಂಸ್ಕೃತ ರಂಗಭೂಮಿ ಪ್ರಾಚೀನವಾದುದು ಎಂಬುದು ಮಾತ್ರ ನಿಜ.

ತ್ರೇತಾಯುಗದ ಕಾಲ. ಇಂದ್ರಾದಿ ದೇವತೆಗಳು ದೃಶ್ಯ ಮತ್ತು ಶ್ರಾವ್ಯವಾದ ಕ್ರೀಡನೀಯ ವಸ್ತುವನ್ನು ನೀಡೆಂದು ಬ್ರಹ್ಮನನ್ನು ಕೇಳಿದರು. ಬ್ರಹ್ಮ, ಋಗ್ವೇದದಿಂದ ಪಾಠ, ಸಾಮದಿಂದ ಗೀತ, ಯಜುವಿನಿಂದ ಅಭಿನಯ, ಅಥರ್ವಣದಿಂದ ರಸಗಳನ್ನು ಎತ್ತಿಕೊಂಡು 'ನಾಟ್ಯವೇದ'ವನು ನಿರ್ಮಿಸಿದನು. ನಾಟ್ಯವೇದದ ಹುಟ್ಟಿನ ಬಗೆಗೆ ಇದೊಂದು ಕತೆಯುಂಟು.

ಭರತಮುನಿಯ ನಾಟ್ಯಶಾಸ್ತ್ರ ನಮಗೆ ನಾಟಕ ವಿಷಯವಾಗಿ ದೊರಕಿರುವ ತೀರ ಹಳೆಯ ಗ್ರಂಥ. ಆ ಮೊದಲು ಬೇರೆ ನಾಟ್ಯಶಾಸ್ತ್ರಗಳಿರಲಿಲ್ಲವೇ? ಶಾಸ್ತ್ರ ಹುಟ್ಟುವ ಮೊದಲು ರಂಗಭೂಮಿ ಇರಲಿಲ್ಲವೇ? ಇವೂ ಪ್ರಶ್ನೆಗಳಾಗಿಯೇ ಉಳಿದಿವೆ.

ನಾಟಕ ನೋಡುವ, ಕೇಳುವ ಮನೋರಂಜನೆಯ ಉತ್ತಮ ಸಾಧನೆ. ನೋಡಲು ಅಭಿನಯವಿದೆ; ಕುಣಿತವಿದೆ; ವೇಷ–ಭೂಷಣಗಳ ಅಲಂಕಾರವಿದೆ. ಕೇಳಲು ಗೀತವಿದೆ; ಸಂಭಾಷಣೆಯಿದೆ. ಮಾನವ ಸ್ವಭಾವ ನಿರೂಪಣೆಗೆ ನಾಟಕ ಅತ್ಯುತ್ತಮ ಮಾಧ್ಯಮ.

ರಂಗಭೂಮಿಯ ಸಜ್ಜಿಕೆಯ ವಿಷಯವಾಗಿ ಭರತ, ಅನೇಕ ವಿವರಗಳನ್ನು ಹೇಳಿದ್ದಾನೆ. ರಂಗಭೂಮಿಯ ಆಕಾರ ಮೂರು ಬಗೆ: ವಿಕ್ರಸ್ತ (ಚೌಕೋನಾಕಾರ), ಚತುರಸ್ರ (ಚೌರಸ), ತ್ರ್ಯಸ್ರ (ತ್ರಿಕೋನಾಕಾರ). ಆಕಾರ ಮೂರಾದರೆ ಅವುಗಳ ಅಳತೆಗಳೂ ಮೂರು ಪ್ರಕಾರದವು.

| ಜ್ಯೇಷ್ಠ : | ಮಧ್ಯಮ: | ಕನಿಷ್ಠ: |
|---|---|---|
| ೧೦೮ ಹಸ್ತ | ೬೪ ಹಸ್ತ | ೩೨ ಹಸ್ತ |
| (೫೪ ಯಾರ್ಡ); | (೩೨ ಯಾರ್ಡು); | (೧೬ ಯಾರ್ಡ), |

ರಂಗಭೂಮಿಯ ವಿಭಾಗಗಳಿಗೂ ಒಂದು ಕ್ರಮ ಉಂಟು. ಉದಾಹರಣೆಗಾಗಿ ಚೌಕೋನಾಕಾರದ ಮಧ್ಯಮ ಅಳತೆಯ ರಂಗಭೂಮಿಯನ್ನು ತೆಗೆದುಕೊಳ್ಳಬಹುದು. ಇದರ ಒಟ್ಟು ಅಳತೆ ೬೪ × ೩೨ ಹಸ್ತ. ಇದರಲ್ಲಿ ೩೨ × ೩೨ರ ಎರಡು ಭಾಗಗಳು. ಮುಂದಿನ ಚೌರಸವು ಪ್ರೇಕ್ಷಕರಿಗಾಗಿ. ಇನ್ನೊಂದರಲ್ಲಿ ೧೬ × ೩೨ರ ಎರಡು ಭಾಗಗಳು. ಅವುಗಳಲ್ಲಿ ಮುಂದಿನಭಾಗದಲ್ಲಿ ೮ × ೩೨ರ ಎರಡು ಭಾಗಗಳು. ಹಿಂದಿನಭಾಗ ರಂಗಶೀರ್ಷ. ೮ × ೩೨ರ ಅಳತೆಯ ರಂಗಪೀಠ. ಇದರ ಎರಡೂ ಬದಿಗೆ ೮ ಹಸ್ತ ಅಳತೆಯ ಪೌಳಿ. ರಂಗಶೀರ್ಷದ ಹಿಂಭಾಗ ನೇಪಥ್ಯ ಗೃಹ. ರಂಗಪೀಠಕ್ಕಿಂತ ಎತ್ತರ ಕಡಿಮೆ. ನೇಪಥ್ಯ ಗೃಹ ಪ್ರವೇಶಕ್ಕೆ ಎರಡು ಬಾಗಿಲುಗಳು ಪ್ರೇಕ್ಷಕರ ಪ್ರವೇಶಕೆ ಮೂರು ದಿಕ್ಕುಗಳಲ್ಲಿಯೂ ಬಾಗಿಲುಗಳು.

ನಾಟ್ಯ ಸಭಾಗೃಹ ಕಟ್ಟುವ ಭೂಮಿಯನ್ನು ಹಸನುಗೊಳಿಸಬೇಕು. ನಾಲ್ಕು ವರ್ಣಗಳ ಸಂಕೇತವಾಗಿ ನಾಲ್ಕು ಕಂಬಗಳು. ಗೋಡೆಗಳಿಗೆ ಸುಣ್ಣ ಹಚ್ಚಿ, ವರ್ಣಚಿತ್ರಗಳಿಂದ ಚೆಂದಗೊಳಿಸಬೇಕು. ಸಭಾಗೃಹದಲ್ಲಿ ಕಟ್ಟಿಗೆಯ ಕೆತ್ತನೆ, ಕೆಲಸದ ಬಳ್ಳಿ, ಪ್ರಾಣಿ, ಪಕ್ಷಿ ಮೊದಲಾದ ಚಿತ್ರಗಳು. ಸಂಸ್ಕೃತ ರಂಗಭೂಮಿ ಉತ್ಸವ ಸ್ವರೂಪದ್ದು. ನಾಟ್ಯಗೃಹ ಕಟ್ಟಿದ ಮೇಲೆ ಅದರಲ್ಲಿ ಹೋಮ ಮಾಡಿ ಆಹುತಿಯಿತ್ತು, ನಾಟ್ಯಾಚಾರ್ಯನು ಕುಂಭವನ್ನು ಒಡೆಯುತ್ತಿದ್ದನು. ದೀಪ ಹಚ್ಚಿ ನಾಟ್ಯ ಗೃಹವನ್ನು ಪ್ರಕಾಶಮಾಗಿಸುತ್ತಿದ್ದನು. ನಂತರ ಘಂಟಾನಾದ, ಶಂಖ, ದುಂದುಭಿ, ಮೃದಂಗ ಮೊದಲಾದ ಮಂಗಲವಾದ್ಯಗಳನ್ನು ಬಾರಿಸುತ್ತಿರುವಾಗ ರಂಗದೇವತೆಯ ಪೂಜೆ. ಇದೆಲ್ಲವೂ ಪೂರ್ವರಂಗ ಸಿದ್ಧತೆಯೆನ್ನಬಹುದು.

ರಂಗಪೀಠ ಆಮೆಯ ಬೆನ್ನಿನಂತೆ. ಮಧ್ಯದಲ್ಲಿ ಸ್ವಲ್ಪ ಎತ್ತರ; ಬದಿಗಳಿಗೆ ಸ್ವಲ್ಪ ಇಳಿ. ಕನ್ನಡಿಯಂತೆ ಸ್ವಚ್ಛವಾಗಿರಬೇಕು. ರಂಗಭೂಮಿ ಒಂದು ಗುಹೆಯಂತೆ ಇದ್ದು, ದೊಡ್ಡ ಬಾಗಿಲು ಕಿಡಕಿಗಳಿರಬಾರದು. ಇದರಿಂದ ಧ್ವನಿ ಸಂಯೋಜನೆಗೆ ಅನುಕೂಲ. ಪ್ರೇಕ್ಷಕರು ಕೂಡಲು ನೆಲದಿಂದ ಸುಮಾರು ಒಂದೂವರೆ ಫೂಟು ಎತ್ತರದ ಕಟ್ಟಿಗೆ ಇಲ್ಲವೆ ಇಟ್ಟಿಗೆಯ ಆಸನಗಳು. ಆಸನಗಳು ಸೋಪಾನಗಳಂತೆ (ಗ್ಯಾಲರಿ) ಇರಬೇಕು.

ರಂಗಭೂಮಿಯ ಹಿಂಬದಿಯಲ್ಲಿ ಒಂದು ಚಿತ್ರಿತ ಪರದೆ. ಇದರ ಬಣ್ಣ, ನಾಟಕದ ರಸಕ್ಕೆ ಸಾಮಾನ್ಯವಾಗಿ ಹೊಂದಿಕೆಯಾಗಿರುತ್ತಿತ್ತು. ಪಾತ್ರಗಳ ವೇಷ ಭೂಷಣಗಳಿಗೆ ವಿಶೇಷ ಗಮನ ಕೊಡುತ್ತಿದ್ದರು. ರಾಜ, ಪ್ರೇಮಿಗಳಿಗೆ ಆಕರ್ಷಕ ರಂಗು ರಂಗಿನ ವೇಷ. ಆಶ್ರಮವಾಸಿಗಳಿಗೆ ನಾರು ಬಟ್ಟೆ, ಅಂತಃಪುರದ ಕೆಲಸಗಾರರಿಗೆ ಕೆಂಪು ಜಾಕೀಟು. ಹೊಲಸು ಬಟ್ಟೆ ಹುಚ್ಚನ ಲಕ್ಷಣ. ಬಿಳಿ ಬಟ್ಟೆ ತಪಸ್ಸು, ಪೂಜೆಗಳ ಸಂಕೇತ. ಸೇವಕರಿಗೆ ಕಪ್ಪು–ನೀಲಿ ಬಟ್ಟೆ ಇತ್ಯಾದಿ.

ಸಂಸ್ಕೃತ ನಾಟಕಗಳು ಸಾಮಾನ್ಯವಾಗಿ ಅರಮನೆಯ ಆವರಣದಲ್ಲಿಯ ನಾಟ್ಯ ಮಂದಿರಗಳಲ್ಲಿ ಅಥವಾ ದೇವಾಲಯಗಳಲ್ಲಿ ನಡೆಯುತ್ತಿದ್ದವು. ಅರಸ ಇಲ್ಲವೆ ಶ್ರೀಮಂತ ಪೋಷಕನಾಗಿರುತ್ತಿದ್ದನು. ಪಟ್ಟಾಭಿಷೇಕ ವಿಜಯೋತ್ಸವ, ಮದುವೆ ಮೊದಲಾದ ಮಂಗಲ ಕಾರ್ಯಗಳು, ಮಗನ ಜನನ, ಜಾತ್ರೆ ಮೊದಲಾದ ಸಂದರ್ಭಗಳಲ್ಲಿ ನಾಟಕಗಳನ್ನಾಡುವುದು ಆ ಕಾಲದ ರೂಢಿ.

ನಾಟಕ ಪ್ರಾರಂಭದಲ್ಲಿ ಪ್ರಾರ್ಥನೆ. ಇಬ್ಬರು ಸ್ತ್ರೀಯರು ಪರದೆಯ ಹಿಂಬದಿಗೆ ಸರಿಸುವರು. ಸೂತ್ರಧಾರ–ನಟಿಯರ ಪ್ರವೇಶ. ನಾಟಕಕಾರ ಮತ್ತು ಕಥಾನಕಗಳ ಪರಿಚಯ. ವಿದೂಷಕನ ಪ್ರವೇಶ. ನಂತರ ಮುಖ

ಕನ್ನಡ ರಂಗಭೂಮಿಯ ಜೊತೆಗೆ ಇತರ ಭಾರತೀಯ ಭಾಷೆಗಳ ರಂಗಭೂಮಿಯ ಪರಿಚಯ ಸ್ಥೂಲವಾಗಿಯಾದರೂ ನಮ್ಮ ಓದುಗರಿಗೆ ಅವಶ್ಯ. ಆ ದೃಷ್ಟಿಯಿಂದ ಹಿರಿದಾದ ವಿಷಯವಾಗಿದ್ದರೂ ಅದನ್ನು ವಿವೇಚಿಸಲು ಅವಕಾಶ ಕಡಿಮೆ ಇದ್ದರೂ ಸ್ಥೂಲವಾಗಿ ಯಾವೊಂದು ಭಾಷೆಯನ್ನು ಬಿಡದೇ ಭಾರತೀಯ ರಂಗಭೂಮಿಯ ಕಿರಿದರಲ್ಲಿಯೇ ಸಾದ್ಯಂತ ವಿವರಣೆಯನ್ನು ಲೇಖಕರು ಇಲ್ಲಿ ನಿರೂಪಿಸಲು ಮುಂದಾಗಿರುವರು. ಅಲ್ಲದೇ ಭಾರತೀಯ ರಂಗಭೂಮಿಯ ಲಕ್ಷಣಗಳು ಮತ್ತು ಸಮಸ್ಯೆಗಳನ್ನು ಸ್ಥೂಲವಾಗಿ ಚರ್ಚಿಸಿರುವರು.

ನಾಟಕ ಪ್ರಾರಂಭ. ಸಂಸ್ಕೃತ ರಂಗಭೂಮಿ ವ್ಯವಸ್ಥಿತ ವಾದ ಒಂದು ಕ್ರಮದಲ್ಲಿ ಬೆಳೆದು ಬಂದಿತು; ಪಾತ್ರಗಳು ಸಾಮಾನ್ಯವಾಗಿ ಪರದೆಯ ಬದಿಗಳಿಂದ ರಂಗಭೂಮಿಗೆ ಪ್ರವೇಶಿಸುವುದು ಕ್ರಮವಾಗಿದ್ದಿತು. ಸೂತ್ರಧಾರನೇ ರಂಗಮಂಚದ ವ್ಯವಸ್ಥಾಪಕ. ನಟಿ, ಸೂತ್ರಧಾರನ ಹೆಂಡತಿ. ನಾಟಕದಲ್ಲಿ ಜೊತೆಯ ನಟಿ ಸಹಾಯಕಳು. ಪಾತ್ರಗಳಿಗೆ ಹಿಂದೆ ನಿಂತು ಸಂಭಾಷಣೆ ನೆನಪಿಸುವ ಪದ್ಧತಿಯಿಲ್ಲ. ಸಂಭಾಷಣೆಗಿಂತ ಸಂಗೀತ, ಅಭಿನಯಗಳಿಗೆ ಹೆಚ್ಚು ಮಹತ್ವ. ಸಂದರ್ಭವರಿತು ಅಭಿನಯಿಸುವ ಕುಶಲ ಬುದ್ಧಿ, ಚುರುಕುತನಗಳು ನಟ-ನಟಿಯರ ಆಯ್ಕೆಯ ಮುಖ್ಯ ಮಾಪನಗಳು. ನೇಪಥ್ಯಗೃಹದಲ್ಲಿಯೂ ಆಕಾಶವಾಣಿ, ದೇವವಾಣಿ, ಪ್ರಾಣಿ, ಪಕ್ಷಿಗಳ ಧ್ವನಿಗಳನ್ನು ಹೊರಡಿಸುವಂತೆ ಸ್ವರಸಂಯೋಜನೆಯ ವ್ಯವಸ್ಥೆಯಿರುತ್ತಿತ್ತು. ದೃಶ್ಯ ಬದಲಾವಣೆಗೆ ಪರದೆಯ ಉಪಯೋಗವಾಗುತ್ತಿತ್ತು.

ಪ್ರೇಕ್ಷಕ ವರ್ಗವೂ ಸುಸಂಸ್ಕೃತವಾದುದು. ಅವರಿಗೆ ಅನುಭವ ಬಲ; ವಿಮರ್ಶಾ ಶಕ್ತಿಗಳಿರುತ್ತಿದ್ದವು. ಪ್ರೇಕ್ಷಕ ಗೃಹದಲ್ಲಿ ಸಭಾಪತಿಗೆ ಸಿಂಹಾಸನ. ಸಭಾಪತಿ ಅರಸ ಇಲ್ಲವೆ ಹಣವಿತ್ತ ಶ್ರೀಮಂತ. ಅವನ ಎಡಕ್ಕೆ ಅವನ ಸ್ತ್ರೀಯರು. ಬಲಕ್ಕೆ ಗಣ್ಯ ವ್ಯಕ್ತಿಗಳು. ಸಭಾಪತಿಯ ಹಿಂದೆ ಅಧಿಕಾರಿ ವರ್ಗ; ಅವರ ಬಳಿ ಕವಿಗಳು, ಸಾಮಾನ್ಯ ಅಧಿಕಾರಿಗಳು, ಧಾರ್ಮಿಕ ವ್ಯಕ್ತಿಗಳು; ಎಡ ಬದಿಯಲ್ಲಿ ಮಂತ್ರಿಗಳು. ಅಭಿನಯದಿಂದಲೇ ಸನ್ನಿವೇಶದ ಅರ್ಥ ಗ್ರಹಿಸುವ ಬುದ್ಧಿ ಶಕ್ತಿ ಇದ್ದಿತು.

ಸಾಮಾನ್ಯ ಜನರಿಗೆ ಸಂಸ್ಕೃತ ನಾಟಕಗಳನ್ನು ನೋಡುವ ಅವಕಾಶ ಹೆಚ್ಚಿರಲಿಲ್ಲ.

ಗಂಡಸರು, ಹೆಣ್ಣುಪಾತ್ರ; ಹೆಂಗಸರು ಗಂಡು ಪಾತ್ರ ಹಾಕುತ್ತಿದ್ದ ಸಂದರ್ಭಗಳೂ ಇದ್ದವು. ನಾಟಕದಲ್ಲಿ ಪಾತ್ರ ಧರಿಸುವುದು ಕೀಳೆಂಬ ಭಾವನೆಯಿರಲಿಲ್ಲ.

ಸಂಸ್ಕೃತ ನಾಟಕಗಳಲ್ಲಿ ವಾಸ್ತವತೆಗಿಂತ ಅದ್ಭುತಕ್ಕೆ ಭಾವನಾಪ್ರಧಾನವಾದುದಕೆ ಪ್ರಾಮುಖ್ಯತೆಯಿತ್ತು.

ನಾಟಕ ಆಡುವವರು ಸಾಮಾನುಗಳ ಸರಬರಾಜಿಗಾಗಿ ಹೆಚ್ಚು ಹಣ ವೆಚ್ಚ ಮಾಡುತ್ತಿರಲಿಲ್ಲ. ತಮಗೆ ಬೇಕಾಗಬಹುದಾದ ರಥ, ಆನೆ, ಕುದುರೆ, ಗೊಂಬೆ, ಮೊದಲಾದುವನ್ನು ಬಿದಿರಿಗೆ ಅರಿವೆ ಸುತ್ತಿ ಅಥವಾ ಬರಿಯ ಅರಿವೆಯಿಂದ ಮಾಡಿಕೊಳ್ಳುತ್ತಿದ್ದರು. ಆಯುಧಗಳೂ ಬಿದಿರಿನವೇ. ಪಾತ್ರಗಳಿಗೆ ಕೈಬಳೆ ಶಿರೋಭೂಷಣ ಮೊದಲಾದ ಅಲಂಕಾರಗಳು ಇರುತ್ತಿದ್ದವು. ಪಾತ್ರಗಳಿಗೆ ನಾಟಕದ ಕಥಾವಸ್ತುವಿಗೆ ಅಂದರೆ ಪ್ರಧಾನ ಭಾವನೆಗೆ ಸರಿಹೊಂದುವ ಬಣ್ಣಗಳನ್ನೇ ಹಚ್ಚುವ ಸಂಪ್ರದಾಯ. ಕೆಂಪು, ಹಳದಿ, ಕಪ್ಪು, ನೀಲಿ, ಬಿಳಿ ಇವು ಮುಖ್ಯ ಬಣ್ಣಗಳು. ಇವುಗಳ ಮಿಶ್ರಣಗಳಿಂದ ಬೇರೆ ಬೇರೆ ಬಣ್ಣ ತಯಾರಿಸಿಕೊಳ್ಳುತ್ತಿದ್ದರು.

ಸಂಸ್ಕೃತ ರಂಗಭೂಮಿಯ ಸಾಮಾನ್ಯ ಸ್ವರೂಪವನ್ನು ನೋಡಿದೆವು. ಇಂತಹ ಸಂಸ್ಕೃತ ರಂಗಭೂಮಿಯೇ ಭಾರತೀಯ ರಂಗಭೂಮಿಯ ಅಡಿಗಲ್ಲು. ಸಂಸ್ಕೃತ ರಂಗಭೂಮಿ ಸಾಮಾನ್ಯವಾಗಿ ಇತರ ಎಲ್ಲ ಭಾರತೀಯ ಪ್ರಾದೇಶಿಕ ರಂಗಭೂಮಿಗಳಿಗೆ ಒಂದು ಕಾಲದಲ್ಲಿ ಆದರ್ಶಪ್ರಾಯವಾಗಿತ್ತು. ಅನುಕರಣೀಯವಾಗಿತ್ತು. ಅಷ್ಟೊಂದು ಪ್ರಭಾವಿತವಾಗಿತ್ತು. ಸಂಸ್ಕೃತ ರಂಗಭೂಮಿ–ಭರತನ ನಾಟ್ಯಶಾಸ್ತ್ರವನೇ ಅನುಸರಿಸಿತು; ಹೆಸರು ಗಳಿಸಿತು.

## ಬಂಗಾಲಿ ರಂಗಭೂಮಿ

ಬಂಗಾಲಿ ರಂಗಭೂಮಿಯ ಮೇಲೆ ಜಾತ್ರಾ, ಸಂಸ್ಕೃತ, ಅಪಭ್ರಂಶ ಮತ್ತು ಇಂಗ್ಲಿಷ ನಾಟ್ಯ ರಂಗಗಳ ಪ್ರಭಾವ ಎದ್ದುಕಾಣುತ್ತಿದೆ. ಜಾತ್ರಾ ಪ್ರಾದೇಶಿಕ ಲೋಕ ನಾಟ್ಯರಂಗ. ಧಾರ್ಮಿಕ ಸ್ವರೂಪದ ನಾಟಕಗಳೇ ಹೆಚ್ಚು. ೧೮ನೆಯ ಶತಮಾನದ ಪ್ರಾರಂಭದಲ್ಲಿ ಬಂಗಾಲಿ 'ಜಾತ್ರಾ'ಗಳು ನೇಪಾಳದಲ್ಲಿಯೂ ಜನಪ್ರಿಯವಾದುವು. 'ಜಾತ್ರಾ'ವು ಜಾತ್ಯತೀತ ಜಾನಪದ ರಂಗಭೂಮಿ. ಧಾರ್ಮಿಕ, ಕಥಾನಕಗಳಲ್ಲಿ ತತ್ಕಾಲೀನ ಸಾಮಾಜಿಕ ಜೀವನದ ವಿಡಂಬನೆಗಳೂ ಸೇರಿಕೊಂಡಿರುತ್ತಿದ್ದವು.

ರಂಗಭೂಮಿಯ ದೃಷ್ಟಿಯಿಂದ ಸಂಸ್ಕೃತ ನಾಟಕದ ಕೇವಲ ಅನುಕರಣೆಯೇ ಪ್ರಾರಂಭದಲ್ಲಿ ನಡೆಯುತ್ತಿತ್ತು. ಸಂಸ್ಕೃತ ನಾಟಕಗಳ ಬಂಗಾಲಿ ಭಾಷಾಂತರಗಳು. ಭಾಷೆ ನಾಟಕಕ್ಕಿಂತ ಕಾವ್ಯಕ್ಕೆ ಸಮೀಪ ಸಂಗೀತ ನಾಟಕಗಳದೇ ಮೇಲುಗೈ.

ಬಂಗಾಲ, ಕಾಲಿ ಮತ್ತು ಕೃಷ್ಣ ಭಕ್ತಿಯ ನಾಡು. ಮಹಾಪ್ರಭು ಚೈತನ್ಯದೇವ ಬಂಗಾಲಿ ನಾಟಕಗಳ ಪುನರುದ್ಧಾರಗೈದರು. ಪ್ರಥಮ ಬಂಗಾಲಿ ನಾಟಕದ ಅಭಿನಯ ಪ್ರದರ್ಶನ ೧೫೦೭ರಲ್ಲಿ. ಚೈತನ್ಯನ ಶಿಷ್ಯ ರೂಪಗೋಸ್ವಾಮಿ ೧೫೩೨ರಲ್ಲಿ 'ದಾನಕೇಲಿ', ೧೫೭೨ರಲ್ಲಿ 'ಚೈತನ್ಯ ಚಂದ್ರೋದಯ' ನಾಟಕಗಳನು ಬರೆದನು.

ಆಧುನಿಕ ಬಂಗಾಲಿ ರಂಗಮಂಚದ ಪ್ರಾರಂಭ ಪಾಶ್ಚಾತ್ಯಪ್ರಭಾವದಿಂದಲೇ ಎಂದು ಹೇಳಬೇಕು. ಆ ಮೊದಲು ಜಾತ್ರಾ, ಕವಿ, ಪಾಂಚಾಲೀ, ಕೀರ್ತನ, ಕಥಕಥಾಗಳು ಪ್ರಚಲಿತವಿದ್ದುವು.

ಕಲಕತ್ತೆಯಲ್ಲಿ ನೆಲೆಸಿದ ಇಂಗ್ಲಿಷರು, 'ಪ್ಲೇ ಹೌಸ್' ಮತ್ತು 'ಕಲಕತ್ತಾ ಥೇಟರ್ಸ' (೧೭೭೬)ಗಳೆಂಬ ರಂಗಶಾಲೆಗಳನ್ನು ಕಟ್ಟಿದರು. ಒಂದು ಲಕ್ಷ ರೂಪಾಯಿ ಖರ್ಚು ಮಾಡಿದರು. ಪ್ರವೇಶ ಧನ ಎಂಟು ರೂಪಾಯಿಯಿಂದ ಸುವರ್ಣ ಮೊಹರಿನವರೆಗಿದ್ದಿತು. ಪ್ರತಿಷ್ಠಿತ ನಾಗರಿಕರಿಗೆ ಮಾತ್ರ, ಅಭಿನಯದ ಅವಕಾಶ. ದೀಪಕ್ಕಾಗಿ ಮೇಣಬತ್ತಿ, ಲ್ಯಾಂಪುಗಳ ಬಳಕೆ. ವ್ಯವಸಾಯಿ ನಾಟಕ ಕಲಾವಿದರು ಇದರಲ್ಲಿ ಭಾಗವಹಿಸುವಂತಿರಲಿಲ್ಲ.

೧೫, ಅಕ್ಟೋಬರ ೧೭೮೯ರಂದು 'ಅಭಿಜ್ಞಾನ ಶಾಕುಂತಲ'ದ ಇಂಗ್ಲೀಷ ಭಾಷಾಂತರ ರಂಗಭೂಮಿಯ ಮೇಲೆ ಬಂದಿತು. ೧೭೯೫ರಲ್ಲಿ ಹೇರೆಸೀಮ್ ಲೇ ಬೇಡೆಫ್‌ರು 'ಬಂಗಾಲಿ ಥೇಟರ್ಸ' ಸಂಸ್ಥೆ ಸ್ಥಾಪಿಸಿ, ಬಂಗಾಲಿ ನಾಟಕ ಮತ್ತು ಸಂಸ್ಕೃತ ಇಂಗ್ಲೀಷ ನಾಟಕಗಳ ಬಂಗಾಲಿ ಭಾಷಾಂತರಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಬಂಗಾಲಿ ರಂಗಭೂಮಿಯ ಬೆಳವಣಿಗೆಗೆ ಪ್ರೇರಕ ಶಕ್ತಿಯಾದರು. ಇಂಗ್ಲೀಷ ನಾಟಕಗಳಲ್ಲಿ ಪುರುಷರೇ ಸ್ತ್ರೀ ಪಾತ್ರ ಧರಿಸುತ್ತಿದ್ದರು. ಡಿಸೆಂಬರ ೧೭೯೫ರಲ್ಲಿ ರಂಗಭೂಮಿಯಲ್ಲಿ ಅಭಿನಯಿಸಿದ ಪ್ರಥಮ ಮಹಿಳೆ ರಾಧಾರಮಣಿ ಕೊನೆಯಲ್ಲಿ ಭಿಕ್ಷಾವೃತ್ತಿಗಿಳಿಯುವ ದುಃಸ್ಥಿತಿಗೆ ಈಡಾದಳು. ಆ ಮುಂದೆ ೧೮೭೩ರವರೆಗೆ ಬಂಗಾಲದಲ್ಲಿ ಸ್ತ್ರೀಯರು ಪಾತ್ರ ವಹಿಸಿದ ಉದಾಹರಣೆಗಳು ದೊರೆಯುತ್ತಿಲ್ಲ.

೧೮೧೩ರಲ್ಲಿ ಸ್ಥಾಪಿತವಾದ 'ಚೌರಂಗಿ ಥೇಟರ್' ಬಂಗಾಲದಲ್ಲಿ ಹಿಂದೂಗಳ ಪ್ರಥಮ ನಾಟಕ ಸಂಸ್ಥೆ, ೧೮೩೯ರಲ್ಲಿ ಬೆಂಕಿ ಹತ್ತಿ ನಾಶವಾಯಿತು.

೧೮೩೯ರಲ್ಲಿ ಶ್ರೀಮತಿ ಲೀಚಾ ಎಂಬ ಆಂಗ್ಲ ಮಹಿಳೆ 'ಸಾನ್ಸಸೂಶೀ' ಥೇಟರ್ ಕಟ್ಟಿದರು. ಇಂದು ಆ ಸ್ಥಳದಲ್ಲಿ 'ಎಜರಾಮ್ಯಾನ್‌ಶನ್' ಇದೆ. ಕೆಳಗಡೆ ಸಭಾಗೃಹವಿದೆ. ಶ್ರೀಮತಿ ಲೀಚಾ ಅನೇಕ ಇಂಗ್ಲೀಷ ನಾಟಕಗಳನ್ನು ರಂಗಭೂಮಿಗೆ ತಂದರು. ಅವರಿಗೆ 'ಭಾರತೀಯ ರಂಗಮಂಚದ ರಾಣಿ' ಎನ್ನುತ್ತಿದ್ದರು. ೧೮೪೩ರಲ್ಲಿ ಅವರು ಮರಣ ಹೊಂದಿದರು. 'ಸಾನ್ಸಸೂಶೀ' ೧೮೪೯ರ ವರೆಗೆ ಹಾಗೂ ಹೀಗೂ ಜೀವಹಿಡಿದಿತ್ತು.

೧೮೩೧–೩೨ರಲ್ಲಿ 'ಹಿಂದೂ ಥೇಟರ್' 'ಶ್ಯಾಮಬಾಜಾರ ಥೇಟರ್'ಗಳು ಪ್ರಾರಂಭವಾದುವು. ಬಂಗಾಲಿಗಳಿಗಾಗಿ ಬಂಗಾಲಿ ನಾಟಕವೆಂಬುದೇ 'ಶ್ಯಾಮಬಾಜಾರ ಥೇಟರ್'ದ ಉದ್ದೇಶ. ಬಂಗಾಲಿ ಪ್ರಥಮ ನಾಟಕಕಾರರಾದ ಭಾರತ ಚಂದ್ರರಾಯರ ನಾಟಕಗಳನ್ನು ಪ್ರದರ್ಶಿಸಿತು. ಇದರ ಸ್ಥಾಪಕರಾದ ಬಾಬೂ ನವೀನ ಕೃಷ್ಣ ಬೋಸರಿಗೆ ಬಂಗಾಲಿ ರಂಗಭೂಮಿಯ ಸೇವೆಯ ಫಲ

ಕಾಗಿ ಎರಡು ಲಕ್ಷ ರೂಪಾಯಿ ಹಾನಿಯಾಯಿತು. ಸರ್ವನಷ್ಟವಾಯಿತು.

ಕಲಕತ್ತೆಯ ಹಿಂದೂ ಕಾಲೇಜು ಮತ್ತು ಸಂಸ್ಕೃತ ಕಾಲೇಜುಗಳ ವಿದ್ಯಾರ್ಥಿಗಳು ೧೮೩೭–೫೩ರ ವರೆಗೆ ಅಮೆಚೂರ ನಾಟ್ಯ ಸಂಸ್ಥೆಗಳ ಮುಖಾಂತರ ಹಲವಾರು ನಾಟಕಗಳನ್ನು ಪ್ರದರ್ಶಿಸಿದರು.

೧೮೫೩–೫೫ರ ವರೆಗಿದ್ದ ಓರಿಯೆಂಟಲ್ ಥೇಟರ್ ಕೇವಲ ಭಾರತೀಯರ ಯತ್ನದಿಂದ ತಲೆಯೆತ್ತಿತು. ಪರದೆ, ದೃಶ್ಯ ರಚನೆಗಳ ದೃಷ್ಟಿಯಿಂದ ಕೆಲ ಮಟ್ಟಿನ ಪ್ರಗತಿ ಸಾಧಿಸಿತು. ಕಲಕತ್ತೆಯ ಪ್ರೇಕ್ಷಕ ವರ್ಗ ಇಂಗ್ಲೀಷ ನಾಟಕಗಳಿಗೆ ಬೇಸತ್ತಿತು. ೧೮೫೭ರಿಂದ ಎಂಟು–ಹತ್ತು ವರ್ಷ ಕಾಲ ಸಂಸ್ಕೃತ ನಾಟಕಗಳ ಪುನರುಜ್ಜೀವನವಾಯಿತು. ಬಾಬೂ ಕಾಲೀಪ್ರಸಾದ ಸಿಂಹರು ಸ್ಥಾಪಿಸಿದ 'ವಿದ್ಯೋತ್ಸಾಹಿನೀ ಥೇಟರ್' ಬಳಿ ಒಂದು ಲಕ್ಷ ರೂಪಾಯಿಗಳಿಂದ ಹೆಚ್ಚು ಬೆಲೆಬಾಳುವ ವಸ್ತ್ರ ಭೂಷಣಗಳು ಇದ್ದವು.

'ಬೇಲಗಚ್ಛಿಯಾ ಥೇಟರ್' ಬಂಗಾಲಿ ರಂಗಭೂಮಿಯ ಪ್ರಗತಿಗೆ ಮಹತ್ವಪೂರ್ಣ ಕಾಣಿಕೆ ಸಲ್ಲಿಸಿತು. ಮೈಕೇಲ್ ಮಧುಸೂದನದತ್ತ ಮುಂತಾದ ಶ್ರೇಷ್ಠ ನಾಟಕಕಾರರು, ಕಲಾವಿದರು, ಇದರಲ್ಲಿ ಸೇವೆ ಸಲ್ಲಿಸಿದರು. ಇವರದೆ ಆದ ವಾದ್ಯ ಸಂಗೀತ ಮಂಡಳಿಯಿದ್ದಿತು. ರಂಗಸಜ್ಜಿಕೆ, ದೃಶ್ಯಗಳಿಗಾಗಿ ಒಂದೊಂದು ನಾಟಕಕ್ಕೂ ೧೦,೦೦೦ ರೂ. ಖರ್ಚು ಬರುತ್ತಿತ್ತು.

ಬಂಗಾಲದಲ್ಲಿ ರಾಜಕೀಯ ಬಿರುಗಾಳಿ ಬೀಸಿತು. ಬಾಬು ದೀನಬಂಧು ಮಿತ್ರರ 'ನೀಲದರ್ಪಣ' (೧೮೬೦) ರಾಜಕೀಯ ನಾಟಕದಿಂದ ಜನತೆಯಲ್ಲಿ ರಾಜಕೀಯ ಜಾಗೃತಿಯಾಯಿತು. ಬಂಗಾಲ ರಂಗಭೂಮಿಯ ಇತಿಹಾಸದಲ್ಲಿ 'ದೀನಬಂಧು ಯುಗ'ವೆಂದು ಹೆಸರಾಯಿತು. ೧೮೭೦ರ ಕಾಲಕ್ಕೆ ನಾಟಕದಲ್ಲಿ ಸಂಭಾಷಣೆಗಿಂತ ಅಭಿನಯವೇ ಪ್ರಧಾನ ತವಾದುದೆಂಬ ತಿಳುವಳಿಕೆ ಪ್ರಬಲವಾಯಿತು.

ರವೀಂದ್ರನಾಥ ಟಾಗೋರ ಮತ್ತು ಅವರ ಪರಿವಾರದವರಿಂದ ಪ್ರಾರಂಭವಾದ 'ಜೋಡಾಸಾಂಕೋ ಥೇಟರ್' ಅಭಿನಯ ಕಲೆ, ಸಂಗೀತ ಹಾಗೂ ಗೀತಗಳಿಗೆ ಹೆಚ್ಚಿನ ಪ್ರೋತ್ಸಾಹವಿತ್ತು ಬೆಳೆಸಿತು. ಬಾಬೂಚಂದ್ರ ಕಾಲೀ ಘೋಷರ 'ಶೋಭಾ ಬಾಜಾರ ಪ್ರೈವ್ಹೇಟ್ ಥೇಟ್ರಿಕಲ್ ಸೊಸೈಟಿ' (೧೮೬೫)ಯು ತರುಣ ಕಲಾವಿದರಿಗೆ ಅವಕಾಶವಿತ್ತಿತು. ರವೀಂದ್ರರು ತಮ್ಮ ನಾಟಕಗಳ ಮೂಲಕ ಸಂಗೀತ, ದೃಶ್ಯ–ದೃಶ್ಯಾವಲಿ, ಕಥೋಪಕಥನ, ಘಟನಾ ಘಟನಾಕ್ರಮ ಮುಂತಾದುವುಗಳಲ್ಲಿ ನವೀನತೆಯನ್ನು ತಂದರು. ಪಾತ್ರಗಳ ಸ್ವಾಭಾವಿಕತೆ, ಕಥಾವಸ್ತುವಿನಲ್ಲಿ ವಾಸ್ತವತೆ ಮೂಡಿದುವು. ಬಂಗಾಲ ರಂಗಭೂಮಿಯ ಮೇಲೆ ರಾಷ್ಟ್ರೀಯ ಆಂದೋಲನದ ಪ್ರಭಾವ ಅಚ್ಚಳಿಯದಿದೆ.

ದೀನಬಂಧು ಮತ್ತು ಗಿರೀಶಚಂದ್ರ ಘೋಷರು ಬಂಗಾಲದ ನಾಟ್ಯಾಚಾರ್ಯರು. ಘೋಷರು ರಾಷ್ಟ್ರ ನಿರ್ಮಾಣ ಕಾರ್ಯಕ್ಕೆ ರಂಗಭೂಮಿಯನ್ನು ಬಳಸಿಕೊಂಡರು. ಬಂಗಾಲಿ ಜನತೆಗೆ ನಾಟಕಗಳ ಮೂಲಕ ಶಿಕ್ಷಣ, ಮನೋರಂಜನೆಗಳನ್ನಿತ್ತುಸಾಂಸ್ಕೃತಿಕ ವಿಕಾಸಗೈದರು. ವಿಶಿಷ್ಟ ವರ್ಗಕ್ಕೆ ಮೀಸಲಾಗಿದ್ದ ರಂಗಭೂಮಿಯನ್ನು ಜನ ಸಾಮಾನ್ಯರವರೆಗೆ ತಂದ ಶ್ರೇಯಸ್ಸು ಗಿರೀಶರದು. ರಾಷ್ಟ್ರೀಯ ರಂಗಮಂಚ ನಿರ್ಮಾಣಕ್ಕೂ ಇವರು ಕಾರಣರು.

'ಬಂಗಾಲ ಥೇಟರ್' (೧೮೭೩) ಗೌರವಸ್ಥ ಮನೆಗಳ ಸ್ತ್ರೀಯರನು ರಂಗಭೂಮಿಯ ಮೇಲೆ ತಂದುದು



ಲೋಕಮಾನ್ಯ ಸೇವಾ ಸಂಘ (ನಾಟ್ಯ ವಿಭಾಗ)ದವರು ಅಭಿನಯಿಸಿದ ವಿಜಯ ತೆಂಡೂಲಕರ ಅವರಿಂದ ಅನುವಾದಿತ 'ನಾಗವಾಚಕ್ರ' ನಾಟಕದಲ್ಲಿಯ ಒಂದು ದೃಶ್ಯ ಎ.ದಿಂದ ಬ.ಕ್ಕೆ ೧. ಶರದ ಜಯಕರ, ೨. ಶ್ರೀಮತಿ ಸುಧಾ ಜೋಶಿ

ಒಂದು ವಿಶೇಷ. ಇದರಿಂದ ಸಂಪ್ರದಾಯಸ್ಥರು ಸಿಡಿಮಿಡಿಗೊಂಡರು. ಈಶ್ವರಚಂದ್ರ ವಿದ್ಯಾಸಾಗರರು ಇದೇ ಕಾರಣಕ್ಕಾಗಿ ಈ ಸಂಸ್ಥೆಯ ಸಂಬಂಧ ಕಡಿದುಕೊಂಡರು.

ಬಂಗಾಲ ರಂಗಭೂಮಿಗೆ ಸಂಕ್ರಮಣ ಕಾಲ ಸಂಕಟ ಕಾಲ ಒಟ್ಟಾಗಿಯೇ ಬಂದವು. ಬ್ರಿಟಿಶರ ಅನ್ಯಾಯಗಳನ್ನು ಬಯಲಿಗೆಳೆಯುವ, ಟೀಕಿಸುವ ರಾಜಕೀಯ ನಾಟಕಗಳಿಂದ ಇಂಗ್ಲೀಷ ಸರಕಾರ ಕೆರಳಿತು. ೧೮೭೬ರಲ್ಲಿ 'ಡ್ರ್ಯಾಮ್ಯಾಟಿಕ್ ಪರ್‌ಫಾರ್ಮನ್ಸ್ ಬಿಲ್' ಭಾರತಾದ್ಯಂತ ಜಾರಿಗೆ ಬಂದಿತು. ಪ್ರಾಂತೀಯ ಸರಕಾರಗಳಿಗೆ ರಾಜಕೀಯ ನಾಟಕಗಳನ್ನು ಜಪ್ತಿ ಮಾಡುವ ವ್ಯವಸ್ಥಾಪಕರನ್ನು, ನಟ–ನಟಿಯರನ್ನು ಬಂಧಿಸುವ ಅಧಿಕಾರ ಬಂದಿತು. 'ಅಮೃತ ಬಝಾರ' ಮುಂತಾದ ಪತ್ರಿಕೆಗಳು ಸರಕಾರದ ಕ್ರಮವನು ತೀವ್ರವಾಗಿ ಖಂಡಿಸಿದವು. ಈ ಕಾಯಿದೆಯಿಂದ ರಾಷ್ಟ್ರೀಯ ರಂಗಮಂಚ ನಿರ್ಮಾಣಕ್ಕೆ ಬಲವಾದ ಆಘಾತ ಒದಗಿತು. ನಾಟ್ಯ ಸಾಹಿತ್ಯ ರಚನೆ ಕುಂದಿತು. ಆದರೆ ರಾಷ್ಟ್ರೀಯ ಆಂದೋಲನ ಚುರುಕಾಯಿತು. ೧೯೧೦–೧೧ರ ಅವಧಿಯಲ್ಲಿ ಸರಕಾರ ಅನೇಕ ನಾಟಕಗಳನ್ನು ಜಪ್ತಿ ಮಾಡಿತು.

೧೯೪೭ರ ಕ್ರಾಂತಿಕಾಲದಲ್ಲಿ ಆರ್ಥಿಕ ಅವ್ಯವಸ್ಥೆ, ನೈತಿಕ ಜೀವನದ ಅವನತಿ ಕಂಡು ಬಂದವು. ಸಾಮಾಜಿಕ ನೆಮ್ಮದಿ ಕಾಯ್ದುಕೊಳ್ಳಲು ರಂಗಭೂಮಿ ಶ್ರಮಿಸಿತು. ನಂತರ ಕೆಲ ಕಾಲ ಶಿಥಿಲತೆ. ನಾಟಕ ವ್ಯವಸಾಯಿಗಳು ಕಂಪನಿಗಳು ಹಿಂದುಳಿದವು. ಸಿನೇಮಾ ಪ್ರಭಾವ ಹೆಚ್ಚಿತು. ಇತ್ತೀಚೆ ಬಂಗಾಲಿ ರಂಗಭೂಮಿ ಮತ್ತೆ ಚೇತರಿಸಿಕೊಳ್ಳುತ್ತಿದೆ. ರಂಗಭೂಮಿ ರಾಷ್ಟ್ರೀಯ ದೃಷ್ಟಿಯುಳ್ಳದಾಗಿರಬೇಕು. ಜನಜೀವನದ ದರ್ಪಣವಾಗಬೇಕೆಂಬ ಗಿರೀಶ ಘೋಷರು ಹಾಕಿದ ಪರಂಪರೆಯನ್ನು ಉಳಿಸಿಕೊಂಡಿದೆ. ಆದರೂ ರಂಗಭೂಮಿಗೆ ಉಚಿತವಾದ ಆಧುನಿಕ ನಾಟಕಗಳ ಸಂಖ್ಯೆ ಕಡಿಮೆಯಾಗಿದೆ. ಪಠ್ಯ ಪುಸ್ತಕಗಳಿಗಾಗಿ ನಾಟಕದ ಬೆಳೆ ಹೆಚ್ಚಿದೆ.

ಬಂಗಾಲಿ ರಂಗಭೂಮಿಗಿಂದು ಯೋಗ್ಯ ನಾಟಕಗಳಿಲ್ಲೆಂಬ ಬಡತನ ಬಂದಿದೆ.

## ಮೈಥಿಲೀ ರಂಗಭೂಮಿ

ಸಂಸ್ಕೃತ ರಂಗಭೂಮಿಯ ನಿಕಟ ಸಂಬಂಧವಿರಿಸಿಕೊಂಡಿದ್ದ ಮೈಥಿಲೀ ರಂಗಭೂಮಿ ಇಂದಿಗೆ ಹೊಸ ರೂಪ ತಳೆದಿದೆ. ಮೈಥಿಲೀ ಭಾಷೆಗೆ ಮಹತ್ವ ಬಂದಿದೆ, ಬೇರೆ ಭಾಷೆಗಳಿಗೆ ಸ್ಥಾನವಿಲ್ಲ.

ನೇಪಾಲೀ–ಮೈಥಿಲೀ; ಕೀರ್ತನಿಯಾ ಮತ್ತು ಅಂಕಿಯಾ ಎಂದು ಮೂರು ಪ್ರಕಾರಗಳು. ಮೊದಲಿನದು ಗೀತ–ನಾಟಕ ಮಾದರಿಯದು. ಕೇವಲ ಮೈಥಿಲೀ ಭಾಷೆಯ ಗೀತಗಳುಳ್ಳದು. ಎರಡನೆಯದು, ಪ್ರಾರಂಭದಿಂದ ಕೊನೆಯವರೆಗೆ ದೇವರನಾಮ ಕೀರ್ತನೆಗಳನ್ನುಳ್ಳದು. ಅಂಕಿಯಾದಲ್ಲಿ ಕೇವಲ ಧಾರ್ಮಿಕ ಅಂಶಗಳು; ಸಾಮಾಜಿಕ ಅಂಶಗಳಿಲ್ಲ.

೧೭ನೆಯ ಶತಮಾನದಲ್ಲಿ ಮೈಥಿಲಿ, ನೇಪಾಳಗಳ ಅರಸುಮನೆತನಗಳಲ್ಲಿ ಸಂಬಂಧವಿದ್ದಿತು. ಇದರಿಂದ ನೇಪಾಳ, ಮಣಿಪುರ ಆಸಾಮಗಳಲ್ಲಿ ಮೈಥಿಲೀ ರಂಗಭೂಮಿ ಹಬ್ಬಿಕೊಂಡಿತು. ಜನಪ್ರಿಯತೆ ಗಳಿಸಿತು. ಈ ಕಾಲದ ನಾಟಕಗಳು ಗೀತ ಪ್ರಧಾನವಾದುವು. ಸಂಭಾಷಣೆಯನ್ನು ಬರೆದಿಡುತ್ತಿರಲಿಲ್ಲ. ಅದು ಪಾತ್ರಗಳ ಬುದ್ಧಿಗೆ ಬಿಟ್ಟುದು. ಪರದೆಯ ಮೇಲೆ ದೃಶ್ಯಗಳನ್ನು ಬರೆಯುತ್ತಿರಲಿಲ್ಲ. ದೃಶ್ಯ ಬದಲಾವಣೆಯನ್ನು ಎರಡು ಗೀತಗಳ ಮಧ್ಯೆ ಪ್ರೇಕ್ಷಕರಿಗೆ ಹೇಳುತ್ತಿದ್ದರು. ನಾಟ್ಯಗೃಹ ಪ್ರತ್ಯೇಕವ ಗಿರಲಿಲ್ಲ. ಬಯಲಿನಲ್ಲಿ ರಂಗಮಂಚ ಕಟ್ಟುತ್ತಿದ್ದರು. ಹಗಲೂ ನಾಟಕ ನಡೆಯುತ್ತಿದ್ದವು.

ಒಂದೇ ದಿನದಲ್ಲಿ ಮುಗಿಯದಿದ್ದರೆ ಮುಗಿಯುವವರೆಗೆ ನಾಟಕ ಮುಂದರಿಯುತ್ತಿತ್ತು.

ಇತ್ತೀಚೆ ಸಾಮಾಜಿಕ ಸಂಗೀತ ನಾಟಕಗಳು ಹೆಚ್ಚಿವೆ. ಮೈಥಿಲೀ ರಂಗಭೂಮಿ ಹಿಂದೀ ರಂಗಭೂಮಿಯ ಜೊತೆ ಜೊತೆಗೆ ಪ್ರತಿಸ್ಪರ್ಧಿಯೆಂಬಂತೆ ಬೆಳೆದು ಬಂದಿದೆ.

೧೬ನೆಯ ಶತಮಾನದ ಮಧ್ಯಕಾಲದಲ್ಲಿ ಆಸಾಮದಲ್ಲಿ ಮೈಥಿಲೀ ನಾಟಕಗಳು ಉದಯಿಸಿದವು. ಲೋಕ ನಾಟ್ಯವಿದ್ವರೂ ಹೊಸತನು ಮೈಗೂಡಿಸಿಕೊಂಡಿದೆ ಮೈಥಿಲೀ ರಂಗಭೂಮಿ.

ಪ್ರಾರಂಭ ಕಾಲದಲ್ಲಿ ಸ್ತ್ರೀಯರು ಅಭಿನಯಿಸುತ್ತಿರಲಿಲ್ಲ. ಕಲಾಕಾರರ ಆಯ್ಕೆಯಲ್ಲಿ ಜಾತೀಯ ನಿರ್ಬಂಧವಿಲ್ಲ. ನಾಟಕದ ನಾಯಕನೇ ಅಭಿನಯ ಸಂಯೋಜಕ. ನಾಟಕಾಭಿನಯವೇ ಜೀವನೋಪಾಯವಾಗಿರಲಿಲ್ಲ. ನಾಟಕ ನಾಯಕನಿಗೆ ರಾಜದರಬಾರದಲ್ಲಿಯೂ ಮನ್ನಣೆಯಿತ್ತು.

ಕೀರ್ತನಿಯಾ ಕಲಾವಿದರ ತಂಡವೇ ಬೇರೆ. ಈ ನಾಟಕಗಳ ಪ್ರಣೇತರಾದ ಉಮಾಪತಿ ಉಪಾಧ್ಯಾಯರು ಕೃಷ್ಣನ ಮುಂದೆ ಪ್ರತ್ಯಕ್ಷವಾಗಿ ಕುಣಿಯುವರೆಂದು ಜನರ ಅಚಲ ವಿಶ್ವಾಸ. ರಂಗಮಂಚದ ಮೇಲೆ ಒಂದು ಚೌಕಿ ಕೀರ್ತನಿಯಾ ಕೇವಲ ರಾತ್ರಿ ನಡೆಯುವ ನಾಟಕ. ಸೂತ್ರಧಾರನ ವೇಷವೆಂದರೆ ಒಂದು ಪ್ಯಾಜಮಾ ಒಂದು ಬುರುಕೆ; ಕಾಲಲ್ಲಿ ಕಡಾವಿಗೆ, ತಲೆಗೆ ಮುಂಡಾಸು. ಕೈಯಲ್ಲಿ ಹೂವಿನ ಗುಚ್ಛ; ಅವನ ಜೊತೆಯಲ್ಲಿ ನಟಿ. ಪ್ರಾರಂಭ ಗೀತದಲ್ಲಿ ಪಾತ್ರಗಳ ಪರಿಚಯದ ಪದ್ಧತಿ. ಕಥಾವಸ್ತು ತೀರ ಅಲ್ಪ. ಕಲಾಕಾರರಿಗೆ ತರಬೇತಿ ನೀಡುವ ರಂಗತಾಲೀಮ ರೂಢಿಯುಂಟು. ಇಂದು ಕೀರ್ತನಿಯಾ ನಾಟಕಗಳ ಹೆಸರು ಕೇಳಿ ಬರುತ್ತಿಲ್ಲ.

'ಪೀಪಲ್ಸ ಥೇಟರ ಅಸೋಸಿಯೇಶನ್' 'ಓಪನ್ ಏರ್ ಥೇಟರ ಗ್ರುಪ್' ಎಂಬ ಎರಡು ಅಮೇಚೂರ್ ಸಂಸ್ಥೆಗಳು ಆಧುನಿಕ ನಾಟಕಗಳನ್ನಾಡುತ್ತಿವೆ. ಎರಡೂ ಕಂಪನಿಗಳ ಪ್ರಭಾವ ಅಷ್ಟಕ್ಕಷ್ಟೆ. ಸಂಘಟನೆ, ಸುಧಾರಣೆಗಳಿಗೆ ಸಾಕಷ್ಟು ಅವಕಾಶವಿದೆ.

ಮಣಿಪುರಕೊಳ್ಳದಲ್ಲಿ, 'ಲೀಲಾ'ಗಳನ್ನಾಡುವ ಸುಮಾರು ಮೂವತ್ತು ಗುಂಪುಗಳಿವೆ. ಏಳು ದೊಡ್ಡ ನಾಟಕ ಕಂಪನಿಗಳಿವೆ. ಇಂಫಾಲಾದಲ್ಲಿ 'ರೂಪ ಮಹಾಲ' ಥೇಟರ ಆ ಪ್ರದೇಶಕ್ಕೆ ದೊಡ್ಡದು. ನಾಲ್ಕು ನೂರು ಜನರು ಕೂಡುವ ಅನುಕೂಲತೆಯುಂಟು. ಐವತ್ತು ಜನ ನಟ-ನಟಿಯರು. ಉತ್ತಮ ನಟಿಗೆ ೩೦೦-೦೦ ರೂ. ತಿಂಗಳು ಪಗಾರ. ಉಳಿದ ಕೆಲಸಗಾರರಿಗೆ ೬೦-೦೦ ರೂ. ರಾಜಕೀಯ, ಸಾಮಾಜಿಕ ಜಾನಪದ ನಾಟಕಗಳು ಇಂದಿಗೂ ಜನಮನವನ್ನು ಸೆಳೆದಿವೆ.

## ಬಿಹಾರಿ ರಂಗಭೂಮಿ

ಬಿಹಾರದಲ್ಲಿ ವ್ಯವಸಾಯಿ ನಾಟಕ ಕಂಪನಿಗಳ ಪರಂಪರೆಯಿಲ್ಲ. ಇದ್ದವೂ ಜಾನಪದ ನೃತ್ಯ ನಾಟಕಗಳಿಗೆ ಶರಣಾಗಿವೆ. ೧೯೩೦ರಲ್ಲಿ ಭಿಕಾರಿ ಠಾಕುರ (ಹಜಾಮ ವರ್ಗ)ರ ನಾಟಕ ಕಂಪನಿಯಲ್ಲಿ ಕೇವಲ ಆರು ಜನರಿದ್ದರು. ಗಂಡಸರೇ ಪಾತ್ರ ವಹಿಸುವರು. ಠಾಕುರ ನಾಟಕ ಲೇಖಕ ಮತ್ತು ದಿಗ್ದರ್ಶಕ. ಇವರ ಕಂಪನಿ ಹಳ್ಳಿಗಳಲ್ಲಿ ಸಂಚಾರ ಮಾಡುತ್ತಿದೆ. ಜಾನಪದ ತಾಳಗತಿ, ಪಿಯಾನೊ, ಡೋಲು, ವಾದ್ಯ ವೃಂದ ಸಂಗೀತಗಳನ್ನು ಬಳಸುವರು. ಹಳ್ಳಿಗರಿಗೆ ಹಿಡಿಸುವ ಕೀಳು ಅಭಿರುಚಿಯ ಹಾಸ್ಯ.

ಪೂರ್ವ ಬಿಹಾರದಲ್ಲಿ ಬಂಗಾಲದಂತೆ 'ಜಾತ್ರಾ'ಗಳು ಪ್ರಚಲಿತ. ೧೯೧೨ರವರೆಗೂ ಬಂಗಾಲಿ ನಾಟಕಗಳ ಹಿಂದೀ ಭಾಷಾಂತರಗಳೇ ಹೆಚ್ಚಾಗಿದ್ದವು. ೧೯೨೯ರಲ್ಲಿ ಮಣಿ ಗೋಸ್ವಾಮಿ, ಕಿರ್ಪಾನಾಥ ಮಿಶ್ರ-ಇಬ್ಬರೂ ಬಿಹಾರಿಗಳು-ಹಿಂದೀ ನಾಟಕಗಳನ್ನು ಬರೆದವರಲ್ಲಿ ಮೊದಲಿಗರು.

ಬಿಹಾರ ಅಕಾಡೆಮಿ ಆಫ್ ಮ್ಯುಜಿಕ್, ಡಾನ್ಸ, ಡ್ರಾಮಾ' ೧೯೪೯ರಲ್ಲಿ ಸ್ಥಾಪಿತವಾಯಿತು. ಈ ಸಂಸ್ಥೆ ನಾಟಕ ಸ್ಪರ್ಧೆ, ನಾಟ್ಯೋತ್ಸವಗಳನ್ನು ಆಗಾಗ ಏರ್ಪಡಿಸಿ, ಬಿಹಾರಿ ರಂಗಭೂಮಿಯ ಪ್ರಗತಿ, ಏಳಿಗೆಗಳಿಗೆ ಕಾರಣವಾಗಿದೆ. ಇತ್ತೀಚೆ ಅಮೇಚೂರ ಕಂಪನಿಗಳು ತಲೆಯೆತ್ತಿವೆ. ನೆರೆ ಹೊರೆಯ ಪ್ರಾಂತ[illegible]ಗಳಂತೆ ಬಿಹಾರಿ ರಂಗಭೂಮಿಯನ್ನು ಸಮಕಾಲೀನ ಪಂಕ್ತಿಕ್ಕೆ ಏರಿಸಿದ ಕೀರ್ತಿ ಈ ಕಿರಿ ಕಂಪನಿಗಳದು.



## ಓರಿಯಾ (ಉಡಿಯಾ) ರಂಗಭೂಮಿ

ಕೋನಾರ್ಕ ಸೂರ್ಯದೇವಾಲಯ, ಪುರಿ ಜಗನ್ನಾಥ ಮಂದಿರಗಳಲ್ಲಿಯ ನಾಟ್ಯಗೃಹ ಮತ್ತು ಕಲಾವಿದರ ಮುದ್ರಾ ಭಂಗಿಗಳಿಂದ ೧೫ನೆಯ ಶತಮಾನದಿಂದಲೇ ಇಲ್ಲಿ ನಾಟ್ಯಪರಂಪರೆ ಸಮೃದ್ಧವಾಗಿಯೇ ಇದ್ದಿರಬೇಕೆಂದು ತಿಳಿಯುತ್ತಿದೆ. ಓರಿಸಾದ ಅರಸ ಕಪಿಲೇಂದ್ರನು 'ಪರಶುರಾಮ ವಿಜಯ'ವೆಂಬ ನಾಟಕ ಬರೆದನು. ಇದೇ ಪ್ರಥಮ ನಾಟಕ. ರಾಯ ರಾಮಾಂದರ 'ಜಗನ್ನಾಥ ವಲ್ಲಭ'ವನು ದೇವಾಲಯದ ನರ್ತಕಿಯರೋ, ಅಥವಾ ದೇವದಾಸಿಯರೋ ಅಭಿನಯಿಸಿದರು.

ಮೇಲಣ ಸಂಸ್ಕೃತ ನಾಟಕ ಪರಂಪರೆಯನ್ನು ರಾಮಲೀಲಾ ರಾಸಲೀಲಾ, ಜಾಯಾ ದಂಡನಟ ಮುಂತಾದ ಲೋಕನಾಟ್ಯಗಳು ಆಕ್ರಮಿಸತೊಡಗಿದವು. ಇಲ್ಲಿನ 'ಛಾಲು' (ಶಿಬಿರ) ನೃತ್ಯ ಅಂತಾ ರಾಷ್ಟ್ರೀಯ ಖ್ಯಾತಿ ಪಡೆದಿದೆ. ಛಾಲು ಮತ್ತು ದಂಡ ನಟಗಳು ಶಿವ, ದುರ್ಗಾರ ಉಪಾಸನಾ ವ್ರತವೆಂದೂ ಪ್ರದರ್ಶಿಸುವರು.

ಹಿಂದು-ಮುಸ್ಲಿಮ್‌ರ ಸಂಸ್ಕೃತಿಗಳ ಏಕತೆಯ ಪ್ರತೀಕವಾಗಿ ನಾಲ್ಕೈದು ವ್ಯಕ್ತಿಗಳು ಸೇರಿ ಹಾಡುವ ಲೋಕ ಗೀತಕ್ಕೆ 'ಪಾಲ' ಎಂದು ಕರೆಯುವರು. 'ರಂಗ ಸಭಾ' ಇನ್ನೊಂದು ಬಗೆಯ ಲೋಕನಾಟ್ಯ. ಪೌರಾಣಿಕ ವೀರ ಜೀವನದ ಕಥೆಗಳು. ಈ ನಾಟಕದಲ್ಲಿಯ ರಾಕ್ಷಸ ಆನೆ, ಕುದುರೆ, ಮೊದಲಾದ ವೇಷಗಳು ಭಯಾನಕವಾಗಿರುತ್ತವೆ.

ಜಾಗೂ ಓಭಾ, ಗೋಪಾಲದಾಸರು ಓರಿಯಾದಲ್ಲಿ ಪ್ರಥಮ ನಾಟಕಕಾರರು. ಕಲಕತ್ತಾ ಜೂಟ ಮಿಲ್ಲುಗಳಲ್ಲಿ ಕೆಲಸ ಮಾಡುತ್ತಿರುವ ಓರಿಸಾ ಕೂಲಿಕಾರರ ಜೀವನದ ಹೃದಯಂಗಮ ಚಿತ್ರಣವುಳ್ಳ ನಾಟಕಗಳು ತುಂಬಾ ಪ್ರಸಿದ್ಧಿ ಪಡೆದವು.

ಕಟಕದ ಸಮೀಪ ಕೋಠ ಪಾಡಾ ಮಠ ಜಿಲ್ಲೆಯಲ್ಲಿ ಪ್ರಥಮ ಥೇಟರ್ ಸ್ಥಾಪನೆ ೧೮೮೫ರಲ್ಲಿ ಆಯಿತು. ರಾಮ ಶಂಕರ ರಾಯ್ (ಕೃತಿ ರಚನೆ ಪ್ರಾರಂಭ ೧೮೮೮ರಲ್ಲಿ). ಆಧುನಿಕ ಓರಿಯಾ ನಾಟಕದ ಜನಕರು. ಕವಿ ಭೂಷಣ ಘನಶ್ಯಾಮ ಶರ್ಮಾ ಹಳೆಯ ಜಾಡನ್ನು ಬಿಟ್ಟು ಹೊಸ ಶೈಲಿಯಲ್ಲಿ ನಾಟಕಗಳನ್ನು ಬರೆದು ನಾಟ್ಯ ಪರಂಪರೆಗೆ ಹೊಸತನವನ್ನು ತಂದರು.

೧೯೦೨ರಲ್ಲಿ ಓರಿಸಾದಲ್ಲಿ ಎರಡನೆಯ ನಾಟಕ ಥೇಟರ ಜನ್ಮವೆತ್ತಿತು. ಐತಿಹಾಸಿಕ ನಾಟಕಗಳಲ್ಲಿ ಅಭಿನಯಕ್ಕೆ ಅವಕಾಶ ಕಡಿಮೆಯಿತ್ತು. ಓರಿಸಾದಲ್ಲಿ ರಂಗಭೂಮಿಯ ಜೊತೆಗೆ ರಾಸಲೀಲಾ ಕೂಡ ಬೆಳೆದು ಬಂದಿದೆ.

ಕವಿಚಂದ್ರ ಕಾಲೀಚರಣ ಪಾಟನಾಯಕರು ಆಧುನಿಕ ನಾಟಕ ಪ್ರಗತಿಗೆ ಕಾರಣರು. ಸ್ತ್ರೀಯರೇ ಸ್ತ್ರೀಪಾತ್ರ ವಹಿಸಲು ರಂಭಿಸಿದರು. ಸಾಮಾನ್ಯ ಜನಜೀವನದ ಮೇಲೆ ತನ್ನ ಪ್ರಭಾವ ಬೀರುವಷ್ಟು ಇಲ್ಲಿನ ರಂಗಭೂಮಿ ಶಕ್ತಿಯುತವಾಗಿದೆ.

ಹೊಸ ಬಗೆಯ ಸಾಮಾಜಿಕ, ರಾಜಕೀಯ ನಾಟಕಗಳನ್ನಾಡಲು ನಾಲ್ಕು ವ್ಯವಸಾಯೀ ನಾಟಕ ಕಂಪನಿಗಳಿವೆ. 'ಅನ್ನಪೂರ್ಣ ಥೇಟರ್ಸ್'ದ ಎರಡು ಶಾಖೆಗಳು ಪುರಿ ಮತ್ತು ಕಟಕಗಳಲ್ಲಿವೆ. 'ಜನತಾ ಥೇಟರ್ಸ್' ಬಡ ಕಲಾವಿದರ ಸಂಸ್ಥೆ. ಕಂಪನಿಯ ಮನೆಯಲ್ಲಿಯೇ ಇವರ ವಸತಿ. ಬರಹಾಮಪುರದಲ್ಲಿ ಒಂದು ನಾಟಕ ಕಂಪನಿಯಿದೆ.

ಓರಿಯಾ ರಂಗಮಂಚ ಇನ್ನೂ ಹೊಸ ತಂತ್ರವನ್ನು ಅಳವಡಿಸಿಕೊಳ್ಳಬೇಕಾಗಿದೆ. ನಾಟಕ ಮತ್ತು ರಂಗಭೂಮಿಗಳಲ್ಲಿ ಹೊಸತನವು ಹೊಮ್ಮುವುದೆಂಬ ಆಸೆ ಆಧುನಿಕ ನಾಟಕಕಾರರಿಂದ, ಕಲಾವಿದರಿಂದ ಮೂಡಿದೆ.

## ಮಧ್ಯಪ್ರದೇಶ ರಂಗಭೂಮಿ

ಮಧ್ಯಪ್ರದೇಶ ಹಿಂದೀ ಭಾಷೆಯ ಪ್ರಾಂತ. ಆದರೂ ಸುತ್ತಲಿನ ಪ್ರಾಂತಗಳಲ್ಲಿ ಬಹು ಕಾಲದಿಂದ ನಡೆದು ಬಂದ ಸಾಂಸ್ಕೃತಿಕ–ವಿಶೇಷತಃ ರಂಗಭೂಮಿಯ–ಪ್ರಭಾವ ಇಲ್ಲಿ ಕಾಣದಿರುವುದು ಸೋಜಿಗದ ಸಂಗತಿ. ಮುರಿಯಾ ಜನಾಂಗದಲ್ಲಿಯ ತಲೆಗೆ ಕೋಡುಗಳನ್ನು ಹಚ್ಚಿಕೊಂಡು ಕುಣಿಯುವ ಭೀಕರ ಜಾನಪದ ನೃತ್ಯವೇ ಜನಪ್ರಿಯವಾಗಿದೆ. ವ್ಯವಸಾಯ ನಾಟಕ ಕಂಪನಿಗಳಿಲ್ಲ. ರಂಗಭೂಮಿಯ ಬೆಳವಣಿಗೆಗೆ ಪೋಷಕ ವಾತಾವರಣವೆ ಉಂಟಾಗದಿದ್ದುದು ಆಶ್ಚರ್ಯಕರ. ಇದ್ದ ಬಿದ್ದ ಅಮೇಚೂರ ನಾಟಕ ಸಂಸ್ಥೆಗಳೂ ಬಡರೀತಿಯಲ್ಲಿ ಬದುಕಿಕೊಂಡಿವೆ.

## ರಾಜಸ್ಥಾನೀ ರಂಗಭೂಮಿ

ಹಳ್ಳಿಗಳಲ್ಲಿ ಜಾನಪದ ನೃತ್ಯ, ನೀತಿ ಗೀತೆಗಳು, ಕಥಾನಕಗಳು ಬಳಕೆಯಲ್ಲಿವೆ. ವೀರಗೀತೆಗಳನ್ನು ಹಾಡಿ, ಕುಣಿಯುವವರು ಹೆಚ್ಚಾಗಿ ಭಾಟರು. ಇಬ್ಬರಿಗೇ ಒಂದು ಮೇಳ. ಮುಖ್ಯ ಹಾಡುಗಾರನು ತಂತಿವಾದ್ಯವನ್ನು ಬಾರಿಸುತ್ತ ಹಾಡುವನು. ಜೊತೆಗಾರ ಅವನೊಡನೆ ಹೆಜ್ಜೆ ಹಾಕುವನು. ನಾಟಕೀಯ ಗೀತಗಳು ಪ್ರಚಾರದಲ್ಲಿವೆ.

ಆಧುನಿಕ ನಾಟಕಗಳ ಅಭಾವ. ಅಂತೆಯೇ ಆಧುನಿಕ ರಂಗಭೂಮಿಯೂ ಬೆಳೆಯಲಿಲ್ಲ.

## ಪಂಜಾಬೀ ರಂಗಭೂಮಿ

ಮಧ್ಯಯುಗದಲ್ಲಿ ಪಂಜಾಬು ಪರಕೀಯರ ದಾಳಿಗಳಿಗೆ ತುತ್ತಾಯಿತು. ಸಾಮಾಜಿಕ ಸ್ಥಿತಿ ಅವ್ಯವಸ್ಥೆಗೊಂಡಿತು. ಅಲ್ಲಿನ ಮುಖ್ಯ ಧರ್ಮವಾದ ಶೀಖ ಧರ್ಮದಲ್ಲಿ ರಂಗಮಂಚಕ್ಕೆ ನೇರವಾದ ಸಹಾಯ, ಪ್ರೋತ್ಸಾಹಗಳಿಲ್ಲ. ಹೀಗಾಗಿ ಪಂಜಾಬಿ ರಂಗಭೂಮಿಗೆ ಪ್ರಾಚೀನ ಪರಂಪರೆಯಿಲ್ಲ.

ಒಕ್ಕಲಿಗರಲ್ಲಿ 'ಸಾಂಗ' ಅಥವಾ 'ಸ್ವಾಂಗ' ಎಂಬ ಲೋಕ ಗೀತ ನಾಟ್ಯವುಂಟು. ಇದರಲ್ಲಿ ತಾಂಡವ ಮತ್ತು ಲಾಸ್ಯ ನೃತ್ಯಳೇ ಮುಖ್ಯ. 'ಸಾಂಗ'ವೇ ನಾಟಕಕ್ಕೆ ರೂಪು ಕೊಟ್ಟಿತು.

ಪಾಶ್ಚಾತ್ಯ ನಾಟ್ಯಭೂಮಿಯ ಪ್ರಭಾವವೂ ಪಂಜಾಬಕ್ಕೆ ತಡವಾಗಿಯೇ ತಲುಪಿತು. ಬಂಗಾಲ, ಮಹಾರಾಷ್ಟ್ರಗಳಲ್ಲಿಯ ತೀವ್ರಗತಿಗೆ ಪಂಜಾಬ ರಂಗಭೂಮಿ ತಾಳ ಹಾಕಲಿಲ್ಲ. ಹೊಸದಕ್ಕೆ ಒಗ್ಗಿಕೊಳ್ಳುವ, ಅದನ್ನು ಸ್ವೀಕರಿಸುವ ಒಲುವು, ಉತ್ಸಾಹಗಳೇ ಮೂಡಲಿಲ್ಲ.

೧೯ನೆಯ ಶತಮಾನದ ಕೊನೆ. ೨೦ನೆಯ ಶತಮಾನದ ಪ್ರಾರಂಭಾವಧಿಯಲ್ಲಿ ಪಾರ್ಸಿ ನಾಟಕ ಕಂಪನಿಯೊಂದು ಪಂಜಾಬದಲ್ಲಿ ಸಂಚರಿಸಿತು. ಪಂಜಾಬಿ ರಂಗಭೂಮಿ ಹಿಂದಿಯಿಂದ ಸ್ಫೂರ್ತಿ ಪಡೆಯಿತು. ಉರ್ದು, ಹಿಂದಿ ರಂಗಭೂಮಿಗಳಿಗೆ ಋಣಿಯಾಯಿತು.

ಪಂಜಾಬಿ ರಂಗಭೂಮಿಯ ಪ್ರಾಚೀನತೆಯೆಂದರೆ ಗುರು ಗೋವಿಂದ ಸಿಂಗರ 'ವಿಚಿತ್ರ ನಾಟಕ'ವೇ ಮೊದಲಿನದು. ನಂತರ ಶಿಥಿಲತೆ.

**ಅಸುರ ಪ್ರೇಮ**

PATIL

ಹತ್ತು ವರುಷಗಳಲ್ಲಿ ನಿತ್ಯ ಜಗಳಾಡಿದರೂ
ಮರೆಯಲಾಗದು ನಲ್ಲೆ ಆ ಅಸುರ ಪ್ರೇಮ
ಲಟ್ಟಣಿಗೆಯ ಏಟು, ಮೇಲೆ
ಒಗ್ಗರಣೆಯ ಸವುಟು
ರುಚಿ ನೋಡಿ ಜಪಿಸುತಲಿದ್ದೆ, ನಿನ್ನ ನಾಮ

–ಎಂ. ಗೋವಿಂದ

ಲಾಹೋರದಲ್ಲಿದ್ದ ಬ್ರಿಟಿಶ ಪ್ರೊಫೆಸರರ ಶ್ರೀಮತಿ ನೋರ್ಹಾ ರಿಚರ್ಡ್ಸ್ ಕೆಲವು ಕಾಲೇಜ ವಿದ್ಯಾರ್ಥಿಗಳನ್ನು ಕಲೆ ಹಾಕಿ, ಸು. ೧೯೧೬ರಲ್ಲಿ ಪಂಜಾಬಿ ರಂಗಭೂಮಿಯನ್ನು ಪ್ರಾರಂಭಿಸಿದರು. ಹೆಚ್ಚಾಗಿ ಇಂಗ್ಲೀಷ ನಾಟಕಗಳನ್ನೇ ಆಡಿದರು. ನೋರ್ಹಾರವರ ಪ್ರೇರಣೆಯಿಂದ ಈಶ್ವರ ಚಾಂದ ನಂದಾ (೧೯೧೪) ಪ್ರಥಮ ಪಂಜಾಬೀ ಆಧುನಿಕ ನಾಟಕಕಾರರಾದರು. ಹಳ್ಳಿಗಳಿಗೂ ಹೋಗಿ ಸಾಮಾಜಿಕ ನಾಟಕಗಳನ್ನು ಪ್ರದರ್ಶಿಸಿ ರಂಗಭೂಮಿಗೆ ಕಳೆಕಟ್ಟಿದರು.

೧೯೪೭ರ ನಂತರ ಪಂಜಾಬಿ ರಂಗಭೂಮಿಯ ಚರಿತೆಯಲ್ಲಿ ನವೀನ ಯುಗ ಕಾಲಿಟ್ಟಿತೆನ್ನಬಹುದು. 'ರಫಿ ಪೀರ'ರು ಪಾಶ್ಚಾತ್ಯ ಶೈಲಿಯಲ್ಲಿ ನಾಟಕಗಳನ್ನು ಬರೆದರು. ಸ್ವತಃ ಅಭಿನಯದಲ್ಲಿ ಪರಿಣತರು. ಆದರೂ ಅಭಿನಯಕ್ಕೆ ಮಹತ್ವ ಕೊಡಲಿಲ್ಲ. ರಂಗಭೂಮಿಯ ಸರ್ವತೋಮುಖ ಏಳಿಗೆಗೆ ಯತ್ನಿಸಲಿಲ್ಲ.

೧೯೪೦–೫೦ರ ಅವಧಿಯಲ್ಲಿ ಫ್ರಾಯಿಡ್ ಮೊದಲಾದ ಮಾನಸ ಶಾಸ್ತ್ರಜ್ಞರ ಸಂಶೋಧನೆಗಳ ಪ್ರಭಾವ ಪಂಜಾಬಿ ನಾಟಕ ಸಾಹಿತ್ಯದಲ್ಲಿ ಇಣಿಕಿತು. ಹೊಸ ನಾಟಕಕಾರರು ಮನೋವಿಶ್ಲೇಷಣೆಯ ದಾರಿ ಹಿಡಿದರು. ಕರ್ತಾರ ಸಿಂಗ ದುಗ್ಗಾಲ ತಮ್ಮ ರೇಡಿಯೋ ನಾಟಕಗಳನ್ನು ರಂಗಭೂಮಿಯ ನಾಟಕಗಳನ್ನಾಗಿ ಪರಿವರ್ತಿಸಿದರು. ಯಶಸ್ವಿಯಾಗಲಿಲ್ಲ. ಗಾರ್ಗೀ ಕ್ರಾಂತಿಕಾರಕ ನಾಟಕಗಳನ್ನು ಬರೆದರು. ರಂಗಮಂಚ ಕುಶಲತೆ, ಶೈಲಿ, ನಾಟಕೀಯತೆಗಳ ದೃಷ್ಟಿಯಿಂದ ಇವರ ನಾಟಕಗಳು ಮಹತ್ವಪೂರ್ಣವಾದುವು. ಲೋಕ–ನೃತ್ಯ, ಪಾಶ್ಚಾತ್ಯ ಶೈಲಿ ಮತ್ತು ತಂತ್ರಗಳ ಸಮನ್ವಯತೆಯನ್ನು ಸಾಧಿಸಿದರು.

ಇತ್ತೀಚಿನ ನಾಟಕಕಾರರು ಹೆಚ್ಚು ಸಂಖ್ಯೆಯಲ್ಲಿ ಶಿಕ್ಷಕ ವೃತ್ತಿಯಲ್ಲಿರುವವರು. ಕಾಲೇಜುಗಳಲ್ಲಿ ಆಡಲು ಯೋಗ್ಯವಾದ ಏಕಾಂಕಗಳ ಬೆಳೆಯೇ ಹುಲುಸಾಗಿದೆ. ಶೀಲಾ ಭಾಟಿಯಾರ ಗೀತ ನಾಟಕಗಳು ಅಭಿನಯ ಮುದ್ರಾ, ಮೌನ ಅಭಿನಯಗಳಿಂದ ಹೊಸತನ ಪಡೆದಿವೆ; ಯಶಸ್ವಿಯಾಗಿವೆ.

ಪಂಜಾಬಿ ಗ್ರಾಂಥಿಕ ಮತ್ತು ಜನ ಭಾಷೆಗಳಲ್ಲಿ ಹೇಳಿಕೊಳ್ಳಬಹುದಾದ ಅಂತರವಿಲ್ಲ. ಇದರಿಂದ ನಾಟಕಗಳ ಭಾಷೆ ಜನತೆಯಿಂದ ದೂರ ಉಳಿಯಲಿಲ್ಲ. 'ಗಿದ್ಧಾ' ಎಂಬ ಲೋಕನೃತ್ಯ ರಂಗಮಂಚದ ವಿಕಾಸದಲ್ಲಿ ಗಮನೀಯ ಪಾತ್ರ ವಹಿಸಿದೆ. ಪಂಜಾಬಿ ರಂಗಭೂಮಿ ಜನಜೀವನಕ್ಕೆ ಹೊಂದಿಕೊಂಡಿದೆ. ಆದರೆ ಇಲ್ಲಿ ವ್ಯವಸಾಯಿ ನಾಟಕ ಕಂಪನಿಗಳಿಲ್ಲದಿರುವುದೊಂದು ಕೊರತೆ. ಅಮೇಚೂರ ನಾಟ್ಯ ಸಂಘಗಳು ಸಾಕಷ್ಟು ಸಂಖ್ಯೆಯಲ್ಲಿವೆ. ರಂಗಭೂಮಿಯ ಸೇವೆ ಸಲ್ಲಿಸುತ್ತಿವೆ. ಆದರೆ ಮಟ್ಟ ಕಡಿಮೆತರದ್ದು. ಹೊಸ ನಾಟಕಕಾರರಿಂದ ಪಂಜಾಬಿ ರಂಗಭೂಮಿಗೆ ಉಜ್ವಲ ಭವಿಷ್ಯ ಕಾದಿದೆಯೆಂಬ ಆಶಯದಲ್ಲಿ ಸತ್ಯಾಂಶವಿದೆ.

## ಕಾಶ್ಮೀರಿ ರಂಗಭೂಮಿ

ಜಮ್ಮು ಕಾಶ್ಮೀರದಲ್ಲಿ ೧೪ನೆಯ ಶತಮಾನದಲ್ಲಿಯ ಮುಸಲ್ಮಾನ ದಾಳಿಗಳಿಂದ ಆ ಮೊದಲಿದ್ದ ನೃತ್ಯ ನಾಟಕಗಳ ಏಳಿಗೆ ಕುಂಠಿತವಾಯಿತು. ಜಾನಪದ ನಾಟಕಗಳಷ್ಟೇ ಗ್ರಾಮಾಂತರಗಳಲ್ಲಿ ಉಳಿದುಕೊಂಡವು.

೧೯೪೭ರಲ್ಲಿ 'ಕಾಶ್ಮೀರಿ ಥೇಟರ' ಸ್ಥಾಪಿತವಾಯಿತು. ಇದರ ಪ್ರಯತ್ನದಿಂದ ಕಾಶ್ಮೀರಿ ರಂಗಭೂಮಿ ಚೇತರಿಸಿತು. ಪ್ರಗತಿ ಪಥದಲ್ಲಿ ಸಾಗಿತು. ರಾಷ್ಟ್ರೀಯ ಭಾವನೆಯುಳ್ಳ ನಾಟಕಗಳೇ ಹೆಚ್ಚು. ಭಾಷೆ ಕಾಶ್ಮೀರಿ. ಆಧುನಿಕ ನಾಟಕಗಳನ್ನು ಯಶಸ್ವಿಯಾಗಿ ಪ್ರದರ್ಶಿಸುವಷ್ಟು ಕಾಶ್ಮೀರಿ ರಂಗಭೂಮಿ ಶಕ್ತಿಯುತವಾಗಿದೆ. ಸುಸಜ್ಜಿತವಾಗಿದೆ. ಇಲ್ಲಿನ 'ಹೋಮಗಾರ್ಡ್ಸ' ಸಂಸ್ಥೆಯಲ್ಲಿಯೂ ನಾಟಕೀಯ ವಿಭಾಗವೊಂದು ಪ್ರತ್ಯೇಕವಾಗಿದೆ.

## ಹಿಂದೀ ರಂಗಭೂಮಿ

### ಪಾರ್ಸಿ ನಾಟಕ ಕಂಪನಿಗಳು

ಪಾಶ್ಚಾತ್ಯ ನಾಟಕ; ರಂಗಭೂಮಿಗಳ ಪ್ರಭಾವ ಮೊಟ್ಟ ಮೊದಲಿಗೆ ಭಾರತದಲ್ಲಿ ಕಂಡುಬರುವುದು ಪಾರ್ಸಿ ನಾಟಕ ಕಂಪನಿಗಳಲ್ಲಿ. ೧೮೭೦ರಲ್ಲಿ ಪೆಸ್ತನಜಿ ಫ್ರೇಮಜಿ, "ಓರಿಜಿನಲ್ ಥೇಟ್ರಿಕಲ್ ಕಂಪನಿ"ಯನು

ಪ್ರಾರಂಭಿಸಿದರು. ಪಾರ್ಸಿ ಜನರು ಪ್ರಾರಂಭಿಸಿದ ನಾಟಕ ಕಂಪನಿಗಳು: 'ಓಲ್ಡ ಪಾರ್ಸಿ ಥೇಟ್ರಿಕಲ್ ಕಂಪನಿ', 'ಕ್ಯಾರಿಂಥಿಯನ್ ಕಂಪನಿ', 'ದಿ ಅಲೆಕ್ಸಾಂಡ್ರಾ ಕಂಪನಿ' 'ಪ್ರಿನ್ಸ ಥೇಟ್ರಿಕಲ್ ಕಂಪನಿ' ಮುಂತಾದುವು. ಈ ಕಂಪನಿಗಳು ಭಾರತದ ಬೇರೆ ಬೇರೆ ಪ್ರಾಂತಗಳಲ್ಲಿ ಅಲೆದಾಡಿ ೧೮೭೦-೧೯೩೫ರ ವರೆಗೆ ರಂಗಭೂಮಿಯ ಪ್ರಚಾರ ಮಾಡಿದುವು.

ಪಾರ್ಸಿ ಜನರು ವ್ಯವಸಾಯಿ ನಾಟಕ ಕಂಪನಿಗಳನ್ನು ಪ್ರಾರಂಭಿಸಿದುದು ನಾಟಕ ಆಸಕ್ತಿಯಿಂದಲ್ಲ; ರಂಗ ಭೂಮಿ ಸೇವಾ ಬುದ್ಧಿಯಿಂದಲ್ಲ. ಹಣ ಸಂಪಾದನೆಯೇ ಏಕಮೇವ ಧ್ಯೇಯ. ಪ್ರತಿಯೊಂದು ಕಂಪನಿಯಲ್ಲಿ, ನಟ-ನಟಿಯರಲ್ಲದೆ ನಾಟಕಕಾರ, ದಿಗ್ದರ್ಶಕ, ಉತ್ಪಾದಕ, ಸಂಗೀತ, ಸಂಯೋಜಕರೂ ಇತರ ಕೆಲಸಗಾರರೂ ಇರುತ್ತಿದ್ದರು. ೧೦೦-೧೫೦ ಜನರಿರುವ ಕಂಪನಿಗಳವು. ಪ್ರಮುಖ ಪಾತ್ರ ವಹಿಸುವ ನಟರ ಸಂಖ್ಯೆ ಎರಡು ಜೊತೆಯಾಗಿರುತ್ತಿತ್ತು. ಜನರು ಸೀನರಿ, ಸೆಟ್ಟು, ಪರದೆ ಇತರ ಸಲಕರಣೆಗಳ ಆಡಂಬರ ಬಹಳ. ಟ್ರಕ್ಕುಗಳಲ್ಲಿ ಎಲ್ಲವನ್ನೂ ತುಂಬಿಕೊಂಡು ಜನರು ಸಹಿತವಾಗಿ ದೊಡ್ಡ ಸರ್ಕಸ್ ಕಂಪನಿಗಳಂತೆ ಊರೂರು ಅಲೆಯುತ್ತಿದ್ದರು. ಪಾಶ್ಚಾತ್ಯ ಪ್ರಭಾವಕ್ಕೆ ಒಳಗಾಗಿದ್ದರೂ ಪರದೆ, ಸೀನರಿ, ದೃಶ್ಯ ಸಂಯೋಜನೆಗಳಲ್ಲಿ ಪ್ರಾದೇಶಿಕತೆಗೆ ಲಕ್ಷ್ಯವಿತ್ತಿದ್ದರು. ಪೌರಾಣಿಕ ನಾಟಕಗಳ ಸಿದ್ಧತೆಗೆ ಕೆಲವು ಸಲ ಒಂದು ಲಕ್ಷ ರೂಪಾಯಿಗಳ ವರೆಗೂ ಖರ್ಚು ಮಾಡುತ್ತಿದ್ದರು.

ಸಂಸ್ಕೃತ, ಇಂಗ್ಲೀಷ ನಾಟಕಗಳೊಡನೆ ಧಾರ್ಮಿಕ ಪೌರಾಣಿಕ ನಾಟಕಗಳನ್ನೂ ಆಡುತ್ತಿದ್ದರು. ಐತಿಹಾಸಿಕ, ಸಾಮಾಜಿಕ ನಾಟಕಗಳು ಅಪರೂಪ. ಕಂಪನಿ-ಕಂಪನಿಗಳೂ ಯಾವಾಗಲೂ ಪೈಪೋಟಿ. ಕಂಪನಿಯ ಜನಪ್ರಿಯತೆ, ನಾಟಕಗಳ ಸಾಹಿತ್ಯಕ ಗುಣ, ಕಥಾವಸ್ತು; ಶೈಲಿಗಳಿಗಿಂತ ದೃಶ್ಯ-ದೃಶ್ಯಗಳಲ್ಲಿಯ ಹೊಸ ಹೊಸ ಚಮತ್ಕಾರ, ರಂಗಭೂಮಿಯ ಆಕರ್ಷಕತೆ, ವೇಷ-ಭೂಷಣಗಳ ನವೀನತೆ, ಸ್ತ್ರೀ ನಟಿಯರ ಸಂಖ್ಯೆಗಳನ್ನು ಅವಲಂಬಿಸಿತ್ತು.

ಹಣ ಸಂಪಾದನೆಗೆ ಯೋಗ್ಯವಾದ ನಾಟಕಗಳನ್ನು ಆರಿಸುವುದು ಮಾಲೀಕನ ಅಧಿಕಾರ. ಸಂಗೀತ, ನೃತ್ಯ ಪ್ರಧಾನವಾದ ನಾಟಕಗಳಿಗೇ ಪ್ರಾಶಸ್ತ್ಯ. ಸಾಧಾರಣ ಪರದೆಯ ಜೊತೆಗೆ ಒಂದು ಕಟ್ ಕರ್ಟನ್. ಒಂದು ಟೇಬಲ್. ದೃಶ್ಯ-ದೃಶ್ಯಕ್ಕಿರುವ ನಾಟಕದ ಗತಿ, ಸಮಯ ಮತ್ತು ಸ್ಥಾನ ಸಮನ್ವಯಗಳ ಅನುಕೂಲ, ಪ್ರತಿಕೂಲಗಳನ್ನು ಲಕ್ಷಿಸುತ್ತಿರಲಿಲ್ಲ. ಪ್ರೇಕ್ಷಕರ ಕುತೂಹಲ ಕೆರಳಿಸುವುದೇ ಮುಖ್ಯ ಉದ್ದೇಶ. ಅದಕ್ಕಾಗಿ ಹೊಸ ಹೊಸ ಸೀನರಿಗಳನ್ನು ಬರೆಯಿಸುತ್ತಿದ್ದರು. ಒಬ್ಬಳೇ ನರ್ತಕಿಗೆ ಒಂದು ನಾಟಕದಲ್ಲಿ ಬೇರೆ ಬೇರೆ ಪಾತ್ರಗಳನ್ನು ಕೊಟ್ಟು ಚಕಿತಗೊಳಿಸುವುದು. ದೇವತೆಗಳ ಅವತರಣ, ಪುಷ್ಪ ವೃಷ್ಟಿ ಮೊದಲಾದ ದೃಶ್ಯಗಳಲ್ಲಿ ಪಾತ್ರಗಳು ಒಮ್ಮೆಲೇ ರಂಗಭೂಮಿಗಿಳಿದು ಬರುವಂತಹ ರಂಗಸಜ್ಜಿಕೆ. ಪಾತ್ರಗಳು ಮೇಲೆ ಕೆಳಗೆ ಹಾರುವುದು; ಆಕಾಶ ಗಮನಗಳಿಗೆ ಬೇಕಾಗುವ ಯಾಂತ್ರಿಕ ಸಾಧನೆಗಳ ಸಿದ್ಧತೆ ಇರುತ್ತಿತ್ತು.

ಮೂಲ ನಾಟಕದ ಜೊತೆಗೆ ಒಂದು ಪ್ರಹಸನ. ಎರಡು ದೃಶ್ಯಗಳ ಮಧ್ಯಂತರದಲ್ಲಿ ಪ್ರಹಸನ ಪ್ರವೇಶ. ಜನತೆಗೆ ವಿನೋದ ಒದಗಿಸಿ 'ವಾಹವ್ವಾ' ಎನ್ನಿಸಿಕೊಳ್ಳಬೇಕೆಂಬುದೇ ಉದ್ದೇಶ. ಅಭಿನಯಕ್ಕಿಂತ ದೃಶ್ಯ ಪ್ರದರ್ಶನವೇ ನಾಟಕದ ಮುಖ್ಯಾಂಗ. ಆಗಿನ ಜನತೆಯೂ ಇದನ್ನು ಮೆಚ್ಚಿಕೊಂಡಿತ್ತು. ಮೂಲ ನಾಟಕಕ್ಕೂ ಈ ಪ್ರಹಸನಕ್ಕೂ ಯಾವ ಸಂಬಂಧವೂ ಇರದಿರುವ ಸಂದರ್ಭಗಳೇ ಹೆಚ್ಚು. ಪ್ರಹಸನದಲ್ಲಿಯ ಕೀಳು ಹಾಸ್ಯಕ್ಕೆ ಸಭ್ಯ ಜನರು ಮೂಗು ಮುರಿದರು.



"ಅನಾಮಿಕಾ" ನಾಟ್ಯ ಸಂಸ್ಥೆಯವರು ಅಭಿನಯಿಸಿದ ಪು. ಲ. ದೇಶಪಾಂಡೆ ವಿರಚಿತ 'ವಟವಟ' ನಾಟಕದಲ್ಲಿ ಒಂದು ದೃಶ್ಯ ಎ. ದಿಂದ ಬ.ಕ್ಕೆ ೧. ಅವಿನಾಶ ಮುಸುರೇಕರ ೨. ಮಧು ಕದಮ ೩, ಪು. ಲ. ದೇಶಪಾಂಡೆ

ಪಾತ್ರಗಳ ಮುಖಕ್ಕೆ ಬಣ್ಣ ಹಚ್ಚಿ ಮೇಲೆ ಅಭ್ರಕ ಹಚ್ಚುತ್ತಿದ್ದರು. ತೆರೆಯ ಮರೆಯಲ್ಲಿ ಸ್ವಗತ ಭಾಷಣ, ಆಕಾಶವಾಣಿಗಳನ್ನು ಹೇಳುವ ವ್ಯವಸ್ಥೆ. ಕೊಲೆ ಮೊದಲಾದ ಭಯಾನಕ ಸನ್ನಿವೇಶಗಳಲ್ಲಿ ಮೌನ ಅಭಿನಯ. ಪಾರ್ಸಿ ಕಂಪನಿಗಳಲ್ಲಿ ನಟನಾಗುವವನಿಗೆ ಸಂಗೀತ; ನೃತ್ಯ, ಹಾಸ್ಯ, ಕತ್ತಿ ಸಾಧನೆ ಬರಬೇಕಾಗಿದ್ದಿತು. ಜೊತೆಗೆ ಆಕರ್ಷಕ ಮೈಕಟ್ಟು ಇರಬೇಕು. ನಟ-ನಟಿಯರಿಗೆ ಧ್ವನಿ ತರಬೇತಿಕೊಡುತ್ತಿದ್ದರು. ಸುಮಾರು ಎರಡು ಸಾವಿರ ಪ್ರೇಕ್ಷಕರಿಗೆ ಕೇಳಿಸುವಂತಹ ಗಂಡು, ಗಡಸು ದನಿ ಅವಶ್ಯ. ಹೆಣ್ಣು ಪಾತ್ರ ಧರಿಸುವವರು ಉದ್ದ ಕೂದಲು ಬೆಳೆಸುತ್ತಿದ್ದರು. ಪ್ರೇಕ್ಷಕ ಗೃಹದಲ್ಲಿ ಹೆಣ್ಣು ಮಕ್ಕಳಿಗೆ ಪ್ರತ್ಯೇಕ ಸ್ಥಳ. ಒಂದು ರೂಪಾಯಿಗೆ ಮೂವತ್ತು ಸೇರು ಗೋದಿ ಸಿಗುತ್ತಿದ್ದ ಕಾಲದಲ್ಲಿ ಶ್ರೇಷ್ಠ ನಟ-ನಟಿಯರಿಗೆ ತಿಂಗಳಿಗೆ ೫೦೦- ರೂ. ಪಗಾರ ದೊರೆಯುತ್ತಿತ್ತು.

ಹಿಂದೀ ವಿದ್ವಾಂಸರು ತಮ್ಮ ರಂಗಭೂಮಿಯ ಸುಧಾರಣೆಗೈಯಬೇಕೆಂದು ಪಾರ್ಸಿ ಕಂಪನಿಯ ಮಾಲಿಕನೊಬ್ಬನನ್ನು ವಿಚಾರಿಸಿದಾಗ ಅವನು 'ನಾವಿಲ್ಲಿ ಹಣಗಳಿಸಲು ಬಂದಿದ್ದೇವೆ. ನಿಮ್ಮ ಸಾಹಿತ್ಯ ಭಂಡಾರ ಬೆಳೆಸಲೆಂದಲ್ಲ; ದೇಶೋದ್ಧಾರ, ಸಮಾಜೋದ್ಧಾರ ನಮಗೆ ಬೇಕಿಲ್ಲ. ನಮಗೆ ಬೇಕಾದುದು ಹಣ. ಹಣ ಮಾತ್ರ, ಎಂದು ಅವರ ಬಾಯಿ ಮುಚ್ಚಿಸಿದನು.

ಬಾಲಿವಾಲಾರು ತಮ್ಮ 'ವಿಕ್ಟೋರಿಯಾ ಥೇಟ್ರಿಕಲ್ ಕಂಪನಿ'ಯನ್ನು ಲಂಡನ್ನಕ್ಕೆ ಒಯ್ದು, ಅಲ್ಲಿ 'ಹ್ಯಾಮಲೆಟ್' ಆಡಿದರು. ಈ ಕಂಪನಿ ಲಂಡನ್ನದಲ್ಲಿಯೇ ಹಾಳಾಯಿತು.

ಐಶ್ವರ್ಯ ನಾರಾಯಣಸಿಂಹರ 'ಜಾನಕೀ ಮಂಗಲ್' ಹಿಂದೀ ನಾಟಕ ಬನಾರಸ ಥೇಟರಿನಲ್ಲಿ ರಂಗಭೂಮಿಗೆ ಬಂದ (೧೮೬೮) ಪ್ರಥಮ ನಾಟಕ. ೧೮೬೮-೮೫ರ ಅವಧಿಯಲ್ಲಿ ಭಾರತೇಂದು ಹರಿಶ್ಚಂದ್ರರು ಹಿಂದೀ ರಂಗಭೂಮಿಗೆ ಚಿರಸ್ಮರಣೀಯ ಸೇವೆ ಸಲ್ಲಿಸಿದರು. ತರುಣರನ್ನು ತರಬೇತಿಗೊಳಿಸಿದರು. ಅಮೇಚೂರ ಕಂಪನಿಗಳಿಗೆ ಬೆಂಬಲವಿತ್ತರು. ಇವರ ನಾಟಕಗಳಲ್ಲಿ ಸಂಸ್ಕೃತ, ಇಂಗ್ಲೀಷ, ಬಂಗಾಲಿ ಮತ್ತು ಜಾನಪದ ಪ್ರಕಾರಗಳ ಪ್ರಭಾವ ಕಂಡುಬರುತ್ತಿದೆ.

ಭಾರತೇಂದು ಮತ್ತು ಜೈಶಂಕರ ಪ್ರಸಾದರು ಪಾರ್ಸಿ ನಾಟಕ ಕಂಪನಿಗಳ ಪ್ರಯೋಗ ಪದ್ಧತಿಯನ್ನು ತೀಕ್ಷ್ಣವಾಗಿ ಅಲ್ಲಗಳೆದರು. ಆದರೆ ಅದನ್ನು ಸುಧಾರಿಸುವ ಹವ್ಯಾಸಕ್ಕೆ ಹೋಗಲಿಲ್ಲ. ಇದರಿಂದ ಹಿಂದಿಯಲ್ಲಿ ಸಾಹಿತ್ಯಕ ನಾಟಕಗಳು ಮತ್ತು ವ್ಯವಸಾಯಿ ಕಂಪನಿ ನಾಟಕಗಳು ಎಂಬ ಎರಡು ವಿಭಾಗಗಳು ಉಂಟಾದುವು.

ಭಾರತೇಂದು ನಂತರ ಸುಮಾರು ನಲವತ್ತು ವರ್ಷಗಳ ಕಾಲ ಹಿಂದೀ ನಾಟಕ ಚರಿತ್ರೆಯಲ್ಲಿ ಅಂಧ ಕಾಲ. ೧೯೨೦-೩೩ರ ವರೆಗೆ ಜೈಶಂಕರ ಪ್ರಸಾದರು ಹೊಸ ಹೊಸ ದೃಶ್ಯಗಳುಳ್ಳ ಪರದೆಗಳನ್ನು ಬರೆಯಿಸಿ, ರಂಗಮಂಚಕ್ಕೆ ಶೋಭೆಯಿತ್ತರು.

೧೯೪೪ರಲ್ಲಿ ಪೃಥ್ವೀ ಥೇಟರ್ಸ ಪ್ರಾರಂಭ. ಸುಪ್ರಸಿದ್ಧ ನಟ ಪೃಥ್ವೀರಾಜ ಕಪೂರ ಸಿನೇಮಾ ಬಿಟ್ಟು ಹಿಂದೀ

ರಂಗಭೂಮಿಯ ಸೇವೆಗೆ ಟೊಂಕ ಕಟ್ಟಿದರು. 'ಶಾಕುಂತಲ' ನಾಟಕ ಪ್ರಯೋಗಕ್ಕೆ ಅಲಂಕೃತ ಅರಮನೆ, ತೂಗುವ ಸಿಂಹಾಸನ, ಆಶ್ರಮ ದೃಶ್ಯ ಮುಂತಾದವುಗಳನ್ನು ತಯಾರಿಸಲು ಹೇರಳ ಹಣ ಸುರಿದರು. ಆದರೆ 'ಶಾಕುಂತಲ' ಹಣ ತರಲಿಲ್ಲ. ಪೃಥ್ವೀರಾಜ ಹೊಸ ನಾಟಕಗಳೆಡೆಗೆ ತಿರುಗಿದರು. ಅನೇಕರಿಗೆ ಅಭಿನಯ ಕಲಿಸಿದರು. ಈ ಕಂಪನಿಯಲ್ಲಿ ತೊಂಭತ್ತು ಜನರಿದ್ದರು. ಪೃಥ್ವಿ ಥೇಟರ್ಸ ಯಾವುದೊಂದು ಪ್ರದೇಶಕ್ಕೆ ಅಂಟಿಕೊಳ್ಳದೆ ಅಖಿಲ ಭಾರತ ಥೇಟರ ಆಗಿತ್ತು. ೧, ಮೇ ೧೯೬೦ರಂದು ಪೃಥ್ವೀ ಥೇಟರ್ಸ ಮುಚ್ಚಿತು.

ಪೃಥ್ವೀರಾಜ ಕಪೂರ ಪ್ರೇಕ್ಷಕ ಗೃಹದಲ್ಲಿ ಸಂಪೂರ್ಣ ಶಾಂತತೆಯನ್ನಪೇಕ್ಷಿಸುತ್ತಿದ್ದರು. ಯಾವನೊಬ್ಬ ಪಾತ್ರಧಾರಿ ರಂಗಭೂಮಿಯ ಮೇಲೆ ಅತಿಯಾಗಿ ಕೆಮ್ಮಿದರೆ, ಸಂಭಾಷಣೆಯಲ್ಲಿ ತಡವರಿಸಿದರೆ, ಕಪೂರರು ರಂಗಭೂಮಿಗೆ ಬಂದು ದಬಾಯಿಸುತ್ತಿದ್ದರು. 'ನನಗೆ ಕಾಯಿದೆ ಮಾಡುವ ಅಧಿಕಾರ ಬಂದರೆ ಇಂತಹರನ್ನು ಗುಂಡಿಕ್ಕಿ ಕೊಲ್ಲಬೇಕೆಂದು ಕಾಯಿದೆ ಮಾಡುತ್ತಿದ್ದೆ' ಎಂದು ಪ್ರೇಕ್ಷಕರಿಗೆ ಹೇಳುತ್ತಿದ್ದರು. ಪೃಥ್ವಿ ಥೇಟರ್ಸ ಒಟ್ಟಿನಲ್ಲಿ ೨೫೦೦ ನಾಟಕ ಪ್ರಯೋಗಗಳನ್ನು ಮಾಡಿ ಹಿಂದೀ ರಂಗಭೂಮಿಗೆ ಅಪಾರ ಸೇವೆ ಸಲ್ಲಿಸಿತು.

ಹಿಂದೀ ರಂಗಭೂಮಿ ಚರಿತ್ರೆ ರಂಗು ರಂಗಾಗಿದೆ. ಆಧುನಿಕ ನಾಟಕಗಳ ನವೀನ ಪ್ರಯೋಗಗಳನ್ನು ಮಾಡುವಷ್ಟು ಮುಂದರಿದಿದೆ. ಆದರೆ ಇಂದು ಆಡುವ ನಾಟಕಗಳಿಗಿಂತ ಓದುವ ನಾಟಕಗಳೇ ಹೆಚ್ಚಾಗಿವೆ. ರೇಡಿಯೋ ನಾಟಕ ಮತ್ತು ಪಠ್ಯ ಪುಸ್ತಕಗಳಲ್ಲಿ ಸೇರಿಸುವಂತಹ ನಾಟಕಗಳದೇ ಮೇಲುಗೈಯಾಗಿದೆ.

## ಗುಜರಾತಿ ರಂಗಭೂಮಿ

ಗುಜರಾತಿ ನಾಟ್ಯಸಾಹಿತ್ಯದಲ್ಲಿ ಸಂಸ್ಕೃತ ನಾಟಕ ಪರಂಪರೆಯು ನೇರವಾದ ರೂಪ ದೊರೆಯುತ್ತಿಲ್ಲ. ೧೪ನೆಯ ಶತಮಾನದ ಕೊನೆಗೆ ಸಂಸ್ಕೃತ ನಾಟಕ ಪರಂಪರೆ ಮಸಕಾಗುತ್ತ ಬಂದಿತ್ತು. ೧೪ನೆಯ ಶತಮಾನದಲ್ಲಿ 'ಅಸಾಯಿತಾ' ಎಂಬ ಭವಾಯಿ ಬ್ರಾಹ್ಮಣ ಶೂದ್ರ ಸ್ತ್ರೀಯೊಡನೆ ಊಟ ಮಾಡಿದನೆಂದು ಸಮಾಜ ಅವನನ್ನು ಬಹಿಷ್ಕರಿಸಿತು. ಆ ಬ್ರಾಹ್ಮಣ ತನ್ನ ಉಪಜೀವನಕ್ಕಾಗಿ ಸಂಗೀತ, ಅಭಿನಯ, ಕಾವ್ಯ ಗಾಯನಗಳನ್ನು ಬಳಸಿಕೊಂಡನು. ಅವನ ಸಂತತಿಯುವರೂ ಈ ಸಂಪ್ರದಾಯ ಮುಂದರಿಸಿದರು. ಇದರಿಂದ 'ಭವಾಯಿ' ಎಂ ವೀರಗಾಥೆಗಳ ಗೀತಾಭಿನಯ ಪದ್ಧತಿ ಪ್ರಚಲಿತವಾಯಿತು.

'ಭವಾಯಿ'ಯಲ್ಲಿ ಹದಿನಾಲ್ಕು ಜನ ನಟರು. ಗಂಡಸರೇ ಹೆಣ್ಣು ಪಾತ್ರ ವಹಿಸುತ್ತಿದ್ದರು. ಹತ್ತು ಫೂಟು ತ್ರಿಜ್ಯವುಳ್ಳ ವರ್ತುಲವೇ ರಂಗಮಂಚ. ಆಟ ಪ್ರಾರಂಭ ಸೂಚನೆಗೆ 'ಭುಂಗಾಲ' ಮತ್ತು ಇತರ ವಾದ್ಯಗಳನ್ನು ಬಾರಿಸುವರು. ಪಾತ್ರಗಳು ಹಿಲಾಲು ಹಿಡಿದುಕೊಂಡು ಪ್ರವೇಶಿಸುವರು. ರಂಗಭೂಮಿಯ ಮಧ್ಯದಲ್ಲಿ ಒಂದು ದೊಡ್ಡ ಹಿಲಾಲು ನೆಡುವರು. ಪಾತ್ರಗಳ ಆಗಮನ, ನಿರ್ಗಮನಗಳನ್ನು ವಿಶಿಷ್ಟ ಬಗೆಯ ಧ್ವನಿಯಿಂದ ಸೂಚಿಸುವುದೇ ರೂಢಿ. ಸಂಗೀತ, ನೃತ್ಯ, ಅಭಿನಯಗಳೇ 'ಭವಾಯಿ' ಮನರಂಜನೆಯ ವೈಶಿಷ್ಟ್ಯ. ಒಂದೇ ಧೋತರ, ಒಂದೇ ಮುಂಡಾಸವಿದ್ದರೂ ಅವನ್ನೇ ಬೇರೆ ಬೇರೆ ಉದ್ಯೋಗದವರು [illegible] ಮತ್ತೆ ಉಟ್ಟು ಬೇರೆ ಬೇರೆ ಪಾತ್ರಗಳನ್ನು ವಹಿಸುತ್ತಿದ್ದರು. ಜನತೆ ಅರ್ಥ ಮಾಡಿಕೊಳ್ಳುತ್ತಿತ್ತು.

ಸಾಮಾನ್ಯವಾಗಿ 'ಭವಾಯಿ' ರಾತ್ರಿ ಒಂಭತ್ತು ಗಂಟೆಯಿಂದ ಬೆಳತನಕ ಸಾಗುತ್ತಿದೆ. ಆಟ ಮುಗಿಯದಿದ್ದರೆ ಮರುದಿನ ಮಧ್ಯಾಹ್ನದ ವರೆಗೂ ಬಿಡುವಿಲ್ಲದೆ ಮುಂದರಿಯುತ್ತಿದೆ. ರಂಗಭೂಮಿ ಮತ್ತು ಪ್ರೇಕ್ಷಕರು ಕೂಡುವ ಸ್ಥಳ ಸಮಪಾತಳಿಯಲ್ಲಿಯೇ ಇರುವುದು; ಅರ್ಥಾತ್ ನೆಲ. ೧೮ನೆಯ ಶತಮಾನದಲ್ಲಿ ಗುಡಂಗಗಳ ಮುಂದೂ 'ಭವಾಯಿ' ಪ್ರಾರಂಭವಾಗಿ ಕಳೆ ಮಟ್ಟಕ್ಕೇರಿಯಿತು. ಹಳ್ಳಿಗಳಲ್ಲಿ ಪಟ್ಟಿ ಹಾಕಿ ಆಡಿಸುತ್ತಿದ್ದರು. ಗಾಣಿಗ ಎಣ್ಣೆ, ಕುಂಬಾರ ಮಣ್ಣಿನ ಪಾತ್ರೆಗಳನ್ನು 'ಭವಾಯಿ' ಪಂಗಡದವರಿಗೆ ಕೊಡುತ್ತಿದ್ದರು.

೧೧೫೦–೧೨೫೦ರ ಶತಮಾನಾವಧಿಯಲ್ಲಿ ಇಪ್ಪತ್ತ ಮೂರು ಗುಜರಾತೀ ನಾಟಕಗಳು ರಚಿತವಾಗಿದ್ದವು. ರಾಮಚಂದ್ರ ಮತ್ತು ಗುರೂಭಾಯಿ ಗುಣಚಂದ್ರರು ಸೇರಿ 'ದಶರೂಪ'ದ ಆಧಾರದ ಮೇಲೆ 'ನಾಟ್ಯದರ್ಪಣ'ವನ್ನು ಬರೆದರು.

'ರಾಸ' ಸಂಗೀತ ನೃತ್ಯ ಗುಜರಾತಿನ ವೈಶಿಷ್ಟ್ಯ. ೧೨ನೆಯ ಶತಮಾನದ ನಂತರ ಪ್ರಾರಂಭವಾಯಿತು. ಕೃಷ್ಣ ಭಕ್ತಿಯ ಪ್ರೇಮಗೀತಗಳೇ ಮುಖ್ಯ.

ಡಾಹ್ಯಾಭಾಯಿ ಧೋಲಸಾ (೧೮೬೭–೧೯೦೭)ರು 'ದೇಶೀಯ ನಾಟಕ ಸಮಾಜ'ವನ್ನು ಸ್ಥಾಪಿಸಿ ಜನಮನಕ್ಕೆ ಹಿಡಿಯುವಂತೆ ನಾಟಕ ಪ್ರದರ್ಶನ ತಂತ್ರದಲ್ಲಿ ಸುಧಾರಣೆಗಳನ್ನು ಮಾಡಿದರು.

ಈ ಸಮಯಕ್ಕೆ ಗುಜರಾತಿಯಲ್ಲಿ ಎರಡು ಬಗೆಯ ನಾಟಕಗಳನ್ನು ಬರೆಯುವ ಭಿನ್ನ ಮಾರ್ಗಗಳೇ ತಲೆದೋರಿದವು. ಒಂದು ಕೇವಲ ಪಾರ್ಸಿ ನಾಟಕ ಕಂಪನಿಗಳಿಗಾಗಿ ನಾಟಕ ರಚನೆ–ಇನ್ನೊಂದು ಸಾಹಿತ್ಯಕ ಗುಣಗಳುಳ್ಳ ನಾಟಕ ರಚನೆ. ಪಾರ್ಸಿ ಕಂಪನಿಗಳು ಗುಜರಾತದ ಜಾನಪದ ರಂಗಭೂಮಿಯನ್ನು ಉಳಿಸಿದವು, ಬೆಳೆಯಿಸಿದವು.

೧೯ನೆಯ ಶತಮಾನದಲ್ಲಿ ಆಂಗ್ಲ ನಾಟಕಗಳ ಪ್ರಭಾವದಿಂದ ಗುಜರಾತಿ ರಂಗಭೂಮಿ ಪುನರುಜ್ಜೀವನ ಪಡೆಯಿತು. ರಣಛೋಡಭಾಯಿ ಉದಯರಾಮ (೧೮೩೭–೧೯೨೩) 'ಶೇಕಪಿಯರ ಕಥಾಸಮಾಜ' ಸ್ಥಾಪಿಸಿದರು.

ಕೆ. ಎಂ. ಮುನಶಿಯವರು ಪೌರಾಣಿಕ ಸಾಮಾಜಿಕ ನಾಟಕಗಳನ್ನು ಬರೆದು, ಗುಜರಾತೀ ನಾಟಕಗಳನ್ನು ಭಾರತೀಯ ಭಾಷೆಗಳಲ್ಲಿಯ ಸಮಕಾಲೀನ ನಾಟಕ ಬೆಳ



ಹಬ್ಬದ ಹಂಚಿಕೆಗೆ ಹೋಗ್ತಿದ್ದೀಯಾ....! ಎಡಗಡೆ ಇರೋ ಗಲ್ಲೀರಸ್ತೆಯಲ್ಲೇ ಹೋಗು.... ಬಲಗಡೆ ಸೀರೆ ಅಂಗಡಿಗಳ ಕಡೆ ತಿರುಗಿಬಿಟ್ಟೀಯಾ.... ತುಂಬಾ ಅಪಾಯ ಸಂಗೆ.....
—ಬಿ ಟಿ




ವಣೆಗೆಗೆ ಸರಿಜೋಡಿ ಸ್ಥಾನದಲ್ಲಿ ನಿಲ್ಲಿಸಿದರು. ಹೊಸ ದೃಷ್ಟಿ, ಹೊಸ ತಂತ್ರಗಳನ್ನು ಬಳಸಿಕೊಂಡು ಗುಜರಾತೀ ರಂಗಭೂಮಿಯ ಪ್ರಗತಿಗೆ ಮಹತ್ವಪೂರ್ಣ ಸೇವೆ ನೀಡಿದರು. ಜಯಶಂಕರರು ೧೯೦೧–೩೨ರ ವರೆಗೆ ಕೇವಲ ಸ್ತ್ರೀ ಪಾತ್ರಗಳನ್ನು ಅಭಿನಯಿಸಿದರು.

ಕಳೆದ ಇಪ್ಪತ್ತೈದು–ಮೂವತ್ತು ವರ್ಷಗಳಲ್ಲಿ ಗುಜರಾತೀ ರಂಗಭೂಮಿ, ಬಂಗಾಲ, ಮಹಾರಾಷ್ಟ್ರಗಳಿಗೆ ಸರಿಸಮವಾಗಿ ಪ್ರಗತಿ ಸಾಧಿಸಿದೆ. ಅಮೇಚೂರ ಸಂಸ್ಥೆಗಳು ನವ ನಾಟಕಗಳನ್ನು ನವ ವಿಧಾನಗಳನ್ನು ಬಳಸಿ ಆಡುತ್ತಿದ್ದಾರೆ. ಒಟ್ಟಿನಲ್ಲಿ ಗುಜರಾತಿ ರಂಗಭೂಮಿ ಕಾಲಕ್ಕೆ ತಕ್ಕಂತೆ ಬೆಳೆಯುತ್ತಿದೆ.

## ಮರಾಠಿ ರಂಗಭೂಮಿ

'ತಮಾಶಾ' ಮಹಾರಾಷ್ಟ್ರದ ಲೋಕ ನಾಟ್ಯ ಮನರಂಜನೆ. ೧೮ನೆಯ ಶತಮಾನದಲ್ಲಿ ರಾಜರು, ಪಾಳೆಯಗಾರರ ಮನರಂಜನೆಗಾಗಿ ಹುಟ್ಟಿತು. ಕಾಮ ಪ್ರಚೋದಕ ಹಾಡು, ನೃತ್ಯಗಳೇ ಪ್ರಧಾನ. 'ತಮಾಶಾ' ಕೀಳು ಅಭಿರುಚಿಯ ಮಟ್ಟಕ್ಕೆ ಇಳಿದಿತ್ತು. ಹೆಂಗಸರೇ ಪಾತ್ರಧಾರಿಗಳು. ಇಂದಿಗೂ ಊರೂರು ಅಲೆಯುವ 'ತಮಾಶಾ' ತಂಡಗಳಿವೆ. ಇತ್ತೀಚೆ ಇವುಗಳಲ್ಲಿಯ ಅಶ್ಲೀಲ ಭಾಗ ಸಾಕಷ್ಟು ಕಡಿಮೆಯಾಗಿದೆ.

೧೭೨೮ರಲ್ಲಿ, ಶ್ಯಾಮಜೀ ನಾಯಿಕ ಕಾಳೆ ಎಂಬವರು ಕರ್ನಾಟಕದ 'ದಶಾವತಾರ'ವೆಂಬ ಹೊಸ ನಾಟಕವನ್ನು ಕೊಂಕಣಕ್ಕೆ ತಂದರು. ಕಾಳೆಯವರ ಜೊತೆಗಾರ, ಶಿವರಾಮ ನಾಯಕ ಗೋಡಬೋಲೆ, "ಲಿಂಗಾಯತ ಗುರುವೊಬ್ಬರು ನಮ್ಮಿಬ್ಬರಿಗೂ 'ದಶಾವತಾರ' ಕಲಿಸಿದರು. ನಾವು ನಾಟಕ ಪ್ರಯೋಗ ಕಾರ್ಯ ಪ್ರಾರಂಭಿಸಿದೆವು" ಎಂದು ಹೇಳಿರುವರು.

೧೮೪೩ರಲ್ಲಿ ಸಾಂಗಲಿ ಅಧಿಪತಿ ಚಿಂತಾಮಣಿರಾವ್ ಪಟವರ್ಧನರ ಪ್ರೋತ್ಸಾಹನೆಯಿಂದ ವಿಷ್ಣುದಾಸ ಭಾವೆಯವರು ಕರ್ನಾಟಕ ನಾಟಕದ ಮಾದರಿಯ ಮೇಲೆ 'ಸೀತಾ ಸ್ವಯಂವರ'ವೆಂಬ ಪ್ರಥಮ ಮರಾಠಿ ನಾಟಕ ರಚಿಸಿ, ಪ್ರಯೋಗಿಸಿದರು.

ಮರಾಠಿ ರಂಗಭೂಮಿಯ ಉಗಮಕ್ಕೆ ಕರ್ನಾಟಕದ ನಾಟಕವೇ ಮೂಲ ಪ್ರೇರಣೆ ಎಂಬಲ್ಲಿ ಸಂದೇಹವಿಲ್ಲ.

ತಂಜಾವೂರಿನ ಮರಾಠಿ ಅರಸ ಶಹಾಜಿ (೧೬೮೪–೧೭೧೧), ಸರಫೋಜಿ (೧೭೯೮–೧೮೩೨)ಯ ಆಳಿಕೆಯಲ್ಲಿ ರಚಿತವಾದ ಮೂವತ್ತೈದು ಮರಾಠಿ ನಾಟಕಗಳು ಉಪಲಬ್ಧವಿವೆ. ಆದುದರಿಂದ ಮರಾಠಿ ನಾಟಕ ಸಾಹಿತ್ಯ ಪ್ರಾಚೀನತೆ, ವಿಷ್ಣುದಾಸ ಭಾವೆಯವರಿಗಿಂತ ಹಿಂದೆ ಹೋಗುತ್ತದೆ ಎಂದು ಕೆಲವರ ಮತ. ಆದರೆ ಸಾಮಾನ್ಯವಾಗಿ ಮರಾಠಿ ವಿದ್ವಾಂಸರು, ವಿಮರ್ಶಕರು ವಿಷ್ಣುದಾಸ ಭಾವೆಯವರಿಂದಲೇ ನಾಟಕ, ರಂಗಭೂಮಿಗಳ ಉದಯವೆಂದು ಗ್ರಹಿಸಿರುವರು.

೧೮೫೬ರಲ್ಲಿ ಮುಂಬಯಿಯಲ್ಲಿ 'ಅಮರಚಂದ ವಾಡೀಕರ ನಾಟಕಕಾರ'ರು ತಮ್ಮ ನಾಟಕ ಪ್ರಾರಂಭಿಸಿದರು. ಮುಂಬಯಿಯ ಆಂಗ್ಲ ಶಿಕ್ಷಣ ಪಡೆದ ವರ್ಗದಲ್ಲಿ ಪ್ರಹಸನ 'ಫಾರ್ಸ'ಗಳ ಹವ್ಯಾಸ ಹೆಚ್ಚಿತು. ಪೌರಾಣಿಕ ನಾಟಕದ ನಂತರ ಅರ್ಧ ಗಂಟೆ ಹಾಸ್ಯ ಪಾತ್ರಾಭಿನಯ ಕಾರ್ಯಕ್ರಮ ರೂಢಿಯಾಗಿ ಬೆಳೆದು ಬಂದಿತು. ಹಾಸ್ಯ ಪಾತ್ರಾಭಿನಯದ ಸಂಭಾಷಣೆ ಪ್ರಾರಂಭದಲ್ಲಿ ಅರ್ಧ ಲಿಖಿತ, ಅರ್ಧ ಅಲಿಖಿತ ಇರುತ್ತಿತ್ತು. ೧೮೭೦ರ ವೇಳೆಗೆ ಸಂಭಾಷಣೆ ಪೂರ್ಣ ಬರೆದಿಡುವ ಪದ್ಧತಿ ಪ್ರಾರಂಭವಾಯಿತು.

ಮರಾಠಿ ರಂಗಭೂಮಿಯನ್ನು ಕಂಡ ಪ್ರಥಮ ಮುದ್ರಿತ ನಾಟಕ (೧೮೬೧)ವೆಂದರೆ, ವಿನಾಯಕ, ಜನಾರ್ದನ, ಕೀರ್ತನೆಯವರ 'ಥೋರಲೇ ಮಾಧವ ರಾವ್ ಪೇಶವೆ', ಐತಿಹಾಸಿಕ ನಾಟಕ.

೧೮೫೦ರಿಂದ ಸುಮಾರು ಹದಿನೈದು ವರ್ಷಗಳಲ್ಲಿ ಸಂಸ್ಕೃತದಲ್ಲಿಯ ಪ್ರಮುಖ ನಾಟಕಗಳೆಲ್ಲ ಮರಾಠಿಗೆ ಭಾಷಾಂತರವಾಗಿ ರಂಗ ಮಂಚವನ್ನೇರಿ ಜನಪ್ರಿಯವಾದವು. ಶಾಸ್ತ್ರೀಯ ಮಂಡಲಿಯು ಮೂಲ ಸಂಸ್ಕೃತ ನಾಟಕಗಳಲ್ಲಿಯ ಕಥಾವಸ್ತು, ಸಂಭಾಷಣೆಗಳಿಗೆ ಕತ್ತರಿ ಪ್ರಯೋಗ ಮಾಡಿ, ಪ್ರೇಕ್ಷಕರಿಗೆ ಹಿಡಿಸುವಂತೆ ಮಾರ್ಪಡಿಸಿಕೊಂಡರು. ಮರಾಠಿ ರಂಗಭೂಮಿಯ ಚರಿತೆಯಲ್ಲಿ ಸಂಸ್ಕೃತ ನಾಟಕಗಳ ಪ್ರಭಾವ ಅಚ್ಚಳಿಯದಿದೆ.

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಆಂಗ್ಲ ನಾಟಕಗಳ ಭಾಷಾಂತರ, ರೂಪಾಂತರಗಳಿಂದ ಮರಾಠಿ ರಂಗಭೂಮಿ ಸಮೃದ್ಧವಾಯಿತು. ನಾಟಕೀಯ ಕಲಾತ್ಮಕ ದೃಷ್ಟಿ ಜನ ಮನ ಸೆಳೆಯಿತು. ನಾಟಕೀಯತೆ ಪ್ರಜ್ಞೆ ಪ್ರಗಲ್ಭಗೊಂಡಿತು. ಮಹಾರಾಷ್ಟ್ರೀಯ ಸಮಾಜಕ್ಕೆ ಹೊಂದಿಕೊಳ್ಳುವಂತೆ ಹೆಸರು, ವಸ್ತು, ಸಂಭಾಷಣೆ, ವೇಷ-ಭೂಷಣಗಳು ಬದಲಾವಣೆ ಹೊಂದಿದವು. ಇಂಗ್ಲೀಷ ನಾಟಕಗಳ ತಂತ್ರ ವಿಧಾನ ಮಾತ್ರ ಉಳಿಸಿಕೊಂಡರು. 'ತಾರಾ' ನಾಟಕ ಪದ್ಧತಿ ಬಳಕೆಯಲ್ಲಿ ಬಂದಿತು.

೧೮೬೦ರ ಸುಮಾರಿನಲ್ಲಿ ವಿಷ್ಣುದಾಸೀ ಪದ್ಧತಿ ಮತ್ತು ಸಂಸ್ಕೃತ ನಾಟಕ ಪದ್ಧತಿಗಳ ಮಿಶ್ರ ರೂಪವೊಂದು ಸಿದ್ಧವಾಯಿತು. ರಂಗಭೂಮಿಯಿಂದ ಸೊಂಡೆಯ ಗಣಪತಿ, ನವಿಲುಏರಿದ ಸರಸ್ವತಿ, ನಾಟಕದುದ್ದಕ್ಕೂ ವಿದೂಷಕನ ಸಂಚಾರ ಮುಂತಾದವು ಮರೆಯಾದುವು. ಸಂಗೀತಕ್ಕೆ ಮಾನ್ಯತೆ ದೊರೆಯಿತು.

ಕಿರ್ಲೋಸ್ಕರರು ಪೌರಾಣಿಕ ನಾಟಕಗಳಲ್ಲಿ ಕ್ರಾಂತಿಕಾರಕ ಸುಧಾರಣೆಗಳನ್ನು ಮಾಡಿ, ೧೮೮೨ರಲ್ಲಿ 'ಸೌಭದ್ರ' ಸಂಗೀತ ನಾಟಕವನು ಪ್ರಯೋಗಿಸಿದರು. ನಿಜವಾದ ಮರಾಠಿ ರಂಗಭೂಮಿ 'ಸೌಭದ್ರ'ದಿಂದಲೇ ಪ್ರಾರಂಭವೆಂದು ಮರಾಠಿ ಸಾಹಿತ್ಯಕಾರರ ಅಭಿಪ್ರಾಯ. ಕಿರ್ಲೋಸ್ಕರರ ಪೂರ್ವಯುಗ ಅಂಧಯುಗ. ನಾಟಕೀಯತೆಯ ಸ್ಪಷ್ಟ ಅರಿವು ಮೂಡಿರಲಿಲ್ಲ. ನಾಟಕ ಪಾತ್ರಧಾರಿಗಳಿಗೆ ಮನ್ನಣೆಯಿರಲಿಲ್ಲ. 'ಸೌಭದ್ರ' ಪರಿವರ್ತನೆಯನ್ನು ತಂದಿತು.

ಆಗ ನವಯುಗ ಕಾಲಿರಿಸಿದರೂ ಸ್ತ್ರೀ ಪಾತ್ರಕ್ಕೆ ಸ್ತ್ರೀಯರಿರಲಿಲ್ಲ. ಗೃಹಿಣಿಯರು ಕಂಪನಿ ನಾಟಕ ನೋಡಲು ಹೋಗುತ್ತಿರಲಿಲ್ಲ. ೧೯೨೦ರ ನಂತರ ರಾಜಕೀಯ ಪ್ರಕ್ಷುಬ್ಧ ವಾತಾವರಣ. ದೇಶ, ಸಮಾಜ, ಕುಟುಂಬ ಸಮಸ್ಯೆಗಳ ಕಡೆಗೆ ನಾಟಕಕಾರರ ದೃಷ್ಟಿ ಒಲಿಯಿತು.

ಶ್ರೀಪಾದ, ಕೃಷ್ಣ, ಕೋಲ್ಹಟಕರರು (೧೮೯೬–೧೯೧೦) ನಾಂದಿ, ಸೂತ್ರಧಾರ–ನಟಿಯರ ಪ್ರವೇಶಗಳನ್ನು ಕಿತ್ತೊಗೆದರು. ಪೌರಾಣಿಕ ನಾಟಕ ನಿಲ್ಲಿಸಿದರು. ಸ್ವತಂತ್ರ ಸಾಮಾಜಿಕ ನಾಟಕಗಳು ತಲೆಯೆತ್ತಿದವು. ಕೃತ್ರಿಮತೆ, ಕಾಲ್ಪನಿಕತೆಗಳ ಕೈ ಮೇಲಾಯಿತು. ಭಾಷೆ ಗ್ರಾಂಥಿಕ ರೂಪ ತಳೆಯಿತು. ಕಥಾನಕ ರಹಸ್ಯಮಯವಾಗತೊಡಗಿತು. ತಾರ್ಕಿಕ, ಯುಕ್ತಿವಾದ, ಕಲ್ಪನಾ ವಿಲಾಸ ಮೋಹ ಸುಶಿಕ್ಷಿತ ತರುಣರಿಗೆ ಹಿಡಿಸಿದವು. ಹಾಸ್ಯಕ್ಕೆ ಯೋಗ್ಯ ಸ್ಥಾನ ಲಭಿಸಿತು. ಗಡಕರಿ, ಮಾಮಾ ವರೇರಕರರು ಕೋಲ್ಹಟಕರರ ಮಾರ್ಗವನ್ನೇ ಅನುಸರಿಸಿದರು.

ಕೃಷ್ಣಾಜೀ ಪ್ರಭಾಕರ ಖಾಡಿಲಕರರು ದೃಶ್ಯ ನಾಟಕ ಉತ್ಕಟವಾಗಿರಬೇಕು; ಸಂಘರ್ಷಣೆಯೇ ಮೂಲ ಬೀಜ ಎಂಬ ದೃಷ್ಟಿಯಿಂದ ನಾಟಕಗಳಲ್ಲಿ ತಾತ್ವಿಕ ಚರ್ಚೆ ತಿಕ್ಕಾಟಗಳನ್ನು ತುಂಬಿದರು.

ಮರಾಠಿ ರಂಗಭೂಮಿ ದ್ವಿಜ. ಭಾವೆಯವರ 'ಸೀತಾ ಸ್ವಯಂವರ'ದಿಂದ ಹುಟ್ಟಿತು. ಕಿರ್ಲೋಸ್ಕರರ 'ಸೌಭದ್ರ

ಸೌಭದ್ರ', 'ಶಾಕುಂತಲ'ಗಳಿಂದ ರಂಗಭೂಮಿಯು ದೀಕ್ಷೆ ಪಡೆಯಿತು.

ಪೇಶವೆಯವರ ಕಾಲದಲ್ಲಿ ದಶಾವತಾರ, ತಮಾಶಾ ಗೋಂಧಳ, ಬಹುರೂಪೀ ಲಳಿತ, ಮುಂತಾದ ಲೋಕ ನಾಟ್ಯಗಳ ಪ್ರದರ್ಶನ ನಡೆಯುತ್ತಿತ್ತು.

ಸುಗ್ಗಿಯ ನಂತರ ಜಾತ್ರೆ, ದೇವೋತ್ಸವ ಕಾಲಗಳಲ್ಲಿ ದಶಾವತಾರೀ ಆಟಗಳನ್ನು ಆಡುತ್ತಿದ್ದರು. ದೇವಾಲಯವೇ ರಂಗಭೂಮಿ. ಹರಿದಾಸನೇ ಸೂತ್ರಧಾರ. ಅವನ ವೇಷವೆಂದರೆ, ಒಂದು ಕಫನಿ, ಟೊಪ್ಪಿಗೆ, ಮೈ ಮೇಲೊಂದು ಮೇಲುದ. ದೇವತಾ ಪ್ರಾರ್ಥನೆಯ ನಂತರ ಹರಿದಾಸ ಕರೆದ ಪಾತ್ರಗಳು ಬಂದು ಭಾಷಣ ಮಾಡುವುದು. ಸ್ಥಳ, ಕಾಲ ಬದಲಾವಣೆಗಳ ಸೂಚನೆಯನ್ನು ಪದ್ಯಗಳಿಂದಲೇ ಸೂಚಿಸುವರು. ರಥ ಏರುವುದು, ಯುದ್ಧ ಮುಂತಾದವನ್ನು ನತ್ಯಾಭಿನಯಗಳಿಂದಲೇ ಪೂರೈಸುವರು.

ಮರಾಠಿ ಪೌರಾಣಿಕ ನಾಟಕಗಳ ಪ್ರಯೋಗ ಪದ್ಧತಿ ಸಾಮಾನ್ಯವಾಗಿ ಸಂಸ್ಕೃತ, ನಾಟಕಗಳ ಜಾಡಿನಲ್ಲಿಯೇ ಮುಂದರಿಯಿತು. 'ನರಸಿಂಹಾವತಾರ' ಮೊದಲಾದ ಭಯಾನಕ ನಾಟಕಗಳನ್ನು ನೋಡಲು ಬಾಲಕರು ಮತ್ತು ಗರ್ಭಿಣಿ ಸ್ತ್ರೀಯರನ್ನು ಬಿಡುತ್ತಿರಲಿಲ್ಲ. ಹನುಮಂತನಿಗೆ ಕಟ್ಟಿಗೆಗದ್ದ; ಗಣಪತಿಗೆ ಅಲುಗಾಡುವ ಸೊಂಡೆ, ಋಷಿ ಪಾತ್ರಕ್ಕೆ ಮೂಗು ಮುಖ್ಯವಾಗಿರುವವನ ಆಯ್ಕೆ, ದೇವ ಸಭೆ, ರಾಕ್ಷಸ ಸಭೆ, ಸ್ತ್ರೀ ಸಭೆಗಳಿಗೆ ನಾಲ್ಕಾರು ಕುರ್ಚಿಗಳು,ಬಯಲು ಜಾಗೆಯಲ್ಲಿಯೇ ನಾಟಕ ಮಂಟಪ, ಪಾತ್ರಧಾರಿಗಳೆಲ್ಲ ಹಿಂದುಗಳು. ಹಾಡುಗಾರರು ಬ್ರಾಹ್ಮಣರು. ಸಂಸ್ಥಾನಿಕರಿಂದ, ಶ್ರೀಮಂತರಿಂದ ವ್ಯವಸಾಯಿ ಕಂಪನಿಗಳಿಗೆ ಉದಾರಾಶ್ರಯ ಈ ಕಂಪನಿಗಳು. ಊರೂರು ಅಲೆಯುತ್ತಿದ್ದುದರಿಂದ ಸಾಧನ ಸಾಮಗ್ರಿ ನಿಯಮಿತ ತಾಂತ್ರಿಕ ಪ್ರಗತಿ ಸಾಧ್ಯವಾಗಲಿಲ್ಲ.

ಕೊಲ್ಲಾಪುರಕರ ಮಂಡಳಿ ಬಣ್ಣದ ಪರದೆಯನ್ನು ೧೮೭೩ರಲ್ಲಿ ಪ್ರಥಮ ಸಲ ಉಪಯೋಗಿಸಿತು. ಪರದೆಗಳ ಮೇಲೆ ಸುಂದರ ಮಹಾಲು, ಉಪವನ, ಅರಣ್ಯ, ದೇವಾಲಯ, ರಸ್ತೆ, ಮೊದಲಾದ ಚಿತ್ರಗಳನ್ನು ಬರೆಯಿಸುತ್ತಿದ್ದರು. ಆಂಗ್ಲ ಪದ್ಧತಿಯ ಚಿತ್ರ ಕಲಾಭ್ಯಾಸ ಪರಿಣಾಮವಾಗಿ ಮುಂಬೈಯ ಇಮಾರತಿಗಳು, ರೇಲ್ವೆ ಗಾಡಿ, ಗಡಿಯಾರ, ಗೋಪುರ, ಗಿರಣಿ, ಮೊದಲಾದ ಚಿತ್ರಗಳು ಕಾಣಿಸಿಕೊಂಡವು. ದೊಡ್ಡ ಪಟ್ಟಣಗಳಲ್ಲಿ ನಾಟ್ಯ ಗೃಹಗಳ ಬಾಡಿಗೆ ಏರತೊಡಗಿತು. ಅದರಿಂದ ದೀಪದ ವ್ಯವಸ್ಥೆ, ಪರದೆ, ಹೆಚ್ಚಿನ ಸೀನುಗಳು ಖುರ್ಚಿ ಟೇಬಲ್ ಕನ್ನಡಿ ಮೊದಲಾದ ವಸ್ತುಗಳ ಪೂರೈಕೆಯೂ ಆಗತೊಡಗಿತು. ಇದರಿಂದ ಕಂಪನಿ ನಾಟಕಗಳ ಭಾರ ಕಡಿಮೆಯಾಯಿತು.

ಭಾವುರಾವ್ ಫಡಕೆ ಎಂಬ ಬೆಳಗಾಂವಿಯ ಶಿಕ್ಷಕರು 'ಡ್ರಾಪ್ ಕರ್ಟನ್' ತಯಾರಿಸಿದರು. ಅದರಲ್ಲಿ ಕುರುಂದವಾಡ ನದಿಯ ಘಾಟ್, ಕಟ್ಟಡ, ಊರಲ್ಲಿ ಹೋಗುವ ಮಾರ್ಗಗಳನ್ನು ಚಿತ್ರಿಸಿದ್ದರು. ಪುರುಷ ಪಾತ್ರಗಳ ವೇಷ ಗ್ವಾಲ್ಹೇರ ಇಂದೂರ ಭಾಗದ ಸಂಸ್ಥಾನಿಕರ ರೀತಿಯದು. ಪುರುಷರ ಮೀಸೆ, ಸ್ತ್ರೀಯರ ಹೆಳಲು, ಋಷಿಗಳ ಜಟೆ–ಗಡ್ಡಗಳಿಗೆ ಬೇಕಾಗುವ ಕೂದಲು ಕಟ್ಟಿಕೊಂಡು ಇಟ್ಟಿರುತ್ತಿದ್ದರು. (ಇತ್ತೀಚೆ ಕೂದಲಿಗೆ ಬೋಳುದಲೆಗೆ ಸಂಬಂಧಿಸಿದ ಅನೇಕ ಸಲಕರಣೆಗಳು ಇವೆ.) ಕಿರ್ಲೋಸ್ಕರ ನಾಟಕ ಕಂಪನಿಯವರು ಊದಿನಕಡಿ ಹಚ್ಚಿ, ಲೋಬಾನ, ಹಾಕದೆ ನಾಟಕ ಪ್ರಾರಂಭಿಸುತ್ತಿರಲಿಲ್ಲ. ಈ ಕಂಪನಿ ಗಣಪತಿ, ಸರಸ್ವತಿ, ವಿದೂಷಕ, ಗಂಧರ್ವ ಮೊದಲಾದವರ ಪ್ರವೇಶಕ್ಕೆ ಸಂಚಕಾರ ಕೊಟ್ಟಿತು. ಸ್ತ್ರೀ ಪಾತ್ರಗಳಿಗೆ ಮರಾಠೀ ಸಂಪ್ರದಾಯದ ಒಂಬತ್ತು ವಾರಿನ ಸೀರೆಯೇ ಬೇಕು. ಸಂಭಾಷಣೆಯಲ್ಲಿ ಕಿರುಚುವುದು ನಿಂತಿತು. ಸಾಮಾನ್ಯ ಸಹಜ ಧ್ವನಿ ಮಟ್ಟಕ್ಕಿಳಿಯಿತು. ಸ್ವಗತ–ಭಾಷಣ ವಾಸ್ತವ ವೇಷ–ಭೂಷಣ, ಕಥಾನಕ, ಸಂಗೀತ, ಅಭಿನಯಗಳಿಗೆ ಮಹತ್ವ ಬರತೊಡಗಿತು.

೧೯೨೦–೨೫ರ ನಂತರದ ಕಾಲದಲ್ಲಿ ಇಬ್ಸನ್, ಕಾಮು, ಗಾಲ್ಸವರ್ದಿ ಚೆಕಾವ್, ಮೊದಲಾದವರ ಅಂಧಾನುಕರಣಕ್ಕೆ ಮೊದಲಾಯಿತು. ಸಂಗೀತ ಪ್ರಧಾನ ನಾಟಕಗಳಿಗೇ ಮೋಹಗೊಂಡಿದ್ದ ಮರಾಠಿ ಪ್ರೇಕ್ಷಕರಿಗೆ ಹೊಸ ವಿಧಾನದ ನಾಟಕಗಳನ್ನು ತೋರಿಸಬೇಕೆಂಬ ಆಸೆಯಿಂದ, ೧೯೩೦ರ ಮಧ್ಯದಲ್ಲಿ–ಅನಂತ ಕಾಣೇಕರ, ವಿ. ವರ್ತಕ, ಕೆ. ನಾರಾಯಣ ಕಾಳೆ–ಈ ಮೂವರು ಸೇರಿ 'ನವೇ ನಾಟಕ ಹವೇ ಮಂಡಳಿ'ಯನು ಸ್ಥಾಪಿಸಿ, ಅದರ ಮುಂಖಾಂತರ 'ನಾಟ್ಯ ಮನ್ವಂತರ' ಸಂಸ್ಥೆಯನ್ನು ಪ್ರಾರಂಭಿಸಿದರು. ರಂಗಭೂಮಿ ಹಳೆಯದೇ. ನಾಟಕ ಹೊಸವು; ಜನ ಹೊಸಬರು, 'ನಾಟ್ಯ ಮನ್ವಂತರ'ದಿಂದ ಮರಾಠಿ ರಂಗಭೂಮಿಯ ತಂತ್ರದಲ್ಲಿ ದೊಡ್ಡ ಬದಲಾವಣೆಯಾಯಿತು. ಮರಾಠಿ ನಾಟಕಕಾರರ ಮೇಲೆ ಅತ್ಯಾಧುನಿಕರಲ್ಲಿ ಕೆಲವರ ಮೇಲೆ ಮಾತ್ರ ಅಸಂಗತ ಪಂಥದ (ಆ್ಯಬ್‌ಸರ್ಡ ಡ್ರಾಮಾ) ಪ್ರಭಾವ ಬೀರಿತು. ವಿಜಯ ತೆಂಡೂಲಕರ ಮೊದಲಾದವರು ಈ ಬಿರುಗಾಳಿಯಲ್ಲಿ ಸಿಕ್ಕರು.

ಹೊಸ ವಾತಾವರಣವೇ ನಿರ್ಮಾಣವಾಯಿತು. ಈ ಪೂರ್ವದಲ್ಲಿಯೇ ಮಾಮಾ ವರೇಕರರ ಅವರು ತಮ್ಮ 'ಲಲಿತ ಕಲಾದರ್ಶ ನಾಟಕ ಮಂಡಳಿ'ಯ ಮೂಲಕ ವಾಸ್ತವ ರಂಗತಂತ್ರವನ್ನು ಮರಾಠಿ ರಂಗಮಂಚಕೆ ತಂದುದು ಹೊಸಬರಿಗೆ ಅನುಕೂಲವಾಯಿತು.

೧೯೪೦-೪೯ರ ನಂತರ ಚಲಚ್ಚಿತ್ರವು ರಂಗಭೂಮಿಯ ನಟ-ನಟಿಯರನ್ನು ಆಕರ್ಷಿಸಿತು. ಸಿನೆಮಾ ಸನ್ನಿವೇಶಗಳ ಅನುಕರಣೆ ರಂಗಮಂಚದಲ್ಲಿ ಕಾಲೂರಿತು. ನಾಲ್ಕಾರು ತಾಸುಗಳ ನಾಟಕಗಳು ಎರಡು ಮೂರು ಗಂಟೆಗೆ ಮುಗಿಯುವಂತೆ ಮೊಟಕಾದುವು.

ಇಂದಿಗೂ ಮರಾಠಿ ರಂಗಭೂಮಿ ಜಾಗ್ರತವಾಗಿದೆ, ರಂಜಿತವಾಗಿದೆ. ಮರಾಠಿ ಪ್ರೇಕ್ಷಕ ವರ್ಗದಲ್ಲಿ ಸಂಗೀತ ನಾಟ್ಯ ಪ್ರೇಮಿಗಳಿಗೂ ಕೊರತೆಯಿಲ್ಲ. ಸಾಮಾಜಿಕ ನವ ನಾಟಕಗಳನ್ನು ಮೆಚ್ಚುವವರಿಗೂ ಅಭಾವವಿಲ್ಲ. ಮುಂಬಯಿ,ಪುಣೆಯಂತಹ ನಗರಗಳಲ್ಲಿ ಮರಾಠಿನಾಟಕಕ್ಕೆ ಮುಂಗಡವಾಗಿ ರಿಸರ್ವ ಮಾಡಿಸಬೇಕಾಗುತ್ತಿದೆ. ಇಷ್ಟರಿಂದಲೇ ನಾಟಕಗಳ ಜನಪ್ರಿಯತೆಯನು ಊಹಿಸಬಹುದು.

ಮರಾಠಿ ರಂಗಭೂಮಿ ದೇಸಿಯತೆಯನ್ನು ಕಾಯ್ದುಕೊಂಡಿದೆ. ಹೊಸತನಕ್ಕೆ ಒಗ್ಗಿಕೊಂಡಿದೆ. ಸಂಪ್ರದಾಯ-ಪ್ರಗತಿಗಳ ಸಮತೋಲನವೇ ಮರಾಠಿ ರಂಗಭೂಮಿಯ ವೈಶಿಷ್ಟ್ಯ. ನಟ-ನಟಿಯರಿಗೆ ಕಲಾವಿದರೆಂಬ ಮನ್ನಣೆಯಿದೆ. ಗೃಹಿಣಿಯರೂ ಪಾತ್ರ ವಹಿಸುವುದು ಕಲಾಸೇವೆಯೆಂಬ ನಿರ್ಮಲಭಾವವಿದೆ. ಮರಾಠಿ ರಂಗಭೂಮಿ ಸನಾತನಿಯೂ ಅಹುದು. ಅತಾಧುನಿಕವೂ ಅಹುದು.

## ತಮಿಳು ರಂಗಭೂಮಿ

ತಮಿಳು ಪ್ರಾಚೀನ ಸಾಹಿತ್ಯದಲ್ಲಿ 'ಕುಟ್ಟು' 'ಕಾಲಕ್ಷೇಪಮ್', ಅಭಿನಯ ಸಂಗೀತ ಮಿಶ್ರಿತ ಅಭಿನಯಗಳ ಉಲ್ಲೇಖಗಳಿವೆ. 'ಇಯಲ್' 'ಇಸ್ಯಾ', 'ನಾಟಕಮ್' ಎಂಬ ಮೂರು ಬಗೆಯ ಪ್ರಕಾರಗಳ ವಿವರಣೆ ದೊರೆಯುತ್ತಿದೆ. ತಮಿಳು ರಂಗಭೂಮಿ ಭರತ ಮುನಿಗಿಂತ ಹಿಂದೆಯೇ ಇತ್ತೇ ? ಎಂಬುದು ವಿವಾದಾಸ್ಪದ.

೭ನೆಯ ಶತಮಾನದಲ್ಲಿ ರಾಜೇಂದ್ರ ವರ್ಮನು ಬರೆದ 'ಭಕ್ತವಿಲಾಸ ಪ್ರವಚನಮ್' ಸಾಮಾಜಿಕ ನಾಟಕ ಉಪಲಬ್ಧವಿದೆ. ತಂಜೂರಿನ ರಾಜ ಚೋಳನ ಕಾಲದಲ್ಲಿ 'ನಲಥಾಂಗಲ' 'ಥೇರುಕುಥ' ಎಂಬ ಸುದೀರ್ಘವಾದ ಲೋಕ ನಾಟಕ ಪ್ರಕಾರಗಳು ಪ್ರಚಲಿತವಾಗಿದ್ದವು. ಸರಫೋಜಿಯ ಕಾಲದಲ್ಲಿ 'ಕುತರಾಲಾ ಕುರಾವನಜೀ' ನಾಟಕ ನಾಟ್ಯ ಮತ್ತು ನೃತ್ಯಶೈಲಿಗಳಿಗೆ ಹೆಸರಾಗಿದ್ದಿತು.




ತಮಿಳುನಾಡಿನಲ್ಲಿ ಲೋಕನಾಟ್ಯ ರಂಗಭೂಮಿಯೂ ಉಂಟು. ಸುಗ್ಗಿ ಕಾಲದ ನಂತರ ಹಳ್ಳಿಯ ಓಣಿಗಳಲ್ಲಿ, ಹೊಲಗಳಲ್ಲಿ 'ತೆರುಕೂಥು' ಎಂಬ ಪೌರಾಣಿಕ ಕಥೆಗಳನ್ನಾಡುವರು. ತಟ್ಟಿ ಮತ್ತು ಗರಿಗಳಿಂದ ರಚಿಸಿದ ರಂಗಭೂಮಿ. ಆಶು ಸಂಭಾಷಣೆ, ನೃತ್ಯ, ಗೀತಗಳ ಸಮ್ಮಿಲನ. ಧ್ವನಿವರ್ಧಕ ಯಂತ್ರವನ್ನು ಇಂದಿಗೂ ಉಪಯೋಗಿಸುವುದಿಲ್ಲ. ವನಸ್ಪತಿಗಳಿಂದ ತಾವೇ ತಯಾರಿಸಿದ ಬಣ್ಣ ಬಳಸುವರು. ಹೆಂಗಸರೇ ಪಾತ್ರಧಾರಿಗಳು. ಕಣ್ಣಿಗೆ ಎದ್ದು ಕಾಣುವಂತೆ ವೇಷ ಕಟ್ಟುತ್ತಾರೆ. ಮೃದಂಗ ಪಿಯಾನೋ ಕಂಚಿನ ವಾದ್ಯಗಳನ್ನು ಉಪಯೋಗಿಸುತ್ತಾರೆ. ಇಬ್ಬರು ಕಸೂತಿ, ಹೆಣೆದ ಪರದೆ ಹಿಡಿದು ಆಟ ಯಾವುದೆಂದು ಪ್ರಕಟಿಸುವರು. ತೆರೆ ತೆಗೆದೊಡನೆ ಆಟ ಆರಂಭ.

ಪಗಲ ವೇಷಂ ಎಂಬ ಪ್ರಕಾರ ಒಂದುಂಟು. ಇದು ಹಗಲು ವೇಷ. ಹಗಲು ಆಟ. ವೇಷಧಾರಿ ಬೇರೆ ಬೇರೆ ವೇಷಗಳನು ಧರಿಸಿ ಊರಲ್ಲಿ ಅಲೆಯುವನು. ಬೇರೆ ಬೇರೆ ವ್ಯವಸಾಯಿಗಳ ಪಾತ್ರ ಧರಿಸುವನು. ಇವನ ವೇಷಗಳು ಕೌಟುಂಬಿಕ ಜೀವನಕ್ಕೆ ಹೊಂದಿಕೊಂಡಿರುತ್ತವೆ. ವೇಷ ಧರಿಸಿ ಹಣಎತ್ತುವನು. ಜನರಿಗೆ ಕೊನೆಗೆ ತಿಳಿಯುತ್ತದೆ. ಇವನು ಪಗಲವೇಷಧಾರಿಯೆಂದು.

೧೮೭೭ರಲ್ಲಿ ಪಾಂಡಿಚೇರಿಯಲ್ಲಿ 'ಶಾರಂಗ' ನಾಟಕ ಪ್ರಯೋಗವಾಯಿತು. ೧೮೭೦-೮೦ರ ಕಾಲದಲ್ಲಿ ಲೋಕಪ್ರಿಯ ರಂಗ ಮಂಚ ಸ್ಥಾಪನೆ. ವಿವಿಧ ನಾಟಕ ಮಂಡಳಿಗಳಿಂದ ಹಳ್ಳಿಗಳಲ್ಲಿಯೂ ನಾಟಕ ಜನಪ್ರಿಯವಾಯಿತು. ಗೀತ, ನೃತ್ಯಗಳಿಗೇ ಪ್ರಾಧಾನ್ಯತೆ.

ತಮಿಳು ರಂಗಭೂಮಿ ಕಳೆದ ಅರ್ಧ ಶತಮಾನದಿಂದ ವ್ಯವಸ್ಥಿತವಾಗಿ ರೂಪುಗೊಂಡಿದೆ. ಇದಕ್ಕೆ ಕಾರಣರಾದ ವ್ಯಕ್ತಿ ಪಮ್ಮಲ್‌ಸಂಬಂದ ಮುದಲಿಯಾರವರು. ಇವರು ಪೌರಾಣಿಕ ನಾಟಕಗಳನ್ನಾಡಿದರು. ನವಾಬ ರಾಜಾ ಮಣಿಕಂರವರ ನಾಟಕಗಳಲ್ಲಿ ಕ್ಷಣ ಕ್ಷಣಕ್ಕೂ ಬದಲಾಗುವ ದೃಶ್ಯ, ತೆರೆಯ ಪಕ್ಕಗಳಲ್ಲಿ ಚಿಕ್ಕ ಸ್ಫೋಟಗಳು ಆಶ್ಚರ್ಯಕರವಾಗಿದ್ದವು. ಸಾಂಪ್ರದಾಯಿಕ ನಾಟಕಗಳಿಂದ ತಮಿಳು ರಂಗಭೂಮಿ ಕಾಲ್ಪನಿಕ ಸಾಮಾಜಿಕ ನಾಟಕಗಳಿಗೆ ಕಾಲಿರಿಸಿತು.

ಪಾಶ್ಚಾತ್ಯ ನಾಟಕಗಳ ಪ್ರತ್ಯಕ್ಷ ಪ್ರಭಾವ ಪಮಿಳಿನಲ್ಲಿ ಕಾಣುತ್ತಿದೆ. ಇಂಗ್ಲೀಷ ನಾಟಕಗಳ ಭಾಷಾಂತರಗಳ ಜೊತೆಗೆ, ಇಂಗ್ಲೀಷ, ನಾಟಕಗಳನ್ನಾಧರಿಸಿ, ತಮ್ಮ ಪ್ರದೇಶ, ಸಮಾಜಗಳಿಗೆ ಹೊಂದುವ ತಮಿಳು ನಾಟಕಗಳ ಬರವಣಿಗೆ ಬೆಳೆಯಿತು. ಟಿ. ಕೆ. ಷಣ್ಮುಗಂ ಸಹೋದರರ ರಂಗಭೂಮಿಯ ಸೇವೆ ಅಸದೃಶವಾಗಿದೆ. ಆಧುನಿಕ ನಾಟಕಗಳನ್ನಾಡಿ ತಮಿಳು ರಂಗಮಂಚವನ್ನು ಸಮಕಾಲೀನ ಎತ್ತರಕ್ಕೆ ತಂದ ಶ್ರೇಯಸ್ಸು ಇವರದು. ಈ ಸಹೋದರರ ನಂತರ ಎಸ್. ವಿ. ಸಹಸ್ರನಾಮಮ್‌ರು ಪ್ರಗತಿಪರ ನಾಟಕಗಳನ್ನು ರಂಗಭೂಮಿಯ ಮೇಲೆ ತಂದು ಹೊಸ ಚೇತನವನ್ನು ತುಂಬಿದರು. 'ಕನ್ನಿಯಾ ಆ್ಯಂಡ ಕಂಪನಿ' ಮತ್ತು 'ಸುಗುಣ ವಿಲಾಸ ಸಭಾ' ಸಂಸ್ಥೆಗಳು ರಂಗಭೂಮಿಯನ್ನು ಸುಸಜ್ಜಿತಗೊಳಿಸಿದವು. ರಂಗಭೂಮಿ ಸೇವೆಯ ಉಚ್ಚ ಪರಂಪರೆಯನ್ನು ಹಾಕಿದುವು.

ಕೆಲವು ವ್ಯವಸಾಯೀ ನಾಟಕ ಕಂಪನಿಗಳು ಪ್ರಗತಿಗೆ ತಕ್ಕಂತೆ ಹೊಂದಿಕೊಳ್ಳದೆ ಹಿಂದುಳಿದವು. ಈ ಬಗೆಯ ಹಿಂದೇಟಿಗೆ 'ಚೋ' ಉರ್ಫ ರಾಮಸ್ವಾಮಿ ಮತ್ತು ಅವರ ಗೆಳೆಯರೂ ಕಾರಣರೆನ್ನಬಹುದು 'ಚೋ'ರವರ 'ಸಂಭವಾಮಿ ಯುಗೇ ಯುಗೇ' ಮತ್ತು 'ತುಘಲಕ'ಗಳು ತಮಿಳು ರಂಗಭೂಮಿಯಲ್ಲಿ ಕ್ರಾಂತಿಯ ನಾಳಿ

ದೀಪಾವಳಿಯು ಸರ್ವರಿಗೂ ಸುಖಪ್ರದವಾಗಲಿ!

ರಾಷ್ಟ್ರೀಯ ಉತ್ಪಾದನೆ

೩೫,೦೦೦ ಕ್ಕೂ ಹೆಚ್ಚಿನ ಕೆಲಸಗಾರರಿಗೆ ಕೆಲಸವನ್ನು ಒದಗಿಸುತ್ತಿದೆ

ಶ್ರೇಷ್ಠವಾದ ವಸ್ತುಗಳಿಂದ ತಯಾರಿಸಲಾಗಿದೆ

# ಮಂಗಳೂರು ಗಣೇಶ ಬೀಡಿಗಳು

ಬೀಡಿ ಸೇದುವವರು ಇವನ್ನು ಎಂದಿಗೂ ಬಿಡುವುದಿಲ್ಲ.

ನಿತ್ಯ ನಾಲ್ಕು ಕೋಟಿಗೂ ಮಿಕ್ಕಿ ಮಾರಾಟ

ಮುಖ್ಯ ಕಚೇರಿ:

## ಮಂಗಳೂರು ಗಣೇಶ ಬೀಡಿ ವರ್ಕ್ಸ್

ವಿನೋಬಾ ಬೀದಿ ಮೈಸೂರು-೧

ತಂತಿ : AROMA :: ಫೋನ್ : 20241

ಬನ್ನೇ ಬೀಸಿದುವು. 'ಚೋ'ರವರ ನಾಟಕಗಳು ಪಡೆದ ಪ್ರಸಿದ್ಧಿ ಅದ್ಭುತ. ತಮಿಳು ರಂಗಭೂಮಿಯ ಇತಿಹಾಸ ದಲ್ಲಿಯೇ ಕಂಡು, ಕೇಳದ ಸಂಗತಿ. 'ಚೋ'ರವರ ನಾಟಕ ಪ್ರಯೋಗಗಳಿಂದ ತಮಿಳು ರಂಗಮಂಚ ಭಾರತೀಯ ಇತರ ಭಾಷೆಗಳ ಪ್ರಗತಿಗೆ ಸರಿದೊರೆಯಾಗಿ ನಿಲ್ಲುವಂ ತಾಯಿತು.

'ಚೋ' ಅವರ ಚುರುಕು ಲೆಕ್ಕಣಿಕೆ, ನಾಟಕದ ರೂಪ ಸತ್ವಗಳಲ್ಲಿಯ ಹೊಸ ತಂತ್ರದ ಬಳಕೆ, ಚುಟುಕು, ವ್ಯಂಗ್ಯ ಹಾಸ್ಯಗಳು ಜನತಿಪ್ರಿಯತೆಗೆ ಕಾರಣವಾದುವು. ಆದರೆ ಕೆಲ ಸಮಯದಲ್ಲಿಯೇ ಇವರ ಭಾಷೆಯ ಬೆಡಗು ತಿರು ಳಿಲ್ಲದ್ದು ಎಂಬ ಅರಿವು ಮೂಡಿ ತಮಿಳು ರಂಗಭೂಮಿ ಯ ದೃಷ್ಟಿಯೇ ಬದಲಾಯಿಸಿತು.

ತಮಿಳು ರಂಗಭೂಮಿ ಆದರ್ಶವಾದದ ಬೆನ್ನು ಹತ್ತಿ ನಿತ್ಯ ಜನಜಿ ವನದಿಂದ ದೂರ ಉಳಿಯಿತು. ಬದಲಾವಣೆ ಹೊಸತರ ಸ್ವೀಕಾರ ತೀರ ನಿಧಾನ ಗತಿ. ಟಾಂಗಾಕುದುರೆ ಯಂತೆ. ಒಂದೇ ದಾರಿಯಲ್ಲಿ ಸಾಗುತ್ತಿದೆ. ಇತ್ತೀಚೆ ದಿಲ್ಲಿಯಲ್ಲಿರುವ 'ಸೌಥ ಇಂಡಿಯನ್ ಥೇಟರ್ಸ' ಮತ್ತು 'ದಕ್ಷಿಣ ಭಾರತ ನಾಟಕ ಸಭೆ'ಗಳು ಹೊಸದನ್ನು ಸ್ವೀಕರಿಸಲು ಮನಸ್ಸುಮಾಡುತ್ತಿವೆ. ಮದ್ರಾಸಿನಲ್ಲಿಯೂ ಈ ಬದಲಾವಣೆ ಬಂದೀತೇ? ಬಂದೀತು! ಮನಸ್ಸಿದ್ದರೆ!!

## ತೆಲುಗು ರಂಗಭೂಮಿ

ಆಂಧ್ರದಲ್ಲಿ ಲೋಕ ರಂಗಮಂಚವುಂಟು. ಕುಚಿ ಪುಡಿ, ಬುರ್‍ರಾಕಥಾ, ಹರಿಕಥಾ, ವೀಧಿ ನಾಟಕಮ್, ಸಮವೇತಗಾನ, ಪರಂಪರಾಗತ ನಾಟಕ ಮುಂತಾದುವು.

'ಕುಚಿಪುಡಿ' ಒಂದು ಹಳ್ಳಿಯ ಹೆಸರು. ೧೭ನೆಯ ಶತಮಾನದಲ್ಲಿ ತೀರ್ಥನಾರಾಯಣ ಯತಿ-ಯೋಗಿ ಯೂ ಅಹುದು-ಅವನ ಶಿಷ್ಯ ಸಿದ್ಧೇಂದ್ರ ಯೋಗಿ ಎಂಬ ಬ್ರಾಹ್ಮಣರು ನೃತ್ಯನಾಟಕ ಪ್ರಾರಂಭಿಸಿದರು. ಆ ಊರಿನ ಬ್ರಾಹ್ಮಣ ಕುಟುಂಬಗಳು ಆ ಕಲೆಯನ್ನು ಮುಂದರಿಸಿಕೊಂಡು ಬಂದರು. ಅಂತೆಯೇ 'ಕುಚಿಪುಡಿ' ಎಂಬ ಹೆಸರು ಬಂದಿತು. 'ಕುಚಿಪುಡಿ' ರಾತ್ರಿ ಆಡುವ ಆಟ. ಬಯಲು ನಾಟ್ಯಗೃಹ. ಪರದೆಯ ಹಿಂಬದಿಯಿಂದ ಪಾತ್ರಗಳ ಪ್ರವೇಶ. ಪಾತ್ರಗಳು ತಮ್ಮ ಸ್ವಂತ ಪರಿ ಚಯ ಹೇಳುವರು. ಗಂಡಸರೂ, ಹೆಂಗಸರೂ ಪಾತ್ರ ವಹಿಸುವರು. ಮುಖ್ಯ ಸಂಗೀತಗಾರ ತನ್ನ ಪರಿವಾರ ದೊಡನೆ ಪ್ರವೇಶಿಸುವನು. ಕೊಬ್ರಿ ಎಣ್ಣೆ ದೀಪದ ಬೆಳಕು. ಅಭಿನಯ ಪ್ರಧಾನವಾದ ನೃತ ಹೆಚು ಸಂಭಾಷಣೆಯೂ ಉಂಟು.

'ಬುರ್‍ರಕಥಾ'ದಲ್ಲಿ ಮೂವರ ಮೇಳ. ಸಂಗೀತ ಪ್ರಧಾನವಾದುದು. ಹಿಂದಕ್ಕೆ-ಮುಂದಕ್ಕೆ ಹೆಜ್ಜೆ ಹಾಕು ವರು. ಇಬ್ಬರು ಜೊತೆಗಾರರು ಡೋಲನ್ನು ಕೊರಳಿಗೆ ತೂಗು ಹಾಕಿಕೊಂಡು, ಅದನ್ನು ಬಾರಿಸುವರು. ಮುಖ್ಯ ಸ್ಥನನ್ನು ಅನುಸರಿಸಿ ಹಾಡುವರು; ಮಾತಾಡುವರು.

'ವೀಧಿ ನಾಟಕ'ಕ್ಕೆ ಬಯಲು ನಾಟ್ಯಗೃಹ. ಎತ್ತರ ವಾದ ರಂಗಭೂಮಿ. ಐದಾರು ಜನ ನಟರು. ಪೌರಾಣಿಕ ಕಥೆಗಳೇ ಹೆಚ್ಚು. ಗಂಡಸರೇ ಹೆಣ್ಣು ಪಾತ್ರ ವಹಿಸು ವರು. ರಂಗಭೂಮಿಯ ಹಿಂಬದಿಯ ಒಂದು ಮೂಲೆ ಯಲ್ಲಿ ಕುಳಿತರೆ ಕಾಣದಷ್ಟು ತಗ್ಗು ಮಾಡಿರುತ್ತಾರೆ. ಆ ತಗ್ಗಿನಲ್ಲಿ ನಟರ ಹೆಂಡತಿಯರು ಮಕ್ಕಳು ಕುಳಿತು ಹಿನ್ನೆಲೆ ಯ ಸಂಗೀತ ಒದಗಿಸುತ್ತಾರೆ. ಪೌರಾಣಿಕ ಸನ್ನಿವೇಶ ಗಳನ್ನು ಇಂದಿನ ಜೀವನಕ್ಕೆ ಹೊಂದಿಸಿಕೊಂಡು ಟೀಕೆ, ವಿಡಂಬನೆ ಮಾಡುವರು.



**ಪ್ರಜ್ವಲಿಸುತಿವೆ!**

ಮಳೆಯಲಿ ತೊಯ್ದು ತಪ್ಪಡಿಯಾಗಿರುವ
ಈ ರಾತ್ರಿ
ಸುಳಿದು ಸೂಸಿ ಮೈಮನ
ಜುಮ್ಮೆನಿಸುವ ಈ ತಂಪು ಗಾಳಿ
ಗಾಳಿಯ ತುಂಬ ತುಂಬಿ
ಚಲಿಸುವ ಈ ಹೂಗಂಧ
ಎಲ್ಲವೂ ನಿನ್ನ ನೆನಪು ಬರಿಸಿ
ವಿಂಹದಗ್ನಿಯ ಪ್ರಜ್ವಲಿಸುತಿವೆ!

— ಪಂಚಾಕ್ಷರಿ ಹಿರೇಮಠ

'ಹರಿ ಥಾ' ಗೀತ ಗದ್ಯ ಮಿಶ್ರಿತವಾದುದು. ನೃತ್ಯಕೆ ಮಹತ್ವ, ನೀತಿಬೋಧಾತ್ಮಕ ಪೌರಾಣಿಕ ಕಥಾವಸ್ತು. ಜನನಾಟ್ಯ' ಸಂಘ ಕಣ್ಮರೆಯಾಗುತ್ತಿದ್ದ 'ಹರಿಕಥಾ ವನ್ನು ಮೇಲೆತ್ತಿತು. ಅದಕ್ಕೆ ಹೊಸ ಸ್ವರೂಪಪಿತ್ತಿತು.

ಕೆ. ವೀರಸಲಿಂಗಮ್ ಪಂತುಲು (೧೮೪೮-೧೯೧೯) ರವರು ತೆಲುಗು ರಂಗಭೂಮಿಯ ಆಧುನಿಕತೆಯ ಪ್ರವರ್ತಕರು. ವೇದಮ್ ವೆಂಕಟ ರಾಮಶಾಸ್ತ್ರಿ ರಂಗ ಭೂಮಿಯ ಸ್ವತಂತ್ರ ಅಸ್ತಿತ್ವದ ಮಹತ್ವವನ್ನು ತಿಳಿಸಿ ಕೊಟ್ಟರು. ರಂಗ ತಾಲೀಮಿನಲ್ಲಿ ಪ್ರತಿಯೊಂದು ವಿವರ ಗಳಿಗೂ ಗಮನ ಕೊಡುತ್ತಿದರು. ಮೇಲಿನ ಈರ್ವರು ಮತ್ತು ಗುಜರಾದ ಅಪ್ಪಾರಾವ್ (೧೮೬೧-೧೯೧೫)ರು ತೆಲುಗು ರಂಗಭೂಮಿಯನ್ನು ಸಂಗೀತನೃತ್ಯ ಪೌರಾಣಿಕ ನಾಟಕಗಳಿಂದ ಮುಕ್ತಗೊಳಿಸಿದರು. ಧರ್ಮಾವರಂ ವೆಂಕಟಕೃಷ್ಣ ಮಾಚಾರಿಯರು ತೆಲುಗಿನಲ್ಲಿ ಪ್ರಥಮ ನಾಟಕಕಾರರು: ತೆಲುಗು ರಂಗಭೂಮಿಯ ಜನಕರು. ಇವರು ನಾಟ್ಯ ಕಲಾಪ್ರಪೂರ್ಣ ಎಂದು ಬಿರುದು ಪಡೆ ದಿದ್ದರು. (ಮ. ೧೯೪೬-, ೬೬ ವರ್ಷ) ಪದ್ಮಶ್ರೀ ಸ್ಥಾನಮ್ ನರಸಿಂಗ ರಾವ್ ನಾಲ್ವತ್ತು ವರ್ಷ ಹೆಣ್ಣು ಪಾತ್ರ ವಹಿಸಿ ಸೇವೆ ಸಲ್ಲಿಸಿದರು.

ಪೀ. ವ್ಹಿ. ಲಕ್ಷ್ಮೀನರಸಿ ಹರಾವ್ ಪಾಶ್ಚಾತ್ಯ ನಾಟಕಗಳ ತಂತ್ರ ಬಳಸಿಕೊಂಡು ಹೊಸತನಕ್ಕೆ ನಾಂದಿ ಇಟ್ಟರು. ಜನ ಭಾಷೆಯ ಬಳಕೆ, ತೆಲುಗು ನಾಟಕಗಳ ಜನಪ್ರಿಯತೆಗೆ ಒಂದು ಪ್ರಬಲ ಕಾರಣ.' ಕೃಷಿಕ ಜೀವನ ಸಮಾಜವಾದೀ ನಾಟಕಗಳು ರಂಗಭೂಮಿಯ ಅಭಿವೃದ್ಧಿಗೆ ಕಾರಣವಾದುವು.

ತೆಲುಗಿನಲ್ಲಿ ಇತರ ಭಾರತೀಯ ಭಾಷೆಗಳಿಂದ ಭಾಷಾಂತರಗಳು ಕಡಿಮೆ. ಏಕಾಂಕಗಳು ಹೆಚ್ಚು. 'ಸುರಭಿ ನಾಟಕ ಕಂಪನಿ'ಯು ಸಂಸ್ಕೃತ ಪರಂಪರೆಯ ರಾಜ್ಯಗಳ ಲ್ಲಿ ಸೀಮಿತವಾದ ತೆಲುಗು ರಂಗಭೂಮಿಯನ್ನು ಜನ ಸಾಮಾನ್ಯರು ಮನೋರಂಜನೆಯ ಸಾಧನವನ್ನಾಗಿಸಿತು. ಬಣ್ಣ, ಪ್ರಕಾಶ ಯೋಜನೆ, ಮನೋಹರ ದೃಶ್ಯಗಳಿಗೆ ಜನತೆ ತಲೆದೂಗಿತು.

ತೆಲುಗು ಚಲಚ್ಚಿತ್ರ ಉತ್ತಮ ನಟರನ್ನು ಕಲಾ ಕಾರರನ್ನು ಆಕರ್ಷಿಸಿದೆ. ರಂಗಭೂಮಿಗೆ ಸಿಗಬೇಕಾದಷ್ಟು ಪ್ರೋತ್ಸಾಹವಿಲ್ಲ. ಸಂಕಟಮಯ ಕಾಲ; ಪ್ರಗತಿ ಕುಂಠಿತ. ತೆಲುಗು ರಂಗಭೂಮಿ ಸಧ್ಯದ ತೊಡಕುಗಳಿಂದ ಮೇಲೆ ಎದ್ದು ಬಂದರೆ ಭವ್ಯ ಭವಿಷ ಕಾದಿದೆ.!

## ಕೇರಳ (ಮಲೆಯಾಳಿ) ರಂಗಭೂಮಿ

ಮಲೆಯಾಳಿ ರಂಗಭೂಮಿ ಸಂಸ್ಕೃತದ ಪರಂಪರೆ ಯನ್ನು ಉಳಿಸಿಕೊಂಡುದಲ್ಲದೆ ದಕ್ಷಿಣಭಾರತ ರಂಗ ಭೂಮಿಗಳಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಬೆಳೆಯಿಸಿ ಕೊಂಡಿದೆ. ಭರತ ಮುನಿಯು ವರ್ಣಿಸಿದ ಅನೇಕ ಅಭಿ ನಯ ಮುದ್ರಾಗಳು ಇಲ್ಲಿ ಕ್ರಿಯಾತ್ಮಕವಾಗಿವೆ. ಪ್ರಾರಂ ಭದಲ್ಲಿ ಸರಳವಾಗಿದ್ದ ಮುದ್ರಾ ಭಾಷೆ ಬರ ಬರುತ್ತ ವಿಧಿ, ನಿಯಮಗಳ ಚೌಕಟ್ಟಿಗೆ ಒಳಪಟ್ಟು ಕಲಾವಿದರ ಭಾಷೆಯಾಯಿತು. ಹೆಚ್ಚು ಸಾಂಕೇತಿಕವಾಯಿತು. ಆದರೆ ಏಕರೂಪತೆಯಿದೆ. ಪ್ರಯೋಗ ಬಲದಿಂದ ಅಶಿಕ್ಷಿತರಿಗೂ ಅರ್ಥವಾಗುತ್ತಿದೆ.

ಕಥಕ್ಕಳಿಯಲ್ಲಿ ಅಭಿನಯ ಮುದ್ರಾಗಳಿಗೆ ಪ್ರಾಧಾನ್ಯತೆ; ಮುದ್ರಾಗಳಲ್ಲಿ ಮೂರು ಬಗೆ: ೧) ಪ್ರಾಕೃತಿಕ; ಸ್ವಾಭಾವಿಕ ಕ್ರಿಯಾಸೂಚಕ. ೨) ಅನುಕರಣಾತ್ಮಕ: ಪ್ರಾಣಿ ಮತ್ತು ಮನುಷ್ಯರ ವಿಶಿಷ್ಟ ಸಭಾವ ಅನುಕರಣೆ. ೩) ಆರಾಧನಾ: ಅಭಯ, ದಾನ, ಆಹ್ವಾನ, ತಾಂತ್ರಿಕ ಮತ್ತು ಮಾಂತ್ರಿಕ ಸಂಕೇತಗಳು.

ಕೇರಳದ ನಾಟ್ಯದೃಶ್ಯಗಳಲ್ಲಿ ಮುಖ್ಯವಾಗಿ ಮೂರು ಭಾಗಗಳು; ಅವುಗಳಲ್ಲಿ ಒಳಭೇದಗಳುಂಟು. ಅವುಗಳ ಸ್ಥೂಲ ವಿವರಣೆ ಇಂತಿದೆ:

೧. ಧಾರ್ಮಿಕ: ಇದರಲ್ಲಿ, ಭಗವತೀಪಟ್ಟು ತಿಯಾಟ್ಟು, ಪಣಾ, ಪಟ್ಟು, ಕಣಿಯಾಡಕಲೀ, ಮಂಟಿ ಯುಟ್ಟು ಎಂದು ಆರು ಪ್ರಕಾರಗಳು.

೨. ಅರ್ಧಧಾರ್ಮಿಕ: ಇದರಲ್ಲಿ ಮೂರು ಬಗೆ ಗಳು- ಸಂಘಕಲೀ, ಕಟ್ಟು, ಕೃಷ್ಣಾಟ್ಟಮ.

೩. ಧರ್ಮನಿರಪೇಕ್ಷ: ಇದರಲ್ಲಿ ಆರು ಭೇದಗಳು. ಏಲಾಮುಟ್ಟಿ ಪರಾಮಟ್ಟು, ತುಳ್ಳಲ, ಕೋರಾಟ್ಟಿ ಮಾಟ್ಟಮ್, ಮೋಹಿನೀಯಾಟ್ಟಮ್, ಕಯುಕೋ ಟ್ಟಿಕ್ಕಲೀ, ಪಥಕಮ್.

ಧಾರ್ಮಿಕ, ಧರ್ಮನಿರಪೇಕ್ಷಗಳು. ದೇಸಿ ಭಾಷೆ ಯಲ್ಲಿ; ಅರ್ಧಧಾರ್ಮಿಕ ಸಂಸ್ಕೃತದಲ್ಲಿ. ಮೇಲಿನ ಒಂದೊಂದು ವಿಭಾಗಗಳೂ ಸಂಗೀತ, ನೃತ್ಯ, ಧ್ವನಿ ಸಂಗೀತ, ಅಭಿನಯ, ಸರಳ ನೃತ್ಯ, ಮುದ್ರಾಗಳ ದೃಷ್ಟಿ ಯಿಂದ ವೈಶಿಷ್ಟ್ಯ ಪೂರ್ಣವಾಗಿವೆ. (ವಿವರಗಳಿಗೆ ಇಲ್ಲಿ ಅವಕಾಶವಿಲ್ಲ.)

ಮಲೆಯಾಳಿ ರಂಗಭೂಮಿಗೆ ಹೆಚ್ಚಿನ ಆಡಂಬರ ಬೇಕಿಲ್ಲ. ಬಯಲು ಜಾಗೆ, ತಾತ್ಕಾಲಿಕ ರಂಗಮಂಚ ಹಿಂದೆ ಬಣ್ಣದ ಅರಿವೆ, ದೀಪ, ಬೆಳಕಿಗಾಗಿ ಮೂರು ಘೂಟು ಎತ್ತರದ ಸಮೆಗಳು ಸಾಕು. ವೇಷ-ಭೂಷಣ ಆಕರ್ಷಕವಾಗಿರುತ್ತವೆ. ಪಾತ್ರಗಳಿಗೆ ಬಣ್ಣಕೊಡುವ ವಿಧಾನಗಳು ಹಲವು ರೀತಿಯಾಗಿವೆ. ಪಾತ್ರಧಾರಿಯೇ

ಸಂಗೀತ ಹೇಳುವ ಪದತಿ ಇತ್ತೀಚೆ ನಿಂತಿದೆ. ಹಿನ್ನೆಲೆ ಗಾಯಕ, ವಾದ್ಯವೃಂದ ಮಂಡಳಿ ಇರುತ್ತವೆ. ಕೇರಳ ರಂಗಭೂಮಿಗೆ ಕಲಿತವರು; ನಿರಕ್ಷರಿಗಳು ಎಂಬ ಭೇದ ಭಾವವಿಲ್ಲ.

ಆಧುನಿಕ ನಾಟಕಗಳ ಸಂಖ್ಯೆ ಕಡಿಮೆ. ಇಂಗ್ಲೀಷ ಪ್ರಭಾವದಿಂದ ಉತ್ತಮ ಕಾದಂಬರಿ ಭಾಗಗಳನ್ನು ನಾಟಕವಾಗಿ ರೂಪಾಂತರಿಸುವುದು ಪ್ರಾರಂಭವಾಯಿತು. ಆಧುನಿಕ ನಾಟಕಗಳಲ್ಲಿ ಗದ್ಯನಾಟಕಗಳೇ ಹೆಚ್ಚು. ೧೯೨೦–೩೦ರ ಅವಧಿಯಲ್ಲಿ ಹೊಸನಾಟಕಗಳು ಬರಲಾರಂಭಿಸಿದುವು. ಕೇರಳದಲ್ಲಿ 'ಕೇರಳ ಪೀಪಲ ಆರ್ಟ ಕ್ಲಬ್' ಮುಂತಾದ ಹನ್ನೆರಡಕ್ಕಿಂತ ಹೆಚ್ಚು ವ್ಯವಸಾಯಿ ನಾಟಕ ಕಂಪನಿಗಳಿವೆ. ಆದರೆ ವೈಭವಪೂರ್ಣ ಸರಂಜಾಮವಿಲ.

ಮಳೆಯಾಳಿ ರಂಗಭೂಮಿ ಭದ್ರವಾದ ಸಾಂಪ್ರದಾಯಿಕ ತಳಹದಿಯ ಮೇಲೆ ಕಾಲೂರಿದೆ; ಹೊಸತನಕ್ಕೆ ಕೈಚಾಚಿದೆ.

× × ×

ಪಾಶ್ಚಾತ್ತ್ಯ ನಾಟಕಗಳ ತೀವ್ರ ಪ್ರಭಾವ, ಪರಿಣಾಮಗಳ ಫಲವಾಗಿ, ಭಾರತೀಯ ಭಾಷೆಗಳಲ್ಲಿಯೂ 'ಅಸಂಬದ ನಾಟಕ' ಎಂಬ ನವನಾಟಕಗಳು ಕಂಡು ಬರುತ್ತಿವೆ. ಸಾಂಕೇತಿಕತೆ ಹೆಚ್ಚಿದೆ. ಈ ಬಗೆಯ ನಾಟಕಗಳಿಂದ ರಂಗಭೂಮಿಗೆ ನೇಪಥ್ಯರಚನೆ, ಪ್ರಕಾಶ ಸಂಯೋಜನೆ, ರಸಪರಿಪೋಷಕ ಪಾರ್ಶ್ವ ಸಂಗೀತ,ನೈಸರ್ಗಿಕ ಅಭಿನಯ ಪದ್ಧತಿ ಮೊದಲಾದವುಗಳಿಂದ ಹೊಸ ಸ್ವರೂಪ ಬಂದಿದೆ.ಸರಿಯುವ ರಂಗಮಂಚ,ತಿರುಗುವ ರಂಗಮಂಚಗಳು ಬಂದಿವೆ.ರಂಗಭೂಮಿಯ ವಿಕಾಸದ ದಿಶೆ ಬದಲಿಸಿದೆ. ನಾಟಕಗಳ ನವೀನ ತಂತ್ರಗಳ ಹೊಸ ಹೊಸ ಪ್ರಯೋಗಗಳು ಅಲ್ಲಲ್ಲಿ ನಡೆಯುತ್ತಿವೆ. ಪ್ರಚಾರವೂ ಪ್ರಬಲವಾಗಿದೆ. ಜನಸಾಮಾನ್ಯರಿಗೂ ಅರ್ಥವಾಗುವಷ್ಟು ಇವುಗಳ ಕ್ಷೇತ್ರ ವಿಸ್ತೃತವಾಗಿಲ್ಲ; ಅಂತಹ ನಿರೀಕ್ಷಣೆಯೂ ಇಲ್ಲ. ಪ್ರೇಕ್ಷಕರ ಮೇಲೆ ಹೊಸ ತಂತ್ರದ ಪ್ರಭಾವ ವೇನು? ಇದು ಪ್ರಯೋಗಕಾಲ. ಫಲ ಪ್ರಾಪ್ತಿಯ ಮಾಪನ ನಂತರ. ಆಧುನಿಕ ಜೀವನದ ಪ್ರಖರ ವಾಸ್ತವತೆಯ ಹಿನ್ನಲೆಯಲ್ಲಿ ಸಾಮಾಜಿಕ ಜನಜೀವನದ ನಾಟ ಪೂರ್ಣ ಚಿತ್ರಣ ರಚಿಸುವ, ಯಶಸ್ವಿಯಾಗಿ ಪ್ರಯೋಗಿಸುವ, ಪ್ರವೃತ್ತಿ ನಮಲ್ಲಿ ಎಷ್ಟರ ಮಟ್ಟಿಗೆ ಬೆಳೆದು ಬಂದಿದೆ ಎಂದು ನಿಂತುನೋಡಬೇಕು; ತೂಗಿ ನೋಡಬೇಕು.

ಭಾರತೀಯ ರಂಗಭೂಮಿಯ ಸಾಮಾನ್ಯ ಲಕ್ಷಣಗಳು: ಸ್ಥೂಲವಾಗಿ ಹೀಗೆ ಹೇಳಬಹುದು. ೧) ಸಂಸ್ಕೃತ ನಾಟಕಗಳ ಅನುಕರಣೆ. ೨) ಪ್ರಾದೇಶಿಕ ಲೋಕ ರಂಗ ಮಂಚ. ೩) ಪರಂಪರೆ ವೈವಿಧ್ಯಗಳ ಸಮನ್ವಯ. ೪) ಪಾಶ್ಚಾತ್ಯ ಪ್ರಭಾವ. ೫) ವ್ಯವಸಾಯಿ ನಾಟಕ ಕಂಪನಿಗಳು. ೬) ಅಮೇಚೂರ ನಾಟ್ಯಸಂಘ–ಸಂಸ್ಥೆಗಳು. ೭) ಹೊಸದಕ್ಕೆ ಹೊಂದಿಕೊಳ್ಳುವ ಪ್ರವೃತ್ತಿ. ೮) ಪ್ರಗತಿ ಪಥ. ಮುಂತಾದವು.

ಭಾರತೀಯ ರಂಗಭೂಮಿಯ ಸಮಸ್ಯೆಗಳು: ಸ್ಥೂಲವಾಗಿ ಹೀಗೆ ವಿವರಿಸಬಹುದು. ೧) ನಾಟ್ಯ ತಂತ್ರ ತರಬೇತಿ ಕೇಂದ್ರಗಳು ಸಾಕಷ್ಟಿಲ್ಲ. ೨) ಅಭಿನಯ ಕುಶಲತೆಯುಳ್ಳ ತರುಣರ ಅಭಾವವಿಲ್ಲ; ಆದರೆ 'ಯೋಜಕಸ್ತತ್ರ ದುರ್ಲಭಃ. ೩) ರಾಷ್ಟ್ರೀಯ ರಂಗಮಂಚವಿಲ್ಲ; ಇಲ್ಲವೆಂಬ ದುಃಖವೂ ನಮಗಿಲ್ಲ. ೪) ರಂಗಮಂಚದ ಪ್ರಗತಿ, ಅಭಿವೃದ್ಧಿಗಳಿಗಾಗಿ ಸಾಮೂಹಿಕ ಪ್ರಯತ್ನವಿಲ್ಲ. ೫) ಅಮೇಚೂರ ನಾಟ್ಯ ಸಂಘ–ಸಂಸ್ಥೆಗಳಲ್ಲಿ ಸಹಕಾರದ ಅಭಾವ. ೬) ಕಲಾವಿದರಲ್ಲಿ ಅಭ್ಯಾಸ ಪ್ರವೃತ್ತಿ ಇಲ್ಲ; ಅನುಭವದ ಆಳ ಸಾಲದು. ೭. ವ್ಯವಸಾಯಿ ನಾಟಕ ಕಂಪನಿಗಳು ಸತ್ತಿಲ್ಲ; ಬದುಕಿಲ್ಲ ಈ ಅವಸ್ಥೆಯಲ್ಲಿವೆ. ಪ್ರೋತ್ಸಾಹ ಸಾಲದು; ಪ್ರಗತಿ ಸಾಧ್ಯವಿಲ್ಲದಾಗಿದೆ. ೮) ಸಾಹಿತ್ಯಕ ನಾಟಕಗಳು; ಹೊಸ ತಂತ್ರ ಬಳಕೆಯ ಪ್ರಯೋಗಗಳು ಸಾಮಾನ್ಯ ಜನತೆಯಿಂದ ದೂರ ಸರಿಯುತ್ತಿವೆ; ಸರಿದಿವೆ. ೯) ಜನಸಾಮಾನ್ಯನಿಗೆ ಚಲಚ್ಚಿತ್ರಕ್ಕಿಂತ ನಾಟಕ ಹೆಚ್ಚು ಮೆಚ್ಚಿದ್ದು. ೧೦) ಸುಸಜ್ಜಿತ ನಾಟ್ಯಗೃಹಗಳ ಕೊರತೆ. ೧೧) ಸರಕಾರದ ಸಹಾಯ, ಉತ್ತೇಜನಗಳು ಪ್ರಮಾಣದಲ್ಲಿ ಹೆಚ್ಚಬೇಕು. ಕಲಾರಂಗದಲ್ಲಿಯ ರಾಜಕೀಯ ನಿಲ್ಲಬೇಕು. ೧೨) ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಅನುವಾದ ಮಾಡುವಲ್ಲಿಯ ತೊಡಕುಗಳು; ಪರಸ್ಪರ ತಿಳುವಳಿಕೆ, ಪ್ರಗತಿಗಳಿಗೆ ಬಂಧನ.

ಕಲಾವಿದರು, ನಾಟಕಕಾರರು, ನಿರ್ದೇಶಕರು, ನಿರ್ಮಾಪಕರು ಹೀಗೆ ವಿವಿಧ ವರ್ಗಗಳವರು ಸೇರಿ ಸಮಾಲೋಚನೆ ನಡೆಸಿದರೆ, ರಾಜ್ಯ ಹಾಗೂ ಕೇಂದ್ರ ಸರಕಾರಗಳು ನೆರವು ನೀಡಲು ಮುಂದೆ ಬಂದರೆ ಇವು ಅಪರಿಹಾರ್ಯವೇನಲ್ಲ!

# ನಾಡವರ ವೈಶಿಷ್ಟ್ಯಪೂರ್ಣ

★ ಸುಶೀಲಾ ನಾಯಕ

# "ದೊಡ್ಡ ಹಬ್ಬ" - ದೀಪಾವಳಿ



ಉತ್ತರ ಕನ್ನಡ ಜಿಲ್ಹೆಯ ನಾಡವರು ದೀಪಾವಳಿ ಹಬ್ಬವನ್ನು ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾರೆ. ಅವರಿಗೆ ಅದು "ದೊಡ್ಡ ಹಬ್ಬ" ಜನ ಜೀವನವನ್ನು ಬೆಸೆಯುವ ಅವರ ಸಂಪ್ರದಾಯ ಅನ್ಯಾದೃಶ.

ಉತ್ತರ ಕನ್ನಡ ಜಿಲ್ಹೆಯ ಕುಮಟಾ, ಅಂಕೋಲಾ ತಾಲೂಕಿನ ಕೆಲವೊಂದು ಭಾಗಗಳಲ್ಲಿ ವಾಸವಾಗಿರುವ ನಾಡವರಲ್ಲಿಯ ಸಂಪ್ರದಾಯಗಳು ವೈಶಿಷ್ಟ್ಯ ಪೂರ್ಣವಾಗಿವೆ. ಸಾಮಾಜಿಕ ಸ್ವಾಸ್ಥ್ಯದ ಭದ್ರತೆಗೆ ಪೋಷಕವಾಗುವಂತೆ ಇವುಗಳು ರೂಪಿತವಾಗಿರುವದು ಗಮನಿಸಬೇಕಾದ ಅಂಶ. "ಸರ್ವೇಜನಾಃ ಸುಖಿನೋ ಭವಂತು" ಎಂಬ ಭಾವನೆ ಅವರ ಆಚರಣೆಯಲ್ಲಿ ಅಭಿವ್ಯಕ್ತವಾಗಿದೆ. ಅವರಿಗೆ ಕೆಲವೇ ಹಬ್ಬಗಳ ಮುಖ್ಯ. ಅವನ್ನೆಲ್ಲ ಸಾಮೂಹಿಕವಾಗಿಯೇ ಆಚರಿಸುವರು. ಮುಖ್ಯ ಹಬ್ಬಗಳೆಂದರೆ ಮಹಾ ನವಮಿ, ದೀಪಾವಳಿ, ಫಾಲ್ಗುಣ ಮಾಸದಲ್ಲಿ ಸುಗ್ಗಿಯ ಹಬ್ಬ. ವೈಶಾಖದಲ್ಲಿಯ ಬಂಡಿ ಹಬ್ಬಗಳು ಉಳಿದ ಹಬ್ಬಗಳನ್ನು ಆಚರಿಸುವರಾದರೂ ಅವೆಲ್ಲ ವ್ರತ, ಉಪವಾಸ, ಪೂಜೆ, ಪ್ರಸಾದದ ಮಟ್ಟಿಗೆ ಸೀಮಿತವಾಗಿದ್ದು, ಅವನ್ನು ಸಂಕ್ಷಿಪ್ತವಾಗಿ ಆಚರಿಸಿ ಮುಗಿಸುವರು.

## ನೀರು ತುಂಬುವ ಹಬ್ಬ

ದೀಪಾವಳಿ ಹಬ್ಬವು ಅತಿ ಮುಖ್ಯ ಹಬ್ಬವಾಗಿದ್ದು, ಅದನ್ನು ಅವರು "ದೊಡ್ಡ ಹಬ್ಬ" ಎಂದು ಕರೆಯುವರು. ಇದು ನಾಲ್ಕು ದಿನಗಳವರೆಗೆ ನಡೆಯುವ ಹಬ್ಬ. ಐದನೆಯ ದಿನವೂ ಅಲ್ಪ ಸ್ವಲ್ಪ ಉಳಿದಿರುವದು. ಮೊದಲ ದಿನ ಅಂದರೆ ಕಾರ್ತಿಕ ಮಾಸ, ತ್ರಯೋದಶಿಯ ದಿನ ನೀರು ತುಂಬುವ ಹಬ್ಬ. ಅಂದು ಪ್ರತಿಯೊಂದು ಮನೆ, ಅಂಗಳ, ಆವಾರಗಳನ್ನೆಲ್ಲ ಶುಚಿಗೊಳಿಸಿ ಸಾರಣೆ ಕಾರಣೆ ರಂಗವಲ್ಲಿಗಳಿಂದ ಅಲಂಕರಿಸುವರು. ಕರಗಿ (ಕುಂಭ) ಕೂಡ್ರಿಸುವ ನಿಯಮವಿದ್ದವರ ಮನೆಯಲ್ಲಂತೂ ಅಂದು ಬೆಳಗಿನಿಂದ ಒಂದೇ ಸಮನೆ ದುಡಿದರೂ ಮುಗಿಯದಷ್ಟು ಕೆಲಸವಿರುತ್ತದೆ. ಮನೆ ಮನೆಗೂ ಕರಗಿ ಕೂಡ್ರಿಸುವ ಕ್ರಮವಿಲ್ಲ. ಒಂದು ಮನೆತನದ ಅಣ್ಣ ತಮ್ಮಂದಿರು ಬೇರೆ ಬೇರೆಯಾಗಿ ಮನೆ ಮಾಡಿಕೊಂಡುಬಾಳುತ್ತಿದ್ದರೂ, ಅವರ ಮನೆ ದೇವರು ಮಾತ್ರ ಮೂಲ ಮನೆಯಲ್ಲೇ ಇರುವದು. ಮದುವೆಯಂಥ ಮಂಗಲಕಾರ್ಯಗಳು, ಇತರ ವಿಧಿ ವಿಧಾನಗಳು ಆ ಮೂಲ ಮನೆಯಲ್ಲೇ ದೇವರೆದುರು ನಡೆಯುವವು. ಮನೆಯೆದುರು ಅಂಗಳದಲ್ಲಿ ಪ್ರತ್ಯೇಕವಾಗಿ ದೇವರ ಮನೆ ಕಟ್ಟಿರುತ್ತಾರೆ. ಆರಾಧ್ಯ ದೇವತೆ ಶ್ರೀಪತಿ ವೆಂಕಟರಮಣನಾದರೂ, ಅವರು ಆ ದೇವರ ಮನೆಗೆ ಕರೆಯುವದು ತುಳಸಿ ಎಂದು. ತುಳಸಿ ಇದ್ದವರ ಮನೆಯಲ್ಲಿ ಕರಗಿ ಕೂಡ್ರಿಸುವದು.

ಊರ ಕುಂಬಾರ ಕರಗಿ ಕೂಡ್ರಿಸುತ್ತಾನೆ. ಮನೆಗಳಿಗೆಲ ಎರಡೆರಡು ಕುಂಭಗಳನು ತಂದು ಕೊಡುವ ಪದ್ಧತಿ. ಆ ಕುಂಭಗಳಿಗೆ ಶುಭ್ರವಾದ ಸೇಡಿಯ ಮಣ್ಣು ಬಳಿದು ಮೇಲೆ ಹಳ್ಳದಿಂದ ಆಯ್ದುತಂದ ಕೆಂಪು ಹರಳಿನಿಂದ ತಯಾರಿಸಿದ ಬಣ್ಣದಿಂದ ಸುಳಿವು ಬಿಡಿಸುವರು. ಹಾಗೆಯೇ ಮನೆಯ ಒಳಗೆ ನಡುಮನೆಯಲ್ಲಿ ಗೋಡೆಗೆ ಹಸಗೆರೆ ಹೊಯ್ದು ಅದರ ಕೆಳಗೇ ನೆಲಕ್ಕೆ ರಂಗವಲ್ಲಿಯ ಹಾಸನ್ನು ತಯಾರಿಸಿ ಆ ಎರಡು ಕುಂಭಗಳನ್ನು ತಂದು, ಬೆತ್ತದ ಅಥವಾ ಭತ್ತದ ಹುಲ್ಲಿನಿಂದ ತಯಾರಿಸಿದ ಇರಿಕೆ (ಸಿಂಬಿ)ಯ ಆಧಾರ ಕೊಟ್ಟು ಕೂಡ್ರಿಸುವರು. ಕುಂಭಗಳ ಕಂಠಕ್ಕೆ ಚಂಡು ಹೂವಿನ ದಂಡೆ ಕಟ್ಟಿ ಅಲಂಕರಿಸುವರು. ನಂತರ ಒಂದು ಕುಂಭದಲ್ಲಿ ನೀರು ಸುರುವಿ ಬೆಳ್ಳಿಯ ನಾಣ್ಯವನ್ನೂ ಮತ್ತೊಂದರಲ್ಲಿ ಅಕ್ಕಿ ಹಾಕಿ ಬಂಗಾರದ ಉಂಗುರವನ್ನೂ ಇಡುವರು. ಅದರ ಮೇಲೆ ಮಾವಿನ ತಳಿರಿಟ್ಟು, ನೀರು ಹಾಕಿದ ಕುಂಭದ ಮೇಲೆ ಮೊಗೆಕಾಯಿ (ಸವತೆ ಜಾತಿಗೆ ಸೇರಿದ್ದು) ಮತ್ತೊಂದರ ಮೇಲೆ ತೆಂಗಿನ ಕಾಯಿ ಇಡುವರು. ಮೊಗೆ ಕಾಯಿ ಇಟ್ಟದ್ದೇ ಹೆಣ್ಣು. ಅದೇ ಬೋರಜ್ಜಿ. ಅಂದರೆ ಶ್ರೀ ದೇವಿ. ತುಂಬ ಹೂ ಮುಡಿಸಿ ಕೇದಗೆ ಗೊನೆ, ಅಡಕೆಯ ಗೊನೆ, ಸಿಂಗಾರಗೊನೆ ಇತ್ಯಾದಿಗಳನ್ನು ಗೊನೆ ಗೊನೆಯಾಗಿಯೇ ತಂದ ಸುತ್ತೆಲ್ಲ ಇಟ್ಟು ಶೃಂಗರಿಸುವರು. ಇಲ್ಲಿಗೆ ಕರಗಿ ಕೂಡ್ರಿಸುವ ಕ್ರಮ ಪೂರ್ತಿ ಆಗುವದು.



ಮನೆಯಂಗಳದಲ್ಲಿ: ದೇವರ ಮನೆ- ತುಳಸಿ

happy deeapvali



## ಬೋರಜ್ಜಿಯ ಪ್ರತಿಷ್ಠಾಪನೆ

ಇನ್ನು ನೀರ ತುಂಬುವದು, ಅಂದು ಹೊಸ ಒಲೆ ಹಾಕಿಸಿ ಅದರ ಮೇಲೆಯೇ ನೀರು ಕಾಯಿಸ ಬೇಕು. ಹಳೆಯದಕ್ಕೆ ಹೊಸ ಮಣ್ಣನ್ನಾದರೂ ಬಳಿದು ಹೊಸದಾಗಿಸಬೇಕು. ಅದಕ್ಕೂ ರಂಗವಲ್ಲಿ ಹೂವಿನ ಆಲಂಕರಣ ಆಗಲೇ ಬೇಕು. ತಿಕ್ಕಿ ತೊಳೆದು ತಂದ ಹಂಡೆಗೂ ರಂಗವಲ್ಲಿ ಹೂವಿನ ಹಾರ ಹಾಕಿ, ಜೊತೆಗೆ ಮೂಲಂಗಿಬಳ್ಳಿಯನ್ನೂ ಕಟ್ಟುವರು. ನೀರು ತುಂಬಿಸಿ ಅದರಲ್ಲಿ ಅತ್ತಿಕುಡಿ, ಬಾಳದ ಬೇರ, ಬೇವಿನತೊಪ್ಪಲು ಹಾಕಿಡುತ್ತಾರೆ. ಮೈ ಉಜ್ಜಿಕೊಳ್ಳಲು ಹಸಿಯ ಅರಶಿಣ ಬೇರನ್ನು ಕಿತ್ತು ತಂದು ಅರೆದು ನುಣ್ಣಗೆ ಮಾಡಿ ಇಡುವರು. ತುಳಸಿಯ ಎದುರು ಅಂದರೆ ದೇವರ ಮನೆಯ ಎದುರು ಹೆಂಡಿ ಹೂಡುವ ಕಟ್ಟೆ ಕಟ್ಟಿ ಬಲಿಚಕ್ರವರ್ತಿಯ ಮೂರ್ತಿಯನ್ನಿಡುವರು. ಈ ಎಲ್ಲ ಕೆಲಸಗಳನ್ನೂ ಅಪ್ಪೇಷ್ಟರೆಲ್ಲ ಕೂಡಿ ಅಮಿತ ಉತ್ಸಾಹದಿಂದ ಮಾಡಿ ಮುಗಿಸುವರು. ಇಷ್ಟೆಲ್ಲಾ ಆಗುವ ಹೊತ್ತಿಗೆ ಸಂಜೆಯೆ ಆಗಿರುತ್ತದೆ. ಮನೆಯ ಯಜಮಾನ ಬಳಗ ದಿಂದೊಡಗೂಡಿ ಒಂದು ಬೋರಜ್ಜಿಯನ್ನು ಪ್ರತಿಷ್ಠಾಪಿಸಿ ಹೂ, ಗಂಧ, ಅಕ್ಷತೆ, ದೀಪ ಧೂಪ, ಹಣ್ಣು ಕಾಯಿ ಇತ್ಯಾದಿ ಅರ್ಪಿಸಿ, ಅರ್ಚಿಸುವನು ಬೋರಜ್ಜಿಯ ಜೊತೆಗಿದ್ದ ಕುಂಭ ಮಹಾ ಗಣಪತಿಯದೆನ್ನುತ್ತಾರೆ. ಅಂದು ಅವಳಿಗೆ ಪಂಚಕಜ್ಜಾಯದ ನೈವೇದ್ಯ.

## ಮೀಯುವ ಹಬ್ಬ

ಮರುದಿನ ಅಂದರೆ ಚತುರ್ದಶಿಯ ದಿವಸ, ನೀರೆ ಮೀಯುವ ಹಬ್ಬ. ಮೀಯುವದೇ ಅಂದಿನ ವಿಶೇಷ. "ಮಿಂದದ್ದು ದೀಪಾವಳಿ, ಉಂಡದ್ದು ಉಗಾದಿ" ಎಂಬ ಗಾದೆಯೂ ಆವರಲ್ಲಿ ಪ್ರಚಲಿತವಿದೆ. ಮೈಗೆ ಅರಿಶಿಣ ಹಚ್ಚಿಕೊಂಡು ತಲೆಗೆ ತೈಲ ಹಚ್ಚಿ ತಿಕ್ಕಿಸಿಕೊಂಡು ಮೆಣಸು, ಮಂಜಿಪತ್ರಿ, ಅಜಿವಾನ, ಅರಿಶಿಣಬೇರು ಕೂಡಿಸಿ ನುಣ್ಣಗೆ ರುಬ್ಬಿ ನೀರಿನ ಹಾಗೆ ಮಾಡಿ, ಪ್ರತಿಯೊಬ್ಬರೂ ಒಂದೊಂದು ಗುಟುಕು ಕುಡಿದು ಸ್ನಾನಕೆ ಹೊರಡುವರು. ಅಂದು ಈ ಕಹಿ ಮದ್ದನ್ನು ಕಡ್ಡಾಯವಾಗಿ ಕುಡಿಯಲೇ ಬೇಕು. ಬೆಳಕು ಮೂಡುವ ಹೊತ್ತಿಗೆ ಎಲ್ಲರ ಸ್ನಾನ ಮುಗಿಯುವದು. ಮಕ್ಕಳು, ಗಂಡಸರು ಶೃಂಗರಿಸಿಕೊಂಡು ಗುಡಿಗೆ ಹೋಗಿ ಗ್ರಾಮ ದೇವತೆಯ ದರುಶನ ಪಡೆದು ಬರುವರು.

ಅವರೆಲ್ಲ ತಿರುಗಿ ಬರುವಷ್ಟರಲ್ಲಿ ಮನೆಯಲ್ಲಿ ಹೆಣ್ಣು ಮಕ್ಕಳು ಮನೆಯ ಎದುರು ಅಂಗಳದಲ್ಲಿ ವಿಶಿಷ್ಟ ಕ್ರಮದಲ್ಲಿ ರಂಗವಲ್ಲಿ ಹಾಕಿ, ಗಂಡಸರು ಮಕ್ಕಳು ಕೂಡಿ ಎಷ್ಟು ಜನರಿರುವರೋ ಅವರೆಲ್ಲರಿಗೂ ಸಾಲುವ ಹಾಗೆ ಅಂಕಣ ಕೊರೆದು, ಒಂದೊಂದು ಅಂಕಣದಲ್ಲಿಯೂ ಒಂದೊಂದು ಹಿಂಡಲಿ ಕಾಯಿ (ಕಹಿ ಸವತೆ ಕಾಚಿ ಕಾಯಿ ಎಂದೂ ಅನ್ನುವರು) ಇಟ್ಟಿರುವರು. ದೇವಿಯ ದರ್ಶನ ಪಡೆದು ಮರಳಿದವರು ಒಬ್ಬೊಬ್ಬರು–ಒಂದೊಂದು ಹಿಂಡಲಿಕಾಯಿಯ ಮೇಲೆ ತಮ್ಮ ಬಲಗಾಲ ಇಟ್ಟು ನಿಲ್ಲುವರು. ಒಳಗಿನಿಂದ ಮನೆಯ ಯಜಮಾನಿ, ದೊಡ್ಡ ಹರಿವಾಣದಲ್ಲಿ ಕೆಂಪು ನೀರು ಮಾಡಿ ಅದರಲ್ಲಿ ದೀಪವನ್ನು ಹಚ್ಚಿಟ್ಟು, ಕುಂಕುಮ ಅಕ್ಷತೆಯ ತಟ್ಟೆಯೊಂದಿಗೆ ಮನೆಯ ಹೊಸ್ತಿಲಲ್ಲಿ ಅವರಿಗೆದುರಾಗಿ ಬಂದು ನಿಲ್ಲುವಳು. ಆಗ ಅವರೆಲ್ಲ ಒಂದೇ ಸಲಕ್ಕೆ ಆ ಹಿಂಡಲಿಯನ್ನು ಒತ್ತಿ ಒಡೆಯುವರು. ಯಜಮಾನ ಮುಂದುವರಿದು ಹೋಗಿ ಜ್ಯೋತಿಗೆ ಪೊಡಮಟ್ಟು, ಯಜಮಾನಿಯ ಹಣೆಗೆ ಮಂಗಲ ವಿಡುವನು. ಆಗ ಎಲ್ಲರೂ ಒಬ್ಬೊಬ್ಬರಾಗಿ ಜ್ಯೋತಿ ನೋಡಿ ಒಳಗೆ ಹೋಗುವರು. ಹಾಗೆ ಹೋಗುವಾಗಲೇ ಮುನ್ನಾದಿನ ಮಾಡಿಟ್ಟ ಬಲಿ ಚಕ್ರವರ್ತಿಯ ಮೂರ್ತಿಯನ್ನು ತೆಗೆದುಕೊಂಡು ಬಂದು ಬೋರಜ್ಜಿಯ ಹತ್ತಿರ ಕೂಡಿಸುವರು. ಆಗ ಪೂಜೆ ನಡೆಯುವದು. ಯಜಮಾನಿ ಮಂಗಲ ನೀರನ್ನು ಚೆಲ್ಲಬಿಟ್ಟ, ಮರದ ಬುಡಕ್ಕೆ ಸುರುವಿ ದೀಪದೊಂದಿಗೆ ಅಡಿಗೆಯ ಮನೆಗೆ ಬರುವಳು. ಅಲ್ಲಿ ಫಲಾಹಾರದ ತಯಾರಿ ನಡೆದಿರುವದು. ಅಂದು ಮುಖ್ಯ ಕಜ್ಜಾಯವೆಂದರೆ ಅವಲಕ್ಕಿ, ಅದನ್ನೆ ಮೊಸರವಲಕ್ಕಿ, ಸಂಬಾರ ಅವಲಕ್ಕಿ ಒಗ್ಗರಣೆ ಅವಲಕ್ಕಿ, ಬೆಲ್ಲ ಕೊಬ್ಬರಿ ತುಪ್ಪಹಾಕಿ ಕಲಸಿ ಮಾಡಿದ ಸಿಹಿ ಅವಲಕ್ಕಿ, ಹುರಿದ ಅವಲಕ್ಕಿ ಎಂದು ವಿಧವಿಧವಾಗಿ ಮಾಡಿರುವರು. ಪೂಜೆ ಮುಗಿದಾಕ್ಷಣ ಎಲ್ಲರೂ ಅವಲಕ್ಕಿ ಫಲಾಹಾರಕ್ಕೆ ಕೂಡ್ರುವರು.



ಮಿಂದು, ಕಹಿಹಿಂಡಲೆಮೆಟ್ಟಿ ಮಂಗಲ ತಂದ ಯಜಮಾನಿಗೆ, ಕುಂಕುಮ ಹಚ್ಚುವ ಯಜಮಾನ.



ಬೋರಜ್ಜಿಯ ಪ್ರತಿಷ್ಠಾಪನಾ ಸಮಾರಂಭ

## ಹೊಸ ಬಟ್ಟೆಯ ಉಡುಗೊರೆ

ಪಟಾಂಗಣದಲ್ಲಿ ಚೆಂದವಾದ ಹಾಸನ್ನೊಂದು ಹಾಸಿ, ಅದರ ಮೇಲೆ ಒಂದು ಬದಿಗೆ ವೀಳ್ಯದ ಒಂದು ತಾಟು, ಮತ್ತೊಂದು ಬದಿಗೆ ಹೊಸ ವಸ್ತ್ರಗಳ ಗಂಟನ್ನು ಇಟ್ಟಿರುವರು. ಯಜಮಾನ ಬಂದು ಕೂಡುವನು. ಮನೆಯ ಸದಸ್ಯರೆಲ್ಲ ಒಬ್ಬೊಬ್ಬರೇ ಅನುಕ್ರಮವಾಗಿ ಬಂದು ಒಂದೊಂದು ವೀಳ್ಯವನ್ನು ಕೊಟ್ಟು ಅವನ ಕಾಲಿಗೆ ಎರಗುವರು. ಅವರ [illegible] ಯಜಮಾನ ಹೊಸ ಬಟ್ಟೆಯನ್ನು ಅವರ ಹೆಗಲ ಮೇಲಿಟ್ಟು ಹರಸುವನು. ಅಂದು ಪ್ರತಿಯೊಬ್ಬರಿಗೂ ಹೊಸ ಬಟ್ಟೆ ತಂದು ಕೊಡಲೇ ಬೇಕು. ಕನಿಷ್ಠ, ಒಂದು ಕರವಸ್ತ್ರವನ್ನಾದರೂ ಹೆಗಲ ಮೇಲೆ ಇಡಬೇಕು. ಹಾಗೆಯೇ ಯಜಮಾನಿಗೂ ವೀಳ್ಯಕೊಟ್ಟು ಕಾಲಿಗೆರಗಿ ಬರುವರು.

 *Wish you Happy Deepavali* 

**FOR DECORATIVE GRILLS &**
**STEEL WINDOWS**
**PLEASE CONTACT :...**

## KOULAGI & COMPANY

**No- 2, Residency Road, Samyukta Karnatak,**
**Compound Bangalore - 25**

**Works : 53570** **Residence : 75495**

*Proprietor* **S. V. KOULAGI** B. Sc.

---

 ದೀಪಾವಳಿಯ ಶುಭಾಶಯುಗಳು ! 

ಅಲಂಕರಣ ಗ್ರಿಲ್ಸ್ ಹಾಗೂ ಉಕ್ಕಿನ ಕಿಟಕಿಗಳಿಗೆ
ದಯವಿಟ್ಟು ಅವಶ್ಯ ಸಂಪರ್ಕ ಬೆಳೆಸಿರಿ

## ಕೌಲಗಿ ಆ್ಯಂಡ್ ಕಂಪನಿ

ನಂ. 2 ರೆಸಿಡೆನ್ಸಿ ರಸ್ತೆ, ಸಂಯುಕ್ತ ಕರ್ನಾಟಕ ಕಂಪೌಂಡ್
ಬೆಂಗಳೂರು - ೨೫

ಕಾರಖಾನೆ : **53570** ನಿವಾಸ : **75495**

ಪ್ರೊಪ್ರಾಯಿಟರ್: ಎಸ್. ವ್ಹಿ. ಕೌಲಗಿ, ಬಿ. ಎಸ್. ಸಿ.

---

 ದೀಪಾವಳಿಯ ಹಾರ್ದಿಕ ಶುಭಾಶಯುಗಳು 

ಮೂರು ಸಾವಿರ ಮಠದ ಮಹಾದ್ವಾರದ
ಎದುರು ಸುಸಜ್ಜಿತ ಅತ್ಯಾಧುನಿಕ ವಸತಿ ಗೃಹ

## ಕಿರಣ ವಿಹಾರ

ಮೂರುಸಾವಿರ ಮಠ ರೋಡ, ಹುಬ್ಬಳ್ಳಿ

## KIRAN VIHAR

**LODGING**
**Murusaveermath Road, HUBLI**
**Phone No : 3627**

- ಆದರ್ಶನೀಯ ಸೇವೆ
- ಅಲಂಕಾರಯುತ ಆಧುನಿಕ ರೀತಿಯ ಬೆಳಕು, ಗಾಳಿ ಇದ್ದ ವಿಶಾಲ ರೂಮುಗಳು
- ಅಚ್ಚುಕಟ್ಟಾದ ಬಾಲ್ಕನಿ ಇದ್ದ ಅಟ್ಯಾಚ್ಡ ಬಾಥ ರೂಮುಗಳು
- ಸಿನೆಮಾ ಮಂದಿರ, ವ್ಯಾಪಾರಿ ಸಂಸ್ಥೆ, ಬಸ್ ಸ್ಟ್ಯಾಂಡಗಳಿಗೆ ಅತಿ ಸಮೀಪ

---

 HEARTY DEEPAVALI GREETINGS 



## VIJAY TYPEWRITER CO.,

**REPAIRERS OF**
**ALL KINDS OF TYPEWRITERS**

**Gavi Oni** (P. B. Road), **HUBLI - 20**

**SECOND - HAND STD, and PORTABLE**
**TYPEWRITERS ARE AVAILABLE**

Prop : R. A. Rokhade

---

 ದೀಪಾವಳಿಯ ಶುಭಾಶಯಗಳು ! 

## ಪ್ರಕಾಶ
## ಬೀಡೀಸ್

ತಯಾರಕರು :

ಪ್ರಕಾಶ ಬೀಡೀಸ್
(ಪ್ರೈವೇಟ) ಲಿಮಿಟೆಡ್

ಮಂಗಳೂರು—೧

ಫೋನ್ : H. O. 3718, Factory 3532 — Grams "ANAND"

ನೆಂತರೆ ಕಿರಿಯರೆಲ್ಲ ತಮಗಿಂತ ಹಿರಿಯರಾದವರಿಗೆ ವಂದಿಸುವರು. ಅಷ್ಟೊತ್ತಿಗಾಗಲೆ ಕಾಣುವದಕ್ಕೆ ಬರುವವರು ಒಬ್ಬೊಬ್ಬರಾಗಿ ಬರಲು ಪ್ರಾರಂಭವಾಗುವದು. ಹೊಲಗದ್ದೆ, ತೋಟಗಳಲ್ಲಿ ದುಡಿಯುವವರು, ರೈತ ಜನರು, ಆಳು ಕಾಳು, ಒಟ್ಟು ಅವರ ಅನುವರ್ತಿಗಳಾದವರೆಲ್ಲ ಒಡೆಯನ ಮನೆಗೆ ಬಂದು, ಕಡು ಮುಗಿದು ಹೋಗುವ ಸಂಪ್ರದಾಯವಿದೆ. ಬರುವಾಗ ಬರಿಗೈಯಲ್ಲಿ ಬರುವ ಹಾಗಿಲ್ಲ. ತೆಂಗಿನ ಕಾಯಿಯೋ, ಎಳೆ ನೀರೋ, ಅಡಿಕೆ ಗೊನೆಯೋ, ಏನಾದರೊಂದು ಹಿಡಿದೇ ಬರುವರು. ಹಾಗೆ ತಂದ ವಸ್ತುವನ್ನು ಅಂಗಳದಲ್ಲಿ ತುಳಸಿಯ ಎದುರಿಗೆ ಇಟ್ಟು ಒಡೆಯನಿಗೆ ಪೊಡಮಟ್ಟು ಕೊಡುವರು. ಒಡತಿ ಒಳಗಿಂದ ಅವಲಕ್ಕಿ ಕಜ್ಜಾಯ ತುಂಬಿದ ಎಲೆಯನ್ನು ತಂದು ಮುಂದಿಡುವಳು. ಒಡೆಯ ಅವರಿಗಾಗಿಯೇ ತಂದ ಹೊಸ ಬಟ್ಟೆ ಉಡುಗೊರೆ ಕೊಟ್ಟು, ಆದರಿಸುವನು. ಇದಕ್ಕೆ ಕಾಂಬುವದಕ್ಕೆ ಬರುವದು' ಎನ್ನುವರು ಬರುವರೆಲ್ಲ ಬಂದು ಹೋಗುವ ಹೊತ್ತಿಗೆ ಮಧ್ಯಾಹ್ನ ದಾಟಿರುತ್ತದೆ. ಬೋರಜ್ಜಗೆ, ಬಲಿ ಚಕ್ರವರ್ತಿಗೆ ಹಬ್ಬದಡಿಗೆ ನೈವೇದ್ಯ ಮಾಡಿ ಊಟಕ್ಕೆ ಕೂಡುವರು. ಹೆಣ್ಣು ಮಕ್ಕಳು ತಲೆ ಬಾಚಿಕೊಂಡು ಹೂ ಮುಡಿದು ಹಬ್ಬದುಡಿಗೆ ಉಟ್ಟು ಯಜಮಾನ ಕುಳಿತಲ್ಲಿಗೆ ಬಂದು ಕೈ ಮುಗಿದು ತಮ್ಮ ಪಾಲಿನ ಹೊಸಬಟ್ಟೆಯನ್ನು ತೆಗೆದುಕೊಂಡು ಹೋಗುವರು.

ಸಂಜೆಗೆ ನಡೆಯುವ ದೀಪಾರಾಧನೆಯ ಸಿದ್ಧತೆ ಆರಂಭವಾಗುತ್ತದೆ. ಅಂದು ಹಿಂಡಲಿಕಾಯಿ (ಕಾಟಿಕಾಯಿ ಕಹಿಸವತೆ) ಯನ್ನು ಮಧ್ಯದಲ್ಲಿ ಹೆಚ್ಚಿ ಮಧ್ಯದ ತಿಳಲನ್ನು ಬೀಜವನ್ನು ತೆಗೆದೊಗೆದು, ಅದರದೇ ಒಂದಿಷ್ಟು ಭಾಗವನ್ನು ಗಾಲಿಯ ಆಕಾರದಲ್ಲಿ ಕತ್ತರಿಸಿ ತೆಗೆದು ಸಿಂಬಿಯಂತೆ ಇಟ್ಟು ಅದರ ಮೇಲೆ ಪಣತೆಯಂತೆ ಆ ಬಟ್ಟಲು ಇಡುವರು. ಅದರಲ್ಲಿ ಎಣ್ಣೆ ಹಾಕಿ ಬತ್ತಿ ಇಟ್ಟು ದೀಪ ಹಚ್ಚುವರು. ದೀಪ ಹಚ್ಚುವದಕ್ಕಂತೂ ಲೆಖ್ಖವೇ ಇಲ್ಲ ಮನೆಯ ಸುತ್ತ, ತುಳಸಿ ಮನೆಯ ಸುತ್ತ, ಅಂಗಳ, ಆವಾರದ ಗೋಡೆ, ಎಲ್ಲಿ ನೋಡಿದರಲ್ಲಿ ಸಾಲು ಸಾಲಾಗಿ ದೀಪ ಹಚ್ಚಿದ್ದನ್ನು ನೋಡುವದೇ ಕಣ್ಣಿಗೆ ಒಂದು ಹಬ್ಬ. ಹಾಗೆಯೇ ಹರಿವಾಣದ ತುಂಬ ಹಿಂಡಲಿ ಕಾಯಿಯ ದೀಪಗಳನ್ನು ಇಟ್ಟುಕೊಂಡು ದನದ ಮನೆಗೆ ಹೋಗಿ ಪ್ರತಿಯೊಂದು ದನಕ್ಕೂ ಜ್ಯೋತಿಯನ್ನು ತೋರಿಸಿ ಆರತಿ ಮಾಡಿ ಬರುವರು.



ಗೋಪೂಜೆ. ಗೋಮಾತೆಗೆ ದೀಪ ತೋರಿಸುವದು

ಅಮಾವಾಸ್ಯೆಯ ದಿನ ಹೆಚ್ಚಿನ ಕೆಲಸಗಳೇನೂ ಇಲ್ಲ. ಮೊದಲ ಎರಡು ದಿನಗಳಲ್ಲಿ ಒಂದೇ ಸವನೆ ದುಡಿದ ದೇಹಕ್ಕೆ ಅಂದು ಒಂದಿಷ್ಟು ಬಿಡುವು. ಅಂದು ಬರಬೇಕಾದಂಥ ಅಪ್ತೇಷ್ಟರು ಇಷ್ಟ ಮಿತ್ರರು ಬಾರದೆ ಉಳಿದಿದ್ದರೆ, ಯಾಕೆ ಬಂದಿಲ್ಲವೆಂದು ವಿಚಾರಿಸಿ ಪುನಃ ಕರೆಕಳಿಸಿ ಅಥವಾ ಅವರು ಬಾರದ ಹಾಗಿದ್ದರೆ, ಅವರ ಪಾಲಿನ ಉಡುಗೊರೆ ಕಳಿಸಿ ಕೊಡುವದು, ಅಳಿಯಂದಿರನ್ನು ಬರಹೇಳುವದು, ಹೊಸ ಅಳಿಯಂದಿರಿಗೆ ವಿಶೇಷ ಉಡುಗೊರೆ ಕೊಟ್ಟು ಸತ್ಕರಿಸುವದು, ಇತ್ಯಾದಿ ಕೆಲಸಗಳಿಷ್ಟೆ. ಊಟದ ನಂತರ ನಾರು ಪಟ್ಟೆಯ ಹೊರೆಯನು ಹೊತ್ತು ತಂದು ಅಂಗಳದಲ್ಲಿಟ್ಟು ಎಲ್ಲರೂ ಕೂಡಿ ನಾರ ಬಿಡಿಸಿ ದನದ ಕುತ್ತಿಗೆಗೆ ಕಟ್ಟಲು ದಾಂಬು (ಕಣ್ಣಿ) ತಯಾರಿಸುವರು. ಬೆಳ್ಳಗೆ ರೇಶಿಮೆಯ ಹಾಗೆ ಮಿರಿಮಿರಿ ಮಿಂಚುವ ಕಣ್ಣಿಗಳನ್ನು ಒಂದೊಂದಾಗಿ ಹೊಸೆದು. ಜೋಡಿಸಿಡುವರು. ಅಂದು ಸಂಜೆ ಪಣತಿಯ ದೀಪಾರಾಧನೆ, ಅದರ ತಯಾರಿಯು ಒಂದೆಡೆ ನಡೆಯುವದು ಪಣತಿಗಳನ್ನೆಲ್ಲ ನೀರಿನಲ್ಲಿ ಎದ್ದಿ, ಎಣ್ಣೆ ಬತ್ತಿಗಳನ್ನು ಹೊಂದಿಸಿ ಸಾಲು ಸಾಲಾಗಿ ಜೋಡಿಸುತ್ತ ಹೋಗುವರು. ದನದ ಮನೆಗೂ ಹರಿವಾಣದ ತುಂಬ ಪಣತಿಗಳನ್ನಿಟ್ಟುಕೊಂಡು ಹೋಗಿ ಜ್ಯೋತಿ ತೋರಿಸಿ ಬರುವರು.



ಬೋರಜ್ಜ ಎದುರು ಹಿಂಡಲಿಕಾಯಿ (ಕಾಟೀಕಾಯಿ) ದೀಪೋತ್ಸವ

## ದನಕರುಗಳೊಂದಿಗೆ ಮೋಜಿನ ಆಟ

ಉತ್ಸವದ ಕೆಲಸ ಮತ್ತೆ ಪ್ರಾರಂಭವಾಗುವದು ನೋಪದ (ಬಲಿಪಾಡ್ಯದ) ದಿನ, ಬೆಳಗ್ಗಿನಲ್ಲೇ ಎಲ್ಲ ದನಕರುಗಳನು ಹೊರಗೆ ತಂದು ಕಟ್ಟಿ ದನದ ಮನೆಯನೆಲ ಹಸನು ಮಾಡುವರು. ತಗ್ಗು ಉಬ್ಬುಗಳನ್ನು ಸರಿಪಡಿಸಿ, ಸಾರಿಸಿ ಹಸಿ



ದನಗಳ ಅಲಂಕಾರ-ಬೆಚ್ಚಿಸುವದಕ್ಕೆ ಸಿದ್ಧತೆ

ತೊಪ್ಪಲು ಹರವುವರು. ಮಾವಿನ ತೋರಣ ಕಟ್ಟಿ, ದೀಪ, ಧೂಪ ಹಾಕಿ ಪವಿತ್ರಗೊಳಿಸುವರು. ನಂತರ ಒಂದೊಂದೇ ದನದ ಮೈತೊಳೆಯುವರು. ಬೋರಜ್ಜಿಯ ಕುಂಭದ ನೀರು ತಂದು ಅಕ್ಕಿ ಅಳೆಯುವ ಪಾವಿನಿಂದ ಮೈತುಂಬ ಕೆಂಪು ಮತ್ತು ಬಿಳಿ ಬಣ್ಣದಿಂದಲೂ ಗುರುತು ಹಾಕುವರು. ಕೋಡಿಗೆ ಅಲಂಕಾರ ಮಾಡಿ ಕೊರಳಲ್ಲಿ ಹಸಿ ಕೊಬ್ಬರಿಯ ಬಟ್ಟಲ, ಮುಳಕನ ರೊಟ್ಟಿ (ಅಂದರೆ ಉತ್ತಪ್ಪದ ಹಾಗೆ ದಪ್ಪದಾದ ಮತ್ತು ದುಂಡನ ರೊಟ್ಟಿ) ಮಾಡಿ ಎರಡೆರಡನ್ನು ಕೂಡಿಸಿ ಒಂದು ನಾರಿನಲ್ಲಿ ಪೋಣಿಸಿ ಕಟ್ಟುವರು. ರೊಟ್ಟಿಯ ವಾಸನೆ ಹಿಡಿದ ಒಂದು ದನ ಇನ್ನೊಂದರ ಕತ್ತಿನಲ್ಲಿರುವ ರೊಟ್ಟಿಯನ್ನು ತಿನಲು ಮಾಡುವ ರಂಭಾಟದಿಂದ ಗದ್ದಲವೋ ಗದ್ದಲ. ಇಷ್ಟನ್ನು ಕಟ್ಟಿ ಹೊಸ ಕಣ್ಣಿ ಹಾಕಿ ಎಲ್ಲವನ್ನು ಸಾಲಾಗಿ ಬಿಡುವರು. ಅವು ಹೋಗುವ ದಾರಿಯಲ್ಲಿ ಅತ್ತಿತ್ತ ಹತ್ತೆಂಟು ಜನ ಕೈಯಲ್ಲಿ ಉದ್ದುದ್ದದ ಬಡಿಗೆ ಹಿಡಿದು ನಿಂತಿರುವರು. ಆಗ ಒಮ್ಮೆಲೆ ಜಾಗಟೆ, ತಾಳ, ಡೋಲು ಗಂಟೆ ಬಾರಿಸುತ್ತ ಹೋ ಎಂದು ಕೂಗುವರು. ಈ ಕೂಗಿಗೆ ದನಗಳು ಬೆದರಿ ದಿಕ್ಕಾಪಾಲಾಗಿ ಓಡಲು ಪ್ರಾರಂಭಿಸುವವು. ಬಡಿಗೆ ಹಿಡಿದು ನಿಂತವರು ದಾರಿಯಲ್ಲಿ ಅವನ್ನು ಅಡಗಟ್ಟುವರು. ಇದಕ್ಕೆ "ದನ ಬೆಚ್ಚಿಸುವದು" ಎನ್ನುವರು. ದನ ಬೆದರಿ ಓಡಾಡುತ್ತಿರಲು ಮನೆಯ ಒಡೆಯನು ಮುಂದೆ ಬಂದು ದೊಡ್ಡ ಧ್ವನಿಯಿಂದ 'ಬೆಚ್ಚಬ್ಯಾಡಿ. ಬೆದರಬ್ಯಾಡಿ ವರಾಕ್ತ ಬಂದ ಹೊರೆ ಹುಲ್ಲು, ಆದರೂ ನಾ ತಂದು ಹಾಕುತ್ತೆ ಮನೆಗೇ ಬನ್ನಿ; ಎಲ್ಲಿಗೆ ಹೋದರೂ ಮನೆಗೇ ಬನ್ನಿ; ಬೆನಕನ ಕೆರೆಯ ನೀರು ಕುಡಿದು ಕಣಕನ ಬೈಲಿನ ಹುಲ್ಲು ಮೇದು ಮನೆಗೇ ಬನ್ನಿ." ಎನ್ನುವನು. ಉಳಿದವರು ಅವನೊಡನೆ ಧ್ವನಿಗೂಡುವರು. ದನಗಳೆಲ್ಲ ಓಡಿ ಹೋಗುವವು.

ದನ ಬೆಚ್ಚಿಸಿದ ನಂತರವೇ ಸ್ನಾನ. ಬೋರಜ್ಜಿ ಬಲಿ ಚಕ್ರವರ್ತಿಯವರಿಗೆ ಪೂಜೆ ಅಲ್ಪೋಪಹಾರಗಳು ನಡೆಯುವವು. ಅಂದು ಗೋಪೂಜೆಗೆ ಮುಳಕನ ರೊಟ್ಟಿ ಕಜ್ಜಾಯವಾದರೆ ಬೋರಜ್ಜಿ ನೈವೇದ್ಯಕ್ಕೆ ಹೆಸರುಬೇಳೆ ಪಾಯಸ. ಕಾಯಿ ಒಡೆಯ ಮಧ್ಯಾಹ್ನ ಹಬ್ಬದ ಊಟಕ್ಕೆ ಕೊಟ್ಟೆರೊಟ್ಟಿ ಕಾಯಿ ಹಾಲು. ಅಂದ ಹಿಟ್ಟಿನ ದೀಪಗಳ ದೀಪಾರಾಧನೆ, ಅಕ್ಕಿ ನೆನೆಸಿಟ್ಟು ನುಣ್ಣಗೆ ಗಟ್ಟಿಯಾಗಿ ತಿರುವಿದ್ದೇ ತಿರುವಿದ್ದು. ವಡೆ, ಮಂಡಲಿ, ಕಾಳು ಮಾಡಲು ಹಸಿ ಕೊಬ್ಬರಿ ತಿರುವುವರು. ದೀಪಕ್ಕೆ ಹಾಗೆಯೇ ಅಕ್ಕಿಯನ್ನ ಮಾತ್ರ ತಿರುವುವರು. ನಂತರ ಸ್ವಲ್ಪ ಸ್ವಲ್ಪ ಹಿಟ್ಟನ್ನು ತೆಗೆದುಕೊಂಡು ನೀಲಾಂಜನದ ಆಕಾರದ ಆಕೃತಿಗಳನ್ನು ಮಾಡಿ ಒಂದು ಹರಿವಾಣದಲ್ಲಿ ಇಡುವರು. ತೆಂಗಿನ ಹಸಿ ಗರಿಯನು ತಂದು ಅದರ ಮಧ್ಯ ಇರುವ ಕಡಿಯನು ತೆಗೆದು ಸಣ್ಣ ಸಣ್ಣ ತುಂಡು ಮಾಡಿ ಅದಕ್ಕೆ ಸ್ವಚ್ಛ ಮೆತ್ತನ್ನ ಬಟ್ಟೆಯ ತುಂಡನ್ನು ಸುತ್ತಿ ತೆಂಗಿನ ಎಣ್ಣೆಯಲ್ಲಿ ಎದ್ದಿ ಎದ್ದಿ ಆ ಹಿಟ್ಟಿನ ನೀಲಾಂಜನದ ಮಧ್ಯ ಚುಚ್ಚುವರು ಅದು ನೆಟ್ಟಗೆ ನಿಂತಿರುವದು. ಅದನ್ನು ಹೊತ್ತಿಸಿ ದೀಪ ಹಚ್ಚುವರು. ಅಂದು ಅದರದೆ ದೀಪ ಉರಿಯಬೇಕು. ದಿನಗಳೆದರೂ ಅದನ್ನು ತೂರಬೇಕು; ಆರತಿ ಆಗಬೇಕು. ಮರುದಿನ ಆ ಹಿಟ್ಟು ದನದ ಹೊಟ್ಟೆಗೇ ಎನ್ನಿ. ಅಂದು ರಾತ್ರಿ ವಿಶೇಷ ಪೂಜೆ ನಡೆಯುವದು. ಊಟದ ಮೊದಲು ಬೋರಜ್ಜಿಗೆ ಅನ್ನ ಮೊಸರು ಹಾಕಿ ರುಚಿಕಟ್ಟಾಗಿ ಬುತ್ತಿ ಕಲಿಸಿ, ಮುಳಕನ ರೊಟ್ಟಿ, ಕಾಯಿ ವಡೆಯು, ಹಿಡಲಿ ಕಾಳು ಕಜ್ಜಾಯಗಳನ್ನೆಲ್ಲಾ ಎಲೆಗಳಲ್ಲಿ ಸುತ್ತಿ ಪ್ರತ್ಯೇಕವಾಗಿಟ್ಟು ಒಂದು ದೊಡ್ಡ ಗಂಟು ಕಟ್ಟಿ ಇಡುವರು. ಮರುದಿನ ನಸುಕಿನಲ್ಲೇ ಬೋರಜ್ಜಿಯನ್ನು ನಾರಿ ಬುತ್ತಿ ಸಹಿತವಾಗಿ ಬೀಳ್ಕೊಡಬೇಕು.

## 'ಬುತ್ತಿಗಂಟು ಕಳುವದು"

ಬಿದಗಿಯ ದಿನ ಇನ್ನೂ ಕತ್ತಲಿರುವಾಗಲೇ ಮನೆಯ ಯಜಮಾನಿ ಬೋರಜ್ಜಿಯಯನು ಬುತ್ತಿ ಗಂಟು ಸಹಿತವಾಗಿಯೇ ಎತ್ತಿಕೊಂಡು ಬಂದು ಮನೆಯ ಮುಂದುಗಡೆ ತುಳಸಿಯ ಹಿಂಭಾಗದಲ್ಲಿ ಇಡುವಳು. ಇನ್ನು ಅವಳ ಅಂಗಳದಲ್ಲಿ ಕಾಲಿಡುವದಕ್ಕಿಲ್ಲ. ಎಲ್ಲಿ ಅಡಗಿ ನಿಂತಿರುವರೋ ಫಕ್ಕನೆ ಬಂದು ಬುತ್ತಿಗಂಟನ್ನು ಕಸಿದುಕೊಂಡು ಮತ್ತೆ ಎಲ್ಲಿಯೋ ಮಾಯವಾಗುವರು. ಅದನು "ಬುತ್ತಿಗಂಟು ಕಳುವದು" ಎನ್ನುತ್ತಾರೆ. ಇದನು ಮನೆಯವರು ಮಾಡುವ ಹಾಗಿಲ್ಲ. ಹೊರಗಿನವರೇ ಮಾಡಬೇಕು. ಹೀಗೆ ಕದ್ದುಕೊಂಡು ಬಂದ ಬುತ್ತಿ ಗಂಟನು ಗೆಳೆಯರೆಲ್ಲ ಕೂಡಿಕೊಂಡು ಒಂದೆಡೆ ಕುಳಿತು ಊಟಮಾಡುವರು. ಅಂದು ಅದೇ ಅವರಿಗೆ ಫಲಾಹಾರ.

ನಂತರ ಕಾಟಿಕಾಯಿ (ಅಥವಾ ಹಿಂಡಲ ಕಾಯಿ) ಯನ್ನು ರಾಶಿ ರಾಶಿಯಾಗಿ ಕೈಯಲ್ಲಿ ಹಿಡಿದುಕೊಂಡು ಸಮುದ್ರದ ದಂಡೆಯ ಉಸುಕಿನ ಪ್ರದೇಶದಲ್ಲಿ ಕಲೆತು ಪರಸ್ಪರ ಹೊಡೆಯುವದು. ಹೊಡೆತವನ್ನು ತಪ್ಪಿಸಿಕೊಳುವ ಸ್ಪರ್ಧೆ ನಡೆಯುವದು. ಹೊಂಡಿ ಹೂಡುವದು. ಬಲಿಚಕ್ರವರ್ತಿಯನ್ನ ಕೂಡ್ರಿಸುವದು, ಹೊಂಡಿ ಹೂಡಲು ಉಪಯೋಗಿಸಿದ ಕಾಯಿಯನ್ನೆ ತಂದು ಸೆಣಸುವದಕ್ಕೆ ಬಳಸುವದು. ಮುಂತಾದ ಏನೇನೊ ಆಟಗಳು. ಬಲಿಚಕ್ರವರ್ತಿಯ ಮೂರ್ತಿಯನ್ನು ಅಂಗಳದಲ್ಲಿ ಒಟ್ಟಿದ ಭತ್ತದ ಬಣಿವೆಯ ಮಧ್ಯ ಸೇರಿಸುವರು. ಧಾನ್ಯ ಸಂಗ್ರಹ ವರ್ಧಿಸಲಿ ಎಂಬ ಭಾವನೆಯೇ ಇದಕ್ಕೆ ಕಾರಣವಾಗಿದೆ. ಹೀಗೆ ಮನದ ಚಾಪಲಗಳಿಗೆಲ್ಲ ಚಾಲನೆ ಸಿಕ್ಕು ರಾಗದ್ವೇಷಾದಿಗಳು ಅಳಿದು ಪರಸ್ಪರ ಸ್ನೇಹ ಸೌಹಾರ್ದಗಳು ಉಳಿಯುವಂತೆ ಕಲ್ಪಿಸಿರುವರು. ಒಂದೊಂದು ಊರು ಒಂದು ಕುಟುಂಬ, ಊರ ಜನರೆಲ್ಲ ಆ ಕುಟುಂಬದ ಸದಸ್ಯರು ಎನ್ನುವ ಹಾಗೆ ಅವಲಂಬನ. ಅನುಕಂಪಾದಿಗಳನ್ನು ಹೆಣೆದು, ಒಡಕಿಗೆ ಅವಕಾಶವಿಲ್ಲದ ಹಾಗೆ ಮಾಡಿ ಸಹಜೀವನ ತತ್ವವನು ಪಾಲಿಸುವ ಪರಂಪರೆ ಇವರದು. ಕಹಿಯನ್ನ ಮೆಟ್ಟಿ ತುಳಿದು ಸ್ನೇಹ ಸೌಹಾರ್ದದ ತೈಲ ಎರೆದು ದೀಪ ಬೆಳಗಿಸುವದು. ಒಂದು ಸುಂದರವಾದ ಕಲ್ಪನೆಯನು ತಮ್ಮ ಜೀವನದಲಿ ಅಳವಡಿಸಿಕೊಂಡಿರುವರು. ತೀರ ಸರಳ ರೀತಿಯಲಿ ಹಿರಿಯ ಗುರಿಯನು ಸಾಧಿಸಲೆಳಸಿದ ಇವರ ಬಾಳೆ ಆದರ್ಶಪ್ರಾಯವಾಗಿದೆ.

ಬದಲಾಗುತ್ತಿರುವ ಇಂದಿನ ಪರಿಸ್ಥಿತಿಯಿಂದಾಗಿ ಕೆಲವೊಂದು ಸಂಪ್ರದಾಯಗಳು ಮರೆಯಾಗುತ್ತಿದ್ದರೂ ಹೆಚ್ಚಿನ ಅಂಶಗಳು ಅಚ್ಚಳಿಯದೆ ಉಳಿದುಕೊಂಡು ಬಂದಿವೆ. ●






ಪ್ರವಾಸದಲ್ಲಿ ಗೃಹ ಸೌಕರ್ಯಗಳಿಗೆ

ಬಳ್ಳಾರಿ ಮಹಾನಗರದ ಸುಪ್ರಸಿದ್ಧ

## ಮೀನಾಕ್ಷಿ ಗ್ರೂಪ್ ಹೋಟೆಲ್‌ಗಳು

ನಿಮ್ಮನ್ನು ಆತ್ಮಾದರದಿಂದ ಸ್ವಾಗತಿಸುತ್ತಿವೆ

★ ಉತ್ತಮ ಸೇವೆಗೆ
★ ಪರಿಶುಭ್ರತೆಗೆ
★ ಆಹ್ಲಾದಕರ ಕೋಣೆಗಳಿಗೆ
★ ಶುಚಿ–ರುಚಿ ಭೋಜನ ಮತ್ತು ಟಿಫಿನ್ ಗಳಿಗೆ

## ಮೀನಾಕ್ಷಿ ಭವನ

ಬ್ರಾಹ್ಮಣರ ಬೀದಿ ಫೋನ್ : 575

## ಮೀನಾಕ್ಷಿ ಲಾಡ್ಜ್

ಬೆಂಗಳೂರ್ ರೋಡ್ ಫೋನ್ : 362

ಪ್ರವಾಸಿಗರ ಮೆಚ್ಚಿನ ಹೋಟೆಲ್‌ಗಳು
ರೈಲ್ವೆ ಸ್ಟೇಶನ್ ಮತ್ತು ಬಸ್‌ಸ್ಟ್ಯಾಂಡುಗಳಿಂದ
ಕೇವಲ ೫ ನಿಮಿಷಗಳ ಕಾಲ್ನಡಿಗೆ ಮಾತ್ರ

PRA 7246

Kirloskar

May Diwali bring you
another bright
and prosperous year

KIRLOSKAR OIL ENGINES LTD.
Kirkee, Poona-3

## ಅಸ್ವಾಸ್ಥ್ಯದ ವೇಳೆ ಶುಶ್ರೂಷೆಯ ವೆಚ್ಚ ಮತ್ತು ಸಂಸಾರದ ಖರ್ಚನ್ನು ನಿರ್ವಹಿಸಲು ಸಿಂಡಿಕೇಟ್ ಬ್ಯಾಂಕ್ ಇವರ ಹೊಸ ಯೋಜನೆ

ಸಿಂಡಿಕೇಟ್ ಬ್ಯಾಂಕಿನ ಕ್ಯುಮುಲೇಟಿವ್ ಕಮ್ ಸಿಕನೆಸ್ ಬೆನಿಫಿಟ್ ಠೇವಣಿ ಯೋಜನೆಯು ನಿಮ್ಮ ಕಷ್ಟಕಾಲದಲ್ಲಿ ನೆರವಿಗೆ ಬರುವಂತೆ ರೂಪಿತವಾಗಿದೆ.

ತಿಂಗಳಿಗೆ ರೂಪಾಯಿ ೧೦ ರಂತೆ ಅಥವಾ ಅದರ ಗುಣಕಗಳಲ್ಲಿ–ಉಳಿತಾಯ ಮಾಡಿ ನಿಮ್ಮ ಠೇವಣಿಯು ಬೆಳೆಯುವುದನ್ನು ನೋಡಿರಿ. ಅಸ್ವಾಸ್ಥ್ಯದಂತಹ ಆಪತ್ಕಾಲದಲ್ಲಿ, ನಿಮ್ಮ ಠೇವಣಿಯಲ್ಲಿರುವ ಮೊಬಲಗಿನ ಇಮ್ಮಡಿಯಷ್ಟು ಸಾಲವನ್ನು ಶುಶ್ರೂಷೆಯ ವೆಚ್ಚಕ್ಕಾಗಿ ಮಾತ್ರವಲ್ಲದೆ ಸಂಸಾರ ನಿರ್ವಹಣೆಗಾಗಿಯೂ ಪಡೆಯಬಹುದು.

ಭವಿಷ್ಯದ ಭದ್ರತೆಗಾಗಿ ಸಿಂಡಿಕೇಟ ಬ್ಯಾಂಕಿನಲ್ಲಿ ಇಂದೇ ಉಳಿಸಿರಿ




## ಸಿಂಡಿಕೇಟ್ ಬ್ಯಾಂಕ್

ಪ್ರಧಾನ ಕಛೇರಿ: ಮಣಿಪಾಲ (ಮೈಸೂರು ರಾಜ್ಯ)

ಶಾಖೆಗಳು
540 ಕ್ಕೂ ಮಿಕ್ಕಿವೆ



ಕೆ. ಕೆ. ಪೈ.
ಕಸ್ಟೋಡಿಯನ್

# ಮಂಗಳ ತರಂಗೆ ತುಂಗಭದ್ರೆ

ಲೇಖನ :
ಶಂಕರ ಪಾಟೀಲ

ಫೋಟೋ :
ಬಿ. ಕೇಸರಸಿಂಗ್

'ಗಂಗಾಸ್ನಾನ-ತುಂಗಾಪಾನ' ಎಂಬ ಗಾದೆಯ ಮಾತು ತುಂಗಾ, ಭದ್ರಾ ಮತ್ತು ತುಂಗಭದ್ರಾ ನದಿಯ ಸಿಹಿ ಜಲದ ("ಜಲಮ್ ಅಮೃತಮಯಂ" ಎಂದು ಮಧುರ ಕವಿ ಹಾಡಿದ್ದಾನೆ) ಹಿರಿಮೆಯನ್ನು ಸಾರುವ ಅಂಶವನು ಕರ್ನಾಟಕ ರಾಜ್ಯದ ಬಹು ಜನರು ಬಲ್ಲರು. ರಾಜ್ಯದ ಅತ್ಯಂತ ಪ್ರಾಚೀನವಾದ ಮತ್ತು ತುಂಬ ಮಹತ್ವದ ನದಿಗಳಲ್ಲಿ ಇದೊಂದು. ರಾಜ್ಯದ ಹೆಚ್ಚು ಜಿಲ್ಲೆಗಳಲ್ಲಿ—ಚಿಕ್ಕಮಗಳೂರ, ಶಿವಮೊಗ್ಗ, ಚಿತ್ರದುರ್ಗ, ಬಳ್ಳಾರಿ ಹಾಗೂ ರಾಯಚೂರು—ಪ್ರವಹಿಸಿರುವದರ ಜೊತೆಗೆ ಸುಮಾರು ನಾಲ್ಕುನೂರು ಮೈಲು ಉದ್ದವಾಗಿ ಹರಿಯುವ ನದಿಯೂ ಇದಾಗಿರುವುದು. ಹಲವಾರು ಪುಣ್ಯಕ್ಷೇತ್ರಗಳನ್ನು, ತೀರ್ಥಕ್ಷೇತ್ರಗಳನು ತೀರದಲ್ಲಿ ಹೊಂದಿರುವ ತುಂಗಭದ್ರೆ ಇತಿಹಾಸ ಪ್ರಸಿದ್ಧ ಸ್ಥಳಗಳನ್ನು, ಈಚೆಗೆ ಹೆಚ್ಚೆಚ್ಚು ಔದ್ಯಮಿಕ ಕೇಂದ್ರಗಳನ್ನು ಹೊಂದಿರುವಳು. ನಮ್ಮ ರಾಜ್ಯದ ಸಂಪತ್ ಸಮೃದ್ಧಿಯಲ್ಲಿ, ಕೃಷಿ ವೃದ್ಧಿಯಲ್ಲಿ ಅವಳ ಪಾತ್ರ ತುಂಬ ದೊಡ್ಡದು; ಹಿರಿದಾದುದು. ಪರಮ ಪಾವನೆಯೆನಿಸಿದ ತುಂಗಭದ್ರೆ ನಮ್ಮ ನಾಡಿನ ಜನಜೀವನವನ್ನು ಸುಖ-ಸಂಪದಗಳಿಂದ ನೆಮ್ಮದಿಗೊಳಿಸಿದ್ದಾಳೆ; ಎತ್ತರಿಸಿದ್ದಾಳೆ.

ಮೂಲತಃ ತುಂಗಾ ಹಾಗೂ ಭದ್ರಾ ಎರಡೂ ಪ್ರತ್ಯೇಕ ನದಿಗಳು. ಚಿಕ್ಕಮಗಳೂರ ಜಿಲ್ಲೆಯಲ್ಲಿ ಪಶ್ಚಿಮ ಘಟ್ಟದಲ್ಲಿ ವರಾಹ ಪರ್ವತದಲ್ಲಿರುವ ಗಂಗಾಮೂಲದಲ್ಲಿ ಇವುಗಳ ಜನನ. ಇವುಗಳ ಉಗಮದ ಬಗೆಗೆ ತುಂಬ ಕುತೂಹಲಕಾರಿಯಾದ ಪೌರಾಣಿಕ ಆಖ್ಯಾಯಿಕೆ ಇದೆ. ಬ್ರಹ್ಮಾಂಡ ಪುರಾಣದಲ್ಲಿ ಅದರ ಉಲ್ಲೇಖ ಬರುವುದು. ಹಿರಣ್ಯಾಕ್ಷನು ಭೂಮಿಯನ್ನೇ ಸೆರೆಹಿಡಿದು ಪಾತಾಳಕ್ಕೆ ತೆಗೆದುಕೊಂಡು ಹೋದನಂತೆ. ಋಷಿಗಳಿಗೆ ಜನರೆಲ್ಲರೂ ನಿರಾಶ್ರಿತರಾಗಿ ಮೊರೆಯಿಡಲು ಅವರು ಪ್ರತಿಯಾಗಿ ನಾರಾಯಣನಿಗೆ ಮೊರೆಯಿಟ್ಟರು. ತಾನು ಏನಾದರೂ ಉಪಾಯ ಮಾಡುವದಾಗಿ ಮಹಾವಿಷ್ಣು ಅವರಿಗೆ ಭರವಸೆಯನ್ನು ನೀಡಿದನು. ಆ ಮೇರೆಗೆ ಅವನು ವರಾಹ ಅವತಾರವನು ತಾಳಿದನು; ಹಿರಣ್ಯಾಕ್ಷನನು ಸಂಹರಿಸಿದನು. ಈ ಸಂಹಾರ ಕಾರ್ಯವು ಪೂರೈಸಿದ ಕೂಡಲೇ ಅವನಿಗೆ ವಿಶ್ರಾಂತಿಯ ಅಗತ್ಯವೆನಿಸಿತು. ಆಗ ಈ ಪರ್ವತಾವಳಿಯಲ್ಲಿ ಉತ್ತುಂಗವಾದ ಶ್ರೇಣಿಯ ಮೇಲೆ ಎರಡೂ ಕೋರೆ ಹಲ್ಲುಗಳನ್ನು ಇರಿಸಿ ವಿರಮಿಸಿದ. ಆ ಕಾರಣದಿಂದ ಈ ಪರ್ವತ, ವರಾಹ ಪರ್ವತವೆಂಬ ಹೆಸರನು ಪಡೆಯಿತು. ಈ ಕಾಲದಲ್ಲಿ




ಪರ್ವತವು ಸೀಳಿತು; ಇಬ್ಭಾಗಗೊಂಡಿತು. ಪರ್ವತದ ಸೀಳಾದ ಈ ಭಾಗಗಳಿಂದ ಝರಿಗಳು ಪ್ರವಹಿಸಿದವು. ಬಲಭಾಗದಿಂದ ಉದ್ಭವಿಸಿದ ಝರಿ ತುಂಗೆಯೆಂಬ ಅಭಿಧಾನವನ್ನೂ, ಎಡಭಾಗದಿಂದ ಉದ್ಭವಿಸಿದ ಝರಿ ಭದ್ರೆಯೆಂಬ ಅಭಿಧಾನವನ್ನೂ ಹೊಂದಿದವು. ಆದರೆ ಈ ಪ್ರದೇಶಕ್ಕೆ ಗಂಗಾಮೂಲವೆಂಬ ಹೆಸರು ಬಂದುದೇಕೆಂಬುದು ಮಾತ್ರ ಸ್ಪಷ್ಟವಿರುವದಿಲ್ಲ. ಬಹುಶಃ ನದಿಗಳ ಮೂಲಕ್ಕೆ ಕಾರಣವಾದುದೊಂದೇ ಅದಕ್ಕೆ ಕಾರಣವಾಗಿರಲು ಸಾಕು. ನದಿಗಳಿಗೆ ಈ ಹೆಸರುಗಳು ಬರಲು ಕಾರಣವನೂ ವಿವರಿಸಲಾಗಿದೆ: ರಾಕ್ಷಸನೊಂದಿಗೆ ಹೋರಾಡಿದ ವರಾಹ ತುಂಬ ಬೆವತಿದ್ದ. ಎಡಭಾಗದಲ್ಲಿದ ಉನ್ನತವಾದ ಕೋರೆಯಿಂದ ಪ್ರವಹಿಸಿದ್ದರಿಂದ ಆ ಝರಿಗೆ ತುಂಗೆಯೆಂದೂ, ಬಲಭಾಗದಲ್ಲಿದ್ದ ನೀಟಾದ, ಸ್ಥಿರವಾದ ಕೋರೆಯಿಂದ ಪ್ರವಹಿಸಿದ್ದರಿಂದ ಆ ಝರಿಗೆ ಅನುಗುಣವಾಗಿ ಭದ್ರೆಯೆಂದೂ ಹೆಸರಿಸಲಾಯಿತಂತೆ. ಬ್ರಹ್ಮಾಂಡ ಪುರಾಣದಲ್ಲಿ ಬಂದಿರುವ ಈ 'ತುಂಗಭದ್ರಾ ಮಾಹಾತ್ಮ್ಯ'ಯಲ್ಲದೇ ರಾಮಾಯಣ ಕಾಲದಲ್ಲಿ ತುಂಗಭದ್ರಾ, ಪಂಪಾ ಎಂದು ಹೆಸರು ಪಡೆದಿತ್ತೆಂದು ತಿಳಿದು ಬರುವುದು. ಭಾಗವತದಲ್ಲಿ ಕೂಡ ಇದರ ಉಲ್ಲೇಖವು ಬರುತ್ತದೆ. ಹೀಗೆ ತುಂಗಭದ್ರೆ ಪೌರಾಣಿಕವಾಗಿಯೂ ಅತ್ಯಂತ ಪ್ರಾಚೀನವಾಗಿರುವುದು



ಕಳಸದ ಬಳಿ ಕಲ್ಲು ಬಂಡೆಗಳ →
[illegible]ಳಿ ಧುಮ್ಮಿಕ್ಕಿಹ ಭದ್ರೆ

## ನದಿಯ ಮೂಲ

ತುಂಗ-ಭದ್ರೆಗಳು ಒಂದೇ ಮೂಲದಲ್ಲಿ ಉಗಮ ಹೊಂದಿದ್ದರೂ, ಮೊದಲು ಈಶಾನ್ಯಾಭಿಮುಖವಾಗಿ ಪ್ರವಹಿಸಿದರೂ, ಕೂಡಲಿಯಲ್ಲಿ ಒಂದಾಗಿ ಸೇರುವ ವರೆಗೆ ಬೇರೆ ಬೇರೆಯಾಗಿ ಹರಿದು ಬಂದಿವೆ. ತುಂಗಾ ಶೃಂಗೇರಿಯನ್ನು ಬಳಸಿಕೊಂಡು ಹರಿಹರಪುರದಿಂದ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶಿಸಿ, ತೀರ್ಥಹಳ್ಳಿಯನ್ನು ದಾಟಿ, ಶಿವಮೊಗ್ಗೆಯನ್ನು ಸುತ್ತು ಹಾಕಿ ಮುಂದಕ್ಕೆ ಪ್ರವಹಿಸುವುದು. ಭದ್ರಾ ಚಿಕ್ಕಮಗಳೂರ ಜಿಲ್ಲೆಯ ಕಳಸ, ಬಾಳೇಹೊನ್ನೂರು, ಹೆಬ್ಬೆಗಳನ್ನು ಬಳಸಿಕೊಂಡು ಜಾಗರಕೊಳ್ಳದಿಂದ ಬರುವ ಸೋಮವಾಹಿನಿಯನ್ನು ಸೇರಿಸಿಕೊಂಡು ಭದ್ರಾವತಿಯ ಮುಖಾಂತರ ಶಿವಮೊಗ್ಗ ಜಿಲ್ಲೆಯನ್ನು ಪ್ರವೇಶ ಮಾಡಿರುವುದು. ಅಲ್ಲಿಂದ ಹೊಳೆಹೊನ್ನೂರ ಮೂಲಕ ಕೂಡಲಿಗೆ ಬರುವುದು. ಅದೇ ಜಿಲ್ಲೆಯ ಕೂಡಲಿ ಬಳಿ ಇವೆರಡೂ ಒಂದುಗೂಡಿವೆ; ಹೀಗೆ ಕೂಡಿಕೊಂಡು ಒಂದಾಗಿ ತುಂಗಭದ್ರೆ ಎಂಬ ಹೊಸ ನಾಮಧೇಯವನ್ನು ಪಡೆದು ಪ್ರವಹಿಸುತ್ತಿದೆ. ಅಲ್ಲಿಂದ ಉತ್ತರಾಭಿಮುಖವಾಗಿ ಸಾಗಿ ಹೊನ್ನಾಳಿಯನ್ನು ಬಳಸಿಕೊಂಡು ಚಿತ್ರದುರ್ಗ ಜಿಲ್ಲೆಯನ್ನು ಪ್ರವೇಶಿಸುವುದು. ಆ ಜಿಲ್ಲೆಯ ಹರಿಹರವನ್ನು ಸುತ್ತು ಹಾಕಿಕೊಂಡು ಧಾರವಾಡ ಜಿಲ್ಲೆಯನ್ನು ಪ್ರವೇಶಿಸುವುದು. ಈಗ ಹೆಚ್ಚಾಗಿ ಅದು ಜಿಲ್ಲೆಯ ಗಡಿಗುಂಟ



ಭದ್ರೆಯ ದಡದಲ್ಲಿರುವ ಬಾಳೆಹೊನ್ನೂರಿನಲ್ಲಿನ —
ಶ್ರೀ ರೇಣುಕಾಚಾರ್ಯರ ಮಠ

ಸಾಗುವುದು. ಕುಡಲೂರ ಬಳಿ ಹರಿದ್ರಾ ನದಿಯನ್ನು ಕೂಡಿಕೊಂಡು ಬರುವ ತುಂಗಭದ್ರೆ ಧಾರವಾಡ ಜಿಲ್ಲೆಯ ಹಾವನೂರ, ಚೌಡದಾನಪುರಗಳನ್ನು ಬಳಸಿಕೊಂಡು ಬಂದಾಗ ಗಳಗನಾಥ ಬಳಿ ವರದಾ ಅದನ್ನು ಬಂದು ಸೇರುವುದು. ಅಲ್ಲಿಂದ ಮುಂದೆ ಸಾಗಿದ ತುಂಗಭದ್ರೆ ಬಳ್ಳಾರಿ ಜಿಲ್ಲೆಯನ್ನು ಸೇರುವುದು. ಹಂಪಿ, ಆನೆಗೊಂದಿ, ನವಬೃಂದ ವನಗಳನ್ನು ಸುತ್ತು ಹಾಕಿ, ಮುನಿರಾಬಾದದಿಂದ ಮುಂದೆ ಸಾಗುವುದು. ಹಗರಿ ಇಲ್ಲವೇ ವೇದಾವತಿ ಈ ಜಿಲ್ಲೆಯಲ್ಲಿ ತುಂಗಭದ್ರೆಯನ್ನು ಸೇರುವುದು. ಇಲ್ಲಿಂದ ರಾಯಚೂರ ಜಿಲ್ಲೆ ಗಡಿಗುಂಟ ಸಾಗಿ ಆಂಧ್ರವನ್ನು ಪ್ರವೇಶಿಸುವುದು. ಪರಮಪುಣ್ಯಕ್ಷೇತ್ರವಾದ ಮಂತ್ರಾಲಯವನ್ನು ಬಳಸಿಕೊಂಡು ಕರ್ನೂಲ ಬಳಿ ದಕ್ಷಿಣದ ಇನ್ನೊಂದು ಮುಖ್ಯ ನದಿಯೆನಿಸಿದ ಕೃಷ್ಣೆಯನ್ನು ಸೇರಿಕೊಳ್ಳುವುದು.

ಮಳೆಗಾಲದಲ್ಲಿ ಈ ನದಿ ಸೂಸಿ ಹರಿಯುವುದು. ಬೇಸಿಗೆಯಲ್ಲಿ ಅನೇಕ ಸ್ಥಳಗಳಲ್ಲಿ ಈ ನದಿಯನ್ನು ಸುಲಭವಾಗಿ ದಾಟುವಂತೆ ಪಾತ್ರವು ಕಿರಿದಾಗಿರುವುದು. ಹೀಗಿದ್ದರೂ ಕಲ್ಲುಬಂಡೆಗಳ ಮಧ್ಯದಲ್ಲಿ ಈ ನದಿಯು



ತುಂಗಾತೀರದಲ್ಲಿರುವ ಶೃಂಗೇರಿಯ →
ಶ್ರೀ ವಿದ್ಯಾಶಂಕರ ದೇವಾಲಯ

ಮಲೆನಾಡಿನಲ್ಲಿರುವ ತೀರ್ಥಹಳ್ಳಿಯಲ್ಲಿಯೂ ತುಂಗೆ ಹರಿಯುತ್ತಾಳೆ →



ಪ್ರವಹಿಸುತ್ತಿರುವದರಿಂದ ಮೂಲ ಸ್ಥಳದಿಂದ ಬೈಲುಸೀಮೆಗೆ ಬರುವ ವರೆಗೆ ತುಂಬ ರಭಸದಿಂದ ಹರಿಯುವದರಿಂದ ನೌಕಾಯಾನಕ್ಕೆ ಅವಕಾಶ ತುಂಬ ಕಡಿಮೆ. ಕೆಲ ಸ್ಥಳಗಳಲ್ಲಂತೂ ಸಾಧ್ಯವೇ ಇಲ್ಲವೆನ್ನುವಷ್ಟು ಕಡಿದಾದ ಕಲ್ಲುಬಂಡೆಗಳ ಮಧ್ಯದಲ್ಲಿ ಸಾಗಿಬಂದಿರುವುದು. ನಾನು ಈ ನದಿಯ ಪ್ರವಾಹದ ಹಲವಾರು ಸ್ಥಳಗಳನ್ನು ಸಂದರ್ಶಿಸಿದಾಗ ಎಲ್ಲೆಲ್ಲೂ ಕಲ್ಲುಬಂಡೆಗಳನು ಕಂಡು ಚಕಿತನಾಗಿದ್ದೇನೆ. ಬಹುಶಃ ಈ ನದಿಯ ನೀರು ತುಂಬ ಸಿಹಿಯಾಗಿರುವದಕ್ಕೆ ಇದೇ ಕಾರಣವಾಗಿದ್ದಿರಲೂ ಸಾಕು. ಆದರೆ ಗಳಗನಾಥದ ಬಳಿ ಮಾತ್ರ ಅಪರೂಪಕ್ಕೆ ಒಂದೂ ಕಲ್ಲು ಬಂಡೆ ದೊರೆಯುವದಿಲ್ಲವೆಂದರೆ ಆಶ್ಚರ್ಯವೆನಿಸುವುದು. ಇಲ್ಲಿ ಸುಮಾರು ನಾಲ್ಕು ಮೈಲು ಈ ತೀರದಲ್ಲಿ ಉಸುಕೇ ಉಸುಕು. ಆದೇ ಈ ಊರಿನ ಗಡಿದಾಟಿ ಮುಂದಿನ ಗ್ರಾಮದ ತೀರ ಸಮೀಪಿಸಿದಾಗ ಮತ್ತೆ ಕಲ್ಲುಬಂಡೆಗಳು ನದಿಯ ಪಾತ್ರದಲ್ಲಿ ಮತ್ತು ತೀರದಲ್ಲಿ ಗೋಚರಿಸುತ್ತವೆ. ನಿಜವಾಗಿ ಇದೊಂದು ಪ್ರಕೃತಿಯ ಅತ್ಯಂತ ರಮ್ಯವಾದ ಮಹಿಮೆಯೆಂದೇ ನನಗೆನಿಸಿತು. ಕಳಸದಲ್ಲಿ ಭದ್ರಾನದಿ ರಭಸದಿಂದ ಬಂಡೆಗಲ್ಲುಗಳ ಮಧ್ಯದಲ್ಲಿ ಪ್ರವಹಿಸುವ, ತೀರ್ಥಹಳ್ಳಿ-ಶಿವಮೊಗ್ಗಗಳಲ್ಲಿ ತುಂಗಾ ಅದೇ ರೀತಿ ಪ್ರವಹಿಸುವ ನೋಟ ಕುದ್ರರಮಣೀಯವಾದುದು. ತೀರ್ಥಹಳ್ಳಿಯಲ್ಲಿ ಬೇಸಿಗೆಯಲ್ಲಿ ನಾನು ನೋಡಿದಾಗ ಪಾತ್ರದಲ್ಲಿ ಎಲ್ಲೆಲ್ಲೂ ಬಂಡೆಗಲ್ಲುಗಳು. ಒಂದು ಸೇತುವೆಯೋ ಪಾದಿಯಲ್ಲಿ ನಿಂತಿರುವ ನೋಟ ದಂಗುಬಡಿಸುವುದು. ಕುವೆಂಪು ಈ ನೋಟವನ್ನು ಹಲವಾರು ಕವನಗಳಲ್ಲಿ ಮತ್ತು ಕಾದಂಬರಿಗಳಲ್ಲಿ ಬಹು ಚೆನ್ನಾಗಿ ಸೆರೆಹಿಡಿದಿರುವರು. ಶಿವಮೊಗ್ಗೆಯಲ್ಲಿ ನದಿ ಮಧ್ಯದಲ್ಲಿ ಈ ಶಿಲೆಗಳು ಲಿಂಗರೂಪಧಾರಣ ಮಾಡಿ ನಿಂತಿರುವ ನೋಟ ಹೃದ್ಯವಾಗಿರುವುದು. ಹರಿಹರ, ಹಂಪೆಗಳಲ್ಲಿ ಅನೇಕ ಮಡುವುಗಳನ್ನು ಅದು ನಿರ್ಮಿಸಿದೆ. ಹಂಪೆಯ ಚಕ್ರತೀರ್ಥ, ಪಂಪಾ ಸರೋವರಗಳು ಅದರ ಸೊಬಗನ್ನು ಹೆಚ್ಚಿಸಿರುವವು. ಮಂತ್ರಾಲಯದಲ್ಲಿ ಗಂಭೀರೆಯಾಗಿ, ಮಂದಗಮನೆಯಾಗಿ ಪ್ರವಹಿಸುವ ನೋಟ ನಯನಗಳನ್ನು ತಣಿಸುವುದು. ಕೃಷ್ಣೆಯನ್ನು ಸೇರುವಾಗ ಬಹು ಮೆಲ್ಲಗೆ ಸಾಗಿರುವ ದೃಶ್ಯ ನೋಡುವಂಥದು. ಕೂಡಲಿಯಲ್ಲಿ ಸಂಗಮೇಶ್ವರ ದೇವಾಲಯದ ಸಮ್ಮುಖದಲ್ಲಿ ಎಡದಿಂದ ತುಂಗಾ, ಬಲದಿಂದ ಭದ್ರಾ ೧೨೦ ಮೈಲುಗಳಷ್ಟು ಪ್ರವಹಿಸಿ ಬಂದು ಸೇರುವವು. ಹೀಗಾಗಿ ಇಲ್ಲಿ ಆರು ದಡಗಳನು ಕಾಣುವಂತಾಗಿರುವುದು. ನಾನು ಹೋದಾಗ ಮಳೆಗಾಲ ಇನ್ನೂ ಪ್ರಾರಂಭವಾಗಿರಲಿಲ್ಲ. ಬೇಸಿಗೆಯ ಕೊನೆಯ ದಿನಗಳು. ಪ್ರವಾಹ ತುಂಬಿ ಬಂದಿರಲಿಲ್ಲವಾದ್ದರಿಂದ ಎರಡೂ ನದಿಗಳ ನೀರು ಒಂದುಗೂಡಿದಾಗಲೆಲ್ಲ ಭಿನ್ನ ಭಿನ್ನ ಬಣ್ಣವನ್ನು ತಳೆದು ನಿಂತಿರುವುದು ಸ್ಪಷ್ಟವಾಗಿ ಕಾಣುತ್ತಿತ್ತು. ತುಂಗೆಯ ನೀರ ಬಿಳಿಯಾಗಿ



ಶಿವಮೊಗ್ಗೆಯಲ್ಲಿ ಹರಿಯುವ ತುಂಗೆ



ಗಾಜನೂರಲ್ಲಿ ತುಂಗಾ ಅಣೆಕಟ್ಟು →

ತುಂಗಾ ಕಾಲುವೆಯ ಬಳಿ ಕೊಯ್ದು ತಂದ ಬತ್ತವನ್ನು ಬೇರ್ಪಡಿಸುತ್ತಿರುವುದು →



ದ್ದರೆ, ಭದ್ರೆಯ ನೀರು ಸ್ವಲ್ಪ ಮಟ್ಟಿಗೆ ಕಪ್ಪಾಗಿ ಕಾಣುತ್ತಿತ್ತು. ಆ ಸಂಗಮದ ಈ ವರ್ಣ ಸಂಯೋಜನೆ ಆ ಕಾಲದಲ್ಲಿ ನಿಜವಾಗಿ ಆಲ್ಹಾದಕರವೆನಿಸಿತು. ಎಷ್ಟು ಹೊತ್ತು ನಿಂತು ನೋಡಿದರೂ ಕಣ್ಣು ತಣಿಯಲಿಲ್ಲ. ಇಂಥದೇ ಇನ್ನೊಂದು ಸುಂದರ ನೋಟವನು ವರದಾ ತುಂಗಭದ್ರೆಯನ್ನು ಸೇರುವ ಗಳಗನಾಥದಲ್ಲಿ ಕಂಡೆ. ಕರಜಗಿಯಿಂದ ಎಡಭಾಗದಿಂದ ಬಂದು ದಕ್ಷಿಣಾಭಿಮುಖವಾಗಿ ಪ್ರವಹಿಸುವ ತುಂಗಭದ್ರೆಯನ್ನು ಗಳಗೇಶರನ ಸಮ್ಮುಖದಲ್ಲಿ ವರದಾ ಸೇರುವುದು. ಆ ನದಿ ಮುಖವು ಇಲ್ಲಿ ಅಗಲವಾಗಿರುವುದು. ಒಂದೊಂದೂ ಕಲ್ಲು ಬಂಡೆಯಿಲ್ಲ. ನದಿ ದಂಡೆ ಕೂಡ ಮಣ್ಣಿನದು. ನಿಜವಾಗಿಯೂ ತುಂಬ ಪ್ರಶಾಂತವಾದ ಸ್ಥಳವೇ ಎನಿಸಿತು.

ತುಂಗಭದ್ರೆಯನ್ನು ಸೇರುವ ಕೊನೆಯ ಉಪನದಿ ಹಿಂದರಿ. ಜಮ್ಮಿಚಾಟು (ಆಂಧ್ರ) ಬಳಿ ತುಂಗಭದ್ರೆಯನ್ನು ಸೇರಿರುವುದು. ಕೃಷ್ಣೆಯನ್ನು ಸೇರಲು ಧಾವಿಸುವ ತುಂಗಭದ್ರೆಯ ನೋಟವು ನೋಡುವಂಥದು. ಮೂರಾವಕೊಂಡ ಗ್ರಾಮದಿಂದ ಮೂರು ಮೈಲುಗಳ ಮೇಲೆ ಈ ಸಂಗಮವಿರುವುದು. ಕರ್ನೂಲಿನಿಂದ ೩೨ ಮೈಲು ಅಂತರ. ಇಲ್ಲಿಗೆ ಹೋಗಲು ನೇರವಾದ ಮಾರ್ಗವಿಲ್ಲ. ನದಿ ತೀರದ ಗುಂಟ ಕಾಲುವೆ ಕಟ್ಟೆಗಳನ್ನು ದಾಟುತ್ತ ಕಲ್ಲು-ಮುಳ್ಳು ತುಳಿಯುತ್ತ ಕಚ್ಚಾ ರಸ್ತೆಯಲ್ಲಿ ಹೋಗಬೇಕು. ಇಲ್ಲಿಯ ದೇವಾಲಯದಲ್ಲಿಯ ಲಿಂಗವನ್ನು ಹೈದರಾಬಾದ ವಸ್ತು ಸಂಗ್ರಹಾಲಯಕ್ಕೆ ಸ್ಥಳಾಂತರಿಸಲಾಗಿದೆಯೆಂದು ಹೇಳಲಾಗುತ್ತದೆ. ತುಂಗಭದ್ರೆ ಹೀಗೆ ಹತ್ತು ಹಲವಾರು ಪ್ರಶಾಂತ ಸ್ಥಳಗಳನ್ನು ತೀರದಲ್ಲಿ ಹೊತ್ತು ಪ್ರವಹಿಸುವ ನೋಟ ರಮಣೀಯವಾಗಿರುವಂತೆ ಅರ್ಥಪೂರ್ಣವೂ ಆಗಿರುವುದು. ಅಂತೇ ನಮ್ಮ ರಾಜ್ಯದ ಸಾಂಸ್ಕೃತಿಕ ಜೀವನದಲ್ಲಿ ಅವಳದು ಪ್ರಮುಖವಾದ ಪಾತ್ರವೆಂದು ನಾನು ಅರಿತುಕೊಂಡೆ.



ಭದ್ರೆಯ ದಡದಲ್ಲಿರುವ ಭದ್ರಾವತಿ. ಹಿನ್ನೆಲೆಯಲ್ಲಿ ಕಬ್ಬಿಣ ಉಕ್ಕಿನ ಕಾರಖಾನೆಯೂ ಕಾಣುವದು

## ಕೃಷಿಕರ ಕೈವಾರಿ

ತುಂಗಭದ್ರೆ ನಮ್ಮ ರಾಜ್ಯದ ಕೃಷಿಕರ ಕೈವಾರಿಯೆನಿಸಿದ್ದಾಳೆ. ಅವಳ ಸಿಹಿಜಲ ತೀರದ ಕೃಷಿಕರಿಗೆ ಆಪ್ಯಾಯಮಾನವಾಗಿದೆ. ತುಂಗೆ ಗಾಜನೂರ ಬಳಿ ನಿರ್ಮಾಣಗೊಂಡ ಚಿಕ್ಕ ಅಣೆಕಟ್ಟಿನಿಂದ, ಭದ್ರೆ ಲಕ್ಕವಳ್ಳಿ ಬಳಿ ನಿರ್ಮಿಸಿದ ಅಣೆಕಟ್ಟಿನಿಂದ ಲಕ್ಷಾವಧಿ ಎಕರೆಗೆ ನೀರುಣಿಸಿ (ಲಕ್ಕವಳ್ಳಿ ಜಲಾಶಯದ ಎಡ-ಬಲ ದಂಡೆ ಕಾಲುವೆಗಳಿಂದ ೨॥ ಲಕ್ಷ ಎಕರೆಗೆ ಗಾಜನೂರಿನಿಂದ ೨೨ ಸಾವಿರ ಎಕರೆಗೆ ನೀರು ದೊರೆವುದು) ಭೂಮಿಯನ್ನು ಸಸ್ಯಶ್ಯಾಮಲೆಯಾಗಿ ಮಾಡಿದ ಭಾಗ್ಯಕ್ಕೆ ಪಾತ್ರರಾಗಿದ್ದಾರೆ. ಲಕ್ಕವಳ್ಳಿಯ ಮುಖ್ಯ ಅಣೆಕಟ್ಟು ೧೪೪೫ ಅಡಿ ಉದ್ದ, ೧೯೪ ಅಡಿ ಎತ್ತರವಾಗಿರುವುದು. ಜಲಾಶಯದ ಸಾಮರ್ಥ್ಯವು ೪೫.೨೯ ಚದುರ ಮೈಲು ಇರುವುದು. ಇಲ್ಲಿ ಮುಳುಗಡೆಯಾದ



ಭದ್ರಾವತಿಯ ಕಾಗದ ಕಾರಖಾನೆ →





ಶಂಕರಾಚಾರ್ಯರು
ಸ್ಥಾಪಿಸಿದ
ಶೃಂಗೇರಿಯ
ಶ್ರೀ ಶಾರದಾಂಬೆ

ಲಕ್ಕವಳ್ಳಿಯಲ್ಲಿ ಭದ್ರಾ ಜಲಾಶಯ



ಶಿವಮೊಗ್ಗೆಯ ಬಳಿಯಿರುವ
ಕೂಡ್ಲಿಯ ರಾಮೇಶ್ವರ
ದೇವಾಲಯ

ಹರಿಹರದ
ಹರಿಹರೇಶ್ವರ





ಭದ್ರಾವತಿಯ "ಮೈಸೂರ್ ಕಬ್ಬಿಣ ಮತ್ತು ಉಕ್ಕಿನ ಕಾರಖಾನೆ" ಭದ್ರೆಯ ತಟದಲ್ಲಿದೆ →

ಪ್ರದೇಶವು ಹೆಚ್ಚಾಗಿ ಅರಣ್ಯ ಪ್ರದೇಶವಾಗಿದ್ದರೂ ೨೮ ಹಳ್ಳಿಗಳು ಮುಳುಗಡೆಯಾಗಿವೆ. ಎಡ ದಂಡೆಯ ಕಾಲುವೆ ೪೮ ಮೈಲು ಉದ್ದವಾಗಿರುವುದು. ಬಲ ದಂಡೆಯ ಮುಖ್ಯ ಕಾಲುವೆ ೬೨ ಮೈಲು ಇದೆ. ಈ ಕಾಲುವೆಯ ೪೭ನೆ ಮೈಲಿಗೆ ಕವಲೊಡೆಯುವ ಶಾಖಾ ಕಾಲುವೆ ೪೧॥ ಮೈಲು ಸಾಗಿರುವುದು. ಮುಖ್ಯ ಕಾಲುವೆಯ ೬೨ನೆ ಮೈಲಿಗೆ ಎರಡು ಕವಲೊಡೆಯುತ್ತಿದ್ದು, ಮಲೆಬೆನ್ನೂರ ಶಾಖೆ ೩೦॥ ಮೈಲು ಸಾಗಿದೆ. ದಾವಣಗೆರೆ ಶಾಖೆ ಉದ್ದವಾಗಿರುವುದು. ೫೬ ಮೈಲು ಸಾಗಿರುವುದು. ಭದ್ರಾ ಅಣೆಕಟ್ಟು ವಿದ್ಯುತ್ ಉತ್ಪಾದನೆ ಉದ್ದೇಶವನ್ನು ಹೊಂದಿದೆ; ೨೫೦೦೦ ಕಿ. ವ್ಯಾ. ಉತ್ಪಾದಿಸಲಾಗುತ್ತಿದೆ. ಈ ಎರಡೂ ಜಲಾಶಯಗಳು ಶಿವಮೊಗ್ಗೆಯಿಂದ ಸಮೀಪದಲ್ಲಿವೆ ಭದ್ರಾ ಜಲಾಶಯವು ಚಿಕಮಗಳೂರ ಜಿಲ್ಲೆಯ ತರಿಕೆರೆ ತಾಲೂಕಿನಲ್ಲಿದ್ದು ಶಿವಮೊಗ್ಗೆಯಿಂದ ೨೯ ಕಿಲೋಮೀಟರ ಅಂತರದಲ್ಲಿ, ತುಂಗಾ ಜಲಾಶಯವು ಗಾಜನೂರಲ್ಲಿ ೧೨ ಕಿಲೊಮೀಟರ ದೂರದಲ್ಲಿವೆ. ನಾನು ಹೋದಾಗ ಭದ್ರಾ ಜಲಾಶಯದಲ್ಲಿ ನೀರು ಕಡಿಮೆ ಇತ್ತು. ತುಂಗಾ ಜಲಾಶಯದಲ್ಲಿ ಮಾತ್ರ ಅಣೆಕಟ್ಟಿನಿಂದ ನೀರು ಕಿರಿದಾಗಿ ಧುಮುಕುತ್ತಿತ್ತು. ಎರಡೂ ಜಲಾಶಯಗಳ ನೋಟ ತುಂಬ ಸುಂದರವಾದುದು. ಜಲಾಶಯಗಳ ಹಿಂದೆ ಪರ್ವತಾವಳಿ, ವೃಕ್ಷರಾಜಿ ಅಪೂರ್ವವಾದ ಸೊಬಗನ್ನು ಒದಗಿಸುತ್ತಿದ್ದವು. ಶಿವಮೊಗ್ಗೆ ಜಿಲ್ಲೆಯ ಭದ್ರಾ ತಾಲೂಕು, ಶಿವಮೊಗ್ಗ ತಾಲೂಕು ಹಾಗೂ ಹೊನ್ನಾಳಿ ತಾಲೂಕಿನ ಕೆಲ ಭಾಗಕ್ಕೆ, ಚಿಕಮಗಳೂರು, ಚಿತ್ರದುರ್ಗ ಹಾಗೂ ಬಳ್ಳಾರಿ ಜಿಲ್ಲೆಯ ಬಹು ಪ್ರದೇಶಕ್ಕೆ ಈ ಜಲಾಶಯಗಳಿಂದ ನೀರಾವರಿ ಸೌಲಭ್ಯ ಲಭ್ಯವಾಗುವುದು. ಈ ಯೋಜನೆಯನ್ನು ತೋರಿಸಿ ವಿವರಿಸಿದ ಈ ವಿಭಾಗದ ಎಕ್ಸಿಕ್ಯೂಟಿವ್ ಇಂಜಿನಿಯರ ಶ್ರೀ ಟಿ. ರಂಗಣ್ಣನವರು ಹಾಗೂ ಎಸ್. ಇ. ಅವರ ಪರ್ಸನಲ್ ಅಸಿಸ್ಟಂಟರಾದ ಶ್ರೀ ಚಿದಂಬರ ರಾವ್ ಅವರು ಜನ ಈ ನೀರಾವರಿ ಯೋಜನೆಯನ್ನು ಬಹು ಚೆನ್ನಾಗಿ ಪ್ರಯೋಜನ ಮಾಡಿಕೊಳ್ಳುತ್ತಿರುವ ವಿಷಯ ತಿಳಿಸಿದರು. "ರೈತರು ಯೋಜನೆ ಪೂರ್ತಿಯಾಗುತ್ತಿದ್ದಂತೆಯೇ ನೀರಿನ ಪ್ರಯೋಜನ ಮಾಡಿಕೊಂಡರು. ಮುಖ್ಯವಾಗಿ ಇಲ್ಲಿ ಬೆಳೆಯುತ್ತಿರುವುದು ಕಬ್ಬು ಮತ್ತು ಭತ್ತ. ಕೆಲ ತೋಟದ ಬೆಳೆಗಳನ್ನು ತೆಗೆಯಲಾಗುತ್ತಿದೆ" ಎಂದೂ ಅವರು ವಿವರಿಸಿದರು. ಭದ್ರಾ ಜಲಾಶಯದ ಪಕ್ಕದಲ್ಲಿ ನಿರ್ಮಿಸಿರುವ ವಿಶ್ರಾಮಧಾಮವು ನಿಜವಾಗಿ ರಮಣೀಯವಾದ ಸ್ಥಾನವೇ ಆಗಿರುವುದು. ಅಲ್ಲಿ ಸುಖವಾಗಿ ಕುಳಿತು ಕಣ್ತಣಿಯುವಷ್ಟು ಪ್ರಕೃತಿ ಸೌಂದರ್ಯವನ್ನು ಸವಿಯಬಹುದು; ಕವಿ ಲೇಖಕರಿಗಂತೂ ಇದೊಳ್ಳೆ ಆದರ್ಶವಾದ ಸ್ಥಾನವೇ ಆಗಿದೆ. ಅದೇ ರೀತಿ ಗಾಜನೂರಿನ ದೃಶ್ಯ ಕೂಡ. ಇಲ್ಲಿಯ



ಹರಿಹರ ಪುಣ್ಯ ಕ್ಷೇತ್ರದ ಬಳಿ ಹರಿಯುವ ತುಂಗಭದ್ರಾ ನದಿಯಲ್ಲಿ ಯಾತ್ರಿಕರ ಸ್ನಾನ



ಗಳಗನಾಥದಲ್ಲಿ ವರದೆ-ತುಂಗಭದ್ರೆಯನ್ನು ಸೇರುವ ರಮಣೀಯ ನೋಟ →

ವಿಶ್ರಾಮಧಾಮವೂ ರಸ್ತೆಯ ಪಕ್ಕದಲ್ಲೇ. ಇದರೊ ಅಂಥ ಗೌಜಿಯಿಂದ ಕೂಡಿರುವುದಿಲ್ಲ. ಇವೆರಡೂ ಚಿಕ್ಕ ನೀರಾವರಿ ಯೋಜನೆಗಳಾದರೆ ಹೊಸಪೇಟೆಯ ಬಳಿ ತುಂಗಭದ್ರೆಗೆ ನಿರ್ಮಿಸಲಾಗಿರುವ ಅಣೆಕಟ್ಟು ಬೃಹದಾಕಾರದ್ದು. ಒಂದನೂರಾ ಹತ್ತು ಕೋಟಿ ರೂ.ಗಳ ವೆಚ್ಚದಿಂದ ನಿರ್ಮಾಣವಾದ ಈ ಅಣೆಕಟ್ಟಿನಿಂದ ರೂಪಗೊಂಡ ಜಲಾಶಯದ ವಿಸ್ತಾರ ೧೪೬ ಚದುರ ಮೈಲುಗಳು. ೫೪೫೫೨ ಜನಸಂಖ್ಯೆಯನ್ನು ಹೊಂದಿದ್ದ ೫೦ ಹಳ್ಳಿಗಳು ಈ ಜಲಾಶಯದಲ್ಲಿ ಮುಳುಗಡೆಯಾಗಿರುವುವು. ಇಲ್ಲಿ ೧೩೩ ಸಾವಿರ ದಶಲಕ್ಷ ಘನ ಅಡಿ ನೀರು ನಿಲ್ಲುತ್ತದೆ. (ದುರ್ದೈವದಿಂದ ಈ ವರುಷ ಹೆಚ್ಚು ಮಳೆಯಾಗಲಿಲ್ಲ; ಆಂಧ್ರಕ್ಕೆ ಬೆಳೆ ಹಾಳಾಗಬಲ್ಲು ಕಲವಟ್ಟಿಗೆ ಹೆಚ್ಚು ನೀರನ್ನು ಬಿಡಲಾಗಿತ್ತು. ಹೀಗಾಗಿ ಜಲಾಶಯದಲ್ಲಿ ಮುಳುಗಿದ ಹಳ್ಳಿಗಳು ಎದ್ದು ತೋರುವಷ್ಟು ಅದು ಬತ್ತಿರುವ ಅಂಶ ಎಂಥವರಿಗೂ ನೋವುಂಟು ಮಾಡುವುದು; ಕರುಣೆಯನ್ನು ಬರಿಸುವುದು) ಮೂರು ಮುಖ್ಯ ಕಾಲುವೆಗಳಿಂದ ನೀರಾವರಿ ನೀರು ದೊರೆಯುತ್ತಿದೆ. ಬಲದ ಕೆಳ ಕಾಲುವೆ ಬಳ್ಳಾರಿ ಹಾಗೂ ಕರ್ನೂಲ್ ಜಿಲ್ಲೆಗಳಲ್ಲಿ ೨೧೭ ಮೈಲು ಪ್ರವಹಿಸುತ್ತಿದೆ; ಬಲದ ಮೇಲ್ಮಟ್ಟದ ಕಾಲುವೆ ಬಳ್ಳಾರಿ ಹಾಗೂ ಅನಂತಪುರ ಜಿಲೆಗಳಲ್ಲಿ ೧೨೨ ಮೈಲು ಪ್ರವಹಿಸುತ್ತಿದೆ; ಎಡ ಕಾಲುವೆ ರಾಯಚೂರ ಜಿಲ್ಲೆಯಲ್ಲಿ ೧೨೮ ಮೈಲು ಉದ್ದವಾಗಿರುವುದು. ಸುಮಾರು ೬ ಲಕ್ಷ ಎಕರೆ ಭೂಮಿಗೆ ಈ ಯೋಜನೆ ನೀರುಣ್ಣಿಸುತ್ತಿದ್ದು ಇನ್ನು ೫ ಲಕ್ಷ ಎಕರೆ ಭೂಮಿಗೆ ಇದರ ನೀರು ಹಂತಹಂತವಾಗಿ ಲಭ್ಯವಾಗುವಂತಿದೆ. ನೀರಾವರಿಯೊಂದಿಗೆ ವಿದ್ಯುತ್ತು ಇಲ್ಲಿಂದ ಉತ್ಪಾದಿತವಾಗುತ್ತಿದೆ. ಆದರೆ ಪ್ರಮಾಣ ಕಡಿಮೆ. ಮೀನುಗಾರಿಕೆ ಅಭಿವೃದ್ಧಿಗೂ ಇಲ್ಲಿ ಅವಕಾಶ ಕಲ್ಪಿಸಲಾಗಿದೆ ಅದಕ್ಕಾಗಿ ಮೀನಿನ ಒಂದು ಫಾರ್ಮನ್ನೇ ನಿರ್ಮಿಸಲಾಗಿದೆ. ಬಳ್ಳಾರಿ ಮತ್ತು ರಾಯಚೂರ ಜಿಲ್ಲೆಗಳಲ್ಲಿ ಭತ್ತ ಜೋಳ ಗೋದಿ, ಕಬ್ಬು ಮತ್ತು ಹತ್ತಿಗಳನ್ನು ಈ ನೀರಾವರಿ ಪ್ರದೇಶದಲ್ಲಿ ಮುಖ್ಯವಾಗಿ ಬೆಳೆಯಲಾಗುತ್ತಿದೆ. ಅಣೆಕಟ್ಟು ಅತ್ಯಂತ ರಮ್ಯವಾದ ನೋಟವನ್ನು ನೀಡುವಂತೆ ಅಲ್ಲಿಯ ಹೂದೋಟ ವೈಕುಂಠ, ಕೈಲಾಸ, ಅತಿಥಿಭವನಗಳು ಪ್ರವಾಸಿಕರನ್ನು ಕೈಮಾಡಿ ಕರೆಯುತ್ತಿವೆ. ಮನದಣಿಯ ಸೊಬಗನ್ನು ಸವಿಯಲು ಹೇಳುತಿವೆ. ಜಪಾನಿ ಮಾದರಿಯ ತೋಟವನು ಇಲ್ಲಿ ನಿರ್ಮಿಸಲಾಗುತ್ತಿದೆ. ಸುಂಕೆಶೂಲ ಅಣೆಕಟ್ಟು ತುಂಗಭದ್ರೆಗೆ ನಿರ್ಮಿತವಾದ ಇನ್ನೊಂದು ಮಹತ್ವದ ಅಣೆಕಟ್ಟು. ಕರ್ನೂಲಿನಿಂದ ೧೬ ಮೈಲುಗಳ ಮೇಲೆ ನಿರ್ಮಿತವಾಗಿದೆ. ಮೂಲತಃ ೧೮೬೬ರಲ್ಲಿ ಈಸ್ಟ ಇಂಡಿಯಾ ಕಂಪನಿ ಇದನ್ನು ನೀರಾವರಿ ಹಾಗೂ ನೌಕಾಯಾನದ ವ್ಯಾಪಾರೋದ್ದೇಶಕ್ಕಾಗಿ ನಿರ್ಮಿಸಿತು. ಹಲ ಸಮಯದ ನಂತರ ಸರಕಾರಕ್ಕೆ ವಹಿಸಿಕೊಡಲಾಯಿತು. ಅದೇ ಕಂಪನಿ ನಿರ್ಮಿಸಿದ ಕರ್ನೂಲ ಕಡಪಾ ಕಾಲುವೆ ಈ ಅಣೆಕಟ್ಟಿನಿಂದ ಪ್ರಾರಂಭವಾಗಿ ೧೯೦ ಮೈಲು ಉದ್ದವಾಗಿರುವುದು. ಆಂಧ್ರದಲ್ಲಿ ೨.೭೨ ಲಕ್ಷ ಎಕರೆ ಭೂಮಿಯ ನೀರಾವರಿಗೆ ಪ್ರಯೋಜನಕಾರಿಯಾಗಿರುವುದು. ಇಲ್ಲಿ ಮುಖ್ಯವಾಗಿ ಬೆಳೆಯುವುದು ಭತ್ತ ಮತ್ತು ಕಬ್ಬು.

ತುಂಗಭದ್ರೆ ತನ್ನ ಅಂಗಳದಲ್ಲಿ ನಾನಾ ಉದ್ದಿಮೆಗಳಿಗೂ ಆಸರೆ ನೀಡಿದ್ದಾಳೆ. ಭದ್ರಾ ತೀರದಲ್ಲಿರುವ ಭದ್ರಾವತಿ ಉಕ್ಕಿನ ಕಾರಖಾನೆ, ಕಾಗದ ಕಾರಖಾನೆ ಹಾಗೂ ಸಿಮೆಂಟ ಕಾರಖಾನೆಗಳನ್ನು ಹೊಂದಿ ಆಧುನಿಕ ಪಟ್ಟಣವನ್ನೇ ನಿರ್ಮಿಸಿಕೊಂಡಿದೆ. ತುಂಗಾತೀರದಲ್ಲಿರುವ ಶಿವಮೊಗ್ಗ ಸಕ್ಕರೆ ಕಾರಖಾನೆಯನ್ನೂ ಬೆಳೆಸಿಕೊಂಡು ಬಂದಿದೆ; ಗಂಧದೆಣ್ಣೆ



ಗಳಗನಾಥದ ಗಳಗೇಶ್ವರ ದೇವಾಲಯದ ಒಳಭಾಗ ↑



ವಿಜಯನಗರದ ಸಾಮ್ರಾಜ್ಯ ಕಾಲದಲ್ಲಿ ನಿರ್ಮಾಣಗೊಂಡ ಭಗ್ನವಾದ ಕಾಲುವೆಗಳು

ಹೊಸ ಬಟ್ಟೆಗಳ, ಹಬ್ಬದೂಟಗಳ ಸಂಭ್ರಮಕ್ಕೆ
ನಾಂದಿ ದೀಪಾವಳಿ. ನೆಮ್ಮದಿಯ, ನಿರಾತಂಕ
ಭವಿಷ್ಯ ನಿಮ್ಮದಾಗಬಲ್ಲುದು. ಎಲ್‌ಐಸಿ
ನೆರವಿನಿಂದ ಭವಿಷ್ಯಕ್ಕೆ ಯೋಜನೆ ಸಿದ್ಧಗೊಳಿಸಿರಿ.

## ಜೀವ ವಿಮೆಗಿಂತ
ಶ್ರೇಷ್ಠ ಉಳಿತಾಯ ಮತ್ತೊಂದಿಲ್ಲ











ಲೈಫ್ ಇನ್‌ಶೂರನ್ಸ್
ಕಾರ್ಪೊರೇಷನ್ ಆಫ್ ಇಂಡಿಯಾ



ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರರ ವೃಂದಾವನ ↑



ಕೂಡ್ಲಿಯಲಿ ತುಂಗೆ-ಭದ್ರೆಯರು
ಸಂಗಮವಾಗುವರು

ಕಾರಖಾನೆಯನ್ನು ಹೊಂದಿದೆ. ತುಂಗಭದ್ರೆಯ ತೀರದಲ್ಲಿರುವ ಹರಿಹರ ಕಿರ್ಲೋಸ್ಕರ ಲೇಥ್ ಕಾರಖಾನೆಯನ್ನೂ, ಬಿರ್ಲಾರವರ ಫೈಬರ್ ಕಾರಖಾನೆಯನ್ನೂ ಹೊಂದಿರುವುದು. ಕಿರ್ಲೋಸ್ಕರ ಲೇಥ ಗಳು ಭಾರತದಲ್ಲಿ ಮನೆಮಾತಾಗಿರುವದರೊಂದಿಗೆ ವಿದೇಶಗಳಿಗೂ ಈಗ ಹೋಗುತ್ತಿರುವುದು ಹೆಮ್ಮೆಯ ವಿಷಯವೆನಿಸಿದೆ. ಕಂಪಲಿ ಸಕ್ಕರೆ ಕಾರಖಾನೆಯನ್ನು ಹೊಂದಿರುವುದು. ಹೊಸಪೇಟೆಯ ಸಮೀಪದಲ್ಲಿ ವಿಜಯನಗರದ ಉಕ್ಕಿನ ಕಾರಖಾನೆಯು ತಲೆಯೆತ್ತಲಿರುವುದು. ಇದು ರಾಜ್ಯದ ಇನ್ನೊಂದು ಹೆಮ್ಮೆಯ ಉದ್ದಿಮೆಯೆನ್ನಿಸಲಿದ್ದು ಪೂರ್ವಸಿದ್ಧತೆಗಳು ಈಗ ಭರದಿಂದ ನಡೆದಿರುವವು. ಈ ಯೋಜನೆ ಪೂರ್ತಿಗೊಂಡಾಗ ತುಂಗಭದ್ರೆಯ ಈ ಎಲ್ಲ ಉದ್ದಿಮೆಗಳು ಸೇರಿ ಸುಮಾರು ಒಂದು ಲಕ್ಷ ಜನರಿಗೆ ಉದ್ಯೋಗವನ್ನು ಒದಗಿಸಿದಂತಾಗುವುದು. ಅನೇಕ ಕೈಗಾರಿಕೆಗಳು ಅಲ್ಲಲ್ಲಿ ಕಂಡುಬರುವವು. ಅರಣ್ಯದ ಉತ್ಪಾದನೆಗಳನ್ನು ಉಪಯೋಗಿಸಿಕೊಂಡು ನಾನಾ ತರದ ಸರಕುಗಳನ್ನು -ಮುಖ್ಯವಾಗಿ ಬೆತ್ತದ ಕುರ್ಚಿ, ಟೀಪಾಯ್ ಮೊದಲಾದವನ್ನು -ಸಿದ್ಧಪಡಿಸಲಾಗುತ್ತದೆ. ಗಂಧದ ಎಣ್ಣೆಯನ್ನು ತೆಗೆದು ಉಳಿದ ಕಟ್ಟಿಗೆಯನ್ನು ಉಪಯೋಗಿಸಿದ ನಂತರ ಚೆರಟವನ್ನು ಊದಬತ್ತಿಗೆ ಉಪಯೋಗಿಸುವ ಸಾಧ್ಯಾಸಾಧ್ಯತೆಯ ಪರಿಶೀಲನೆ ನಡೆದಿದ್ದು, ಅದೂ ಒಂದು ಗೃಹಕೈಗಾರಿಕೆಯಾಗಿ ಪರಿಣಮಿಸಬಹುದಾಗಿದೆ.

## ತೀರ್ಥಕ್ಷೇತ್ರಗಳು

ತುಂಗಾ ತೀರದಲ್ಲಿರುವ ಶೃಂಗೇರಿ ಶ್ರೀ ಶಂಕರಾಚಾರ್ಯರು ಸ್ಥಾಪಿಸಿದ ಮಹಾಪೀಠವಿರುವ ಪರಮ ಪವಿತ್ರವಾದ ಕ್ಷೇತ್ರವೆನಿಸಿರುವುದು. ಜಗದ್ಗುರು ಶಂಕರಾಚಾರ್ಯರ ಮಠದ ಬಳಿಯಲ್ಲಿಯೇ ಸುಂದರವಾದ ಶಿಲ್ಪಕೆತ್ತನೆಯ ವಿದ್ಯಾಶಂಕರ ದೇವಾಲಯವಿರುವುದು. ಶ್ರೀ ಶಾರದಾಂಬೆಯ ದೇವಾಲಯವೂ ಇದೇ ಆವಾರದಲ್ಲಿರುವುದು. ಶಾರದಾಂಬೆಯ ಮೂರ್ತಿ ತುಂಬ ಕಲಾತ್ಮಕವೂ, ಸೌಮ್ಯವೂ, ಸುಂದರವೂ ಆಗಿರುವುದು. ಶಾರದ ಮಾತೆಯ ಕಂಗಳ ಹೊಳಪು ಭಕ್ತರನ್ನು ಸಹಜವಾಗಿ ತನ್ನತ್ತ ಆಕರ್ಷಿಸಿಕೊಳ್ಳುವುದು. ಮಠದ ಶಿಷ್ಯಕೋಟಿ ಅಪಾರವಾಗಿದೆ. ತುಂಗೆಯ ಇನ್ನೊಂದು ತೀರದಲ್ಲಿರುವ ನರಸಿಂಹವನ ತುಂಬ ಪ್ರಶಾಂತವಾದ ಸ್ಥಳವಾಗಿರುವುದು.

ಈಗಿನ ಜಗದ್ಗುರುಗಳು ಒಳ್ಳೆಯ ವಿದ್ವಾಂಸರೂ, ಸಾಹಿತ್ಯಪ್ರೇಮಿಗಳೂ ಆಗಿರುವರು. ಶಿಷ್ಯರನ್ನು ಅತ್ಯಂತ ಆದರದಿಂದ ಬರಮಾಡಿಕೊಳ್ಳುವರು; ಕುಶಲ ಸಂಭಾಷಣೆ ನಡೆಸುವರು. ಧರ್ಮ, ಸಂಸ್ಕೃತಿ ಪ್ರಸಾರ ಕಾರ್ಯದಲ್ಲಿ ವಿಶೇಷ ಆಸಕ್ತಿಯುಳ್ಳವರು. ಸೊಗಸಾದ ವನವನ್ನು ಅವರು ನಿರ್ಮಿಸಿರುವರು. ಅನೇಕ ಸ್ನಾನಘಟ್ಟಗಳನ್ನು ಹೊಂದಿರುವ ತೀರ್ಥಹಳ್ಳಿ, ಶಿವಮೊಗ್ಗೆಯಿಂದ ೩೫ ಮೈಲುಗಳ ಅಂತರದಲ್ಲಿರುವುದು. ಇಲ್ಲಿ ಅನೇಕ ಕುಂಡಗಳು ನಿರ್ಮಾಣವಾಗಿದ್ದು ಪರಶುರಾಮನಿಂದಲೂ ಅಂಥದೊಂದು ಕುಂಡ ನಿರ್ಮಾಣವಾಗಿರುವುದಾಗಿ ಐತಿಹ್ಯವಿದ್ದು ಅದನ್ನು ತೋರಿಸಲಾಗುತ್ತಿದೆ. ಹಲವು ಮತ್ತು ಪಂಕ್ತಿಗೆ ಮಠಗಳು ಇಲ್ಲಿವೆ. ಇಲ್ಲಿಯ ಕಲ್ಲಿನ ಸೇತುವೆ ಒಂದು ಆಕರ್ಷಕವಾದ ನೋಟ. ಕುವೆಂಪು ಅವರ 'ಕಾನೂರ ಸುಬ್ಬಮ್ಮ ಹೆಗ್ಗಡತಿ' ಕಾದಂಬರಿಯಲ್ಲಿ ಅದರ ಬಣ್ಣನೆ ಬರುತ್ತದೆ. ಶಿವಮೊಗ್ಗೆ ಈ ನದಿಯ ತೀರದಲ್ಲಿರುವ ಒಂದು ಪ್ರಮುಖ ಪಟ್ಟಣ. ಶಿವಮುಖದಿಂದ ಈ ಊರಿಗೆ ಈ ಹೆಸರು ಬಂದಿತೆಂದು ಹೇಳಲಾಗುತ್ತಿದೆ. ಅದೇ ಹೆಸರಿನ ಜಿಲ್ಲೆಯ ಮುಖ್ಯ



ವಿರುಪಾಕ್ಷ ದೇವಾಲಯದ ಬಳಿ ಸ್ನಾನಘಟ್ಟ



ಪುರಂದರ ಮಂಟಪ



ಸ್ಥಳವಿದು. ಮಲೆನಾಡಿನ ಕೇಂದ್ರಸ್ಥಾನವೂ ಹೌದು. ಅಡಿಕೆಯ ವ್ಯಾಪಾರ ಬಹಳ. ಐತಿಹಾಸಿಕವಾಗಿ ಗಂಗರಸರ ಆಳಿಕೆಯಿಂದ ಪ್ರಸಿದ್ಧಿ ಪಡೆದಿದೆ. ಸಾರಿಗೆ ಸಂಪರ್ಕ ಕೇಂದ್ರವೂ ಇದಾಗಿದ್ದು ಈಚೆಗೆ ಔದ್ಯಮಿಕ ಕೇಂದ್ರವಾಗುವ ಹವಣಿಕೆಯಲ್ಲಿದೆ. ಮಂದಗದ್ದೆಯ ಬಳಿ ತುಂಗಾ ಏಳು ಪ್ರವಾಹಗಳಲ್ಲಿ ಪ್ರವಹಿಸುತ್ತಿರುವ ವೈಚಿತ್ರ್ಯವನ್ನು ಗಮನಿಸಬಹುದು.

ಬಾಬಾಬುಡನಗಿರಿಯ ಮಗ್ಗುಲಿಂದ ಹರಿದು ಬಂದ ಭದ್ರಾ 'ಕಳಸದ' ಬಳಿ ಬಂಡೆಗಲ್ಲುಗಳ ಮಧ್ಯದಲ್ಲಿ ರಭಸದಿಂದಲೇ ಪ್ರವಹಿಸುವುದು. ಅಗಸ್ತ್ಯ ಮಹಾಮುನಿಗಳಿಂದ ಸ್ಥಾಪಿತನಾದ ಕಳಸೇಶ್ವರ ಮಹಾಮಹಿಮನೆನಿಸಿರುವನು. ಸರ್ವಾಂಗಸುಂದರಿ ಅಮ್ಮನವರ ದೇವಾಲಯವೂ ಇದೆ. ಇಲ್ಲಿಯ ಅಂಬಾತೀರ್ಥದಲ್ಲಿ ಸೆಳೆತಕ್ಕೆ ಸಿಕ್ಕ ಬಂಡೆಗಳು ವಿಚಿತ್ರ ರೂಪ ತಳೆದುದನ್ನು ಕಾಣಬಹುದು. ಕಲ್ಲಿನ ಗುಹೆಗಳೂ ನಿರ್ಮಾಣವಾಗಿವೆ. ಅದಕ್ಕಿಂತ ಮುಖ್ಯವಾಗಿ ಸ್ನಾನಕ್ಕೆ ಅಡವಾಗಿ ನಿಂತಿದ್ದ ದೊಡ್ಡ ಕಲ್ಲುಬಂಡೆಯೊಂದನ್ನು ಶ್ರೀ ಮಧ್ವಾಚಾರ್ಯರು ಒಂದು ಬೆರಳಿನಿಂದ ಎತ್ತಿ ನಿಲ್ಲಿಸಿದರಂತೆ. ಆ ರೀತಿ ಉಲ್ಲೇಖವಿರುವ ಬಂಡೆಗಲ್ಲೊಂದು ಇದೆ. ಪ್ರಕೃತಿ ಸೌಂದರ್ಯದ ಮಡಿಲಲ್ಲಿ ಪವಡಿಸಿದ ಕಳಸ ಒಳ್ಳೆ ಖ್ಯಾತವಾದ ತೀರ್ಥಕ್ಷೇತ್ರವೆನಿಸಿದೆ. ಇಲ್ಲಿಯ ಅಡಿಕೆಯು ಬಹಳ ಪ್ರಸಿದ್ಧವಾದುದು. ಇದೇ ಜಿಲ್ಲೆಯಲ್ಲಿ ಈ ನದಿ ತೀರದಲ್ಲಿರುವ ಬಾಳೆಹೊನ್ನೂರು ಪ್ರಮುಖವಾದ ವ್ಯಾಪಾರಿ ಕೇಂದ್ರವಾಗಿರುವುದು. ಇಲ್ಲಿ ಶ್ರೀಮದ್ರಂಭಾಪುರಿ ಜಗದ್ಗುರುಗಳ ಮಠವಿರುವುದು. ಈಚೆಗೆ ನೂತನ ಪೀಠಾಧೀಶ್ವರರ ಪಟ್ಟಾಭಿಷೇಕವು ಜರುಗಿತು. ಪ್ರಾಚೀನವಾದ ವೀರಶೈವ ಮಠವಿದಾಗಿರುವುದು. ಇಲ್ಲಿ ಭದ್ರಾ ನದಿಗೆ ಸೇತುವೆ ನಿರ್ಮಿಸಲಾಗಿರುವುದು. ಭದ್ರಾವತಿ ಮತ್ತು ಹೊಳೆಹೊನ್ನೂರುಗಳು ತೀರದಲ್ಲಿರುವ ಇತರ ಪ್ರಮುಖ ಪಟ್ಟಣಗಳು. ಭದ್ರಾವತಿ ಬಂಕಿಪುರವೆಂಬ ಹೆಸರಿನಿಂದ ಬಹು ಪ್ರಾಚೀನಕಾಲದಿಂದಲೂ ಪ್ರಸಿದ್ಧವಾದುದು. ಅದು ವಂಕಿಮುನಿ ಇಲ್ಲಿ ಆಶ್ರಮ ಕಟ್ಟಿಕೊಂಡು ತಪಸ್ಸುಮಾಡಿದ್ದರಿಂದ ಬಂದುದೆಂದು ಹೇಳಲಾಗುತ್ತಿದೆ. ಇಲ್ಲಿಯ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯವು ಅಪೂರ್ವ ಶಿಲ್ಪಕೆತ್ತನೆಯದಾಗಿರುವುದು. ಗೋಪಾಲಕೃಷ್ಣಸ್ವಾಮಿಯ ದೇವಾಲಯವೂ ಇದರಲ್ಲಿ ಅಂತರ್ಗತವಾಗಿರುವುದು. ಬೆಣ್ಣೆ ವಿನಾಯಕ, ಬೆಣ್ಣೆ ಕೃಷ್ಣ ಮೊದಲಾದ ವಿಗ್ರಹಗಳು ಅಪೂರ್ವವಾಗಿರುವವು. ಇದರ ಜೊತೆಗೆ ಇದು ನಮ್ಮ ರಾಜ್ಯದಲ್ಲಿಯೇ ಪ್ರಾಮುಖ್ಯವಾದ ಔದ್ಯಮಿಕ ಕೇಂದ್ರವೆನಿಸಿರುವುದು. ಆಕಾಶವಾಣಿ ಕೇಂದ್ರವೂ ಇಲ್ಲಿದೆ.

ಇವೆರಡೂ ನದಿಗಳು ಕೂಡುವ 'ಕೂಡಲಿ' ಶಿವಮೊಗ್ಗೆಯಿಂದ ೯ ಮೈಲುಗಳ ಮೇಲಿರುವ ಪ್ರಶಾಂತವಾದ ಸ್ಥಳ; ಪುಣ್ಯಕ್ಷೇತ್ರವು. ಶೃಂಗೇರಿ ಕೂಡಲಿ ಸಂಸ್ಥಾನದ ಮಠವೂ, ಚಿಂತಾಮಣಿ ನರಸಿಂಹಸ್ವಾಮಿ, ಬ್ರಹ್ಮೇಶ್ವರ, ರಾಮೇಶ್ವರ ದೇವಾಲಯಗಳೂ ಇವೆ. ಮೇಲ್ಮುಖವಾದ ಹನುಮಂತ ದೇವರ ವಿಗ್ರಹವು ಇಲ್ಲಿರುವುದು ಒಂದು ವಿಶೇಷವಾಗಿರುವುದು. ವರ್ಷದ ಪ್ರತಿ ದಿನವೂ ೩೬೫ ದಿನಗಳೂ) ಹೂ ಬಿಡುವ ಪಾರಿಜಾತವೊಂದು ಇಲ್ಲಿದೆ. ಆ ಗಿಡವೂ ಸಹ

← ಪಂಪಾಪತಿ ದೇವಾಲಯದ ನೋಟ



← ಹೊಸಪೇಟೆಯ ಬಳಿ ಆಧುನಿಕ 'ಪಂಪಾ ಸಾಗರ'

ಇದ್ದಷ್ಟೇ ಇರುವುದು ಇನ್ನು ಸೋಜಿಗದ ವಿಷಯವಾಗಿರುವುದು. ದಕ್ಷಿಣದಲ್ಲಿಯ ಅತ್ಯಂತ ಪಾವನವೆನಿಸಿದ ತಪೋಕ್ಷೇತ್ರವಿದೆಂದು ಭಾವಿಸಲಾಗಿರುವುದು. ಅಲ್ಲದೇ ಭೂತ ಬಿಡಿಸುವ ಅಬ್ದುಲ್ ರಹಮಾನರ ಕಾರ್ಯಕ್ಷೇತ್ರವೂ ಇದಾಗಿರುವುದು. ಬಹು ಹಿಂದಿನ ಗುರುಪರಂಪರೆಯ ಹಲವಾರು ಸಮಾಧಿಗಳು ಇಲ್ಲಿರುವವು.

ತುಂಗಭದ್ರೆಯ ತೀರದಲ್ಲಿಯ ಮೊದಲ ಪ್ರಮುಖ ಸ್ಥಳ ಹೊನ್ನಾಳಿ ಭಾಸ್ಕರ ಕ್ಷೇತ್ರವೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿರುವುದು. ಪ್ರಮುಖ ವ್ಯಾಪಾರಿ ಕೇಂದ್ರವಾಗಿರುವುದು. ಇಲ್ಲಿಂದ ಹರಿಹರ. ಬ್ರಹ್ಮನು ಗುಹ ರಾಕ್ಷಸನಿಗೆ ನೀಡಿದ ವರದಿಂದ ಅವನನು ಹರಿ-ಹರರು ನಾಶಪಡಿಸಲು ಸಾಧ್ಯವಾಗದಾಗ ಅವರು ಇಬ್ಬರೂ ಸೇರಿ ರೂಪ ತಾಳಿ ಅವನನ್ನು ವಧಿಸಿದರಂತೆ. ಇಲ್ಲಿಯ ಹರಿಹರೇಶ್ವರ ದೇವಾಲಯವು ಶೈವ-ಮಾಧ್ವರ ಒಂದುಗೂಡುವಿಕೆಯ ಸಂಕೇತವಾಗಿ ನಿಂತಿದೆ. ಹೊಯ್ಸಳ ಮಾದರಿಯ ಈ ದೇವಾಲಯದ ಶಿಲ್ಪವು ಅಮೋಘವಾಗಿದೆ, ಈಗ ಇದು ಔದ್ಯಮಿಕ ಕೇಂದ್ರವಾಗಿಯೂ ತಲೆಯೆತ್ತುತ್ತಲಿದೆ. ಚೌಡದಾನಪುರವು ಶಿಲ್ಪದ ದೃಷ್ಟಿಯಿಂದ ಗಮನಿಸಬೇಕಾದುದು. ಮುಕುಟೇಶ್ವರ, ಈಶ್ವರ ಮೊದಲಾದ ದೇವಾಲಯಗಳಿವೆ. ಮುಕುಟೇಶ್ವರ ದೇವಾಲಯದ ಶಿಲ್ಪ ಚಾಲುಕ್ಯ ಮಾದರಿಯದು; ಕರಿಯ ಕಲ್ಲಿನದು; ಈ ದೇವಾಲಯದ ಹೊರಗಿನ ಕೆತ್ತನೆಯ ಕೆಲಸ ಕಲಾಪೂರ್ಣವೂ, ಸೂಕ್ಷ್ಮವೂ ಆಗಿರುವುದು. ಅಂಬಿಗರ ಚೌಡಯ್ಯ ಈ ಊರವನೆಂದು ಪ್ರತೀತಿಯಿದೆ. ಚಾಲುಕ್ಯ-ಯಾದವರ ಕಾಲದ ಹತ್ತು ಶಿಲಾಶಾಸನಗಳಿವೆ. ಗಳಗನಾಥ ಇಂಥದೇ ಇನ್ನೊಂದು ಸ್ಥಳ. ವರದಾ ತುಂಗಭದ್ರೆಯನ್ನು ಸೇರುವದಿಲ್ಲಿ. ಗಳಗೇಶ್ವರ ದೇವಾಲಯವಿದೆ; ಹನುಮಂತ ದೇವರ ಗುಡಿಯೂ ಇದೆ. ಗಳಗೇಶ್ವರ ದೇವಾಲಯವನ್ನು ಗರ್ಗೇಶ್ವರ ಮುನಿಗಳು ಸ್ಥಾಪಿಸಿದರೆಂದು ಪ್ರತೀತಿ ಇದೆ. ದೇವಾಲಯದ ಸುತ್ತಲೂ ಪೌರಾಣಿಕ ಕಥೆಗಳನ್ನು ಕೆತ್ತಲಾಗಿದೆ. ತಮ್ಮ ಅಮೂಲ್ಯ ಕೃತಿಗಳಿಂದ ಕನ್ನಡ ಸರಸ್ವತಿ ಭಂಡಾರವನ್ನು ತುಂಬಿದ ಗಳಗನಾಥರು ಈ ಊರಿನವರು. ಆದರೆ ಈ ಊರಿಗೆ ಬರಲು ಸರಿಯಾದ ದಾರಿಯೂ ಇರದಿರುವುದು ನಿಜವಾಗಿ ದುರ್ದೈವದ ಸಂಗತಿ ಎಂದೆನಿಸಿತು ನನಗೆ.



ಬುಕ್ಕಸಾಗರದ ಮೇಲ್ ಕಾಲುವೆ

## ಐತಿಹಾಸಿಕ ಸ್ಥಳ-ಹಂಪೆ

ವಿಜಯನಗರ ಸಾಮ್ರಾಜ್ಯದ ರಾಜಧಾನಿಯೆನಿಸಿದ್ದ ಹಂಪಿ ತುಂಗಭದ್ರೆಯ ತೀರದಲ್ಲಿರುವ ಮಹತ್ವದ ಐತಿಹಾಸಿಕ ಸ್ಥಳ. ಅದೀಗ ಹಾಳು ಬಿದ್ದಿದ್ದರೂ ಅನೇಕ ಅವಶೇಷಗಳಿಂದ ಅದಿನ್ನೂ ಪುರಾತನ ವೈಭವದ ಕಲ್ಪನೆಯನ್ನು ತಂದುಕೊಡುವುದು. ಇಲ್ಲಿಯ ಪಂಪಾಪತಿ ದೇವಾಲಯ, ವಿಜಯವಿಠಲ ದೇವಾ



← ಮಾತಂಗ ಪರ್ವತದಲ್ಲಿ ಕಲ್ಲಿನ ಬೆಳೆಯ ಕೋಟೆ

ಮಂತ್ರಾಲಯದ ಸ್ನಾನಘಟ್ಟದಲ್ಲಿ ಯಾತ್ರಿಕರು →



ಲಯ. ಹಜಾರರಾಮನ ದೇವಾಲಯ, ಅಚ್ಯುತರಾಯನ ದೇವಾಲಯ ಮೊದಲಾದ ಅಪೂರ್ವ ಶಿಲ್ಪದ ದೇವಾಲಯಗಳೂ, ಶಿಲಾರಥ, ಮಹಾನವಮಿ ದಿಬ್ಬ, ಕಮಲ ಮಹಲು, ರಾಣಿಯರ ಸ್ನಾನಗೃಹಗಳು ಮೊದಲಾದವನ್ನು ಈಗಲೂ ನೋಡಬಹುದು. ಪಂಪಾಪತಿಯ ಜಾತ್ರೆಯು ಈಗಲೂ ಪ್ರತಿವರುಷ ಸೇರಿದಾಗ ಲಕ್ಷಾಂತರ ಜನರು ಸೇರುವರು. ಸುಮಾರು ೨೫೦ ವರುಷಗಳವರೆಗೆ ಅತಿ ವೈಭವದಿಂದ ವಿಜಯನಗರದ ಅರಸರು ರಾಜ್ಯವಾಳಿದರು. ಕರ್ನಾಟಕದ ಹಿರಿಮೆಯನ್ನು, ಕೀರ್ತಿಯನ್ನು ಮೆರೆದರು. ಕನ್ನಡಿಗರ ಇತಿಹಾಸದಲ್ಲಿ ಅದು ಸುವರ್ಣಯುಗ. ಅದರ ನೆನಪನು ತಂದುಕೊಡುವಂತೆ ದಾಸವರೇಣ್ಯರ ನೆನಪು ಕೊಡುವ ಪುರಂದರ ಮಂಟಪ, ಹೇಮಕೂಟ ಮೊದಲಾದವನ್ನು ಇಲ್ಲಿ ಕಾಣಬಹುದು. ಹೊಸಪೇಟೆ–ಮುನಿರಾಬಾದ (ಹುಲಿಗಿ)ಗಳು ಇನ್ನೆರಡು ಪ್ರಮುಖ ಪಟ್ಟಣಗಳು. ಹೊಸಪೇಟೆ ಹಳೆ–ಹೊಸತುಗಳ ಸಂಗಮ. ಒಂದೆಡೆ ಹಾಳುಹಂಪೆ, ಇನ್ನೊಂದೆಡೆ ಆಧುನಿಕ 'ಪಂಪ ಸರೋವರ', ತುಂಗಭದ್ರಾ ಅಣೆಕಟ್ಟು. ಈಗದು ಉಕ್ಕಿನ ಕಾರಖಾನೆಯಿಂದ ಔದ್ಯಮಿಕ ಕೇಂದ್ರವೂ ಎನಿಸಲಿದೆ. ಅಲ್ಲದೇ ತುಂಗಭದ್ರಾ ಸ್ಟೀಲ್ ಪ್ರೊಡಕ್ಟ್ಸ್ ಈಗಾಗಲೇ ಕೆಲಸದಲ್ಲಿ ತೊಡಗಿದೆ. ಮಂಜುನಾಥ – ಹೊಸೂರಮ್ಮ ದೇವಾಲಯಗಳಿವೆ. ಸಕ್ಕರೆ ಕಾರಖಾನೆಯೂ ಇದೆ. ಮುನಿರಾಬಾದ ಹುಲಿಗೆಮ್ಮನ ದೇವಾಲಯದಿಂದ ಪ್ರಸಿದ್ಧವಿರುವುದು. ಚಾಲುಕ್ಯರ ಶಾಸನವೊಂದು ಇಲ್ಲಿ ಲಭ್ಯವಿದೆ. ಹೈದರಾಬಾದ ಪೋಲೀಸ್ ಕಾರ್ಯಾಚರಣೆಯಲ್ಲಿ ಮುನಿರಾಬಾದ್ ಅತಿ ಪ್ರಮುಖ ಪಾತ್ರವನ್ನು ನಿರ್ವಹಿಸಿರುವುದು. ಇಲ್ಲಿಯೂ ಒಂದು ಸಕ್ಕರೆ ಕಾರಖಾನೆಯಿದೆ.

ಹಂಪಿಯಿಂದ ಹನ್ನೆರಡು ಮೈಲು ದೂರದಲ್ಲಿರುವ ಕಂಪಲಿ ಐತಿಹಾಸಿಕ ಸ್ಥಳ. ಅನೇಕ ಪ್ರಮುಖ ಯುದ್ಧಗಳಲ್ಲಿ ಅದು ಪ್ರಮುಖ ಪಾತ್ರವನ್ನು ನಿರ್ವಹಿಸಿತು. ಕಂಪಿಲ ದೇವರಾಯನು ದಿಲ್ಲಿಯ ತಘಲಕನನ್ನು ಇದಿರಿಸಿದ ಕಥೆ ಪ್ರಸಿದ್ಧವಿದೆ. ಇಲ್ಲಿಯೂ ಒಂದು ಸಕ್ಕರೆ ಕಾರಖಾನೆ ಇದೆ. ಆನೆಗೊಂದೆ ಎಡ ತೀರದಲ್ಲಿರುವ ಇನ್ನೊಂದು ಐತಿಹಾಸಿಕ ಸ್ಥಳ. ಈ ಕೋಟೆ ವಿಜಯನಗರದ ಸಾಮ್ರಾಜ್ಯ ರಕ್ಷಣೆಗೆ ಬಹು ಮುಖ್ಯವಾದುದಾಗಿತ್ತು. ಇದರ ಹತ್ತಿರದಲ್ಲಿಯೇ ಇರುವ ನಡುಗಡ್ಡೆ – ನವವೃಂದಾವನ,–ಒಂಭತ್ತು ಸ್ವಾಮಿಗಳ ವೃಂದಾವನಗಳನ್ನು ಒಳಗೊಂಡಿದೆ. ಇನ್ನೊಂದು ಪವಿತ್ರ ಕ್ಷೇತ್ರ ಬಟ್ಟಾಲಿ ವೀಳೆಯದೆಲೆ ತೋಟಗಳಿಗೂ ಪ್ರಸಿದ್ಧವಾಗಿರುವುದು. ಮಂತ್ರಾಲಯ ರಾಘವೇಂದ್ರ ಸ್ವಾಮಿಯವರ ವೃಂದಾವನ ಸ್ಥಳ. ಅವರ ಮಹಿಮೆಯು ಸರ್ವವಿದಿತವಾದುದು. ಸಾವಿರಾರು ಯಾತ್ರಿಕರು ವರ್ಷದ ಎಲ್ಲ ಕಾಲಕ್ಕೂ ಬರುತ್ತಲೇ ಇರುವರು. ಮಂತ್ರಾಲಯದ ಎದುರಿನ ದಂಡೆಯ ಮೇಲೆ ಇರುವ ಗಾಣದಾಳೂ ಪವಿತ್ರ ಸ್ಥಳವೆನಿಸಿದ್ದು ಅಲ್ಲಿ ಪಂಚಮುಖಿ ಆಂಜನೇಯ ದೇವಸ್ಥಾನವಿರುವುದು. ಕರ್ನೂಲ ಇನ್ನೊಂದು ಪ್ರಮುಖ ನಗರವಾಗಿರುವುದು. ಇಲ್ಲಿಯ ಒಂದು



ಈಸ್ಟ್ ಇಂಡಿಯಾ ಕಂಪನಿ ನಿರ್ಮಿಸಿದ ಸುಂಕೇಶೂಲ ಅಣೆಕಟ್ಟು



ಕರ್ನೂಲ-ಕಡಪಾ ಕಾಲುವೆಯ ರಭಸದ ಪ್ರವಾಹ

 ದೀಪಾವಳಿಯು ಸರ್ವರಿಗೂ ಸುಖ ಸಮೃದ್ಧಿದಾಯಕವಾಗಲಿ! 

# ಇಂದೇ ಮಾಸಿಕ ವರಮಾನ ಸರ್ಟಿಫಿಕೇಟ್‌ನಲ್ಲಿ ಹಣ ತೊಡಗಿಸಿರಿ,

ಮತ್ತು ಆರ್ಥಿಕ ಚಿಂತೆಗಳನ್ನು ನಾಳೆಯಿಂದ ಮರೆತುಬಿಡಿ!...

ಮಾಸಿಕ ಬಡ್ಡಿಯ ದರಗಳ
ಈ ಪಟ್ಟಿಯನ್ನು ಲಕ್ಷ್ಯವಿಟ್ಟು
ನೋಡಿರಿ.
ನೀವು ಪ್ರತಿ ತಿಂಗಳೂ ಬಡ್ಡಿ
ಸಂಪಾದಿಸುತ್ತಿರುವಾಗ ನಿಮ್ಮ ಹಣ
ಹಾಗೆಯೇ ಉಳಿಯುತ್ತದೆ.



ಕತ್ತರಿಸಿ ತೆಗೆದಿಟ್ಟುಕೊಳ್ಳಿರಿ.

**ಬ್ಯಾಂಕ್ ಆಫ್ ಇಂಡಿಯಾ**

| ಕನಿಷ್ಠ ಠೇವಣಿ ರೂ. 1000 | 24/36 ತಿಂಗಳ ಅವಧಿ: 6½% ಪ್ರತಿ ವರ್ಷಕ್ಕೆ ರೂ. | 37/60 ತಿಂಗಳ ಅವಧಿ: 7% ಪ್ರತಿ ವರ್ಷಕ್ಕೆ ರೂ. | 61 ತಿಂಗಳು ಮತ್ತು ಅದಕ್ಕಿಂತ ಹೆಚ್ಚಿನ ಅವಧಿ: 7¼% ಪ್ರತಿ ವರ್ಷಕ್ಕೆ ರೂ. |
|---|---|---|---|
| ರೂ. 1,000 | 5.41 | 5.83 | 6.04 |
| ರೂ. 2,000 | 10.83 | 11.66 | 12.08 |
| ರೂ. 3,000 | 16.25 | 17.50 | 18.12 |
| ರೂ. 4,000 | 21.66 | 23.33 | 24.16 |
| ರೂ. 5,000 | 27.08 | 29.16 | 30.20 |
| ರೂ. 6,000 | 32.50 | 35.00 | 36.25 |
| ರೂ. 7,000 | 37.91 | 40.83 | 42.29 |
| ರೂ. 8,000 | 43.33 | 46.66 | 48.33 |
| ರೂ. 9,000 | 48.75 | 52.50 | 54.37 |
| ರೂ.10,000 | 54.16 | 58.33 | 60.41 |

ಇದೇ ಪ್ರಕಾರ ಹೆಚ್ಚಿನ ಮೊತ್ತಗಳಿಗೆ

ಕತ್ತರಿಸಿ ತೆಗೆದಿಟ್ಟುಕೊಳ್ಳಿರಿ.

ಬ್ಯಾಂಕ್ ಠೇವಣಿಗಳ ಬಡ್ಡಿಯ ಮೇಲೆ ಮತ್ತು, ತೊಡಗಿಸಿದ ಬೇರೆ ಕೆಲವು ಬಂಡವಾಳಗಳ ಗಳಿಕೆಯ ಹಣದ ಮೇಲೆ— ರೂ. 3,000ದ ವರೆಗೆ ವರಮಾನ ತೆರಿಗೆ ಕೊಡಬೇಕಾಗಿಲ್ಲ.

ಒಟ್ಟು ರೂ. 1,50,000ದ ವರೆಗಿನ ಬ್ಯಾಂಕ್ ಠೇವಣಿ ಮತ್ತು ತೊಡಗಿಸಿದ ಬೇರೆ ಕೆಲವು ಬಂಡವಾಳಗಳಿಗೆ ವೆಲ್ತ್ ಟ್ಯಾಕ್ಸ್ ಅನ್ವಯಿಸುವುದಿಲ್ಲ.



ವಿವರಗಳಿಗಾಗಿ,
ನಿಮ್ಮ ಸಮೀಪದ ನಮ್ಮ ಶಾಖೆಗೆ ಬನ್ನಿರಿ.

**ಬ್ಯಾಂಕ್ ಆಫ್ ಇಂಡಿಯಾ**



ತುಂಗಭದ್ರೆ ಕರ್ನೂಲನಿಂದ ೩೨ ಮೈಲುಗಳ ಮೇಲೆ ಕೃಷ್ಣೆಯನ್ನು ಸೇರುವುದು

ವಿಶೇಷವೆಂದರೆ ಒಂದು ನದಿಯ ಮೇಲೆ ಇನ್ನೊಂದು ಹರಿದು ಹೋಗಿರುವುದು. ಹುಂದರಿ ನದಿ ಕೆಳಗೆ ಪ್ರವಹಿಸುತ್ತಿದ್ದರೆ ಅದರ ತುಂಬ ಎತ್ತರದಲ್ಲಿ ತುಂಗಭದ್ರಾ-ಕರ್ನೂಲು ಕಾಲುವೆ ಹರಿದು ಹೋಗಿರುವುದು. ಅದು ನಿಜವಾಗಿ ರಮ್ಯವಾದ ನೋಟವು.

ತುಂಗಭದ್ರೆ ರಾಜ್ಯದ ಜನಜೀವನದ ಉನ್ನತಿಗೆ ಮಹತ್ವದ ದೇಣಿಗೆ ನೀಡಿದ್ದಾಳೆ; ಸಂಸ್ಕೃತಿಯನ್ನು ಕಾಪಾಡಿಕೊಂಡು ಬರುತ್ತಿದ್ದಾಳೆ. ಸಾಹಿತ್ಯದ ವಿಪುಲತೆಗೆ ಕಾರಣಕರ್ತಳಾಗಿದ್ದಾಳೆ. ಅನೇಕ ಹಿರಿಕಿರಿಯ ಸಾಹಿತಿಗಳಿಗೆ ನೆಲೆ ನೀಡಿದ್ದಾಳೆ. ತನ್ನ ಪ್ರಕೃತಿ ರಮ್ಯತೆಯಿಂದ ಅವರಿಗೆಲ್ಲ ಸ್ಫೂರ್ತಿ ನೀಡಿದ್ದಾಳೆ. ಪ್ರಶಾಂತ ವಾತಾವರಣದಿಂದ ಅವರಿಗೆ ಉತ್ತಮ ವಾತಾವರಣ ಒದಗಿಸಿದ್ದಾಳೆ. "ತುಂಗಭದ್ರೆ ಗಂಗಾ ಪ್ರಾಯಂ; ನೆನೆದರೆ ಧನ್ಯಂ" ಎಂದು ಹರಿಹರ ಸ್ತುತಿಸಿದ್ದರೆ, ಪುರಂದರ ದಾಸರು "ಪರಮ ಸಾಯುಜ್ಯದ ಫಲವೀವ ದೇವಿ" ಎಂದು ಹಾಡಿ ಹೊಗಳಿದ್ದಾರೆ. ಕನಕದಾಸರಂತೂ "ತುಂಗಭದ್ರೆ ಇರಲಿಕ್ಕೆ ಭಾವಿ ಕೆರೆಯೇಕೆ?" ಎಂದು ಅವಳ ಮಹಾತ್ಮ್ಯೆಯನ್ನು ಪಾಡಿದ್ದಾರೆ. "ಈ ನೀರಿನೊಂದೊಂದು ಹನಿಯಲ್ಲೂ ಸುಖದ ಕಡಲಡಗಿಹುದು" ಎಂದು ಶಾಂತರಸರು ತುಂಗಭದ್ರೆಯ ಒಂದೊಂದು ಹನಿಯೂ ಸುಖ ನೀಡುವದನ್ನು ಸಾರಿದ್ದಾರೆ. ಇಟಗಿ ರಾಘವೇಂದ್ರರು, "ತುಂಗಭದ್ರೆಯ ಸ್ಪರ್ಶಮಾತ್ರಕೆ, ಅನ್ನಪೂರ್ಣೆಯ ಐಸಿರಿ" ಎಂದು ಅವಳು ನೀಡಿರುವ ಭಾಗ್ಯವನ್ನು ಬಣ್ಣಿಸಿರುವರು. ಹೀಗೆ ಕನ್ನಾಡಿನ—ನಾಡವರ ಹೆಗ್ಗಳಿಕೆಗೆ ಪಾತ್ರಳಾದವಳು ಪರಮಪಾವನ ತುಂಗಭದ್ರೆ. ಅವಳ ಅಲ್ಪಸ್ವಲ್ಪ ದರ್ಶನದಿಂದ ನನ್ನ ಮನ ತುಂಬಿ ನಿಂತಿತು. ಆದರೂ ಅವಳು ಹುಟ್ಟಿಬಂದ ಗಿರಿಶಿಖರವನ್ನು (೧೮೬೮ರಲ್ಲಿ ಅದನ್ನು ಸಂದರ್ಶಿಸಿದ ಬೌರಿಂಗರು 'ತುಂಗ ದಟ್ಟವಾಗಿ ಆವರಿಸಿದ ಕಾಡು, ಬಹುಶಃ ಜಗತ್ತಿನ ಅಂತ್ಯ ಭಾಗವೇನೋ

ಕರ್ನೂಲ ಬಳಿ ಹುಂದ್ರಿ ನದಿಯ ಮೇಲೆ ಹರಿಯುವ ತುಂಗಭದ್ರಾ ಮೇಲ್ಕಾಲುವೆ ↓





ಎಂಬಂತೆ ತೋರಿತು! ಎಲ್ಲೆಲ್ಲಿಗೂ ಉತ್ತುಂಗ ಶಿಖರಗಳು. ಮಾನವ ವಸತಿಯ ಕುರುಹೇ ಇಲ್ಲದ ತಾಣ" ಎಂದು ಬಣ್ಣಿಸಿದರು. ಪಂಡಿತ ರಮಾಬಾಯಿಯವರ ತಂದೆ ತಮ್ಮ ಮಗಳಿಗೆ ಈ ಪ್ರಶಾಂತ ಏಕಾಂತ ಸ್ಥಾನದಲ್ಲಿ ಸಂಸ್ಕೃತ ಬೋಧಿಸಿದರಂತೆ) ಅಲ್ಲಿಯ ಭವ್ಯತೆಯನ್ನು ಪ್ರಶಾಂತತೆಯನ್ನು ಕಾಣಲು, ಅನುವಾಗಲಿಲ್ಲ ಎಂಬ ಒಂದು ಕೊರಗು ನನ್ನದು. ನಿಜ. ನನ್ನ ಸ್ನೇಹಿತರೊಬ್ಬರು ಸೂಚಿಸಿದಂತೆ ಕೇವಲ ತೀರದಲ್ಲಿ ಸಂಚರಿಸದೆ ತುಂಗಭದ್ರೆಯಲ್ಲಿ ನೌಕಾಯಾನ ನಡೆಸಿ ಅಲ್ಲಿಂದಲೇ ಅಪಾರ ಅನುಭವ ಪಡೆದು ಅದನ್ನು ನಮ್ಮ ಓದುಗರಿಗೆ ಉಣಬಡಿಸಲು ಸಾಧ್ಯವಾಗಿದ್ದರೆ ಅದು ಎಷ್ಟು ಅದ್ಭುತ ರಮ್ಯವೆನಿಸುತ್ತಿತ್ತು!

○

ಜಮ್ಮಿ-ಚಾಟು ಎಂಬಲ್ಲಿ ತುಂಗಭದ್ರೆಗೆ ಹುಂದ್ರಿ ನದಿ ಸೇರಿಕೊಳ್ಳುವುದು

# 'ಕನ್ನಡದ ಸೇವೆ ಮಾಡಲು ಇನ್ನೂ ಆಸೆ, ಆದರೆ...'

ನಾನೊಬ್ಬ ಪ್ರತಿಭಾವಂತೆ ನಾಯಕಿಯೆಂದು ಹೇಳಿಕೊಳ್ಳಲಾರೆ. ಆದರೆ ಉತ್ತಮ ಕಲಾವಿದೆಯೆನಿಸಲು ಬೇಕಾದ ಕನಿಷ್ಠ ಅರ್ಹತೆ ಹಾಗೂ ಅಭಿನಯದಲ್ಲಿ ಕಿಂಚಿತ್ತಾದರೂ ಪ್ರತಿಭೆ, ಪರಿಶ್ರಮ ನನಗಿದೆಯೆಂದು ನನ್ನ ಭಾವನೆ.

೧೯೬೦ರಿಂದ ನಾನು ಮುಖಕ್ಕೆ ಬಣ್ಣ ಬಳೆದುಕೊಳ್ಳಲು ಆರಂಭಿಸಿದೆ. ಆದರೆ ನಾಲ್ಕು ವರ್ಷ ಕಾಲ ನಾನು ಪಟ್ಟ ಬವಣೆ ಹೇಳತೀರದಷ್ಟು. ತೆಲುಗಿನಲ್ಲಾಗಲಿ, ತಮಿಳಿನಲ್ಲಾಗಲಿ, ನನಗೆ ಒಂದಾದರೂ ಸರಿಯಾದ ಪಾತ್ರ ದೊರೆಯಲಿಲ್ಲ. ಆದರೆ ಸುದೈವದಿಂದ ಕನ್ನಡ ಚಿತ್ರರಂಗವು ನನ್ನನ್ನು ಕೈ ಚಾಚಿ ಸ್ವಾಗತಿಸಿತು. 'ಜೇನುಗೂಡು' ಚಿತ್ರದ ನಾಯಕಿಯಾಗಿ ನಾನು ಕನ್ನಡ ಚಿತ್ರರಂಗ ಪ್ರವೇಶಿಸಿದೆ.

ನನ್ನ ಜೀವನದಲ್ಲಿ ಜೇನಿನಂಥ ಸುಮಧುರ ಅನುಭವಗಳು ಆರಂಭವಾದುದೇ ಈ 'ಜೇನುಗೂಡು' ಚಿತ್ರದ ನಂತರ. ಆ ಚಿತ್ರವು ತೆರೆ ಕಾಣುವ ಮೊದಲೇ ನಟಸಾರ್ವಭೌಮ ರಾಜಕುಮಾರ ಜೊತೆ "ಚಂದವಳ್ಳಿಯ ತೋಟ' ಚಿತ್ರದಲ್ಲಿ ಅಭಿನಯಿಸುವ ಸುಯೋಗ ನನಗೊದಗಿತು. ಆ ಚಿತ್ರ ಪ್ರಶಸ್ತಿಯನ್ನೂ ಪಡೆಯಿತು.

೧೯೬೩ರಿಂದ ೧೯೭೧ರ ವರೆಗಿನ ಕಲಾಜೀವನದ ಈ ಎಂಟುವರ್ಷಗಳ ಸಿಂಹಾವಲೋಕನ ಮಾಡಿದಾಗ ವ್ಯಥೆ ಪಡುವ ಒಂದಾದರೂ ಘಟನೆ ನನಗೆ ನೆನಪಾಗುತ್ತಿಲ್ಲ. ಉರುಳಿ ಹೋದ ಒಂದೊಂದು ಘಳಿಗೆಯೂ ನನ್ನ ಪಾಲಿಗೆ ಒಂದೊಂದು ರಸ ಘಳಿಗೆ. ಕನ್ನಡ ಚಿತ್ರರಂಗ ನನಗೆ ಎಲ್ಲಿಲ್ಲದ ಸ್ವಾಗತ ಕೋರಿತು. ಕನ್ನಡ ರಸಿಕರು ನನಗೆ ಹಾರ್ದಿಕ ಬೆಂಬಲ ನೀಡಿದರು. ಕನ್ನಡ ಪತ್ರಕರ್ತರು ಪ್ರೀತಿ ವಿಶ್ವಾಸಗಳಿಂದ ನೋಡಿಕೊಂಡರು.



"ಸತ್ತ ನಂತರವೂ ಕನ್ನಡಕ್ಕೆ ನನ್ನ ಸೇವೆ ಸಲ್ಲಿಸಬೇಕೆಂಬುದೆನ್ನ ಹಿರಿಯಾಸೆ"
(ಕರ್ಮವೀರಕ್ಕಾಗಿ ಜಯಂತಿಯ ವಿಶೇಷ ಭಂಗಿ)

**ಜಯಂತಿ**

ಸಹೋದ್ಯೋಗಿಗಳು ತಮ್ಮ ಪ್ರೀತಿಯ ಸೋದರಿಯಂತೆ ಪ್ರೇಮವೃಷ್ಟಿಗರೆದರು. 'ಜೇನುಗೂಡು' ನಂತರ ಕಹಿಯೆಂಬುದನ್ನೇ ನಾನು ತಿಳಿಯೆ. ನಾನು ಉಂಡಿದ್ದೆಲ್ಲ ಬರೀ ಹಾಲ್ಜೇನು, ಪಕ್ವಾನ್ನದೂಟ.

ಈ ಅವಧಿಯಲ್ಲಿ ನಾನು ೬೦ ಚಿತ್ರಗಳಲ್ಲಿ ಅಭಿನಯಿಸಿರುವೆ. (ಕೃಷ್ಣದೇವರಾಯ ೫೦ನೆಯ ಚಿತ್ರ) ಆ ಪೈಕಿ ರಾಜಕುಮಾರ ಅವರ ಜೊತೆ ಅಭಿನಯಿಸಿದ ಚಿತ್ರಗಳೇ ೩೨.

ನಾನು ಅಭಿನಯಿಸಿರುವ ಅನೇಕ ಚಿತ್ರಗಳು ಗಲ್ಲಾಪೆಟ್ಟಿಗೆಯಲ್ಲಿ ಅದ್ಭುತ ಯಶಸ್ಸು ಗಳಿಸಿವೆ. ನನ್ನ ಅನೇಕ ಚಿತ್ರಗಳು ರಾಷ್ಟ್ರಪತಿ ಪ್ರಶಸ್ತಿ ಪಡೆದಿರುವುದರಿಂದ ಅಂಥ ಹಲವಾರು ಪ್ರಶಸ್ತಿ ಪ್ರದಾನ ಸಮಾರಂಭಗಳಲ್ಲಿ ಪಾಲ್ಗೊಳ್ಳುವ ಅವಕಾಶವೂ ನನಗೆ ಸಿಕ್ಕಿದೆ.

ಮದ್ರಾಸಿನ ಚಲನಚಿತ್ರ ರಸಿಕರ ಸಂಘವು ಸತತವಾಗಿ ನಾಲ್ಕು ವರ್ಷ ನನ್ನನ್ನು 'ಶ್ರೇಷ್ಠ ಕಲಾವಿದೆ' ಎಂದು ಆಯ್ಕೆ ಮಾಡಿದೆ. 'ಕುಲಗೌರವ' ಚಿತ್ರದ ಅಭಿನಯಕ್ಕಾಗಿ ಈ ಸಲವೂ ನಾನು ರಾಜಕುಮಾರ ಅವರ ಜೊತೆ ಆ ಪ್ರಶಸ್ತಿ ಪಡೆದಿರುವೆ.

ಅಭಿನಯಿಸಿದ ಅರುವತ್ತು ಚಿತ್ರಗಳಲ್ಲಿ ನಾನು ಮೆಚ್ಚಿದ ಪಾತ್ರಗಳು ಯಾವುವು? ಎಂದು ಸಹಜವಾಗಿಯೇ ನೀವು ಪ್ರಶ್ನಿಸಬಹುದು. ನನಗೆ ತೃಪ್ತಿ ನೀಡಿದ ಚಿತ್ರಗಳೆಂದರೆ ಚಂದವಳ್ಳಿಯ ತೋಟ, ಮಿಸ್ ಲೀಲಾವತಿ, ಚಕ್ರತೀರ್ಥ, ಗೃಹಲಕ್ಷ್ಮಿ, ಶ್ರೀಕೃಷ್ಣದೇವರಾಯ. ಎರಡು ಮುಖ, ಕುಲ ಗೌರವ, ರೌಡಿ ರಂಗಣ್ಣ ಹಾಗೂ ದೇವರ ಮಕ್ಕಳು.



!! ದೀಪಾವಳಿಯ ಶುಭಾಶಯಗಳು !!



ಪೋಸ್ಟ್ ಬಾಕ್ಸ್ ನಂ ೩೦ ★ ಫೋನ್ ನಂ. ೩೪೮

# ವಿಜಯ ಟ್ರೇಡರ್ಸ್

**ಬಿ. ಹೆಚ್. ರೋಡ್, ಶಿವಮೊಗ್ಗಾ**

ನಿಮಗೆ ಬೇಕಾಗುವ ಎಲ್ಲ ವಿಧವಾದ ಮೋಟಾರ್ ಲಾರಿ ಬಸ್ಸು ಮತ್ತು ಕಾರುಗಳ ಎಲ್ಲಾ ಬಿಡಿ ಭಾಗಗಳಿಗೂ, ಎಕ್ಸಾಯಿಡ್ ಬ್ಯಾಟರಿ ಟೈರು ಟ್ಯೂಬು ಮತ್ತು ಉಪಕರಣಗಳಿಗೂ ವಿಚಾರಿಸಿರಿ.

**ನ್ಯಾಯವಾದ ಬೆಲೆ ಮತ್ತು ನಂಬಿಕೆ ಯಾದ ಉತ್ಕೃಷ್ಟ ಸಾಮಾನುಗಳಿಗೆ**

ಬೆಂಗಳೂರು ಶಾಖೆ

ಫೋನ ನಂ '೨೨೮೯೪'

## ವಿಜಯ ಟ್ರೇಡರ್ಸ್

18-19 ಜಯಚಾಮರಾಜ ರೋಡ್

**ಬೆಂಗಳೂರ-೨**



ನಮ್ಮೆಲ್ಲ ಗ್ರಾಹಕರಿಗೂ ಹಿತೈಷಿಗಳಿಗೂ ದೀಪಾವಳಿಯ ಶುಭಾಶಯಗಳು



ನಿಮಗೆ ಬೇಕಾಗುವ

- ★ ಸುಧಾರಿಸಿದ ಕಾಯಿಪಲ್ಯ ಬೀಜಗಳು
- ★ ಹಾಯಬ್ರಿಡ್ ಸೀಡ್ಸ್
- ★ D. L. N. ಸಿಕೇಚರ್ಸ್
- ★ ಬೆಳ್ಳಕೆ ಬಣ್ಣ ಬರುವ ಕೆಮಿಕಲ್ಸ್

ಮುಂತಾದವುಗಳಿಗಾಗಿ ವಿಚಾರಿಸಿರಿ :-

# ಡಿ. ಎಲ್. ಹಂದ್ರಾಳ

**ಬೀಜಗಳ ವ್ಯಾಪಾರಿಗಳು**

**ಬಾಗಲಕೋಟೆ** (S. C. Rly)

( ಜಿಲ್ಹಾ : ವಿಜಾಪೂರ )

ಗ್ರಾಮ "ಸೀತಾ ಸೀಡ್ಸ್" ದೂರವಾಣಿ **244**

शुभ चिंतन






आयुर्वेदीय **अर्कशाला** लि. सातारा.

आयुर्वेदीय औषधांचे निर्माते

अर्कशाला निर्मित लोकप्रिय उत्पादने

[illegible]

ದೀಪಾವಳಿಯು ನಮ್ಮ ಅಸಂಖ್ಯಾತ ಗ್ರಾಹಕರಿಗೂ ಹಿತಚಿಂತಕರಿಗೂ ಸುಖಪ್ರದವಾಗಲಿ



ಆಯುರ್ವೇದೀಯ

# ಅರ್ಕಶಾಲಾ ಲಿ.,

ಸಾತಾರಾ

ಮಾರಾಟ ಕೇಂದ್ರಗಳು

**ಕೊಪ್ಪಿಕರ ಬೀದಿ, ಹುಬ್ಬಳ್ಳಿ,**

**15/8, ಮಾರುತಿಗಲ್ಲಿ, ಬೆಳಗಾವಿ**

**ಗನ್ನಾಸರ ಮಾರ್ಕೆಟ, ಶಿವರಾಮಪೇಟ, ಮೈಸೂರು**

## ಜಯಂತಿ-ಪರಿಚಯ

ಜನನ: ಬಳ್ಳಾರಿ. ನಿಜ ಹೆಸರು ಕಮಲಾ. ಎತ್ತರ ೫ ಅಡಿ ೩ ಅಂಗುಲ. ತೂಕ ೧೨೫ ಪೌಂಡು, ಗೌರವರ್ಣ. ಪತಿ: ನಟ–ನಿರ್ದೇಶಕ ಪೇಕೇಟಿ ಶಿವರಾಂ. ಒಂದು ಗಂಡುಮಗುವಿನ ತಾಯಿ. ಎರಡೂವರೆ ವರ್ಷದ ಆ ಮಗುವಿನ ಹೆಸರು ಕುಮಾರ್. ಡಾಕ್ಟರಾಗಬೇಕೆಂದು ಆಕೆ ಬಯಸಿದ್ದಳು. ಆದರೆ ಮೊದಲಿನಿಂದಲೂ ನೃತ್ಯದತ್ತ ಒಲವು. ಒಮ್ಮೆ ಷೂಟಿಂಗ್ ವೀಕ್ಷಿಸಲು ಹೋದ ಹುಡುಗಿಗೆ 'ಕೃಷ್ಣಲೀಲಾ' ತೆಲುಗು ಚಿತ್ರದಲ್ಲಿ ಪಾತ್ರ ದೊರೆಯಿತು. ಕಮಲ ಕುಮಾರಿ ಹೆಸರಿನೊಂದಿಗೆ ಚಿತ್ರರಂಗ ಸೇರಿದ ಹುಡುಗಿ ನಂತರ ಕನ್ನಡದ ಜಯಂತಿಯಾದಳು.

ಆದರೆ ಕನ್ನಡ ಚಿತ್ರರಂಗದಲ್ಲಿ ಈಗ ರಾಜಕೀಯದ ಗಾಳಿ ಶುರುವಾಗಿದೆ. ಪಟ್ಟಭದ್ರ ಹಿತಾಸಕ್ತಿಗಳಿಂದಾಗಿ ಕನ್ನಡ ಚಿತ್ರರಂಗದ ಅಭಿವೃದ್ಧಿಗೇ ಧಕ್ಕೆಯುಂಟಾಗುತ್ತಿದೆ. ಹೀಗಿರುವಾಗ ನನ್ನಲ್ಲಿ ಮೊದಲಿದ್ದ ಆತ್ಮವಿಶ್ವಾಸ ಈಗ ಶಿಥಿಲವಾಗುತ್ತಿದೆಯೆಂದು ಬಹಿರಂಗವಾಗಿ ನಾನು ಹೇಗೆ ಹೇಳಲಿ?

ತೆಲುಗು, ತಮಿಳು ಅಷ್ಟೇ ಏಕೆ? ಹಿಂದೀ ಚಿತ್ರರಂಗದ ಆಹ್ವಾನವನ್ನು ಕೂಡ ನಿರಾಕರಿಸಿ ನಾನು ಕನ್ನಡ ಚಿತ್ರಗಳಿಗೆ ಆದ್ಯತೆ ನೀಡಿದ್ದುಂಟು. ಎಂಟು ವರ್ಷಗಳಲ್ಲಿ ೬೦ ಚಿತ್ರಗಳಲ್ಲಿ ಅಭಿನಯಿಸಿದ ನಾನು ಕನ್ನಡ ನಿರ್ಮಾಪಕರ ಅತ್ಯಂತ ನೆಚ್ಚಿನ ಕಲಾವಿದೆಯೆನಿಸಿದ್ದೆ. ಆದರೆ ಇಂದು ನನಗೆ ವರ್ಷಕ್ಕೆ ಮೂರು ಕನ್ನಡ ಚಿತ್ರಗಳಲ್ಲಿ ಅಭಿನಯಿಸುವ ಅವಕಾಶ ಕೂಡ ಸಿಗುತ್ತಿಲ್ಲ. ಹೀಗೇಕಾಯಿತು?

ಕನ್ನಡದಲ್ಲಿ ಅಭಿನಯಿಸಲು ನಾನು ನಿರಾಕರಿಸುತ್ತಿರುವೆನೆ? ಇಲ್ಲ. ಕನ್ನಡ ಚಿತ್ರರಂಗ ನನಗೆ ಬೇಡವಾಗಿದೆಯೆ? ಇಲ್ಲ. ಹಾಗಾದರೆ ಇಂದು ನಾನು ಜನಪ್ರಿಯತೆಯನ್ನು ಕಳೆದುಕೊಂಡು ಯಾರಿಗೂ ಬೇಡವಾದ ತಾರೆಯಾಗಿರುವೆನೆ?

ಇದರ ಕಾರಣವೇನಿರಬಹುದೆಂಬುದನ್ನು ಇಷ್ಟು

"ಈ ಮುಖ ನೋಡಲು ಬೇಸರವಾಗುತ್ತದೆ" ಎಂದು ಜನ ಕಲ್ಲು ಬೀಸುವವರೆಗೂ ನಾನು ಕನ್ನಡ ಚಿತ್ರಗಳಲ್ಲಿ ಅಭಿನಯಿಸುವೆ (ಕರ್ಮವೀರಕ್ಕಾಗಿ ಜಯಂತಿಯ ವಿಶೇಷಭಂಗಿ)



ಅರವತ್ತಕ್ಕಿಂತ ಹೆಚ್ಚು ಚಿತ್ರಗಳಲ್ಲಿ ಅಭಿನಯಿಸಿದರೂ ವಿಭಿನ್ನ ಪಾತ್ರಗಳಲ್ಲೇ ಹೆಚ್ಚಾಗಿ ಕಾಣಿಸಿಕೊಂಡ ತೃಪ್ತಿ ನನಗಿದೆ. ಕನ್ನಡ ಚಿತ್ರೋದ್ಯಮದ ಭವಿತವ್ಯವು ತೀರ ಅನಿಶ್ಚಿತವಿದ್ದ ಸಂಧಿಕಾಲದಲ್ಲಿ ನಾನು ಕನ್ನಡದ ಗೃಹಪ್ರವೇಶ ಮಾಡಿದೆ. ಆದರೆ ಇಂದು ಕನ್ನಡ ಚಿತ್ರರಂಗ ವರ್ಷಕ್ಕೆ ೪೦ ಚಿತ್ರಗಳನ್ನು ತಯಾರಿಸುತ್ತಿದ್ದು ಅದಕ್ಕೆ ಉಜ್ವಲ ಭವಿತವ್ಯವಿದೆಯೆಂಬ ವಿಶ್ವಾಸ ನನಗಿದೆ.

ಕನ್ನಡದ ಎಲ್ಲ ಕಲಾವಿದರು, ತಂತ್ರಜ್ಞರ ಜೊತೆ ಕೂಡಿ ಕೆಲಸ ಮಾಡಿದ ಸುದೈವಿ ನಾನು. 'ಕಲಾ ಕೋಕಿಲಾ' 'ಅಭಿನಯ ಶಾರದೆ' ಎಂದು ಜನ ವಿಶ್ವಾಸದಿಂದ ನನಗೆ ಬಿರುದು ನೀಡಿದ್ದಾರೆ. ಅನೇಕರು ನನ್ನನ್ನು ಕರೆದು ಸನ್ಮಾನಿಸಿದ್ದಾರೆ.

ಚಿತ್ರರಂಗದ ನಿರ್ಮಾಪಕರು, ನಿರ್ದೇಶಕರಿಂದ ಹಿಡಿದು, ಪ್ರೊಡಕ್ಷನ್ ಬಾಯ್ ವರೆಗೆ ಪ್ರತಿಯೊಬ್ಬರಿಗೂ ನನ್ನ ಶ್ರೇಯಸ್ಸಿನ ಒಂದಂಶ ಸಲ್ಲಬೇಕು. ಅವರಿಗೆ ಸದಾ ಋಣಿಯಾಗಿದ್ದೇನೆ. ಏಕೆಂದರೆ ಇಂಥ ವಿಶ್ವಾಸವನ್ನು, ವಾತ್ಸಲ್ಯದ ವರ್ಷಧಾರೆಯನ್ನು ನಾನು ಬೇರೆ ಯಾವ ಭಾಷಾ ಚಿತ್ರರಂಗದಲ್ಲೂ ಕಂಡಿಲ್ಲ.

ನಾನೊಬ್ಬ ಬಹುಭಾಷಾ ಕಲಾವಿದೆ. ಕಲೆಗೆ ಭಾಷೆಯ ಭೇದವಿಲ್ಲ ಎಂಬ ಭಾವನೆ ನನ್ನದು. ಹೀಗಾಗಿ ತೆಲುಗು, ತಮಿಳು ಚಿತ್ರಗಳಲ್ಲಿ ಸಹ ನಾನು ಅಭಿನಯಿಸಿರುವೆ. ಆದರೆ ನನ್ನ ಅನೇಕ ಅಭಿಮಾನಿಗಳಿಗೆ ಇದು ರುಚಿಸಿರುವಂತೆ ಕಾಣುವುದಿಲ್ಲ. "ನೀವು ಬೇರೆ ಭಾಷಾ ಚಿತ್ರಗಳಲ್ಲಿ ಅಭಿನಯಿಸುವ ಅಗತ್ಯತೆ ಏನಿದೆ?" ಎಂದವರು ಪದೇ ಪದೇ ಪ್ರಶ್ನಿಸುತ್ತಾರೆ.

ತೆಲುಗು ಸೀಮೆಯಲ್ಲಿ ಬೆಳೆದರೂ ನಾನು ಮೂಲತಃ ಕನ್ನಡಿಗಳು. ನನ್ನ ತಾಯಿಯವರು ಕೈ ಮೇಲೆ ಕನ್ನಡದಲ್ಲಿ ಹಚ್ಚೆ ಬರೆಸಿಕೊಂಡುದನ್ನು ನಾನು ನೋಡಿರುವೆ. ನನ್ನ ಸೇವೆ ಕನ್ನಡಕ್ಕೆ ಮೀಸಲಿದೆ. ಕನ್ನಡ ಚಿತ್ರರಂಗದ ಅಭಿವೃದ್ಧಿಯೇ ನನ್ನ ಅಭಿವೃದ್ಧಿ ಎಂದು ಭಾವಿಸಿದವಳು ನಾನು.

ದಿನ ನನಗೆ ಬೆಂಬಲವಿತ್ತ ಜನತೆ, ಪತ್ರಕರ್ತರು, ಹಾಗೂ ಹಿತಾಸಕ್ತರು ಮಾತ್ರ ತಿಳಿದಿದ್ದಾರೆ. ಉದ್ಯಮದಲ್ಲಿ ಒಳಗಿಂದೊಳಗೇ ನಡೆದಿರುವ ಸಂಚನ್ನು ಅವರು ಮಾತ್ರ ಊಹಿಸಬಲ್ಲರು.

ನಾನಿನ್ನೂ ಬದುಕಬೇಕಿದೆ. ಕಲಾವಿದೆಯಾಗಿ ಇನ್ನೂ ಕೆಲವು ಕಾಲ ಸೇವೆ ಸಲ್ಲಿಸುವ ಆಸೆ ನನಗಿದೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ನನ್ನ ಬಹುಭಾಷಾ ಪರಿಣತಿಗೆ ಅನಿವಾರ್ಯವಾಗಿ ಮೊರೆ ಹೋಗಬೇಕಾಗಿದೆ.

ಕನ್ನಡದಲ್ಲಿನ ಅನಿಶ್ಚಿತ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡ ನಾನು ತಕ್ಷಣ ಬೇರೆ ಭಾಷಾ ಚಿತ್ರಗಳ ಆಹ್ವಾನವನ್ನು ಅಂಗೀಕರಿಸಲು ಶುರು ಮಾಡಿರುವೆ. ಯಾಕೆಂದರೆ ಕನ್ನಡದಲ್ಲಿ ಹಿಂದೊಮ್ಮೆ ಖ್ಯಾತನಾಮರಾದ ಅನೇಕ ಕಲಾವಿದರ ಸ್ಥಿತಿ ಇಂದು ಶೋಚನೀಯವಾಗಿರುವುದನ್ನು ಕಣ್ಣಾರೆ ಕಂಡಿದ್ದೇನೆ. ಆ ದುರ್ಗತಿ ನನಗೂ ಬರದಿರಲೆಂದು ನಾನು ಜಾಗರೂಕಳಾಗಿರುವೆ.

ಕನ್ನಡದಲ್ಲಿಯೇ ಹೆಚ್ಚು ಅವಕಾಶ ಸಿಕ್ಕರೆ ಬೇರೆ ಭಾಷೆಯ ಚಿತ್ರಗಳಲ್ಲಿ ಅಭಿನಯಿಸುವ ವ್ಯಾಮೋಹ ನನಗಿಲ್ಲ. ಕನ್ನಡ ಚಿತ್ರಗಳಲ್ಲಿ ಮಾತ್ರ ಅಭಿನಯಿಸಬೇಕೆಂಬ ಹಿರಿಯಾಸೆ ನನಗಿದೆ. ಏಕೆಂದರೆ ನನಗೆ ನಾಯಿಕೆಯ ಪಟ್ಟ ಕಟ್ಟಿ, ಎತ್ತಿ ಹಿಡಿದ ಜನ ಕನ್ನಡಿಗರು ಇತರ ಭಾಷೆಯವರಲ್ಲ ಎಂಬುದನ್ನು ನಾನು ಮರೆಯಲಾರೆ. ಕನ್ನಡದ ಸೇವೆ ಸಲ್ಲಿಸುವುದರಿಂದ ಮಾತ್ರ ನಾನವರಿಗೆ ಕೃತಜ್ಞತೆ ಸಲ್ಲಿಸಲು ಸಾಧ್ಯ.

ಇನ್ನು ಒಳ್ಳೆಯ ಚಿತ್ರಗಳಲ್ಲಿ ಅಭಿನಯಿಸಬೇಕು ಒಂದಿನ ಚಿತ್ರಗಳಿಗಿಂತ ಹೆಚ್ಚು ಉತ್ತಮ ಅಭಿನಯ ನೀಡಬೇಕು. ನನ್ನ ಹೆಸರು ನಾಲ್ಕು ಜನ ನೆನೆಯುವಂತೆ ಮಾಡಬೇಕು ಎಂಬುದು ನನ್ನ ಜೀವನದ ಮಹತ್ವಾಕಾಂಕ್ಷೆ.

ಆರ್ಥಿಕ ಭದ್ರತೆಯ ಭರವಸೆಯುಂಟಾದರೆ ಕನ್ನಡ ಜನತೆಗೆ ಶಾಶ್ವತ ಸೇವೆ ಸಲ್ಲಿಸುವ ಆಸೆ ನನಗೆ. ನಾಳೆ ನಾನೊಂದು ಶಾಲೆ ಕಟ್ಟಿಸಬಹುದು, ಆಸ್ಪತ್ರೆ ಕಟ್ಟಿಸಬಹುದು, ಇಲ್ಲವೆ ಅದರ ಸ್ವರೂಪ ಬೇರೆ ಏನಾದರೂ ಇರಬಹುದು. ಅಂತೂ ನಾನು ನಿವೃತ್ತಳಾದ ನಂತರ ಅಷ್ಟೇ ಏಕೆ, ನಾನು ಸತ್ತ ನಂತರವೂ ಕನ್ನಡಕ್ಕೆ ನನ್ನ ಅಳಿಲು ಸೇವೆ ಸಲ್ಲುತ್ತಿರಬೇಕು ಎಂಬುದೊಂದೇ ನನ್ನ ಹಂಬಲ.


ವಿಳಾಸ

ಪಿ. ಜಯಂತಿ.

೨, ತ್ರಿಮೂರ್ತಿ ರೋಡ್,

ಮದ್ರಾಸ್–೧೭


"ಕನ್ನಡ ಚಿತ್ರರಂಗದಲ್ಲಿ ರಾಜಕೀಯದ ಗಾಳಿ ಬೀಸುತ್ತಿದೆ ಎಂದು ಹೇಗೆ ಹೇಳಲಿ!"

(ಕರ್ಮವೀರಕ್ಕಾಗಿ ಜಯಂತಿಯ ವಿಶೇಷಭಂಗಿ)



## ಯೋಗಾಯೋಗ

'ಮಂತ್ರಾಲಯ ಮಹಾತ್ಮೆ' ಚಿತ್ರದ ನಾಯಕಪಾತ್ರಕ್ಕೆ ರಾಜಕುಮಾರ ಅವರ ಆಯ್ಕೆಯಾದ ನಂತರ ನಾಯಕಿಯ ಪಾತ್ರಕ್ಕೆ ಯಾರನ್ನು ಆರಿಸಬೇಕು ಎಂಬ ಪ್ರಶ್ನೆಯುಂಟಾದಾಗ ಜಯಂತಿಯನ್ನೇ ನಾಯಕಿಯ ಪಾತ್ರಕ್ಕೆ ಆರಿಸಬೇಕೆಂದು ನಿಶ್ಚಯಿಸಲಾಯಿತು.

× × × ×

ಜಯಂತಿ ಅಭಿನಯಿಸಿದ 'ಎರಡು ಮುಖ' ಚಿತ್ರವು ಹಿಂದಿಯ 'ರಾತ್ ಔರ್ ದಿನ್' ಚಿತ್ರದ ನಂತರ ತೆರೆ ಕಂಡಿದ್ದರಿಂದ ಅವಳ ಅಭಿನಯವು ನರ್ಗೀಸಳ ಅನುಕರಣೆಯೆನಿಸುತ್ತದೆ. ಎಂದು ಕೆಲವರು ಟೀಕಿಸಿದರು. ಆದರೆ ತನ್ನ ಅಭಿನಯಕ್ಕಾಗಿ 'ಊರ್ವಶಿ' ಪ್ರಶಸ್ತಿ ಪಡೆದ ನರ್ಗೀಸ್ 'ಎರಡು ಮುಖ' ಚಿತ್ರವನ್ನು ವೀಕ್ಷಿಸಿದಾಗ ಜಯಂತಿಯ ಅಭಿನಯವನ್ನು ಮುಕ್ತಕಂಠದಿಂದ ಹೊಗಳಿದರಂತೆ.

# "ಇಂದು ಎಲ್ಲ ಇದೆ ಆದರೆ ಸಮಯವೇ ಇಲ್ಲ..." —ಭಾರತಿಯ ಕೊರಗು



ಸಮಸ್ತ ಕನ್ನಡ ಜನತೆಗೆ ದೀಪಾವಳಿಯ ಶುಭಾಶಯಗಳು (ಕರ್ಮವೀರಕ್ಕಾಗಿ ಭಾರತಿಯ ವಿಶೇಷ ಭಂಗಿ)

ದೀಪಾವಳಿಯೆಂದರೆ ಚಿಕ್ಕವಳಿದ್ದಾಗಿನಿಂದಲೂ ನನಗೆ ಹಿಗ್ಗು. ತಂದೆಯವರು ಹತ್ತು ರೂಪಾಯಿನ ಪಟಾಕಿ ತಂದರೆ ಸಾಕು. ನಾ ಮೊದಲು ನಾ ಮೊದಲು ಎಂದು ನಾವು ಅಕ್ಕ-ತಂಗಿ ತಮ್ಮಂದಿರೆಲ್ಲ ಕಚ್ಚಾಡುತ್ತಿದ್ದೆವು. ಮನೆಯಲ್ಲಷ್ಟೇ ಅಲ್ಲ, ದೀಪಾವಳಿ ಬಂತೆಂದರೆ ಶಾಲೆಯಲ್ಲಿ ಪಾಠ ನಡೆವಾಗ ಕೂಡ ಪಟಾಕಿಗೆ ಬೆಂಕಿ ಹಚ್ಚಿ ತೂರುತ್ತಿದ್ದ ಘಾಟಿ ನಾನು.

ಓದಿನಲ್ಲಿ ಪೆದ್ದಳಾದರೂ,' ಧಮಾಧಮ್ ಎಂದು ಪಟಾಕಿ ಹಾರಿಸಿ ಹಿಂದಿನ ಬೆಂಚಿನಲ್ಲಿ ಅಡಗಿ ಕೂಡುತ್ತಿದ್ದ ನನ್ನನ್ನೊಮ್ಮೆ ಕ್ಲಾಸ್ ಟೀಚರು ಕಿವಿ ಹಿಂಡಿ ಹೊಡೆಯಲು ಬಂದಾಗ, ಮುಷ್ಟಿ ತುಂಬ ಅವರಿಗೂ ಪಟಾಕಿ ಕೊಟ್ಟು ನಾನು ಹೇಳಿದ್ದೆ "ಮ್ಯಾಡಂ, ಬೇಕಾದರೆ ನೀವೂ ನಮ್ಮ ಜೊತೆ ಹಾರಿಸಿ" ಎಂದು.

ಆದರೆ ಈ ತುಂಟತನ ಬಹಳ ದಿನ ಉಳಿಯಲಿಲ್ಲ. ಪಿ. ಯು. ಸಿ. ವಿದ್ಯಾರ್ಥಿನಿಯಾಗಿದ್ದಾಗಲೇ "ಲವ್ ಇನ್ ಬೆಂಗಳೂರು"ಚಿತ್ರದೊಂದಿಗೆ ನಾನು ಚಿತ್ರರಂಗ ಸೇರಿದೆ ದುಡ್ಡೇ ದೊಡ್ಡಪ್ಪ' ಚಿತ್ರದ ನಂತರ ಬೇರೆ ಭಾಷೆಗಳಿಂದಲೂ ಕರೆ ಬಂದವು. ಇದರ ಫಲಶ್ರುತಿಯೇನಾಯಿತೆಂದರೆ ತಾರಾ ಪಟ್ಟ ಏರಿದ ನಂತರ ಇಂದು ನೂರು ರೂಪಾಯಿಯ ಪಟಾಕಿ ತಂದರೂ ಅವುಗಳನ್ನು ಹಾರಿಸಲು ನನಗೆ ಅವಕಾಶವಿಲ್ಲದಂತಾಗಿದೆ.

ಒಮ್ಮೆ ಹೀಗೇ ಆಯಿತು. ಆ ಸಲ ದೀಪಾವಳಿಹಬ್ಬದ ದಿನ ನಾನು ಮುಂಬೈನ ಹಿಂದೀ ಚಿತ್ರವೊಂದರ ಷೂಟಿಂಗ್‌ನಲ್ಲಿ ಪಾಲ್ಗೊಂಡಿದ್ದೆ. ಕ್ಯಾಮರಾದ ಮುಂದೆ ನಿಂತು ಅಭಿನಯಿಸುತ್ತಿದ್ದರೂ ಅಂದು ಮನಸ್ಸೆಲ್ಲ ಮನೆಯ ಕಡೆಗೆ. ಷೂಟಿಂಗ್ ಮುಗಿಸಿ ರಾತ್ರಿ ಹೋಟೆಲ್ಲಿಗೆ ಬಂದಾಗಲೂ ನನಗೆ ಅದೇ ಚಿಂತೆ. ಎಷ್ಟು ಸಮಯ ಕಳೆದರೂ ನಿದ್ರೆ ಬರಲಿಲ್ಲ. ಸರಿ, ಕೊನೆಗೆ ಹೋಟಲ್ಲಿನ ಕೊನೆಯ ಅಂತಸ್ತಿನ ಮಹಡಿಯೇರಿ ದೀಪಾಲಂಕೃತ ಮುಂಬೈ ನಗರವನ್ನೂ, ಊರಿನ ಹುಡುಗರು, ಮಹಿಳೆಯರು ಸಡಗರದಿಂದ ಪಟಾಕಿ ಹಾರಿಸುವುದನ್ನೂ ಕಣ್ತುಂಬ ನೋಡಿ ತೃಪ್ತಿಪಟ್ಟುಕೊಂಡೆ. ಹಲ್ಲಿದ್ದಾಗ ಕಡಲೆಯಿಲ್ಲ, ಕಡಲೆಯಿದ್ದಾಗ ಹಲ್ಲಿಲ್ಲ ಎಂದು ಶಾಲೆಯಲ್ಲಿ ಕಲಿತ ಗಾದೆ ನಿಜವೆಂದು ಆ ದಿನ ನನಗೆ ಅನುಭವವಾಯಿತು.

ಹಿಂದೊಮ್ಮೆ ದೀಪಾವಳಿಯ ರಜೆಯಲ್ಲೇ ಇರಬೇಕು. 'ಕಿತ್ತೂರ ಚೆನ್ನಮ್ಮ' ಚಿತ್ರವನ್ನು ನೋಡುವ ಆಸೆಯಾಯಿತು. ಆದರೆ ಮನೆಯಲ್ಲಿ ಆಗ ತುಂಬಾ ಕಟ್ಟುನಿಟ್ಟು. ನಮಗೆ ಚೆನ್ನಮ್ಮನ ಪಾಠವೊಂದು ಪಠ್ಯ ಪುಸ್ತಕದಲ್ಲಿದ್ದುದರಿಂದ, ಅದೇ ನೆಪ ಹೇಳಿದೆ. ಚಿತ್ರ ನೋಡಿದರೆ ಪರೀಕ್ಷೆಯಲ್ಲಿ ಚೆನ್ನಾಗಿ ಉತ್ತರ ಬರೆಯಲು ಅನುಕೂಲವಾಗುವುದೆಂದೂ. ಟೀಚರ್ ಕೂಡ ಹೆಚ್ಚು ಮಾರ್ಕ್ಸ್ ಬರುತ್ತಾರೆಂದೂ ಕಾಸು ಗಿಟ್ಟಿಸಿ ಚಿತ್ರ ನೋಡಲು ಹೊರಟೆ.

ಚಿತ್ರ ನೋಡಿ ಪರೀಕ್ಷೆಯಲ್ಲಿ ಅದೇನು ಉತ್ತರ ಬರೆದೆನೊ? ಆದರೆ ಇಷ್ಟು ಮಾತ್ರ ನಿಜ. ಆ ಚಿತ್ರ ನೋಡಿದ ನಂತರ ಚಿತ್ರರಂಗ ಸೇರುವ ಆಸೆ ನನ್ನಲ್ಲಿ ಪ್ರಬಲವಾಯಿತು. ಇಂಥ ಹಸಿರು ನೆನಪಿನ ದೀಪಾವಳಿಯನ್ನು ನಾನು ಹೇಗೆ ಮರೆತೇನು?

ವಿಳಾಸ:
ಎನ್. ಭಾರತಿ.
ನಂ. ೯. ಆನೇ ಕಾ ಸ್. ಪಿ. ಐ. ಟಿ. ಕಾಲೊನಿ.
ಮೈಲಾಪುರ್, ಮದ್ರಾಸ-೪,



# ಅಷ್ಟು ಮಾಂತ್ರಿಕ
# ಅಷ್ಟು ಮಾರ್ಮಿಕ
# ಲಾವಣ್ಯ ರಕ್ಷಣೆಗೆ



## ಅಫಘಾನ

ನೀವು ನಂಬಲಿಕ್ಕಿಲ್ಲ. ಆದರೂ ಅಫಘಾನ ಬಗ್ಗೆ ಅದು ಸತ್ಯ. ಗಂಟೆಯಿಂದ ಗಂಟೆಗೆ–ಅಷ್ಟು ಪರಿಪೂರ್ಣತೆ ಅಷ್ಟು ಮೃದುತ್ವ. ಬೇರೆ ಯಾರು ಅಷ್ಟು ಕಾಳಜಿ ವಹಿಸಿಯಾರು? ಅದೊಂದು ರಹಸ್ಯವಿರಬೇಕೆಂದು ನಾನು ನಂಬುವೆ. ಆ ನಂಬಿಕೆಯಲ್ಲಿ ನೀವೂ ಬೇಕಾದಾಗ ಪಾಲುಗಾರರಾಗಬಹುದು.

ದೀಪಾವಳಿಯ ಅಭಿನಂದನೆಗಳು

say 'aha' to AFGHAN SNOW!

E. S. PATANWALA, BOMBAY

ಈ. ಎಸ್. ಪಾಟನ್‌ವಾಲಾ, ಮುಂಬಯಿ-೫೬



# ಬೆಕ್ಕಿಗೆ ಗಂಟೆ ಕಟ್ಟುವವರಾರು?

**—ಶ್ಯಾಮಸುಂದರ ಕುಲಕರ್ಣಿ**

ನಾಲ್ಕು ವರ್ಷಗಳ ಹಿಂದೆ.

೧೯೭೪ರ ಜೂನ್ ೨೩ರಂದು.

ಶತಚಿತ್ರಗಳ ನಟ ರಾಜಕುಮಾರ ಗೌರವಾರ್ಥ ಏರ್ಪಡಿಸಿದ ಸನ್ಮಾನ ಸಮಾರಂಭವೊಂದರಲ್ಲಿ ಅವರೊಂದು ಮಾತು ಹೇಳಿದರು.

"ಕನ್ನಡ ಚಿತ್ರರಂಗಕ್ಕೆ ಒಬ್ಬ ರಾಜಕುಮಾರ ಸಾಲದು. ಇಂಥ ನೂರು ರಾಜಕುಮಾರರು ಬರಬೇಕು. ಆಗ ಮಾತ್ರವೇ ನನಗೆ ತೃಪ್ತಿ ಸಿಕ್ಕೀತು".

ಅವರು ಆ ಮಾತು ಹೇಳಿ ಇಂದಿಗೆ ನಾಲ್ಕೂವರೆ ವರ್ಷಗಳಾದವು. ಆದರೆ ಈ ಅವಧಿಯಲ್ಲಿ ರಾಜಕುಮಾರರನ್ನು ಮೀರಿಸುವ ಹಾಗಿರಲಿ, ಅವರ ಮಟ್ಟಕ್ಕೆ ಬರುವಂಥ ಒಬ್ಬನಾದರೂ ಬೇರೆ ರಾಜಕುಮಾರ ಬೆಳಕಿಗೆ ಬರಲಿಲ್ಲ. ಸರ್ಕಾರದ ಸಹಾಯಧನ ಹಾಗೂ ಇತರ ನೆರವುಗಳಿಂದಾಗಿ ಕನ್ನಡದಲ್ಲೇ ಹಿಂದೆಂದೂ ತಯಾರಾಗದಷ್ಟು ಚಿತ್ರಗಳು ಈ ಅವಧಿಯಲ್ಲಿ ತೆರೆ ಕಂಡವು. ಹೊಸಬರಿಗೆ ಸಾಕಷ್ಟು ಅವಕಾಶವೂ ಸಿಕ್ಕಿತು. ಆದರೆ ಒಬ್ಬರಾದರೂ ರಾಜಕುಮಾರ ಅವರ ಎತ್ತರಕ್ಕೆ ಏರಲಿಲ್ಲ. ಇನ್ನು ನಾಲ್ಕು ವರ್ಷ ಕಳೆದ ಮೇಲಾದರೂ ಯಾರಾದರೂ ಆ ಎತ್ತರಕ್ಕೆ ಏರಿಯಾರೆಂಬ ಭರವಸೆಯೂ ಇಲ್ಲ.

ಹಾಗಾದರೆ ಹೊಸ ನಟರಾರೂ ಬೆಳಕಿಗೆ ಬರಲಿಲ್ಲವೆ? ಬಂದರು. ಅರ್ಧ ಡಜನ್ ಹೊಸಬರು ಈ ಅವಧಿಯಲ್ಲಿ ನಾಯಕ ಪಟ್ಟವನ್ನು ಏರಿದರು. ಆದರೆ ಅವರಾರೂ ನಿರೀಕ್ಷಿಸಿದ ವಟ್ಟಕ್ಕೆ ಬರಲಿಲ್ಲ.

ಕನ್ನಡ ತೆರೆಯ ಮೇಲೆ ಅದೇ ಮುಖಗಳನ್ನು ನೋಡಿ ಬೇಸತ್ತಿದ್ದ ಚಿತ್ರಪ್ರೇಮಿಗಳಿಗೆ ಅನಿರೀಕ್ಷಿತವಾಗಿ ಪರಿಚಯವಾದ ಹೊಸ ಪ್ರತಿಭೆ ರಾಜೇಶ್. ಆತನ ಮೊದಲ ಚಿತ್ರ 'ನಮ್ಮ ಊರು' ಅದ್ಭುತ ಯಶಸ್ಸು ಗಳಿಸಿತು. ಇದೇ ಸಮಯ ರಾಜಕುಮಾರ್ ಅವರಿಗೂ ಮೈಸೂರಿನ ಪ್ರಿಮಿಯರ್ ಸ್ಟುಡಿಯೊದ ಒಡೆಯರಿಗೂ ವೈಮನಸ್ಯವುಂಟಾಗಿ ತಾವು ಇನ್ನು ಮೇಲೆ ಪ್ರಿಮಿಯರ್ ಸ್ಟುಡಿಯೊದಲ್ಲಿ ಕಾಲಿಡುವುದಿಲ್ಲ ಎಂದವರು ಪ್ರತಿಜ್ಞೆ ಮಾಡಿದ್ದರಿಂದ ರಾಜೇಶ್ ಆರಂಭದಲ್ಲೇ ಅನೇಕ ಚಿತ್ರಗಳಲ್ಲಿ ಅಭಿನಯಿಸುವ ಅವಕಾಶ ಪಡೆದ. ಇದರ ಫಲವಾಗಿ ಅವರು ತಾವು ಲಸದಲ್ಲಿದ್ದ ಸರಕಾರಿ ಕೆಲಸಕ್ಕೆ ರಾಜೀನಾಮೆ ನೀಡಿ ಪೂರ್ಣಾವಧಿಯ ನಟನಾದ.

ಜಿ. ವಿ. ಅಯ್ಯರ್ ಅವರ 'ಚೌಕದ ದೀಪ' ಹಾಗೂ ಅನಂತರ ಪುಟ್ಟಣ್ಣ ನಿರ್ದೇಶನದ 'ಗೆಜ್ಜೆ ಪೂಜೆ' ಚಿತ್ರಗಳೊಂದಿಗೆ ನಾಯಕನಾದ ಗಂಗಾಧರ್, ರಾಜೇಶ್‌ಗಿಂತ ಹೆಚ್ಚು ಸುದ್ದಿ. ಎಚ್. ಎ. ಎಲ್. ನಲ್ಲಿ ತಂತ್ರಜ್ಞನಾಗಿ ಕೆಲಸ ಮಾಡುತ್ತಿದ್ದ ಅವನು ರಜೆ ಪಡೆದು ಈ ಎರಡು ಚಿತ್ರಗಳಲ್ಲಿ ಅಭಿನಯಿಸಿದನಾದರೂ ಬೇಡಿಕೆ ವಿಪರೀತವಾದಾಗ ಆತ ಕೂಡ ಕೆಲಸಕ್ಕೆ ರಾಜೀನಾಮೆ ನೀಡಿದ.

ಬೆಂಗಳೂರಿನ ಪಾಲಿಟೆಕ್ನಿಕ್‌ನಲ್ಲಿ ಛಾಯಾಗ್ರಹಣ ತಂತ್ರದ ಅಭ್ಯಾಸ ಮಾಡಿ ನಂತರ 'ಮಧುರ ಮಿಲನ' ಚಿತ್ರದೊಂದಿಗೆ ಧಿಡೀರ್ ಎಂದು ನಾಯಕ ನಟನಾದ ಶ್ರೀನಾಥ್ ತನ್ನ ಹುಡುಗಾಟಿಕೆ, ತಿಳಿ ಹಾಸ್ಯದ ವಿಭಿನ್ನ ಬಗೆಯ ಪಾತ್ರಗಳಿಂದಾಗಿ ಆರಂಭದಲ್ಲಿ ಅಪಾರ ಜನಪ್ರಿಯತೆ ಗಳಿಸಿದ. ಈತ ಸೆಕೆಂಡ್ ರಾಜಕುಮಾರ ಎಂದು ಅನೇಕರು ಕರೆದರು. ಕನ್ನಡದ ರಾಜೇಶ್‌ಖನ್ನ ಎಂದವರೂ ಬಹು ಜನ.

ಒಳ್ಳೆಯ ನಾಯಕರೆನಿಸಿಸುವ ಭರವಸೆ ಮೂಡಿಸಿದ ಇನ್ನಿಬ್ಬರು ನಟರೆಂದರೆ ರಮೇಶ್ ಹಾಗೂ ರಂಗಾ. ರಮೇಶ್ ಬಿ. ಇ. ಪದವೀಧರ. ಎಸ್ಕೋ ಕಂಪನಿಯಲ್ಲಿ ಎರಡೂವರೆ ಸಾವಿರ ರೂಪಾಯಿ ಸಂಬಳದ ಕೆಲಸಕ್ಕೆ ರಾಜೀನಾಮೆ ನೀಡಿ, 'ಕವಲೆರಡು ಕುಲ ಒಂದು' ಚಿತ್ರದ ಮೂಲಕ ಆತ ನಟನಾದ.

ರಂಗಾ "ಒಂದೇ ಬಳ್ಳಿಯ ಹೂಗಳು" ಚಿತ್ರದ ರಿಕ್ಷಾವಾಲನ ಪಾತ್ರದ ಮೂಲಕ ಬೆಳಕಿಗೆ ಬಂದವನು. ಗೃಹ ನಿರ್ಮಾಣ ಮಂಡಳಿಯಲ್ಲಿ ಕೆಲಸಕ್ಕಿದ್ದ ಈತ ಕೂಡ ಚಿತ್ರರಂಗವನ್ನೇ ನಂಬಿ ನಂತರ ರಾಜೀನಾಮೆ ನೀಡಿದ.



ಪ್ರೇಮ ಪ್ರೇಮವೆಂದು ಪರಿತಪಿಸುವ
ನನ್ನೀ ಹೃದಯದ ನೋವು
ಏನೆಂದು ಹೇಳಲಿ !
ಶೀನಿಲ್ಲದೆ ಈ ಜೀವದಲಿ ಚೇತನವೆಲ್ಲಿ?
ಗುಲಾಬಿಗೆ ಬಣ್ಣ, ನಕ್ಷತ್ರಕೆ ಬೆಳಕೆಲ್ಲಿ?

-ಪಂಚಾಕ್ಷರಿ ಹಿರೇಮಠ

ಈ ಐದು ಜನ ನಟರಲ್ಲದೇ ಎಚ್. ಎಲ್. ಎನ್. ಸಿಂಹರು 'ಅಬ್ಬಾ ಆ ಹುಡುಗಿ' ಚಿತ್ರದ ಮೂಲಕ ಬೆಳಕಿಗೆ ತಂದ ರಾಜಾಶಂಕರ, ತಂದೆ ಶ್ರೀ ಆರ್. ನಾಗೇಂದ್ರ ರಾಯರು ತಯಾರಿಸಿದ "ವಿಜಯನಗರದ ವೀರ ಪುತ್ರ". ಚಿತ್ರದೊಂದಿಗೆ ನಟನಾದ ಸುದರ್ಶನ್, ಹಾಗೂ ಬಿ. ಎಂ. ವೆಂಕಟೇಶ್ ಹೀಗೆ ಒಟ್ಟು ಎಂಟು ಜನ ಉತ್ಸಾಹೀ ನಾಯಕ ನಟರು ಬೆಳಕಿಗೆ ಬಂದಿದ್ದಾರೆ.

ಇವರ ಜೊತೆಗೇ ರಾಜಕುಮಾರ ಅವರ ಸಮಾನಸ್ಕಂದರಾದ ಇಬ್ಬರು ನಟರುಂಟು. ಒಬ್ಬರು ಉದಯಕುಮಾರ'ಭಾಗ್ಯೋದಯ' 'ರತ್ನಗಿರಿ ರಹಸ್ಯ' ಚಿತ್ರಗಳೊಂದಿಗೆ ಚಿತ್ರರಂಗ ಸೇರಿದ ಕೆಚ್ಚೆದೆಯ ನಟ. ಇನ್ನೊಬ್ಬರು ಕಲ್ಯಾಣಕುಮಾರ. ರಾಜಕುಮಾರ ಅವರ 'ಬೇಡರ ಕಣ್ಣಪ್ಪ' ಚಿತ್ರವು ತೆರೆ ಕಂಡ ಮಾರನೇ ವರ್ಷವೇ ತಯಾರಾದ 'ನಟಶೇಖರ'(೧೯೫೪) ಚಿತ್ರದೊಂದಿಗೆ ಅವರು ಬೆಳಕಿಗೆ ಬಂದರು. ಇವರ ಜೊತೆಗೇ 'ಸಂಸ್ಕಾರ' ಹಾಗೂ ವಂಶವೃಕ್ಷಗಳ ಗಿರೀಶ್ ಕಾರ್ನಾಡ್ ಅವರನ್ನೂ ಸೇರಿಸಬಹುದಾದರೆ ನಾಯಕ ನಟರಾಗುವ ಒಟ್ಟು ಒಂದು ಡಜನ್ ನಾಯಕ ನಟರು ನಮ್ಮಲ್ಲಿದ್ದಾರೆ.

ಆದರೆ ಇವರಾರೂ ರಾಜಕುಮಾರ ಅವರ ಮಟ್ಟವನ್ನು ಮುಟ್ಟಲಿಲ್ಲವೇಕೆ?

ಮೊದಲನೆಯದಾಗಿ ಉದಯಕುಮಾರ ಹಾಗೂ ಕಲ್ಯಾಣ ಕುಮಾರ. ಇವರಿಬ್ಬರೂ ಹಿಂದೊಮ್ಮೆ ಜನಪ್ರಿಯತೆಯ ತುತ್ತತುದಿಯಲ್ಲಿದ್ದವರು. ಕಳಪೆ ಚಿತ್ರಗಳಲ್ಲಿ ಅಭಿನಯಿಸಿ ಕಲ್ಯಾಣಕುಮಾರ ತನ ಜನಪ್ರಿಯತೆಯನ್ನು ಕಳೆದುಕೊಂಡ. ಇದರ ಫಲವಾಗಿ ಅರ್ಧ ಸಿದವಾದ 'ಲಕ್ಷ್ಮೀ ಸರಸ್ವತಿ' ಚಿತ್ರದಲ್ಲಿ ಕಲ್ಯಾಣ ಕುಮಾರ ಬದಲು ಬೇರೆ ನಟನನ್ನು ಸೇರಿಸಿಕೊಂಡರು. ಪುನಃ ಚಿತ್ರೀಕರಣ ನಡೆಸಿ ಆ ಚಿತ್ರವನ್ನು ಬಿಡುಗಡೆ ಮಾಡಲಾಯಿತು. ಮುತ್ತೈದೆ ಭಾಗ್ಯ, ಸದಾರಮೆ, ಬೆಟ್ಟದ ಕಳ್ಳ, ಪ್ರೇಮದ ಪುತ್ರಿ, ಹಾಗೂ ಬೆಳ್ಳಿ ಮೋಡಗಳಂಥ ಸ್ಮರಣೀಯ ಚಿತ್ರಗಳ ಈ ನಟ ಇಷ್ಟು ಬೇಗ ಚಿತ್ರರಂಗದಿಂದ ದೂರ ಸರಿಯುವಂತಾದುದೊಂದು ವಿಪರ್ಯಾಸ.

ಉದಯಕುಮಾರ ಅಭಿನಯದ ಮಟ್ಟಿಗೆ ಈಗಲೂ ತನ ಸ್ಥಾನವನ್ನು ಭದ್ರವಾಗಿ ಉಳಿಸಿಕೊಂಡಿದ್ದಾನೆ. ಆದರೆ ನಾಯಕ ನಟನಾಗಲು ಅಗತ್ಯವಿರುವದಕ್ಕಿಂತ ಹೆಚ್ಚು ದಪ್ಪವಾಗಿ ಮೈ ಬೆಳೆದಿರುವದರಿಂದ ಆತ ಸಿನಿ ಮಾತಿನಲ್ಲಿ 'ಹೀರೋ' ಎನಿಸುವ ಸಾಧ್ಯತೆ ಕಂಡು ಬರುತ್ತಿಲ್ಲ.

ರಾಜೇಶ್, ಶ್ರೀನಾಥ್, ಗಂಗಾಧರ್, ರಾಜಾಶಂಕರ್ ರಂಗಾ, ರಮೇಶ್ ಇವರೆಲ್ಲ ಚಿತ್ರಗಳಲ್ಲಿ ನಾಯಕಪಾತ್ರವೊಂದನ್ನೇ ನಿರ್ವಹಿಸಿ, ತಾವೊಬ್ಬ ನಾಯಕ ನಟ ಎಂಬುದನ್ನು ಸಾಬೀತು ಮಾಡುವ ಗೋಜಿಗೆ ಹೋಗದೆ, ಹಣದಾಸೆಗೊ ಇಲ್ಲವೇ ಬೇರಾವುದೊ ಒತ್ತಡದ ಕಾರಣದಿಂದಲೊ, ಸಹಾಯಕ ಪಾತ್ರಗಳನ್ನು ಕೂಡ ನಿರ್ವಹಿಸಿದುದೇ ಅವರ ಜನಪ್ರಿಯತೆ ಬೆಳೆಯದಿರಲು ಕಾರಣ.

ಎರಡನೆಯದಾಗಿ ಅಭಿನಯ ಎಂಬುದೊಂದು ಸಾಧನೆ ಎಂದು ರಾಜಕುಮಾರ ಅವರಂತೆ ತಿಳಿದವರು ಇವರಲ್ಲಿ ಒಂದಿಬ್ಬರು ಮಾತ್ರ. ತಮ್ಮ ಒಂದೆರಡು ಚಿತ್ರಗಳು ಯಶಸ್ವಿಯಾದ ತಕ್ಷಣ ತಾವೊಬ್ಬ ಜನಪ್ರಿಯ ನಟನಾದನೆಂಬ ಭ್ರಮೆಯಲ್ಲಿದ್ದ ಕಲಾವಿದರೇ ಇವರಲ್ಲಿ ಜಾಸ್ತಿ. ಶರಪಂಜರ, ಗೆಜ್ಜೆಪೂಜೆಗಳ ಗಂಗಾಧರ್,

ಯಾವ ಜಸ್ಮದ ಮೆ.ತ್ರಿ ಚಿತ್ರದಲ್ಲಿ ಕಲ್ಪನಾ ಎದುರು ತೀರ ಸಪ್ಪೆಯಾಗಿ ಕಾಣಲು ಇದೇ ಪ್ರಧಾನ ಕಾರಣ. ರಂಗಾ, ರಮೇಶ ಒಳ್ಳೆಯ ನಟರು. ಆದರೆ ನಾಯಕ ರಾಗಿ ಅಭಿನಯಿಸಿದರೂ ಅವರಿಗೆ ಸಹಾಯಕ ನಟರೆಂದೇ ಹೆಸರು ಬಿದ್ದಿದೆ. ಸುದರ್ಶನ್, ರಾಜಾಶಂಕರ್ ಅಭಿನಯ ದಲ್ಲಿ ಯಾವ ಪ್ರಗತಿಯನೂ ತೋರಿಸದೇ ಹಿಂದುಳಿದರು.

ಕನ್ನಡದಲ್ಲಿ ರಾಜಕೀಯವೇ ಜಾಸ್ತಿಯಾಗಿ, ತಮಗೆ ಒಳ್ಳೆಯ ಅವಕಾಶಗಳು ಸಿಗುತ್ತಿಲ್ಲವೆಂಬುದು ಅನೇಕ ಕಲಾವಿದರ ತಕರಾರು. ಇದು ಹೊಸ ನಾಯಕ ನಟರು ಮುಂದೆ ಬಾರದಿರಲು ಒಂದು ಕಾರಣವೆಂಬ ಮಾತು ನಿಜವಿರಲೂ ಬಹುದು. ಆದರೆ ಅದೇ ಪ್ರಧಾನ ಕಾರಣ ಎಂಬುದನ್ನು ಒಪ್ಪಲಾಗದು.

ಇನ್ನು ಚಿತ್ರರಂಗದ ರಾಜಕೀಯದ ವಿಚಾರ. ಇತ್ತೀಚಿನ ಆರೇಳು ತಿಂಗಳಲ್ಲಿ ಈ ರಾಜಕೀಯದ ಬಗ್ಗೆ ಬಹಳ ಬಿರುಸಾಗಿ ಚರ್ಚೆ ನಡೆಯುತ್ತಿದೆ. ನಟ–ನಟಿಯ ರಷ್ಟೇ ಅಲ್ಲ–ಪ್ರತಿಭಾವಂತ ನಿರ್ದೇಶಕರು, ಚಿತ್ರ ಸಾಹಿತಿಗಳು ಛಾಯಾಗ್ರಾಹಕರು ನಾನಾ ತಂತ್ರಜ್ಞರು ಕೂಡ ಈ ರಾಜಕೀಯದಿಂದಾಗಿ ಮೂಲೆಗುಂಪಾಗುತ್ತಿದ್ದಾರೆಂದು ಹೇಳಲಾಗುತ್ತಿದೆ. ("ನಾಗರ ಹಾವು" ಮೂಲಕ ಬೆಳಕಿಗೆ ಬರಲಿರುವ ನಟ ವಿಷ್ಣುವರ್ಧನನ ಸ್ಥಿತಿ ಏನಾಗುವುದೋ?)

ಇತ್ತೀಚಿನ ಮೂರು ಒಳ್ಳೆಯ ಚಿತ್ರಗಳು ಅಯಶಸ್ವಿಯಾಗಲು ಈ ರಾಜಕೀಯವೇ ಕಾರಣವೆಂದು ಹೇಳಲಾಗುತ್ತದೆ. ಬೆಂಗಳೂರಿನಲ್ಲಿ ವ್ಯವಸ್ಥಿತ ರೀತಿಯಲ್ಲಿ ಕೆಲಸ ಮಾಡುವ ತಂಡವೊಂದಿದು ಅದು ರಾಜಕುಮಾರ ಅಭಿನಯಿಸಿರದ ಯಾವುದಾದರೊಂದು ಚಿತ್ರವು ತೆರೆ ಕಾಣುತ್ತಲೇ ಮೊದಲ ದಿನದ ಮೊದಲನೇ ಆಟದಿಂದಲೇ ಗಲಾಟೆ ಮಾಡಲು ಶುರು ಮಾಡುವದೆಂದೂ, ಹೊರಗೆ ಕ್ಯೂನಲ್ಲಿ ನಿಂತ ಜನರಿಗೆ ಚಿತ್ರವು ಚೆನ್ನಾಗಿಲ್ಲ ಎಂದು ಹೇಳುವುದೆಂದೂ ವರದಿಯಾಗಿದೆ. ಈ ರೀತಿ ಒಂದು ವಾರ ಅಪಪ್ರಚಾರ ನಡೆಸಿದರೆ, ಆ ಚಿತ್ರವು ನಡೆಯುವುದೇ ಕಷ್ಟವೆಂದೂ ಬೆಂಗಳೂರಿನಲ್ಲಿ ಚಿತ್ರವು ವಿಫಲವಾದರೆ ಬೇರೆ ಕೇಂದ್ರಗಳಲ್ಲಿಯೂ ಅದು ನಡೆಯುವುದು ಕಷ್ಟವೆಂದೂ ಹೇಳಲಾಗುತ್ತಿದೆ.

ಈ ಮಾತು ನಿಜವಿದ್ದರೆ ಅದರಿಂದಾಗುವ ನಷ್ಟ ಬಹುಮುಖ ಸ್ವರೂಪದ್ದು. (೧) ಚಿತ್ರವು ವಿಫಲವಾದರೆ ಆ ನಟ–ನಟಿಯರು, ನಿರ್ದೇಶಕರು, ತಂತ್ರಜ್ಞರಿಗೆ ಬೇರೆ ಅವಕಾಶ ಸಿಗುವ ಸಂಭವ ಕಡಿಮೆ. ೨) ಹೊಸ ಪ್ರವೃತ್ತಿಯ ಚಿತ್ರಗಳನ್ನು ತಯಾರಿಸುವ ನಿರ್ಮಾಪಕರು ಮುಂದೆಂದೂ ಅಂಥ ಚಿತ್ರ ತಯಾರಿಸುವ ಗೋಜಿಗೆ ಹೋಗುವುದಿಲ್ಲ ೩) ಮೂರನೆಯದಾಗಿ ಯಾರಾದರೂ ಅಂಥ ಸಾಹಸಕ್ಕೆ ಕೈ ಹಾಕಿದರೂ ಹಾಕಿದ ಬಂಡವಲು ವಾಪಸ್ಸು ಬರದಿರುವ ಭೀತಿಯಿರುವುದರಿಂದ ಯಾವ ಹಂಚಿಕೆದಾರನೂ ಅಂಥ ಚಿತ್ರಗಳಿಗೆ ಬೆಂಬಲ ನೀಡಲು ಮುಂದೆ ಬರುವುದಿಲ್ಲ. (ಹಂಚಿಕೆದಾರರೆಲ್ಲ ಕೇಂದ್ರೀಕೃತವಾಗಿರುವ ಬೆಂಗಳೂರಿನ ಗಾಂಧೀನಗರದಲ್ಲಿ ರಾಜಕುಮಾರ ನಟಿಸಿದ ಇಲ್ಲವೆ ಪುಟ್ಟಣ್ಣ ದಿಗ್ದರ್ಶಿಸಿದ ಚಿತ್ರಗಳಿಗೆ ಮಾತ್ರ ಈಗ ಬೇಡಿಕೆಯುಂಟು.)

"ಈ ವಿಷಚಕ್ರದಿಂದಾಗಿ ಕನ್ನಡ ಚಿತ್ರರಂಗವು ಕೆಲವೇ ಜನ ಪಟ್ಟಭದ್ರ ವ್ಯಕ್ತಿಗಳ ಕೈಲಿ ಸಿಕ್ಕು ಒದ್ದಾಡುತ್ತಿದೆ" ಯೆಂದು ಹಿರಿಯ ನಿರ್ದೇಶಕರೊಬ್ಬರು ನನಗೆ ತಿಳಿಸಿದರು. ಕನ್ನಡದ ಮೂವರು ನಟಿಯರದು ಕೂಡ ಇದೇ ಅಭಿಪ್ರಾಯ.

"ಪರಿಸ್ಥಿತಿ ಹೀಗಿರುವಾಗ ನಮಗೆ ಮುಂದೆ ಬರಲು ಅವಕಾಶವೆಲ್ಲಿದೆ?" ಎಂಬುದು ಹೊಸ ನಟರ ಸವಾಲು. ತಮ್ಮನ್ನೇ ನಂಬಿದ ಹೆಂಡತಿ ಮಕ್ಕಳು ಇರುವುದರಿಂದ ನಾಯಕ ಪಾತ್ರಕ್ಕಾಗಿಯೇ ಕಾದು ಕುಳಿತುಕೊಳ್ಳಲಾಗದೇ ಕೈಗೆ ಸಿಕ್ಕ ಪಾತ್ರಗಳನ್ನು ಸ್ವೀಕರಿಸಿದ್ದೇ ತಪ್ಪಾಯಿತೆಂದು" ಇಬ್ಬರು ನಟರು ನನಗೆ ತಿಳಿಸಿದರು.

ಇದನ್ನೆಲ್ಲ ಸರಿಪಡಿಸಬೇಕಾದರೆ ಧೈರ್ಯದಿಂದ ಹೊಸ ಬಗೆಯ ಚಿತ್ರ ತಯಾರಿಸುವ ನಿರ್ಮಾಪಕರು, ಅವುಗಳಿಗೆ ಬೆಂಬಲ ನೀಡುವ ಹಂಚಿಕೆದಾರರು ಮುಂದೆ ಬರಬೇಕು ಎಂಬುದು ಅವರ ಸಲಹೆ. ಆದರೆ ಇದು ಲಕ್ಷಾಂತರ ರೂ.ಗಳ ಬಂಡವಾಲಿನ ಪ್ರಶ್ನೆಯಾಗಿರುವುದರಿಂದ "ಬೆಕ್ಕಿಗೆ ಗಂಟೆ ಕಟ್ಟುವವರಾರು?"

"ಗಿರೀಶ್ ಕಾರ್ನಾಡ್‌ರವರಂಥ ಪ್ರತಿಭಾವಂತರು ಕೆಲವು ಕಾಲವಾದರೂ ಕನ್ನಡ ಚಿತ್ರರಂಗದಲ್ಲಿ ಮುಂದುವರೆದರೆ ವಾತಾವರಣ ಬದಲಾಗಬಹುದು."ಎಂಬುದು ಪ್ರಶಸ್ತಿ ವಿಜೇತ ನಟಿಯೊಬ್ಬರ ಹೇಳಿಕೆ. ಆದರೆ ನಟನೆಯನ್ನು ಒಂದು ವೃತ್ತಿಯಾಗಿ ಕೈಕೊಳ್ಳಲು ಅಥವಾ ಕನ್ನಡದ ಸೀಮಿತ ಕ್ಷೇತ್ರದಲ್ಲೇ ಕಾಯಂ ಆಗಿ ಇರಲು ಗಿರೀಶ್‌ರಂಥವರ ಮನಸ್ಸು ಒಪ್ಪದು. ಹೀಗಾಗಿ ಕನ್ನಡದಲ್ಲಿ ನೂರಲ್ಲ, ಒಬ್ಬನಾದರೂ ಹೊಸ ರಾಜಕುಮಾರ ಹುಟ್ಟುವುದು ಸದ್ಯಕ್ಕೆ ಅಸಂಭವನೀಯವೆಂದೇ ಅನಿಸುತ್ತದೆ ●

'ಕರ್ಮವೀರ'ಕ್ಕಾಗಿ ವಿಶೇಷ ಸಂದರ್ಶನ

# "ನಾನು ಮತ್ತು ಚಿತ್ರರಂಗ"

—ಜಯಾ ಬಾಧುರಿ

(ನಮ್ಮ ಪ್ರತಿನಿಧಿಯಿಂದ)



ಗಂಭೀರವದನೆ ಜಯಾಬಾಧುರಿ

ನೀವು ಈ ವಿಷಯ ಕುರಿತು ನನ್ನ ಅಭಿಪ್ರಾಯ ಕೇಳಿದಾಗ ನನಗೆ ನನ್ನ ತವರು ಮನೆಯ ನೆನಪು ಬರುತ್ತದೆ. ಚಿತ್ರರಂಗದಲ್ಲಿ ನಾನೆಷ್ಟು ಹೊಂದಿಕೊಂಡಿದ್ದೇನೆಂದರೆ ಅದರಲ್ಲಿ ಸಮರಸಳಾಗಿದ್ದೇನೆ. ಆದರೆ ಈ ಹೊಂದಾಣಿಕೆ ಒಮ್ಮಿಂದೊಮ್ಮೆಲೇ ಬರಲಿಲ್ಲ. ಹಾಗಾಗಲು ಅನೇಕ ಹಿಂದಿ ಚಿತ್ರಗಳ ಕತೆಯಂತೂ ಅಲ್ಲವಲ್ಲ ನನ್ನ ಜೀವನ? ಇಂದು ಚಿತ್ರರಂಗ ನನಗೆ ನನ್ನ ತಾಯಿಯ ಮನೆಯಂತೆಯೇ ಆಗಿಬಿಟ್ಟಿದೆ.

ಚಿತ್ರರಂಗದ ಮತ್ತು ನನ್ನ ಸಂಬಂಧ ನಾನು ಶಾಲೆಯಲ್ಲಿರುವಾಗಲೇ ಆರಂಭವಾಯಿತು. ಸತ್ಯಜಿತ್ ರೇ ಮತ್ತು ನನ್ನ ತಂದೆ ಹಳೆಯ ಮಿತ್ರರು. ಶಾಲೆಯ ನಾಟಕಗಳಲ್ಲಿ ನಾನು ಹಾಡುತ್ತಿದ್ದೆ, ನಟಿಸುತ್ತಿದ್ದೆ, ಅನೇಕ ರೇಡಿಯೋ ನಾಟಕಗಳಲ್ಲೂ ನಾನು ಭಾಗವಹಿಸಿದ್ದೆ. ಆದರೆ ನಾನೂ ಚಿತ್ರತಾರೆಯಾಗಬಹುದು ಎಂದು ನನಗೆಂದೂ ಅನಿಸಿರಲಿಲ್ಲ. ಈ ಆಸೆಯನ್ನು ನನ್ನಲ್ಲಿ ಹುಟ್ಟಿಸಿದವರೇ ಸತ್ಯಜಿತ್ ದಾದಾ ಅವರು. ಅವರ 'ಮಹಾನಗರ್'ನಲ್ಲಿ ಬಾಲಿಕೆಯ ಪಾತ್ರವೊಂದನ್ನು ನನಗೆ ಅವರು ಕೊಟ್ಟರು. ದಾದಾ ಹಾಗೂ ಅವರ ಚಿತ್ರದೊಂದಿಗೆ ನಾನೂ ಜನಪ್ರಿಯಳಾಗಿ ಬಿಟ್ಟೆ. ಸಿನೆಮಾ ತಾರೆಯಾಗಬೇಕು ಎಂದು ನನ್ನ ಮನಸ್ಸಿನಾಳದಲ್ಲಿ ಎಲ್ಲೋ ಹೂತುಕೂತ ಆಸೆ ಚಿಗುರೊಡೆದುದು ಆಗಲೇ.

ನನ್ನ ಮನಸ್ಸನ್ನು ತಂದೆಯವರು ಚೆನ್ನಾಗಿ ಅರಿತಿದ್ದರು. ಎಂದೇ ಶಾಲೆ ಮುಗಿದೊಡನೆ ಪೂನಾದ ಫಿಲ್ಮ್ ಸಂಸ್ಥೆಗೆ ಸೇರುತ್ತೇನೆ ಎಂದಾಗ ಅವರೂ ನನ್ನನ್ನು ಹುರಿದುಂಬಿಸಿದರು. ಅಲ್ಲಿ ಕಲಿಯುತ್ತಿರುವಾಗಲೇ ಹೆಸರಾಂತ ದಿಗ್ದರ್ಶಕ ಹೃಷಿಕೇಶ ಮುಖರ್ಜಿಯವರು ನನ್ನನ್ನು ತಮ್ಮ "ಗುಡ್ಡಿ"ಯಾಗಿ ಆರಿಸಿದುದು ನನ್ನ ಜೀವನದಲ್ಲಿ ಇನ್ನೊಂದು ತಿರುವು. ಆಗ ನನಗೆ ಖಚಿತವಾಗಿತ್ತು, ಚಿತ್ರರಂಗಕ್ಕೆ ಈಗ ನಾನು ಮುಖಾಮುಖಿಯಾಗಿ ನಿಂತಿದ್ದೇನೆ ಎಂದು.

ನನ್ನ ದೇಹದ ಗಾತ್ರ, ಬಾಲಿಶ ಮುಖಮುದ್ರೆ ಹೇಳಿ ಮಾಡಿಸಿದಂತಿತ್ತು 'ಗುಡ್ಡಿ'ಯ ಪಾತ್ರಕ್ಕೆ. ಈ ಚಿತ್ರದಲ್ಲಿಯ ಅಭಿನಯದಿಂದಾಗಿ ನಾನು ನಿಜವಾಗಿಯೂ ಇರುವುದಕ್ಕಿಂತ ಒಂದೆರಡು ವರ್ಷ ಇನ್ನೂ ಚಿಕ್ಕವಳಾಗಿ ಬಿಟ್ಟೆ, ಮಾನಸಿಕವಾಗಿ. ಚಿತ್ರವೂ ಯಶಸ್ವಿಯಾಯಿತು. ಅದರೊಂದಿಗೆ ಚಿತ್ರರಂಗದ ಮಹಾಸಭಾಂಗಣದಲ್ಲಿ



← ಯೋಚನಾಪರವಶೆ ಜಯಾ ಬಾಧುರಿ



ಹಬ್ಬದ ಆನಂದದಿಂದ ಪ್ರಕಾಶಮಾನವಾದ
ವಾತಾವರಣದಲ್ಲಿ ಗೆಲುವಿನ ನಲಿವಿನ ಹೆಜ್ಜೆಗಳು

## ದೀಪಾವಳಿಯ ಅಭಿನಂದನೆಗಳು

ಪ್ಯೂಮಾ — ಮಕ್ಕಳಿಗಾಗಿ
ರೂ. 23·50*



ಸರಿತಾ — ಸ್ತ್ರೀಯರಿಗಾಗಿ
ರೂ. 12·95*



ಫೈನಲಿಸ್ಟ್ — ಪುರುಷರಿಗಾಗಿ
ರೂ. 17·95*



ಒಮೇಗಾ — ಪುರುಷರಿಗಾಗಿ
ರೂ. [illegible]*



*ತೆರಿಗೆಗಳು ಪ್ರತ್ಯೇಕ

# ಕರೋನಾ ಪಾದರಕ್ಷೆಗಳು

ಕರೋನಾ ಸಾಹು ಕಂ. ಲಿ., 121, ದಾದಾಭಾಯಿ ನವರೋಜಿ ರೋಡ್, ಬೊಂಬಾಯಿ-1

AIYARS-CS.262 KN.

## ಜಯಾ ಬಾಧುರಿ ನಟಿಸಿದ ಚಿತ್ರಗಳು

(ಆವರಣದಲ್ಲಿ ಆಕೆಯ ನಾಯಕ ನಟ)

ಮಹಾನಗರ್, ಗುಡ್ಡಿ (ಧರ್ಮೇಂದ್ರ), ಉಪಹಾರ್, ಅನ್ನದಾತಾ, ಜೈಜವಾನ್–ಜೈಮಕಾನ್ (ಅನಿಲ್‌ಧವನ್), ಏಕ್ ನಝರ್, ಬನ್ಸಿ ಬಿರ್ಜು, ರಾಗರಾಗಿಣಿ (ಅಮಿತಾಬ್ ಬಚ್ಚನ್), ಜವಾನಿ–ದಿವಾನಿ (ರಣಧೀರ್ ಕಪೂರ್),ಬಾವರ್ಚಿ (ರಾಜೇಶ್ ಖನ್ನಾ), ಶೋರ್ (ಮನೋಜ ಕುಮಾರ), ಫಾಗುನ್ (ವಿಜಯ ಅರೋರಾ), ಕೋಶಿಷ್ (ಸಂಜೀವ ಕುಮಾರ್)

ಈಸುವ ಮೀನವಾದೆ. ಹೀಗೆ ಚಿತ್ರಪ್ರಪಂಚಕ್ಕೆ ನಾನು ಕ್ರಮೇಣ ಹೊಂದಿಕೊಂಡು ಬಿಟ್ಟೆ.

## ಅದೃಷ್ಟವಂತೆ

ಚಿತ್ರರಂಗದಲ್ಲಿ ನಾನು ಇಷ್ಟು ಬೇಗ ಹೇಗೆ ಯಶಸ್ವಿಯಾದೆ ಎಂದು ನನ್ನನ್ನು ಕೇಳುವವರು ನೂರಾರು ಮಂದಿ. ನನ್ನಲ್ಲಿರುವ ಪ್ರತಿಭೆ, ನಾನು ಕಷ್ಟಪಟ್ಟು ಮಾಡುವ ಸಾಧನೆ ಎಲ್ಲವೂ ಸರಿಯೆ. ಜೊತೆಗೆ ನನ್ನ ಅದೃಷ್ಟವೂ ಚೆನ್ನಾಗಿದೆ. ನನಗೆ ದೊರೆತಿರುವ ಪಾತ್ರಗಳೆಲ್ಲ ವೈವಿಧ್ಯಪೂರ್ಣವಾಗಿವೆ, ಅಪೂರ್ವವಾಗಿವೆ. ಕೆಲವೊಮ್ಮೆ ಬೇರೆ ಹಿರಿಯ ತಾರೆಯರು ಕೈ ಬಿಟ್ಟ ಪಾತ್ರವನ್ನೂ ನಾನು ಮಾಡಲು ಒಪ್ಪಿದ್ದೇನೆ. ಆದರೆ ನನ್ನ ಅದೃಷ್ಟದಿಂದಾಗಿಯೇ ಇರಬೇಕು–ಒಳ್ಳೆಯ ಪಾತ್ರಗಳೇ ನನ್ನನ್ನು ಹುಡುಕಿಕೊಂಡು ಬಂದಿವೆ.

ರವೀಂದ್ರನಾಥ ಟಾಗೋರರ ಕಾದಂಬರಿ 'ಸಮಾಪ್ತಿ' ಆಧರಿತ 'ಉಪಹಾರ'ದಲ್ಲಿಯೂ ಅಷ್ಟೆ. ಒತ್ತಾಯದ ಬಾಲ ವಿವಾಹವಾದ ಮುಗ್ಧೆಯ ಪಾತ್ರ ನನಗೆ ಸಿಕ್ಕಿತು. ಈ ಪಾತ್ರ ಸಿಕ್ಕಿದಾಗ 'ನಾನೆಂಥ ಭಾಗ್ಯಶಾಲಿ!' ಎಂದು ನನ್ನನ್ನು ನಾನೇ ಅಭಿನಂದಿಸಿಕೊಂಡರೂ, ಟಾಗೋರರು ಕೊಟ್ಟ ಚಿತ್ರಣಕ್ಕೆ ನಾನು ಜೀವಕಳೆ ಕೊಡಬಲ್ಲೆನೆ ಎಂದು ಅಳುಕಿದೆ. ಅದೃಷ್ಟದಿಂದ ಎಲ್ಲವೂ ಸರಿಯಾಗಿ ಮುಂದುವರಿಯಿತು. ಈ ಚಿತ್ರದಲ್ಲಿಯ ನನ್ನ ಅಭಿನಯಕ್ಕೆ 'ಫಿಲ್ಮ್ ಫೇರ್' ಪ್ರಶಸ್ತಿಯೂ ದೊರೆಯಿತು. "ಬನ್ಸಿ ಬಿರ್ಜು"ನಲ್ಲಿ ಹಾದಿ ತಪ್ಪಿದ ಅನಾಥೆಯ ಚಿತ್ರಣ. ಎಂಥ ಭಾವನಾತ್ಮಕ ಪಾತ್ರವಿದು! 'ಜೈ ಜವಾನ್–ಜೈ ಮಕಾನ್'ನಲ್ಲೂ ಹಳ್ಳಿಯಿಂದ ಬಂದು ಪಟ್ಟಣದಲ್ಲಿ ವಾಸಿಸಿದ ಕನ್ಯೆಯ ಪಾತ್ರ. 'ಬಾವರ್ಚಿ'ಯಲ್ಲಿ ರಾಜೇಶ್ ಖನ್ನರೊಂದಿಗೆ, ಈಗ 'ರಾಗ ರಾಗಿಣಿ'ಯಲ್ಲಿ ಮತ್ತೆ ಅಮಿತಾಭಸಾಹೇಬರೊಂದಿಗೆ, 'ಶೋರ್'ನಲ್ಲಿ ಮನೋಜಕುಮಾರರೊಂದಿಗೆ...ಫಿಲ್ಮ್ ಇನ್ಸ್‌ಟಿಟ್ಯೂಟ್‌ನಿಂದ ಹೊರ ಬಂದ ಯಾವ ತಾರೆಗೆ ಇಷ್ಟೊಂದು ಅದ್ಭುತ ಅವಕಾಶಗಳು ದೊರೆತಿವೆ ನೀವೇ ಹೇಳಿ? "ಕಿಕ್ ಆಫ್ ಲಕ್" ಎನ್ನುತ್ತಾರಲ್ಲ, ಅದೇ ಇರಬೇಕು ಇದು.

ಇನ್ನು ಚಿತ್ರರಂಗದಲ್ಲಿ ನಾನು ಕೆಲಸ ಮಾಡಿದ ದಿಗ್ದರ್ಶಕರ ಕುರಿತಾಗಿಯೂ ಒಂದು ಮಾತು ಹೇಳಲೇ ಬೇಕು. ಸತ್ಯಜಿತ್‌ದಾದಾ ಅವರ ಚಿತ್ರದಲ್ಲಿ, ಅವರ ವೈಯಕ್ತಿಕ ಕೃಪಾಛತ್ರದಲ್ಲಿ ನಟಿಸುವುದೇ ಒಂದು ಪುಣ್ಯದ ಕೆಲಸ. ಮುಂದೆ ಅದೃಷ್ಟ ಹೃಷಿಕೇಶದಾದಾರವರ ರೂಪದಲ್ಲಿ ನನ್ನನ್ನು ಸಂಧಿಸಿತು. ಅನಂತರ ಬಸು ಚಟರ್ಜಿ, ಮನೋಜ್ ಕುಮಾರರಂಥ ಪ್ರತಿಭಾವಂತ ನಟ–ನಿರ್ದೇಶಕ, ಹಾಗೂ ರಾಜೇಂದ್ರ ಸಿಂಗ್ ಬೇದಿಯವರಂಥ ಹೆಸರಾಂತ ಲೇಖಕ–ದಿಗ್ದರ್ಶಕರ ಕೈಕೆಳಗೆ ನಟಿಸುವ ಯೋಗ ಲಭಿಸಿದೆ.

ಅನೇಕ ಹೊಸ ಮುಖದ ಹುಡುಗಿಯರಂತೆ ನಾನು ಅರೆನಗ್ನಳಾಗದೆ, ಚೆಲ್ಲಾಟವಾಡದೆ ಗೌರವದಿಂದಲೇ ಮೇಲೆ ಬಂದುದು ನನ್ನ ಪುಣ್ಯವಲ್ಲದೆ ಇನ್ನೇನು? ಇದಕ್ಕೆ ಅವಕಾಶ ಮಾಡಿ ಕೊಟ್ಟು, ಸಹಕರಿಸಿದ ಹಿರಿಯ ದಿಗ್ದರ್ಶಕರಿಗೆ, ಸಹನಟ–ನಟಿಯರಿಗೆ, ನನ್ನನ್ನು ಸದಾ ಹುರಿದುಂಬಿಸುತ್ತಿರುವ ಪ್ರೇಕ್ಷಕರಿಗೆ ನನ್ನ ವಿನಂತಿಯಿಷ್ಟೇ–ಚಿತ್ರರಂಗ ಒದಗಿಸಿ ಕೊಟ್ಟ ಈ ಸುವರ್ಣಾವಕಾಶಗಳ ಋಣವನ್ನು ಸ್ವಲ್ಪವಾದರೂ ತೀರಿಸುವ ಶಕ್ತಿಯನ್ನು ನನಗೆ ದೇವರು ಕೊಡಲಿ. ●



ಜಯಾ ಬಾಧುರಿ 'ಕೋಶಿಷ್' ಚಿತ್ರದಲ್ಲಿ →

# ಚಿತ್ರಪ್ರಪಂಚದ "ಎಲೆಯ ಮರೆಯ ಕಾಯಿ:ಗಳು"

( ಮುಂಬಯಿ ಪ್ರತಿನಿಧಿಯಿಂದ )

ಒಂದು ಚಿತ್ರ ತೆರೆ ಕಂಡಾಗ ಪ್ರೇಕ್ಷಕರಿಗೆ ಪರಿಚಯವಾಗುವುದು ಅದರ ಮುಖ್ಯಭೂಮಿಕೆಯಲ್ಲಿದ್ದ ತಾರೆಯರು, ಸಂಗೀತ ದಿಗ್ದರ್ಶಕ, ಹಿನ್ನೆಲೆ ಹಾಡುಗಾರರು. ಇಲ್ಲಿಗೆ ಸಾಮಾನ್ಯನೊಬ್ಬನ ಆಸಕ್ತಿ ಮುಗಿಯುತ್ತದೆ. ಚಿತ್ರದ ನಿರ್ಮಾಪಕನಾರು, ಕಲಾದಿಗ್ದರ್ಶಕನಾರು, ಕವಿಯಾರು, ಸಂಭಾಷಣಾಕಾರನಾರು, ಛಾಯಾಗ್ರಾಹಕನಾರು, ಎಂಬ ಬಗ್ಗೆ ಯಾರೂ ಅಷ್ಟೊಂದು ಯೋಚಿಸುವ ಗೊಡವೆಗೆ ಹೋಗುವುದಿಲ್ಲ. ಹಾಗಿರುವಾಗ ಲಕ್ಷಾಂತರ ರೂಪಾಯಿ ವೆಚ್ಚವಾಗಿ ತಯಾರಾಗುವ ಚಿತ್ರದಲ್ಲಿ ಪ್ರತ್ಯಕ್ಷ–ಅಪ್ರತ್ಯಕ್ಷವಾಗಿ ಭಾಗವಹಿಸಿದ ತಂತ್ರಜ್ಞರು ಕಲಾವಿದರು, ಕೆಲಸಗಾರರು ನೂರಾರು ಮಂದಿಯಿರುವಾಗ ಯಾರು ಕೇಳಬೇಕು ಅವರನ್ನು? ನಿಜವಾಗಿಯೂ ಚಿತ್ರದ ಯಶಸ್ಸಿಗೆ ರಜತ ಪರದೆಯ ಮೇಲೆ ಕಾಣುವವರಿಗಿಂತ ಅನಾಮಧೇಯರಾಗಿ ತನು–ಮನಗಳನ್ನು ಧಾರೆಯೆರೆದವರೇ ಹೆಚು ಕಾರಣರಿರುತ್ತಾರೆ. ಇವರೇ ಚಿತ್ರ ನಿರ್ಮಾಣದ ಅಸಿ ಪಂಜರ–ಅಡಿಗಲ್ಲುಗಳು.

ಚಲಚ್ಚಿತ್ರ ಹೇಗೆ ನಿರ್ಮಿಸಲ್ಪಡುತ್ತದೆ ಎಂಬುದನ್ನು ಸ್ಥೂಲವಾಗಿ ತಿಳಿದರೆ ತೆರೆಯ ಹಿಂದಿನವರ ಕಾರ್ಯಗಳ ವ್ಯಾಪ್ತಿಯ ಅರಿವಾಗುತ್ತದೆ. ಅಂಥ "ಎಲೆಯ ಮರೆಯ ಕಾಯಿ"ಗಳ ಸ್ಥೂಲ ಪರಿಚಯವಿಲ್ಲಿದೆ.

## ನಿರ್ಮಾಪಕ

ಹಣವನ್ನು, ಕಲಾವಿದರನ್ನು, ಸರಕಾರದ "ಅನುಗ್ರಹ"ಗಳನ್ನು ಹೊಂದಿಸಿಕೊಳ್ಳಬಲ್ಲ ಯಾರಾದರೂ ಇಂದು ಚಿತ್ರ ನಿರ್ಮಾಪಕನಾಗಬಲ್ಲ. ಆತನ ಕಿಸೆಯಲ್ಲಿ ನಯಾಪೈಸೆ ಇಲ್ಲದಿದ್ದರೂ ಚಿಂತೆಯಿಲ್ಲ. ಬಾಯಿ ಮಾತಿನ ಚಾಲಾಕಿನಿಂದ, ವ್ಯಾಪಾರೀ ಬುದ್ಧಿವಂತಿಕೆಯಿಂದ ಆತ ಚಿತ್ರ ನಿರ್ಮಾಪಕನಾಗಬಲ್ಲ. ಧಾರಾಳ ಬಡ್ಡಿಯಲ್ಲಿ ಈ ನಿರ್ಮಾಪಕ ಸಾಲ ತೆಗೆದುಕೊಂಡು ಅದರ ಆಧಾರದಿಂದ ಹೆಸರಾಂತ ತಾರೆಯರನ್ನು ಒಲಿಸಿಯೊ, ಹೊಸಬರಿಗೆ ಆಸೆ ತೋರಿಸಿಯೊ ಬಲೆಗೆ ಹಾಕಿಕೊಳ್ಳುತ್ತಾನೆ (ಒಳ್ಳೆಯ ನಿರ್ಮಾಪಕರು ಇಂಥ ಉಪದ್ವ್ಯಾಪಕ್ಕೆ ಹೋಗುವುದಿಲ್ಲವೆನ್ನಿ.)

ನಿರ್ಮಾಪಕ ಇಡೀ ಚಿತ್ರದ ಸೂತ್ರಧಾರಿ. ಆತ ಕಚ್ಚಾ ಫಿಲ್ಮಿಗಾಗಿ ಸರಕಾರೀ ಕಚೇರಿಗೆ ನೂರಾರು ಸಲ ಪ್ರದಕ್ಷಿಣೆ ಹಾಕಬೇಕು. ಸ್ಟುಡಿಯೋ ಬುಕ್ ಮಾಡಬೇಕು. ದಿಗ್ದರ್ಶಕನನ್ನು ನಿರ್ಧರಿಸಬೇಕು. ಅವನೊಂದಿಗೆ ಸಮಾಲೋಚಿಸಿ ಸಂಗೀತ ದಿಗ್ದರ್ಶಕ, ಕವಿ, ಹಾಡುಗಾರರನ್ನು ಸಿದ್ಧಗೊಳಿಸಬೇಕು. ಕತೆ ಆರಿಸಿ, ಸಂಭಾಷಣೆ ಸ್ಕ್ರೀನ್‌ಪ್ಲೇ ಬರೆಸಬೇಕು. ಚಿತ್ರ ಆರಂಭವಾದೊಡನೆ ಪ್ರಚಾರ ಕೆಲಸ ಆರಂಭಿಸಬೇಕು. ತಾರೆಯರಿಂದ ಷೂಟಿಂಗ್ ಡೇಟ್ಸ್ ತೆಗೆದುಕೊಳ್ಳಬೇಕು. ಹೀಗೆ ಆತನ ಕೆಲಸಗಳ ಪಟ್ಟಿ ಹನುಮಂತನ ಬಾಲದಂತೆ ಬೆಳೆಯುತ್ತಲೇ ಇರುತ್ತದೆ. ಆತನ ತಲೆ ಯಾವಾಗಲೂ ಬಿಸಿ.

ಕೆಲವು ರೀಲು ಚಿತ್ರ ತಯಾರಾದೊಡನೆ ಹಂಚಿಕೆದಾರರನು ಕರೆಸಿ ಮಾರಾಟದ ಏರ್ಪಾಟು ಮಾಡಬೇಕು. ಚಿತ್ರದ ಸಂಕಲನದ ಏರ್ಪಾಟು, ರಷ್ ತೋರಿಸುವ ಕೆಲಸ, ಎಲ್ಲದರಲ್ಲಿಯೂ ಅವನ ಕೈವಾಡ. ನಮ್ಮಲ್ಲಿ ೧೦೦ಕ್ಕೆ ೯೮ ಮಂದಿ ನಿರ್ಮಾಪಕರು ಇಂಥವರೆ. ಇವನ ಮತ್ತು ಇವನಿಗೆ ಸಾಲ ಕೊಟ್ಟವನ ಹದ್ದಿನ ಕಣ್ಣು ಲಾಭದ ಮೇಲೆ ಕೀಲಿಸಿರುತ್ತದೆ. ದಿಗ್ದರ್ಶಕನಿಂದ ಮೊದಲ್ಗೊಂಡು ಚಿಲ್ಲರೆ ತಾರೆಯರ ವರೆಗೆ ಎಲ್ಲರೂ ಕೆಲಸ ಮಾಡುವುದು ಹಣ ಗಳಿಸಲಿಕ್ಕಾಗಿ. ಚಿತ್ರ ಕಲಾತ್ಮಕವಾಗಬೇಕು, ಆದರ್ಶವಾಗಬೇಕು, ನೀತಿಬೋಧಕವಾಗಬೇಕು ಎಂಬ ಒಣ ತತ್ವಗಳಿಗೆ ಅಂಟಿಕೊಂಡಿರುವವರು ಚಿತ್ರರಂಗದಲ್ಲಿ ತೀರಾ ವಿರಳ. ಇದು ಚಿತ್ರಪ್ರಪಂಚದ ವಾಸ್ತವ ಚಿತ್ರ.

## ದಿಗ್ದರ್ಶಕ

ಚಿತ್ರದ ಯಶಸ್ಸು ಹೆಚ್ಚಿನ ಮಟ್ಟಿಗೆ ದಿಗ್ದರ್ಶಕ ಹೇಗೆ ಅದನ್ನು ಕ್ರಿಯಾತ್ಮಕವಾಗಿ ರಚಿಸುತ್ತಾನೆ ಎಂಬುದರ ಮೇಲೆ ಅವಲಂಬಿಸಿದೆ. ನಾಟಕದ ದಿಗ್ದರ್ಶಕನಿಗೂ ಚಿತ್ರದ ದಿಗ್ದರ್ಶಕನಿಗೂ ಅಜಗಜಾಂತರ. ಇಲ್ಲಿಯ ದಿಗ್ದರ್ಶಕನಿಗೆ ಹೆಚ್ಚಿನ ಜವಾಬ್ದಾರಿ, ಸ್ವಾತಂತ್ರ್ಯ. ವಾಸ್ತವಿಕವಾಗಿ ದೊಡ್ಡ ತಾರೆಯರಿಗೆ ದಿಗ್ದರ್ಶನ ಮಾಡುವುದು

→




ಮುಂಬಯಿಯ ಸುಸಜ್ಜಿತ ಸ್ಟುಡಿಯೋಗಳಲ್ಲೊಂದಾದ ಆರ್. ಕೆ. ಸ್ಟುಡಿಯೋ

ಭಾರತದ ಪ್ರಪ್ರಥಮ ಸಿನಿಮಾಸ್ಕೋಪ್ ಫೋಟೋಗ್ರಾಫರ ಕನ್ನಡಿಗ ವ್ಹಿ. ಕೆ. ಮೂರ್ತಿ ಮತ್ತು ದಿಗ್ದರ್ಶಕ-ನಿರ್ಮಾಪಕ ಆತ್ಮಾರಾಮ ಹೊರಾಂಗಣ ಚಿತ್ರೀಕರಣದಲ್ಲಿ.

ದೊಡ್ಡ ಸಮಸ್ಯೆ. ಈ ತಾರೆಯರೇ ದಿಗ್ದರ್ಶಕರಿಗೆ ದಿಗ್ದರ್ಶನದ ಅ–ಆ–ಇ ಹೇಳಿ ಕೊಡುವುದೂ ಇದೆ. ಆಗ ದಿಗ್ದರ್ಶಕನಿಗೇ ಉಸಿರು ಕಟ್ಟುತ್ತದೆ. ಇಂದು ಲೇಖಕ–ನಟ–ದಿಗ್ದರ್ಶಕ–ಸಂಗೀತಗಾರ ಹೀಗೆ ಎಲ್ಲರ ಪಾತ್ರವನ್ನೂ ಒಬ್ಬನೇ ಮಾಡುವ ಚಟ ಹೆಚ್ಚಾಗುತ್ತಿದೆ. ಈ ಬೆಳವಣಗೆ ಅಪಾಯಕಾರಿ.

## ಸಂಗೀತ ದಿಗ್ದರ್ಶಕ

ಚಿತ್ರಗಳಲ್ಲಿ ಹಾಡುವುದು ಭಾರತೀಯ ಚಿತ್ರಗಳ ವೈಶಿಷ್ಟ್ಯ. ಬಹಳಷ್ಟು ಸಂಗೀತ ದಿಗ್ದರ್ಶಕರು ಹಾಡುಗಳಿಗೆ ಧಾಟಿ ಕೊಡುವುದಷ್ಟೇ ತಮ್ಮ ಜವಾಬ್ದಾರಿ ಎಂದು ತಿಳಿದುಕೊಂಡಿದ್ದಾರೆ. ಆದರೆ ನಿಜವಾಗಿ ಸಂಗೀತ ದಿಗ್ದರ್ಶಕ ಚಿತ್ರದ ಉದ್ದಕ್ಕೂ ಎಲ್ಲ ಬಗೆಯ 'ಸೌಂಡ್ ಎಫೆಕ್ಟ್'ಗಳನ್ನೂ ಕೊಡಬೇಕಾಗುತ್ತದೆ.

ಇಂದು ಚಿತ್ರರಂಗದಲ್ಲಿ ಎರಡು ಬಗೆಯ ಸಂಗೀತ ದಿಗ್ದರ್ಶಕರಿದ್ದಾರೆ. ಪಾಶ್ಚಾತ್ಯ ಸಂಗೀತ ಅನುಕರಿಸಿ [illegible] [illegible] [illegible] ಸಂಗೀತ [illegible] [illegible]ಯವರಲ್ಲಿ ತುಂಬ ಅಚ್ಚುಮೆಚ್ಚು. ಭಾರತೀಯ ಸಂಗೀತವನ್ನು ಸಾಧ್ಯವಿದ್ದಷ್ಟು ಮಟ್ಟಿಗೆ ಪಾಶ್ಚಾತ್ಯ ಸಂಗೀತದ ಮಿಶ್ರಣದೊಂದಿಗೆ ಕೊಡುವವರದೊಂದು ವರ್ಗ.

ಸಂಗೀತ ದಿಗ್ದರ್ಶಕರು ಬರೇ ಸಂಗೀತಗಾರ ಮಾತ್ರನಲ್ಲ. ಆತನಿಗೆ ರಿಕಾರ್ಡಿಂಗ್ ತಂತ್ರಜ್ಞಾನವೂ ಇರುವುದವಶ್ಯ. ಒಂದೊಂದು ಕಂಪನ, ಒಂದೊಂದು ಕ್ಷಣಕ್ಕೂ ರಿಕಾರ್ಡಿಂಗ್ ಕಾಲಕ್ಕೆ ಬಹಳ ಬೆಲೆ. ಅದನ್ನು ತಿಳಿದವನೇ ಯಶಸ್ವೀ ಸಂಗೀತ ದಿಗ್ದರ್ಶಕ.

## ಹಿನ್ನೆಲೆ ಹಾಡುಗಾರ

ಎಲ್ಲ ಒಳ್ಳೆಯ ಹಾಡುಗಾರರೂ ಉತ್ತಮ ಹಿನ್ನೆಲೆ ಹಾಡುಗಾರರಾಗಲು ಸಾಧ್ಯವಿಲ್ಲ. ಲತಾ ಮಂಗೇಶಕರ ಮತ್ತು ಆಕೆಯ ತಂಗಿ ಆಶಾ ಭೋಸಲೆ ಚಿತ್ರರಂಗದಲ್ಲಿ ತಮ್ಮ ಏಕಸ್ವಾಮ್ಯ ಸ್ಥಾಪಿಸಿದ್ದಾರೆ ಎಂಬ ದೂರು ಬಹಳ ಕಾಲದಿಂದಲೂ ಇದೆ. ಆದರೆ ಲತಾ ಮಂಗೇಶಕರಳಂತೆ 'ಮೈಕಿನ ಮೈತ್ರಿ' ಇರುವ ಹಾಡುಗಾರ್ತಿಯರು ನಮ್ಮಲ್ಲಿ ವಿರಳ.

ಚಿತ್ರದಲ್ಲಿ ಬೇಕಾದುದು ರಿಕಾರ್ಡಿಂಗ್ ಸಂಗೀತ. ಅದು ಕಛೇರಿಯಲ್ಲ. ಅಲ್ಲಿ ಪ್ರತಿ ಸೆಕೆಂಡಿಗೂ ಬೆಲೆ ಇದೆ. ಸಂಗೀತ ದಿಗ್ದರ್ಶಕನ ಕಲ್ಪನೆಯನ್ನು ಹಾಡುಗಾರ್ತಿ ತನ್ನ ಕಂಠದಲ್ಲಿ ತರಬೇಕು. ಅದರಲ್ಲಿ ಭಾವನೆ, ಅರ್ಥ ತುಂಬಿಸಬೇಕು. ಅಂಥ ಕಂಠಕ್ಕೇ ಹೆಚ್ಚಿನ ಬೇಡಿಕೆ.

## ಛಾಯಾಗ್ರಾಹಕರು

ಚಿತ್ರದಲ್ಲಿ ಎಲ್ಲರಿಗೂ ಗೊತ್ತಿರುವ ಒಂದು

"ಅನುಭವ" ಚಿತ್ರದ ಅಪ್ರತಿಮ ಛಾಯಾಗ್ರಾಹಕ ನಂದೋ ಭಟ್ಟಾಚಾರ್ಯ. ನಮ್ಮ ಕೆಲವೇ ಪ್ರತಿಭಾವಂತ ತರುಣ ಛಾಯಾಗ್ರಾಹಕರಲ್ಲಿ ನಂದೋ ಒಬ್ಬರು. ↓

'ಜೋಕ್' ಇದೆ. ಚಿತ್ರ ನಾಯಕಿಯ ನಿಜವಾದ ಹೀರೊ ಚಿತ್ರನಾಯಕನಲ್ಲ. ಆಕೆಯ 'ಪ್ರಿಯಕರ'– ಆಕೆಯ ಫೋಟೋಗ್ರಾಫರ್. ಆಕೆಯ ಉತ್ತಮ ಕ್ಲೋಸ್ ಅಪ್‌ಗಳನ್ನು, ಕೋಣಗಳಲ್ಲಿ ಶಾಟ್‌ಗಳನ್ನು ತೆಗೆದು ಕೊಂಡರೆ ಮಾತ್ರ ತಾರೆಯ ಮೋರೆ ನೋಡುವಂತಾದೀತು. ಇಲ್ಲವಾದರೆ ಎಂಥಹ ಸುಂದರ ಮುಖವಿದ್ದರೂ ಎಲ್ಲ ನಿಷ್ಪ್ರಯೋಜಕ.

ನಮ್ಮಲ್ಲಿ ಒಳ್ಳೆಯ ಛಾಯಾಗ್ರಾಹಕರು ತೀರಾ ಕಡಿಮೆ. ಕಚ್ಚಾ ಫಿಲ್ಮಿನ ಸಮಸ್ಯೆ ಛಾಯಾಗ್ರಾಹಕನಿಗೆ ಒಂದು ರೀತಿಯಲ್ಲಿ ಬಂಧನಕಾರಿ.



ರೆಕಾರ್ಡಿಂಗ್ ಸ್ಟುಡಿಯೋದಲ್ಲಿ ಗಾಯಕ ಕಿಶೋರಕುಮಾರ ಹಾಡುವ ಮುನ್ನ

## ಹಂಚಿಕೆದಾರರು

ಚಿತ್ರ ತಯಾರಿಸಿದರೆ ಸಾಲದು. ಅದಕ್ಕೆ ಹಾಕಿದ ಹಣ ಮರಳಿ ದೊರೆಯಬೇಕಾದರೆ ಅದನ್ನು ಎಲ್ಲರೂ ದುಡ್ಡು ಕೊಟ್ಟು ನೋಡುವಂತಾಗಬೇಕು. ಹಂಚಿಕೆದಾರರು ನಿರ್ಮಾಪಕ ಮತ್ತು ಪ್ರೇಕ್ಷಕರ ನಡುವಿನ ದಳ್ಳಾಳಿಗಳು. ಹೆಚ್ಚಿನ ಹಂಚಿಕೆದಾರರು ಚಿತ್ರದ ಆರಂಭದ ಕೆಲವು ರೀಲುಗಳನ್ನು ನೋಡಿಯೇ ಮುಂಗಡ ಹಣ ಕೊಟ್ಟು ಬಿಡುತ್ತಾರೆ. ಇವರೇ ಬಂಡವಾಳಗಾರರು. ಅವರ ಇಷ್ಟದಂತೆ ಅನೇಕ ಬಾರಿ ಕತೆ ಬದಲಾಗುತ್ತದೆ. ತಾರೆಯರ ಬದಲಾವಣೆಯಾಗುತ್ತದೆ. ಚಿತ್ರನಿರ್ಮಾಪಕನ ಜುಟ್ಟು ಇರುವದು ಇಂಥವರ ಕೈಯಲ್ಲಿ.

## ಮೇಕಪ್ ಮ್ಯಾನ್

ಹೆಚ್ಚಿನ ತಾರೆಯರಿಗೆ ಅವರದೇ ಆದ ಮೇಕಪ್ ಮ್ಯಾನ್ ಇರುತ್ತಾನೆ. ಮುಂಬಯಿಯಲ್ಲಿ ಮೇಕಪ್ ಮಾಡುವ ಹೆಣ್ಣು ಕಲಾವಿದರೇ ಇಲ್ಲ. ಆದರೆ ಹೇರ್ ಡ್ರೆಸ್ಸರ್ ಮಾತ್ರ ಎಲ್ಲರೂ ಸ್ತ್ರೀಯರೇ. ಮೇಕಪ್ ಮ್ಯಾನ್ ಅಸೋಸಿಯೇಷನ್ ಕೂಡ ಬಂದಿದೆ. ಇದರ ಸದಸ್ಯರು ಹೆಚ್ಚಿನವರು ಮಂಗಳೂರಿನವರು ಮತ್ತು ಗೋವಾದವರು. ಇವರು ಇಡೀ ಚಿತ್ರದ ಮೇಕಪ್ಪನ್ನೇ ಕಂಟ್ರಾಕ್ಟು ತೆಗೆದುಕೊಂಡು ಬಿಡುತ್ತಾರೆ ಅಥವಾ ದಿನವಹಿ ಲೆಕ್ಕದಲ್ಲೂ ಬಣ್ಣ ಹಚ್ಚುತ್ತಾರೆ.

ಕಳೆದ ಇಪ್ಪತ್ತು ವರ್ಷಗಳಿಂದ ಚಿತ್ರರಂಗದಲ್ಲಿರುವ ಮೇಕಪ್ ಮ್ಯಾನ್ ಜೋನ್ ಸೆಂಥೀಸ್ ಕನ್ನಡಿಗರು. ಎಲ್ಲ ಹಿರಿಯ ನಟ-ನಟಿಯರ ಮೇಕಪ್ ಮಾಡಿದ್ದಾರೆ. ಚಿತ್ರದಲ್ಲಿ ತಾರೆ ಸೋನಿಯಾ ಸಹಾನಿಗೆ ಮೇಕಪ್ ಮಾಡುತ್ತಿದ್ದಾರೆ.



## ಧ್ವನಿಗ್ರಾಹಕರು

ಧ್ವನಿಗ್ರಹಣ ಚಿತ್ರದ ಅತ್ಯಂತ ಮುಖ್ಯವಾದ ಅಂಗ. ಇದಕ್ಕೆ ವಿಶೇಷ ತಜ್ಞರಿರುತ್ತಾರೆ. ಚಿತ್ರದುದ್ದಕ್ಕೂ ಇವರಿಗೆ ಕೆಲಸವಿರುವದಷ್ಟೇ ಅಲ್ಲದೆ ಚಿತ್ರೀಕರಣ ಮುಗಿದ ಬಳಿಕವೂ ಪ್ರೊಸೆಸಿಂಗ್ ಕಾಲಕ್ಕೂ ಕೆಲಸವಿರುತ್ತದೆ. ಧ್ವನಿಗ್ರಾಹಕನ ಕೆಲಸ ಛಾಯಾಗ್ರಾಹಕನ ಕೆಲಸದಷ್ಟೇ ಮುಖ್ಯ. ನಟನಟಿಯರ ಮಾತು ಮತ್ತು ಹಾಡುಗಳನ್ನು ಹಾಗೂ ಸೌಂಡ್ ಎಫೆಕ್ಟ್ಸ್‌ಗಳೊಂದಿಗೆ ಧ್ವನಿಯನ್ನು ಜೋಡಿಸುವುದೇ ಇವರ ಕೆಲಸ.

## ಸಂಕಲನಕಾರರು

ಚಿತ್ರದ ಸಂಕಲನದ ಕೆಲಸ ದಿಗ್ದರ್ಶಕನ ಕೆಲಸಕ್ಕಿಂತ ಕಡಿಮೆಯಲ್ಲ. ಚಿತ್ರೀಕರಣವಾದ ಮೇಲೆ ಪ್ರತಿ ಫ್ರೇಮನ್ನೂ ಕಣ್ಣಲ್ಲಿ ಎಣ್ಣೆ ಹಾಕಿ ನೋಡಿ ಕತ್ತರಿಸಿ ಜೋಡಿಸುವ ಬ್ರಹ್ಮನೇ ಸಂಕಲನಕಾರ. ನಾಯಕಿಯನ್ನು ಎಕ್ಸ್‌ಟ್ರಾ ತಾರೆಯ ಹಾಗೆ ತೋರಿಸುವುದೂ, ಬಿಡುವದೂ ಅವನ ಕೈಯಲ್ಲಿದೆ.

ಎಲೆಯ ಮರೆಯ ಮುಖ್ಯವಾದ "ಕಾಯಿ"ಗಳಿವು. ಚಿತ್ರೀಕರಣದ ಸ್ಟುಡಿಯೋದಲ್ಲಿ ರಾತ್ರಿ ಹಗಲು ದುಡಿದು ಸೆಟ್‌ಗಳನ್ನು ಹಾಕುವ ಕೂಲಿಗಳು, ಕಲಾವಿದರು, ಲೈಟ್ ಬ್ಯಾಗಳನ್ನು ನಾವು ಮರೆಯುವಂತಿಲ್ಲ. ಇವರಲ್ಲೂ ಅನೇಕ ಅನುಭವಿಗಳು ದಿಗ್ದರ್ಶಕ ಅಥವಾ ನಿರ್ಮಾಪಕರಿಗಿಂತ ಬುದ್ಧಿವಂತರಿರುತ್ತಾರೆ. ಚಿತ್ರ ನಡೆಯುತ್ತಿರುವಂತೆ ಅದರ ಪ್ರಚಾರ ಕಾರ್ಯ ಪ್ರಾರಂಭವಾಗುತ್ತದೆ. ಚಿತ್ರಕ್ಕೆ ಮುಖ್ಯ ಆಧಾರ ಅದರ ಪ್ರಚಾರ. ಇದರ ಮೌಲ್ಯ ಎಲ್ಲ ನಟ–ನಟಿಯರಿಗೂ ಗೊತ್ತಿರುವದರಿಂದಲೇ ಪ್ರಚಾರ ಜಗತ್ತಿನವರಿಗೆ ಚಿತ್ರರಂಗದಲ್ಲಿ ಯಾವಾಗಲೂ ಅಗ್ರಸ್ಥಾನ. ಎಷ್ಟೋ ಸಲ ಕಳಪೆ ಚಿತ್ರವನ್ನು ಬಿರುಸಿನ ಪ್ರಚಾರ ಬದುಕಿಸಿದ್ದುಂಟು. ●

# ಅವರವರ ದೃಷ್ಟಿಯಲ್ಲಿ ದೀಪಾವಳಿ!

## "ದಿನದಿನವೂ ದೀಪಾವಳಿ...."

"ಕನ್ನಡದ ಮನೆ, ಮನದಲ್ಲಿ
ದಿನ ದಿನ ದೀಪಾವಳಿ
ಕನ್ನಡ ನುಡಿ ಗುಡಿಯಲ್ಲಿ
ದಿನ ದಿನ ಸರಸತಿ ನಲಿದಲ್ಲಿ"

"ಹೌದಲ್ಲ"!
ನನ್ನನ್ನು ನಾನೇ ಕೇಳಿಕೊಂಡೆ.
"ನಿಜ, ಎಂಥ ಸತ್ಯ ಈ ಕವಿವಾಣಿ!"

ಕನ್ನಡ-ನುಡಿ ಗುಡಿಯಲ್ಲಿ, ಸರಸತಿ ನಲಿದಲ್ಲಿ, ಕನ್ನಡದ ಮನೆ, ಮನದಲ್ಲಿ ದಿನ ದಿನವೂ ದೀಪಾವಳಿ...

ಕನ್ನಡ ತಾಯ್ಒಲುಮೆ ಇಲ್ಲದಲ್ಲಿ, ಕನ್ನಡ ಸರಸ್ವತಿ ನಲಿಯದಲ್ಲಿ, ಕನ್ನಡ ತಾಯ್ ಹರಸದಲ್ಲಿ, ಎಲ್ಲಿದೆ ದೀಪಾವಳಿ? ಚಿತ್ರರಂಗ ಇದಕ್ಕೆ ಅಪವಾದವೇನಲ್ಲ.

ನನ್ನ ಮಟ್ಟಿಗೆ ಹೇಳುವುದಾದರೆ ನಾನು, ಯಾವುದೇ ಪರಭಾಷೆಯ ಚಿತ್ರದಲ್ಲಿ ಅಭಿನಯಿಸಲಿ, ನನಗೆ ಕನ್ನಡವೇ ತಾಯಿ ದೇವರು. "ಮಾತೃ ದೇವೋ ಭವ". ಅವಳ ಆಶೀರ್ವಾದವೇ ನನಗೆ ಶ್ರೀರಕ್ಷೆ.

ಒಂದು ದೃಷ್ಟಿಯಿಂದ ನನಗೆ ಕೆಲವು ತೆಲುಗು ತಮಿಳು ಚಿತ್ರಗಳಲ್ಲಿ ಅವಕಾಶ ದೊರೆತದ್ದು ನನ್ನ ಕನ್ನಡ ತಾಯ ಹರಕೆಯ ಬಲದಿಂದಲೇ ಎಂದು ಭಾವಿಸಿದ್ದೇನೆ. ಇತ್ತೀಚೆಗೆ ಶತ ದಿನೋತ್ಸವ ಆಚರಿಸಿದ "ಸಿಪಾಯಿ ರಾಮು," ಅಷ್ಟೇ ಜನಪ್ರಿಯತೆ ಗಳಿಸುತ್ತಿರುವ "ಭಲೇ ಹುಚ್ಚ" ಚಿತ್ರಗಳಲ್ಲಿ ನನ್ನ ಅಭಿನಯವನ್ನು ನೋಡಿ ಕನ್ನಡ ಚಿತ್ರ ರಸಿಕರು "ಪರವಾಯಿಲ್ಲ ಆರತಿ" ಎಂದೆನುವದಾದರೆ, ಅದು ನನ್ನ ತಾಯ ಆಶೀರ್ವಾದ. ಮುಕ್ಕಾಲು ಭಾಗ ಸಿದ್ಧವಾಗಿ ಬಿಡುಗಡೆಯ ಹಂತದಲ್ಲಿರುವ "ನಾಗರ ಹಾವು" ಚಿತ್ರದಲ್ಲಿ ನನ್ನ ಅಭಿನಯವನ್ನು ಜನ ಮೆಚ್ಚಿಕೊಂಡಲ್ಲಿ ಅದು ನನ್ನ ಕನ್ನಡ ತಾಯಿಯ ಕೃಪಾದೃಷ್ಟಿ ಎಂದು ತಿಳಿಯುತ್ತೇನೆ.

"ಕನ್ನಡ ತಾಯ್..." ಈ ಶಬ್ದ ವ್ಯಾಪಾರೀ ಸರಕಾಗಿ ತನ್ನ ಮೌಲ್ಯವನ್ನು ಕಳೆದುಕೊಂಡಿದೆಯೆಂಬ ಸೊಲ್ಲು ಕೇಳಿ ಬರುತ್ತಿದೆ. ನನಗೆ ಹಾಗೆನಿಸುವುದಿಲ್ಲ. ನೋಟವನ್ನು, ವ್ಯಕ್ತಿತ್ವವನ್ನು, ವಾತಾವರಣವನ್ನು ಅವಲಂಬಿಸಿ, ಅದು ತನ್ನ ಮೌಲ್ಯವನ್ನು ವ್ಯಕ್ತಪಡಿಪಡಿಸುತ್ತದೆಯೆಂಬುದು ನನ್ನ ನಂಬುಗೆ.

ದೀಪಾವಳಿ ಮನಸ್ಸಿನ ಕತ್ತಲಿನ ಅಂಧಕಾಸುರನನ್ನು ಸಂಹರಿಸಿ, ಬೆಳಗುವ ದೀಪಗಳ ಹಬ್ಬವಾಗಬೇಕು. ಆಗ ಬೆಳಕಿನಲ್ಲಿ ಕತ್ತಲನ್ನು ಅರಸುವ ಅಗತ್ಯವಿರದು. ಮನಸ್ಸನ್ನು ಬೆಳಗಬಲ್ಲ ಬೆಳಕನ್ನು ನೀಡುವ ಸಾಮರ್ಥ್ಯ ಕಲೆಗಿದೆ.

ಭಾರತೀಯ ಸಂಸ್ಕೃತಿಯ ನಿತ್ಯ ನೂತನ ಸಾಕ್ಷಿಯಾಗಿರುವ ನೃತ್ಯ ಕಲೆ ಆಧುನಿಕತೆ ಮತ್ತು ಪ್ರಾಚೀನತೆಯನ್ನು ಹಿತವಾಗಿ ಮೇಳವಿಸಿಕೊಂಡು ಎರಡೂ ಸಂಪ್ರದಾಯಗಳ ರಕ್ಷಕನಾಗಿ ಬೆಳಗಬೇಕು, ಮೆರೆಯಬೇಕು.

ನಮ್ಮತನವೇ ಪ್ರತಿ ಚಿತ್ರದ ಸೋಲು-ಗೆಲುವಿನ ನಿಜವಾದ ಅಳತೆಗೋಲು. ನಮ್ಮ ವ್ಯಕ್ತಿತ್ವ ಪೂರ್ತಿಯಾಗಿ ಚಿತ್ರಿತವಾಗುವ ಚಿತ್ರದಲ್ಲಿ ಕಲೆಯ ಸಾಕ್ಷಾತ್ಕಾರವಾಗುತ್ತದೆ. ಇಂಥ ಚಿತ್ರದ ಯಶಸ್ಸು ಕಟ್ಟಿಟ್ಟ ಬುತ್ತಿ.

ಕನ್ನಡತನವನ್ನು ರಕ್ಷಿಸುವ ಕಾರ್ಯವನ್ನು ಕನ್ನಡಿಗರಾದ ನಾವು ನಿಷ್ಠೆಯಿಂದ ನಿರ್ವಹಿಸಿದಲ್ಲಿ ಕನ್ನಡಮ್ಮನ ಸೇವೆಯನ್ನು ಮಾಡಿದ ಆತ್ಮತೃಪ್ತಿಯುಂಟಾಗುತ್ತದೆ. ಕಲಾ ಸೇವೆಯನ್ನು ಅಖಂಡವಾಗಿ, ಹೃತ್ಪೂರ್ವಕವಾಗಿ ಮಾಡುವ ಅವಕಾಶವನ್ನು ಕನ್ನಡ ತಾಯ್ ನೀಡಲಿ. ಆ ತಾಯಿಯ ಚರಣ ಕಮಲಗಳಿಗೆ "ಅಳಿಲು ಭಕ್ತಿ"ಯ ಕಾಣಿಕೆ ಸಲ್ಲಿಸಲು ನನಗೆ ಹೆಚ್ಚೆಚ್ಚು ಅವಕಾಶ ಲಭ್ಯವಾದರೆ, ನನ್ನ ಪಾಲಿಗೆ ದಿನ ದಿನವೂ ದೀಪಾವಳಿ. ಬೆಳಕನ್ನು ನಾಡಿನಲ್ಲೆಲ್ಲ ಹಂಚುವ, ಹರಡುವ ಚೈತನ್ಯವನ್ನು ಕನ್ನಡ ರಾಜರಾಜೇಶ್ವರಿ ನನಗೆ ಅನುಗ್ರಹಿಸಲಿ.

—ಆರತಿ
ನಟಿ





## "ಉತ್ತಮ ಹಾಡುಗಳಿಂದ ಚಿತ್ರಪ್ರೇಮಿಗಳ ಮನ ಪ್ರತಿ ದಿನ ಬೆಳಗುವ ಆಸೆ"

ಸಂಗೀತ ನನ್ನ ಬಾಳ ಬೆಳಕು; ನನ್ನ ಬಾಳ ಉಸಿರು ನನ್ನ ಮನೆಯೇ ಬೃಂದಾವನ. ಆ ಬೃಂದಾವನದಲ್ಲಿ ನಾನೇ ರಾಧೆ. ಬೃಂದಾವನ ಆನಂದದ ತವರು. ಅಲ್ಲಿ ರಸಿಕತೆಯಿದೆ; ಕಲಾಭಿಮಾನವಿದೆ; ದಿವ್ಯ ಸಂಸ್ಕೃತಿಯಿದೆ. ಅಲ್ಲಿ ಸಂಗೀತ ರಾರಾಜಿಸುತ್ತದೆ. ಶ್ರೀಕೃಷ್ಣ ಸಂಗೀತ ಸಾಮ್ರಾಟನಾಗಿ ತನ್ನ ರಾಗ ಸುಧಾರಸದಿಂದ ಲೋಕವನ್ನೇ ತಣಿಸುತ್ತಿದ್ದ; ಬೆಳಕು ತೋರುತಲಿದ್ದ. ಚಿಕ್ಕಂದಿನಿಂದಲೂ ಸಂಗೀತಕ್ಕಾಗಿಯೇ ಹಾತೊರೆಯುತ್ತಿರುವ ನಾನು ಚಿತ್ರರಂಗದಲ್ಲಿ ಸಂಗೀತವನ್ನು ಆಧುನಿಕ ದೃಷ್ಟಿಕೋನದಿಂದ ನುಡಿಸುತ್ತಿದ್ದೇನೆ.

ನನ್ನ ಜೀವನದ ಇನ್ನೊಂದು ಪ್ರಮುಖ ಘಟನೆಯನ್ನು ತಿಳಿಸ ಬಯಸುತ್ತೇನೆ. ಇತ್ತೀಚೆಗೆ ನನಗೆ "ಕಂಕಣ ಬಲ" ಕೂಡಿ ಬಂದಿತು. ನನ್ನ ಯಜಮಾನರೂ ಹಿನ್ನೆಲೆ ಗಾಯಕರಾಗಿರುವದು ಹೆಮ್ಮೆಯ ವಿಷಯ. "ಸುಧಾಕರ" ಅವರು ಭೇಟಿಯಾದದ್ದು, ಸ್ನೇಹ ಬೆಳೆಸಿದ್ದು, ಜೀವನದ ಜೊತೆಗಾರರಾದದ್ದು- ಎಲ್ಲವೂ ಸಂಗೀತ, ಸಂಸ್ಕೃತಿಯ ರಸಸೇತುವೆಯ ಮೇಲೆಯೇ.

ಇತ್ತೀಚೆಗೆ ನಾನು ಉಡುಪಿಯ ಶ್ರೀ ಕೃಷ್ಣ ಹಾಗೂ ಧರ್ಮಸ್ಥಳದ ಮಂಜುನಾಥೇಶ್ವರನನ್ನು ಕುರಿತು ಹಾಡಿದ ಭಕ್ತಿಗೀತೆಗಳನ್ನು ಧ್ವನಿ ಮುದ್ರಿಸಿಕೊಳ್ಳಲಾಯಿತು. ಈ ಗೀತೆಗಳನ್ನು ಕೇಳಿದವರೆಲ್ಲ ಬಹಳ ಮೆಚ್ಚಿಕೊಂಡಿದ್ದಾರೆ. ಭಕ್ತಿರಸ ಪ್ರಧಾನವಾದ ಈ ಹಾಡುಗಳು ಪ್ರೇಕ್ಷಕರಿಗೆ ಬೆಳಕು ನೀಡುವುದಾದರೆ ನಾನು ಧನ್ಯ.

–ಬಿ. ಕೆ. ಸುಮಿತ್ರ
ಹಿನ್ನೆಲೆ ಗಾಯಕಿ

## "ಪ್ರೇಕ್ಷಕರ ಮನ ಬೆಳಗಿದರೆ. ಅದೇ ನನಗೆ ದೀಪಾವಳಿ"

ನಾನು ನಿರ್ದೇಶಿಸಿದ ಚಿತ್ರ ಪ್ರೇಕ್ಷಕರ ಮನವನ್ನು ಬೆಳಗಿದರೆ, ನನ್ನ ಮಟ್ಟಿಗೆ ಅದೇ ದೀಪಾವಳಿ. ಅಂಥ ಚಿತ್ರ ನನ್ನ ಬರಲಿರುವ ಚಿತ್ರ "ಹೇಮರೆಡ್ಡಿ ಮಲ್ಲಮ್ಮ". ಅಂಧಕಾರ ಕೂಪದಲ್ಲಿ ಬಿದ್ದಿದ್ದ ಅನೇಕ ಜೀವಿಗಳನ್ನು ಉದ್ಧರಿಸಿದ ಮಹಾಜ್ಯೋತಿ ಮಲ್ಲಮ್ಮ.

ಇಂಥ ಚಿತ್ರಗಳನ್ನು ನಿರ್ದೇಶಿಸಲು ನನಗೆ ಬಹಳ ಇಷ್ಟ. ಹರಿಭಕ್ತ, ಓಹಿಲೇಶ್ವರ, ಬಸವೇಶ್ವರ, ಮಂತ್ರಾಲಯ ಮಹಾತ್ಮೆ ಮೊದಲಾದ ಭಕ್ತಿರಸ ಪ್ರಧಾನವಾದ ಚಿತ್ರಗಳನ್ನು ಈಗಾಗಲೇ ನಿರ್ದೇಶಿಸಿರುವ ನನಗೆ,



ಹೇಮರೆಡ್ಡಿ ಮಲ್ಲಮ್ಮನ ಜೀವನವನ್ನೂ ಚಿತ್ರಿಸುವ ಭಾಗ್ಯ ದೊರೆತಿರುವದು ನನಗೆ ಅತೀವ ತೃಪ್ತಿ ನೀಡಿದೆ ಬಿಡುಗಡೆಯ ಹಂತದಲ್ಲಿರುವ "ಭಾರತ ರತ್ನ" ನಾನು ಹೆಮ್ಮೆಪಡಬಹುದಾದ ಇನ್ನೊಂದು ಚಿತ್ರ. ನಾನೊಬ್ಬ ರಜಪೂತ. ದೇಶಾಭಿಮಾನ ನನ್ನ ರಕ್ತದಲ್ಲಿದೆ. "ಭಾರತ ರತ್ನ" ನನ್ನಲ್ಲಿ ರಕ್ತಗತವಾದ ದೇಶಾಭಿಮಾನಕ್ಕೆ ಜೀವಂತ ಕಳೆ ತುಂಬಿದ ಚಿತ್ರ.

ಪ್ರೇಕ್ಷಕರ ಹೃದಯಾಂತರಾಳದಲ್ಲಿರುವ ಸುಪ್ತ ಶಕ್ತಿಯನ್ನು ಚೇತನಗೊಳಿಸುವಲ್ಲಿ ನನ್ನ ಪ್ರಯತ್ನಗಳು ಸಫಲವಾದಲ್ಲಿ ನನಗೆ ಅದೇ ನಿಜವಾದ ದೀಪಾವಳಿ. ಆ ಭಗವಂತ ನಮ್ಮೆಲ್ಲರ ದಿಗ್ದರ್ಶಕ. ಆ ದಿಗ್ದರ್ಶಕನ ನಿರ್ದೇಶನದಲ್ಲಿ ನಮ್ಮ ಬಾಳಿನಲ್ಲಿ ಬೆಳಕು ಕಂಡುಕೊಳ್ಳುವದೇ ದೀಪಾವಳಿ.

**–ಟಿ. ವ್ಹಿ. ಸಿಂಗಠಾಕೂರ**
**ನಿರ್ದೇಶಕ**



## "ಉತ್ತಮ ಚಿತ್ರಗಳೇ ನಿಜವಾದ ದೀಪಾವಳಿಯ ಹಣತೆಗಳು"

ದೀಪಾವಳಿಯನು ಸಂತೋಷದಿಂದ ಆಚರಿಸುವಷ್ಟು ನೆಮ್ಮದಿ ಇಂದು ಕನ್ನಡ ಚಿತ್ರರಂಗದಲ್ಲಿದೆಯೇ?– ಈ ಪ್ರಶ್ನೆ ಇಂದು ಎಲ್ಲರನ್ನು ಕಾಡುತ್ತಿದೆ. ಆರ್ಥಿಕ ಮುಗ್ಗಟ್ಟಿನಿಂದಾಗಿ ಚಿತ್ರರಂಗದಲ್ಲಿ ನಿರಾಸೆಯ ಕಪ್ಪು ಛಾಯೆ ಆವರಿಸಿದೆ.

ಇಂಥ ಪರಿಸ್ಥಿತಿಯಲ್ಲೂ, ಆತ್ಮತೃಪ್ತಿ ನೀಡುವ ರಸನಿಮಿಷಗಳುಂಟು. ಇನ್ನೂರು ದಿನಗಳ ಪ್ರದರ್ಶನ ದಾಖಲೆ ಸ್ಥಾಪಿಸಿರುವ "ಬಂಗಾರದ ಮನುಷ್ಯ" ಹಾಗೂ ಜಯಭೇರಿ ಬಾರಿಸುತ್ತಿರುವ "ಭಲೇ ಹುಚ" ಈ ವರ್ಷದ ನಮ್ಮ ಹೆಮ್ಮೆಯ ಸಾಧನೆಗಳು.

ಇಷ್ಟರಿಂದ ನಾವು ತೃಪ್ತರಾಗಿ ಕೂಡುವಂತಿಲ್ಲ. ಸಹಾಯಧನ ನೀಡಿಕೆಯ ಬಗೆಗಿನ ಸರಕಾರದ ನೀತಿ ತೂಗುಯ್ಯಾಲೆಯಾಡಿ, ಇದೀಗ ಪರಿಸ್ಥಿತಿ ತಿಳಿಯಾಗಿದೆ.

ಕನ್ನಡ ಚಿತ್ರರಂಗದ ವಿಶಿಷ್ಟ ಸಮಸ್ಯೆಗಳಿಗೆ ಪರಿಹಾರ ನೀಡಬೇಕಾದವರು ಕನ್ನಡ ಚಿತ್ರಪ್ರೇಮಿಗಳೇ ಹೊರತು ಬೇರಾರೂ ಅಲ್ಲ. ಅವರ ಪ್ರೋತ್ಸಾಹದಿಂದ ಚಿತ್ರರಂಗ ಆರ್ಥಿಕ ಮುಗ್ಗಟ್ಟನ್ನು ನೀಗಿಕೊಂಡು ತಲೆ ಎತ್ತಿ ನಿಲ್ಲಬಲ್ಲದು. ಅನಂತರ ಶುದ್ಧೀಕರಣ. ಕನ್ನಡಿಗರು ಅನ್ಯ ಭಾಷೆಯವರಿಗಿಂತ ಯಾವುದರಲ್ಲಿಯೂ ಕಡಿಮೆಯಿಲ್ಲ. ಅವರೂ ಉತ್ತಮ ಚಿತ್ರಗಳನ್ನು ನಿರ್ಮಿಸಬಲ್ಲರೆಂಬುದನ್ನು ಸಾಕ್ಷಿ-ಪುರಾವೆಗಳಿಂದ ಸಿದ್ಧಪಡಿಸಿದ್ದೇವೆ. ಸರಕಾರ ಮತ್ತು ಜನತೆಯ ಅಖಂಡ ಸಹಕಾರ, ಪ್ರೋತ್ಸಾಹ, ಸಹಾಯ ಮುಂದುವರೆಯುವದು ಅವಶ್ಯ.

ನಮ್ಮ ಕನ್ನಡ ಚಿತ್ರಗಳೆಲ್ಲಾ ಯಶಸ್ವಿಯಾಗಿ, ಒಂದೊಂದು ಚಿತ್ರವೂ ಒಂದೊಂದು ಬಗೆಯ ಬೆಳಕು ಬೀರಬಲ್ಲ ಹಣತೆಗಳಾದಾಗ, ದೀಪಾವಳಿಯ ಆಚರಣೆ ಸಾರ್ಥಕವಾಗುತ್ತದೆ. ಕಳಪೆ ಚಿತ್ರಗಳ ಮೂಲಕ ಅಜ್ಞಾನವನ್ನು ಹೆಚ್ಚಿಸಿ, ಶಾಸ್ತ್ರಕ್ಕೆ ಹಣತೆ ಹಚ್ಚಿದರೆ ದೀಪಾವಳಿಯಾಯಿತೇ?

**–ವಿಜಯ ನಾರಸಿಂಹ**
**ಚಿತ್ರ ಸಾಹಿತಿ**

## "ಬೆಳಕನೀವ ಸಂಗೀತ ಸಂಯೋಜಿಸುವದೇ ನನ್ನ ಹಿರಿಯಾಸೆ"

ಸಂಗೀತಕ್ಕೆ ಭಾಷೆಯ ದಿಗ್ಬಂಧನವಿಲ್ಲ. ಆಲಿಸಿ ಕೇಳುವವನನ್ನು ತನ್ನೆಡೆಗೆ ಸೆಳೆದುಕೊಳ್ಳುವ ಶಕ್ತಿ ಸಂಗೀತಕ್ಕಿದೆ. ನಮ್ಮ ಸಂಗೀತ ಪ್ರಪಂಚದ ದಿಗ್ಗಜರು ಜಗತ್ತಿನಾದ್ಯಂತ ಜಯಭೇರಿ ಮೊಳಗಿದ್ದಾರೆ. ರವಿಶಂಕರ್, ಎಂ.ಎಸ್. ಸುಬ್ಬಲಕ್ಷ್ಮಿ ಮೊದಲಾದವರು ಭಾರತೀಯ ಸಂಗೀತದ ಪತಾಕೆಯನು ಎತ್ತರದಲ್ಲಿ ಹಾರಿಸಿದಾರೆ.

ಇಂಥ ದಿವ್ಯ ಶಕ್ತಿಯ ಸಂಗೀತ ಜನ್ಮ ತಾಳಿದ ನಮ್ಮ ದೇಶದಲ್ಲಿ, ಚಿತ್ರ ಸಂಗೀತವೂ ಅದೇ ಮಟ್ಟದಲ್ಲಿ, ಅಷ್ಟೇ ಕಲಾತ್ಮಕವಾಗಿರುವದವಶ್ಯ. ಈ ಗುರುತರ ಜವಾಬ್ದಾರಿಯನ್ನು ಸಂಗೀತ ನಿರ್ದೇಶಕ ನಿರ್ವಹಿಸಬೇಕು.



ಸ್ವತಂತ್ರವಾಗಿ ವಿಹರಿಸುವ ಈ ಗಂಧರ್ವ ವಿದ್ಯೆಯನ್ನು ಸಿನೇಮಾ ದೃಷ್ಟಿಯಿಂದ ಕಟ್ಟಿಹಾಕಲು ಯತ್ನಿಸಿದರೆ, ರಚನಾತ್ಮಕ ಕೃತಿಗಳಿಗೆ ಬೇಕಾದ ಸ್ವಾತಂತ್ರ್ಯಕ್ಕೆ ಧಕ್ಕೆ ಬರುತ್ತದೆ. ಜನತೆಯ ಅಭಿರುಚಿಗನುಗುಣವಾದ ರಚನಾತ್ಮಕ ರಾಗಗಳನ್ನು ಸಂಗೀತ ನಿರ್ದೇಶಕ ಸಂಯೋಜಿಸುವದಷ್ಟೇ ಅಲ್ಲದೆ, ಜನರ ಅಭಿರುಚಿಯ ಮಟ್ಟ ತಗ್ಗದಂತೆ ನೋಡಿಕೊಳ್ಳಬೇಕು. ನಾನು ಈ ಮಾರ್ಗದಲ್ಲಿ ನಡೆಯುತ್ತಿದ್ದೇನೆಂದು ಪ್ರಾಮಾಣಿಕವಾಗಿ ನಂಬಿದ್ದೇನೆ. ನನ್ನ ಅಭಿಮಾನಿಗಳು ನನಗೆ ಬರೆಯುವ ಪ್ರಶಂಸೆಯ ನುಡಿಗಳಿಂದ ನಾನು ಪುಲಕಿತನಾಗಿದೇನೆ.

ಸಂಗೀತ ಶಕ್ತಿಯಿಂದ ಮಳೆ ತರಿಸುತ್ತಿದ್ದರು; ದೀಪ ಬೆಳಗಿಸುತ್ತಿದ್ದರು ಎಂದು ಕೇಳುತ್ತೇವೆ. ದೀಪಕ್ ರಾಗ ಹಾಡಿ ತಾನಸೇನ್ ದೀಪಗಳನ್ನು ಬೆಳಗಿಸಿದ. ಅಂಥ ಸಂಗೀತ ನಮ್ಮ ಚಿತ್ರಗಳಲ್ಲಿ ತರಬೇಕೆಂಬ ಹಿರಿಯಾಸೆ ನನಗಿದೆ. ಚಿತ್ರಪ್ರೇಮಿಗಳ ಬೆಂಬಲವಿದರೆ ನಾನು ಕೃತಾರ್ಥ.

**–ಎಂ. ರಂಗರಾವ**
**ಸಂಗೀತ ನಿರ್ದೇಶಕ**

Licence No. 38 Licensed to post without prepayment
KARMAVEER 6-11-72 Registered with the Registrar of News Papers of India under No. 3558/57 Reg. No. BG. 3

